# ಕರ್ಮವೀರ

೧೯೫೮ರ
ದೀಪಾವಳಿ
ವಿಶೇಷಾಂಕ



# INDEX TO ADVERTISERS

## ದಿ ಟ್ಯಾನರ್ಸ ಆ್ಯಂಡ ಲೆದರ ವರ್ಕ್ಸ ಕೋ. ಆ. ಪ್ರೊಡ್ಯೂಸರ್ಸ





ಸೊಸೈಟಿ ಲಿ., ಶಹಾಪೂರ ರೋಡ-ಬೆಳಗಾವಿ

ನಮ್ಮಲ್ಲಿ ಈ ಕೆಳಗಿನ ವಸ್ತುಗಳು ತಯಾರಾಗುತ್ತವೆ:

✠ ಲೆದರ ವಸ್ತುಗಳು: ಮನೀಪರ್ಸ, ಡಾಕ್ಯೂಮೆಂಟ ಕೇಸ, ಬ್ರೀಫಕೇಸ ಇತ್ಯಾದಿ

✠ ವಾಟರ ಪ್ರೂಫ ವಸ್ತುಗಳು: ಸ್ಪೆಶಲ್ ಹೊಲ್ಡಾಲ್‌ಗಳು, ಪ್ರವಾಸೀ ಬ್ಯಾಗುಗಳು, ಸ್ಕೂಲ ಬ್ಯಾಗ, ರೇಶನ್ ಹಾಗೂ ಶಬನಂ ಬ್ಯಾಗುಗಳು ಇತ್ಯಾದಿ.

ಪುಸ್ತಕ ಬಾಯಿಂಡಿಂಗಕ್ಕೆ ಶ್ರೇಷ್ಠವಾದ ಲೆದರ ದೊರೆಯುತ್ತದೆ.

ವಿವರಗಳಿಗೆ ಬರೆಯಿರಿ:

---



ಹೊಸ ವರ್ಷದ ಅಭಿನಂದನೆಗಳು

## ನೂತನ • • •
## • ಡಿಜೆಲ್ ಎಂಜಿನು



ಹಾರಿಝಾಂಟಲ್, ಕೋಲ್ಡಸ್ಟಾರ್ಟ

ಡಬಲ್ ಪ್ಲಾಯವ್ಹೀಲ, ಸ್ಲೋಸ್ಪೀಡ

## ನೂತನ
## ಮಹಾರಾಷ್ಟ್ರ ಎಂಜಿನಿಯರಿಂಗ ಕಂ.

೧೪೩೫, ಲಕ್ಷ್ಮೀಪುರಿ . . . . ಕೊಲ್ಹಾಪುರ

---

ಫೋನ: ೬೫ ತಂತಿ: ಗುಡ್‌ವಿಲ್

## ಸೆಟ್ಟಿ ಪಾಪಣ್ಣ ಶೆಟ್ಟಿ

ಪೋಷ್ಟ ಬಾಕ್ಸ ನಂ. ೩೧,
ಹೊಸಪೇಟೆ

ಹಂಚಿಗೆಗಾರರು: ದಿ ಟಾಟಾ ಕೆಮಿಕಲ್ಸ ಲಿ, ಶಾ ವ್ಯಾಲೇಸ ಆ್ಯಂಡ ಕಂ.

ಫರ್ಟಿಲಾಯಜರ ಹಾಗು ಟಾಟಾ ಪಿಸ್ಪನ್ ತಯಾರಿಕೆಗಳು

ಸಂಗ್ರಾಹಕರು: ಏ. ಸಿ. ಸಿ. ಸಿಮೆಂಟ

ದಿ ಟಾಟಾ ಆಯಿಲ್ ಮಿಲ್ಸ್ ಕಂ. ಲಿ, ಟಾಮ್ಕೋ ತಯಾರಿಕೆಗಳು

ದಿ ತುಂಗಭದ್ರಾ ಇಂಡಸ್ಟ್ರೀಜ ಲಿ.

---

ನೀವು ದಾವಣಗೇರೆ ನಗರಕ್ಕೆ ಬಂದಾಗ ವಸತಿ ಸೌಕರ್ಯಕ್ಕೆ ಯೋಚಿಸಬೇಕಾಗಿಲ್ಲ

## ಸಿಟಿ ಲಾಡ್ಜ್

ಮಂಡಿ ಪೇಟೆ, : : ದಾವಣಗೇರೆ.

● ಈ ವಿಶ್ರಾಂತಿ ಮಂದಿರವು ನಿಮ್ಮ ಸೇವೆಗೆ ಸದಾ ಸಿದ್ಧವಾಗಿದೆ.

● ಗಾಳಿ ಬೆಳಕುಗಳ ಸ್ವಚ್ಛವಾದ ರೂಂಗಳ ಹಾಗು ಬಿಸಿ ಮತ್ತು ತಣ್ಣೀರಿನ ಸ್ನಾನ ನಿಮ್ಮ ದಣಿದ ಮನಸ್ಸನ್ನು ಆಹ್ಲಾದ ಗೊಳಿಸುವವು.

ಬ್ಯಾಂಕುಗಳು, ಪೋಸ್ಟಾಫೀಸ್, ರೇಲ್ವೆಸ್ಟೆಷನ್, ಮತ್ತು ಬಸ್‌ಸ್ಟ್ಯಾಂಡಿಗೆ ಈ ವಿಶ್ರಾಂತಿ ಮಂದಿರವು ಸಮೀಪವಿದ್ದು ನಗರದ ಮಧ್ಯ ಪ್ರದೇಶದಲ್ಲಿದೆ.

ಪ್ರವಾಸಿಗರು ಪ್ರೋತ್ಸಾಹಿಸಬೇಕಾಗಿ ವಿನಂತಿ.

ಕೌಸಲ ಗಂಗಾಧರ ಶೆಟ್ಟಿ ಅಂಡ್ ಬ್ರದರ್

ಪ್ರೊಪ್ರೈಟರ್.

---

— ಶ್ರೀಹರಿ ವಿಠ್ಠಲಾ —

ಬೆಳಗಾವಿಯಲ್ಲಿಯೇ ಅದ್ವಿತೀಯ

## ಜನತಾ ಕೆಫೆ •
## • ರೆಸ್ಟೋರೆಂಟ
ಹಾಗೂ
## ಜನತಾ
## • ಬೋರ್ಡಿಂಗ
## • ಲಾಜಿಂಗ

ಕಿರ್ಲೋಸ್ಕರ ರೋಡ, ಬೆಳಗಾವಿ

ಫೋನ ನಂ, ೪೮೪

ಶುಚಿ-ರುಚಿಯಾದ ಊಟ ತಿಂಡಿತಿನಿಸುಗಳು ವಸತಿ ಸೌಕರ್ಯ ನಮ್ಮಸೇವೆ

ಪ್ರೊ. ಎ. ವ್ಹಿ. ರಾವ್

ದೀಪಾವಳಿಯು ನಮ್ಮ ಎಲ್ಲ ಗ್ರಾಹಕರಿಗೆ ಸುಖಪ್ರದವಾಗಲಿ.

ಒಕ್ಕಲತನಕ್ಕಾಗಿ ತಗಾಯಿ ನೇಲೆ ಕೊಡಲಿಕ್ಕೆ
ಮಂಜೂರಿ ಪಡೆದ

## 'ಪ್ಯಾಕೊ'



ಎಂಜಿನ್ನುಗಳು

೩½/೪½, ೬/೬½, ೮/೯, ೧೦/೧೧, ಎಚ್. ಪಿ.

ತಯಾರಿ ಸಂಗ್ರಹದಿಂದ ದೊರೆಯುತ್ತವೆ.

ತಯಾರಕರು :

## ಪ್ಯಾಕೊ ಎಂಜಿನಿಯರಿಂಗ ಪ್ರಾ. ಲಿ.

ಕೊಲ್ಹಾಪೂರ ಫೋನ ನಂ. : ೨೭೦

---

ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ !

## ವಿದೇಶಿ ಕನ್ನಡಕಗಳು—

ನೀವು ಯಾವ ಬಣ್ಣದ ಕನ್ನಡಕಗಳನ್ನು ಉಪಯೋಗಿಸುವಿರೋ ಜಗತ್ತು ಅದೇ ಬಣ್ಣದಂತೆ ಕಾಣುತ್ತದೆ. ಈ ದೋಷವು ಕನ್ನಡಕದ್ದಲ್ಲದೇ ಅದರಿಂದ ನೋಡುವವರದುಂಟು. ಆದ್ದರಿಂದ ಬಣ್ಣವು ಕನ್ನಡಕದ ಗುಣಧರ್ಮವೇ ಇದೆ.

ಸಧ್ಯ ನಾವು ರಾಷ್ಟ್ರೀಯತೆಯ ಹೆಮ್ಮೆಯನ್ನು ಕೊಚ್ಚಿಕೊಳ್ಳುತ್ತೇವೆ. ಆದರೆ ವಿದೇಶಿ ವಸ್ತುಗಳನ್ನೇ ಉಪಯೋಗಿಸುತ್ತೇವೆ. ನಮ್ಮ ದೇಶೀ ವಸ್ತುಗಳನ್ನು ವಿದೇಶೀ ಕನ್ನಡಕಗಳಿಂದ ನೋಡಿದರೆ ವಿಕೃತ ಸ್ವರೂಪ ಹಾಗೂ ಬಣ್ಣ ಕಾಣಿಸುವುದರಲ್ಲಿ ಸಂಶಯವಿಲ್ಲ. ಆದರೂ ದೇಶೀ ವಸ್ತುಗಳ ಕಡೆಗೆ ವಿದೇಶಿ ಕನ್ನಡಕ ತೆಗೆದು ನೋಡಿರಿ. ಮತ್ತು ನಮ್ಮ ವಸ್ತುಗಳು ವಿದೇಶಿ ವಸ್ತುಗಳಿಗೆ ಸರಿಸಮಾನವಿರುತ್ತದೆ ಎಂಬುದನ್ನು ಮನಗಾಣಿರಿ. ಇದನ್ನು ನೋಡಿ ಪ್ರಸಿದ್ಧ ದೇಶಿ ಕಂಪನಿಗಳ ವಸ್ತುಗಳನ್ನೇ ಕೊಳ್ಳಿರಿ.

ನಿಮ್ಮ ಟಾಯರುಗಳನ್ನು ರಿಮೋಲ್ಡಿಂಗ್ ಬಗ್ಗೆ ನಮ್ಮ ಕಡೆಗೆ ಕಳಿಸಿರಿ ಮತ್ತು ರಾಷ್ಟ್ರೀಯ ಉದ್ಯಮಕ್ಕೆ ನೆರವಾಗಿರಿ.

## ಎಸ್. ಜಿ. ಫಡಕೆ ಮತ್ತು ಸನ್ಸ

ಖಡೇಬಜಾರ, ಬೆಳಗಾವಿ

---



'ನಮ್ಮ ಗ್ರಾಹಕರೆಲ್ಲರಿಗೂ
ದೀಪಾವಳಿಯ ಶುಭಾಶಯಗಳು

ತಮ್ಮ ಅಚ್ಚುಮೆಚ್ಚಿನ

## ದುರ್ಗಾ ಲಾಜ
ಮತ್ತು
## ಟಿಫಿನ್ ರೂಮ್ಸ್



ಜವಳೀ ಬಜಾರ, ಗದಗ

ಆಧುನಿಕ ಸುವ್ಯವಸ್ಥೆಗಳಿಂದೊಡಗೂಡಿದ . . . . .

- ಊಟ, ವಸತಿ ಮತ್ತು
- ಉಪಹಾರ ಗೃಹ

## ಗದುಗಿಗೆ ಬಂದಾಗ ನೀವು ಸಂದರ್ಶಿಸಲೇಬೇಕು!

---

    

## ಇಂಡಿಯನ್ ಪ್ಲೈವುಡ್ ಕಂಪೆನಿ ಪ್ರೈವೇಟ್ ಲಿಮಿಟೆಡ್

೯ ವಾಲೇಸ್ ಸ್ಟ್ರೀಟ್, ಕೋಟೆ, ಮುಂಬಯಿ—೧

ಇವರಿಂದ ಶುಭಾಶಯಗಳು

ಪಿಂಕರ್ ಫ್ಲಾಶ್ ಬಾಗಿಲುಗಳ ಉತ್ಪಾದಕರು

    

# ಪ ರಿ ವಿ ಡಿ



ಕಾಳ ಕುಕ್ಕು ನವಿಲೆ
  ನೀ ಕಾಳ ಕುಕ್ಕಿದಾಗ
ಮೈ ಸೊಕ್ಕಿ ಕುಣಿಯಬಲ್ಲೆ.
  ಮೋಡವೋಡಲುಂಟು
ನೀನಾ ಗಾಡಿಗೆದುರಾಗಿ
  ಕಾಲು ಕುಣಿಸಲುಂಟು; ಗರಿಗೆದರಿ
ಹೆದರಿ, ಮುದುರಿ, ಬಿಂಕತೋರಿ
  ಭರತನಾಗಲುಂಟು;—
ಈ ಕಾಳು ನೋಡು ನಿನಗೆ
  ಆ ನಿಮಿಷಕೊಲಿವ ತಾಳ"

—ಕುಲಮುವರ್

ಚಿತ್ರ: ಸುರೇಶ ಪಾರೀಖ




# ದೀಪಾವಳಿ ಸಂಚಿಕೆ ೧೯೫೬

ಸಂಪಾದಕರು : ಹ. ರಾ. ಪುರೋಹಿತ

## ನಮ್ಮ ನುಡಿ

ಕಳೆದ ಹಲವಾರು ವರ್ಷಗಳಂತೆ ಈ ವರ್ಷವೂ ದೀಪಾವಳಿಯ ಈ ಶುಭದಿನದಂದು 'ಕರ್ಮವೀರ'ದ ಹನ್ನೊಂದನೆಯ ವಿಶೇಷ ಸಂಚಿಕೆಯನ್ನು ವಾಚಕರಿಗೆ ಸಮರ್ಪಿಸುತ್ತೇವೆ. ಈ ದೀಪಾವಳಿ ಸಂಚಿಕೆಯು ಹೆಚ್ಚೆಚ್ಚು ಲೋಕಪ್ರಿಯವಾಗಹತ್ತಿದ್ದು ನಮಗೆ ಸಂತೋಷಪ್ರದವಾಗಿದೆ.

ಈ ಸಂತೋಷದ ಸಮಯದಲ್ಲಿ ನಾವು ನಮ್ಮ ವಾಚಕರಿಗೆ ಇಷ್ಟೇ ಅಲ್ಲ ಭಾರತೀಯರಿಗೆಲ್ಲ ಅದೇಕೆ ಸಮಸ್ತ ಜಗತ್ತಿಗೂ ಸನ್ಮಂಗಲವನ್ನು ಕೋರುತ್ತೇವೆ. 'ಸರ್ವೇ ಜನಾಃ ಸುಖಿನೋ ಭವಂತು' 'ಸಮಸ್ತ ಸನ್ಮಂಗಲಾನಿ ಭವಂತು' ಎಂಬುವು ಭಾರತೀಯರು ನಿತ್ಯವೂ ಪಠಿಸತಕ್ಕ ಮಂತ್ರಗಳಾಗಿವೆಂಬುದು ಸರ್ವವಿದಿತ.

ಭಾರತವು ಸ್ವತಂತ್ರವಾಗಿ ಕರ್ನಾಟಕವು ಪ್ರತ್ಯೇಕ ರಾಜ್ಯವನ್ನು ಪಡೆದಿದ್ದರೂ ನಾವು ಬಿಡಿಸತಕ್ಕ ಅನೇಕ ಸಮಸ್ಯೆಗಳು ಇನ್ನೂ ಹಾಗೆಯೇ ಉಳಿದಿವೆ. ನಮ್ಮ ನೆರೆಯ ರಾಷ್ಟ್ರವಾದ ಪಾಕಿಸ್ತಾನವು ಈಗ ಪೂರ್ಣವಾಗಿ ಸರ್ವಾಧಿಕಾರಿ ದಂಡಿನಾಳಿಕೆಗೊಳಗಾದ್ದರಿಂದ ಅದು ಭಾರತದ ಮೇಲೆ ಕಾಲುಕೆದರಿ ಯಾವಾಗ ಯುದ್ಧವನ್ನು ಹೂಡುವುದೊ ನಿಯಮವಿಲ್ಲ. ಕಾಶ್ಮೀರ ಪ್ರಶ್ನೆ, ಕಾಲುವೆ ನೀರಿನ ತಂಟೆ, ಗಡಿಗಳ ಸಮಸ್ಯೆಗಳು ಇನ್ನೂ ಹಾಗೆಯೆ ಉಳಿದಿವೆ. ಪಾಕಿಸ್ತಾನದಲ್ಲಿ ಭದ್ರ ಪ್ರಜಾಪ್ರಭುತ್ವ ಆಡಳಿತೆಯಿಲ್ಲದ್ದರಿಂದ ಈ ಸಮಸ್ಯೆಗಳು ಪರಿಹಾರವಾಗದೆ ಉಳಿದಿವೆ. ಈ ಬಗ್ಗೆ ನಮ್ಮ ನಾಯಕರು ವಿವಂಚನೆಗೊಳಗಾದದ್ದು ಸ್ವಾಭಾವಿಕ. ಆದರೆ ಶಾಂತಿಯಿಂದಲೆ ಈ ಎಲ್ಲ ಪ್ರಶ್ನೆಗಳನ್ನು ಬಿಡಿಸಬೇಕೆಂಬುದು ಭಾರತದ ಧ್ಯೇಯವಾಗಿದೆ.

ಪಾಕಿಸ್ತಾನವೊಂದನ್ನು ಬಿಟ್ಟರೆ, ಉಳಿದ ರಾಷ್ಟ್ರಗಳೊಡನೆ ಭಾರತದ ಸತ್ಸಂಬಂಧವು ದಿನದಿನಕ್ಕೆ ಬೆಳೆಯುತ್ತಲಿದೆ. ಭಾರತದ ಸಾರ್ವಾಂಗಿಕ ಅಭಿವೃದ್ಧಿಗಾಗಿ ಆಯಾ ಅಭಿವೃದ್ಧರಾಷ್ಟ್ರಗಳು ಸರ್ವತೋಪರಿ ಸಹಾಯ ಸಲ್ಲಿಸುತ್ತಿರುವವು. ಆಹಾರಪದಾರ್ಥಗಳಲ್ಲಿಯಾದರೂ ಭಾರತವು ಸ್ವಾವಲಂಬಿಯಾಗಬೇಕೆಂದು ಪ್ರಯತ್ನಿಸುತಿದ್ದರೂ ಇನ್ನೂ ಅದು ಸಾಧ್ಯವಾಗಿಲ್ಲ. ಭಾರತವನ್ನು ಸರ್ವಸಮೃದ್ಧ ರಾಷ್ಟ್ರವನ್ನಾಗಿಸುವಂತೆ ಭಾರತೀಯರೆಲ್ಲ ಹೃತ್ಪೂರ್ವಕವಾಗಿ ಪ್ರಯತ್ನಿಸಬೇಕಲ್ಲದೆ, ಸರಕಾರದವರು ಈ ಸಂಬಂಧದಲ್ಲಿ ಕೈಕೊಳ್ಳುವ ಕಾರ್ಯಕ್ರಮಗಳಲ್ಲೆಲ್ಲ ಆಸ್ಥೆಯಿಂದ ಸಕ್ರಿಯ ಸಹಕಾರ ಮಾಡಬೇಕಾದುದು ಕರ್ತವ್ಯವಾಗಿದೆ.

ಕರ್ನಾಟಕವು ಪ್ರತ್ಯೇಕ ರಾಜ್ಯವನ್ನು ಪಡೆದಿದ್ದರೂ ಕನ್ನಡಿಗರೆಲ್ಲರಲ್ಲಿ ಇನ್ನೂ ಹೃದಯಸಮ್ಮಿಲನವಾಗಿಲ್ಲೆಂದು ವಿಷಾದಿಸಬೇಕಾಗಿದೆ. ಪ್ರತ್ಯೇಕತಾಭಾವನೆ ಪ್ರತಿಯೊಂದರಲ್ಲಿ ಇನ್ನೂ ಒಡೆದು ಕಾಣುತ್ತದೆ. ಈ ಭಾವನೆ ಹೋಗಿ ನಾವೆಲ್ಲ ಕನ್ನಡಮ್ಮನ ಮಕ್ಕಳು, ಆ ಮಹಾಮಾತೆಯ ಸಾರ್ವಾಂಗಿಕ ಅಭಿವೃದ್ಧಿಗಾಗಿ ಪ್ರಯತ್ನಿಸುವದು ನಮ್ಮ ಕರ್ತವ್ಯವೆಂದು ಎಲ್ಲರೂ ತಿಳಿದುಕೊಂಡಾಗಲೆ ರಾಜ್ಯದ ಉದ್ಧಾರವಾಗಬಲ್ಲದೆಂದು ಪ್ರತ್ಯೇಕ ಹೇಳಬೇಕಿಲ್ಲ.

ರಾಜ್ಯಪುನರ್ಘಟನಾ ಆಯೋಗದ ವರದಿಯನ್ನು ಪೂರ್ಣವಾಗಿ ಚರ್ಚಿಸಿ, ಸಂಸತ್ತು ಆಯಾ ರಾಜ್ಯಗಳನ್ನು ಅವುಗಳ ಗಡಿಗಳನ್ನು ನಿರ್ಧರಿಸಿದ್ದರೂ ನಮ್ಮ ನೆರೆಯ ಮರಾಟಿಗರು ಬೆಳಗಾವಿ ಮತ್ತು ಕಾರವಾರ ಮತ್ತು ಆ ಜಿಲ್ಹೆಗಳಲ್ಲಿಯ ಕೆಲ ಪ್ರದೇಶಗಳು ಮರಾಟಿಯೆಂದು ಹೇಳಿ ಅವುಗಳನ್ನು ಪಡೆಯಲು ಸತ್ಯಾಗ್ರಹವನ್ನು ಹೂಡಿದ್ದು ಎರಡೂ ರಾಜ್ಯಗಳಲ್ಲಿಯ ಸತ್ಸಂಬಂಧಕ್ಕೆ ಅಡ್ಡಿಯನ್ನುಂಟು ಮಾಡಿದೆಯಲ್ಲದೆ ರಾಷ್ಟ್ರಧುರೀಣರಿಗೂ ವಿವಂಚನೆಯನ್ನುಂಟುಮಾಡಿದೆ. ಮರಾಟಿಗರು ಈ ಆಕ್ರಾಮಕ ಮನೋವೃತ್ತಿಯನ್ನು ಬಿಟ್ಟುಗೊಟ್ಟಾಗಲೆ ಎರಡೂ ರಾಜ್ಯಗಳು ನೆಮ್ಮದಿಯಿಂದ ಬಾಳಬಲ್ಲವು.

ಈ ವಿಶೇಷ ಸಂಚಿಕೆಯನ್ನು ಸರ್ವಾಂಗ ಸುಂದರ ಮಾಡಲು ನೆರವಾದ ಸಹಕಾರಿಗಳನ್ನು, ಮುದ್ರಣ ಮೊದಲಾದ ವಿಭಾಗದವರನ್ನು ಅಭಿನಂದಿಸುತ್ತೇವೆ. ಲೇಖನ, ಕವನ, ಕತೆ, ಭವಿಷ್ಯ ಬರೆದು ಕಳಿಸಿದವರಿಗೆ, ಜಾಹೀರಾತು ಕೊಟ್ಟವರಿಗೆ ಋಣಿಯಾಗಿದ್ದೇವೆ. ಮುಖ ಚಿತ್ರವನ್ನು ಬರೆದುಕೊಟ್ಟ ನಮ್ಮ ಸ್ಟಾಫ್ ಆರ್ಟಿಸ್ಟ ಶ್ರೀ ಟಿ. ಕೃಷ್ಣರಾವ ಇವರಿಗೂ ಅವರ ಸಹಾಯಕರಾದ ಶ್ರೀ ಜೈನಾಪೂರ ಇವರಿಗೂ ಧನ್ಯವಾದಗಳು. ಶ್ರೀ ಕಂಚಿ, ತಾಂಬೆ ಇವರು ವ್ಯಂಗ್ಯಚಿತ್ರ ಕಳಿಸಿದ್ದಕ್ಕಾಗಿ ಕೃತಜ್ಞತೆಗಳು. ಪಡಿಯಚ್ಚು ಮಾಡಿಕೊಟ್ಟ ಪ್ರಸಾದ ಪ್ರೊಸೆಸ್ ವರ್ಕ್ಸ ಮದರಾಸ, ಆಯಿಡಿಯಲ್ ಫೋಟೋಝಿಂಕೊ ವರ್ಕ್ಸ ಮತ್ತು ರವಿ ಪ್ರೊಸೆಸ್ ವರ್ಕ್ಸ ಹುಬ್ಬಳ್ಳಿ ಇವರಿಗೆ ಋಣಿಯಾಗಿದ್ದೇವೆ. ಧಾರವಾಡದ ಶ್ರೀ ಕೋನೇರಿ ಮಾಸ್ತರರು ಛಾಯಾಚಿತ್ರವೊಂದನ್ನು ಕೊಟ್ಟದ್ದಕ್ಕಾಗಿ ಅಭಿನಂದಿಸುತ್ತೇವೆ. ದೀಪಾವಳಿಯು ಸರ್ವರಿಗೂ ಸನ್ಮಂಗಲವನ್ನು ನೀಡಲೆಂದು ಇನ್ನೊಮ್ಮೆ ಪರಮಾತ್ಮನನ್ನು ಪ್ರಾರ್ಥಿಸಿ, ವಿರಮಿಸುತ್ತೇವೆ.



# ಕೇಶಿರಾಜನ ದೃಷ್ಟಾಂತಗಳು

ಲೇಖಕರು : ಪ್ರಿನ್ಸಿಪಾಲ ಆರ್. ವಾಯ್. ಧಾರವಾಡಕರ,
ಜನತಾ ಕಾಲೇಜ, ಧಾರವಾಡ.

**ಕೇಶಿರಾಜನು ವ್ಯಾಕರಣಕಾರನಾಗಿರುವಂತೆ ಉತ್ತಮ ಕವಿಯೂ ಆಗಿದ್ದಿರ ಬೇಕೆಂಬುದಕ್ಕೆ ಅವನ ಅನೇಕ ದೃಷ್ಟಾಂತಗಳು ನಿದರ್ಶನವಾಗಿರುವವು. ಆ ದೃಷ್ಟಾಂತಗಳಲ್ಲಿ ಕಂಡುಬರುವ ವೈಶಿಷ್ಟ್ಯ, ಕೇಶಿರಾಜನ ವ್ಯಕ್ತಿತ್ವದ ದರ್ಶನ ಗಳನ್ನು ಲೇಖಕರು ಇಲ್ಲಿ ಸೋದಾಹರಣವಾಗಿ ವಿಶದಪಡಿಸಿರುವರು.**

**ಛಂದಃ ಪಾದೌ ತು ವೇದಸ್ಯ ಹಸ್ತೌ**
**ಕಲ್ಪೋಽಥ ಪಠ್ಯತೇ ।**
**ಜ್ಯೋತಿಷಾಮಯನಂ ಚಕ್ಷುಃ ನಿರುಕ್ತಂ**
**ಶ್ರೋತ್ರಮುಚ್ಯತೇ ॥**
**ಶಿಕ್ಷಾ ಘ್ರಾಣಂ ತು ವೇದಸ್ಯ**
**ಮುಖಂ ವ್ಯಾಕರಣಂ ಸ್ಮೃತಮ್ ॥—**

ವ್ಯಾಕರಣವು ವೇದದ ಮುಖವೆಂದು ಶಿಕ್ಷೆ ಹೇಳುತ್ತದೆ. **"ರಕ್ಷಾರ್ಥಂ ವೇದಾನಾಂ ಅಧ್ಯೇಯಂ ವ್ಯಾಕರಣಮ್"** ಎಂದು ಪತಂಜಲಿ ಮಹರ್ಷಿಗಳ ಮತ. ಭಾಷೆಯಲ್ಲಿ ಅನವಸ್ಥೆಯುಂಟಾದಾಗೆಲ್ಲ ಮತ್ತು ಅನವಸ್ಥೆ ಉಂಟಾಗಬಾರದಾಗಿ, ದುಷ್ಪ್ರಯೋಗಗಳ ನಿಗ್ರಹಕ್ಕಾಗಿಯೂ ಶಿಷ್ಟ ಪ್ರಯೋಗಗಳ ಮರ್ಯಾದೆಗಾಗಿಯೂ ಪರಮಾತ್ಮನ ಅವತಾರದಂತೆ ವ್ಯಾಕರಣವು ನಿರ್ಮಿತಿ ಹೊಂದುವುದುಂಟು.

ಕನ್ನಡ ಭಾಷೆಯಲ್ಲಿ ಉಂಟಾಗಿದ್ದ ಶಿಥಿಲತೆಯನ್ನು ಸರಿಹೊಂದಿಸುವ ದೃಷ್ಟಿಯಿಂದ ಕ್ರಿ. ಶ. ೧೩ ರಲ್ಲಿ ಪ್ರಾದುರ್ಭವಿಸಿದ ಶಬ್ದಮಣಿದರ್ಪಣವೆಂಬ ವ್ಯಾಕರಣಗ್ರಂಥವೂ ಇಂಥ ಒಂದು ಅಧಿಕಾರ ಗ್ರಂಥ. ಇದನ್ನು ಗ್ರಥಿಸಿದವನು ಕಾವ್ಯ ಮತ್ತು ಪಾಂಡಿತ್ಯ ಪರಂಪರೆಗಳಲ್ಲಿ ಉದಿಸಿಬಂದ ಕವಿ ಕೇಶಿರಾಜ. ವ್ಯಾಕರಣಗುಣವೆಲ್ಲ ಕೂಡಿರುವ ಹಾಗೆ ಶಬ್ದವೆನ್ನುವ ಮಣಿಗೆ ದರ್ಪಣ ಸ್ವರೂಪದಲ್ಲಿರುವಂತೆ ಕರ್ನಾಟಕ ಲಕ್ಷಣಶಬ್ದಶಾಸ್ತ್ರವನ್ನು ತಾನು ಹೇಳಬೇಕೆಂದು ಲಾಕ್ಷಣಿಕರು ಬಂದು ಕೇಳಿಕೊಳ್ಳಲಾಗಿ ತಾನು ವ್ಯಾಕರಣಗ್ರಂಥದ ರಚನೆಯನ್ನು ಮಾಡಿದೆನೆಂದು ಕವಿಯು ಸ್ವತಃ ಹೇಳಿಕೊಳ್ಳುತ್ತಾನೆ. ಸ್ವತಃ ತಾನೇ ಹೇಳಿಕೊಂಡ ಹಾಗೆ ತನ್ನ ರೀತಿ "ಬಗೆವುಗೆ" ಪೇಳ್ವುದು ಎಂದು ಅನ್ನುತ್ತಾನೆ. ಅಂದರೆ ಎಲ್ಲರ ಮನಸ್ಸನ್ನು ಹಿಡಿಯುವ ಹಾಗೆ ತಾನು ಬರೆದೆನೆಂದು ಅಭಿಪ್ರಾಯ.

ಕೇಶಿರಾಜನ ಈ ಘೋಷಣೆಯು ಎಷ್ಟರ ಮಟ್ಟಿಗೆ ಕೃತಾರ್ಥವಾಗಿದೆಯೆಂಬುದನ್ನು ತಿಳಿದುಕೊಳ್ಳುವುದೇ ಈ ಲೇಖನದ ಉದ್ದೇಶ. ಕೇಶಿರಾಜನೇನೋ 'ಬಗೆವುಗೆ' ಹೇಳಿದೆನೆಂದು ಸಾರಿದ. ಅವನ ಗ್ರಂಥವು ಯಾವ ರೀತಿ ಓದುಗರ ಬಗೆಯನ್ನು-ಮನಸ್ಸನ್ನು ಹಿಡಿಯುತ್ತದೆ? ವಿಚಾರಿಸಬೇಕು.

ಕನ್ನಡ ವ್ಯಾಕರಣಪರಂಪರೆಯು ತೀರ ಹುಲುಸಾಗಿರದಿದ್ದರೂ ಬಹುಮಟ್ಟಿಗೆ ಪ್ರಾಚೀನವಾಗಿದೆ. ಕವಿಗಳಿಗೆ ರಾಜಮಾರ್ಗವನ್ನು ಹಾಕಿಕೊಡಲು ಹೊರಟ ನೃಪತುಂಗನು ಎಷ್ಟೋ ವ್ಯಾಕರಣ ವಿಷಯಕ ಮಾತುಗಳನ್ನು ತನ್ನ ಗ್ರಂಥದಲ್ಲಿ ಹೇಳಿದ್ದಾನೆ. ಆಮೇಲೆ ಶಬ್ದಸ್ಮೃತಿ, ಬಾಷಾಭೂಷಣಗಳು ಬಂದುವು. ಅನಂತರ ಶಬ್ದಮಣಿದರ್ಪಣ ಕೊನೆಗೆ ಪಂಡಿತಮಾನ್ಯವಾದ ಶಬ್ದಾನುಶಾಸನ. ಇವೂ ಅಲ್ಲದೆ ರನ್ನ ಮೊದಲಾದ ಕವಿಗಳೂ ವ್ಯಾಕರಣ ಗ್ರಂಥಗಳನ್ನು ರಚಿಸಿರಬಹುದಾಗಿದೆ.

ಆದರೆ, ಇವೆಲ್ಲ ಗ್ರಂಥಗಳಲ್ಲಿ ಹೆಚ್ಚಾಗಿ ಜನಪ್ರಿಯವಾದುದು ಶಬ್ದಮಣಿದರ್ಪಣ. ಯಾಕೆ?

**ಒಂದು—**ಕೇಶಿರಾಜಪೂರ್ವ ಗ್ರಂಥಗಳಲ್ಲಿ ವ್ಯಾಕರಣ ವಿಷಯವು ದೊರಕುವುದು ತುಂಬಾ ವಿರಲವಾಗಿ. ಅವುಗಳಲ್ಲಿ ಅಷ್ಟಾಗಿ ತುಲನಾತ್ಮಕ ವಿವೇಚನೆಯಿಲ್ಲ. ಪರಿಪೂರ್ಣತೆಯಿಲ್ಲ. 'ಮನಂಬುಗುವ' ರೀತಿಯಿಲ್ಲ. ಶಾಸನಕಾರನ ಗ್ರಂಥವು ಪಾಂಡಿತ್ಯಪ್ರಗಲ್ಭವಾದುದಾದರೂ ಪಾರಿಭಾಷಿಕದ ಸಮುದ್ರ, ಸಮುದ್ರ ಈಸಬಲ್ಲವರೇ ಅದಕ್ಕೆ ಕೈಹಾಕಬೇಕು. ತದ್ವಿರುದ್ಧವಾಗಿ, ಕೇಶಿರಾಜನ ಗ್ರಂಥದಲ್ಲಿ ಶಾಸ್ತ್ರೀಯ ವಿವೇಚನೆಯಿದೆ; ತುಲನಾತ್ಮಕ ದೃಷ್ಟಿಕೋನವಿದೆ; ಕನ್ನಡದ ದೇಸಿ ಮಾರ್ಗಗಳ ಕಲ್ಪನೆ ಇದೆ; ವಿಷಯ ಮತ್ತು ವಿವರಣ ಪರಿಪೂರ್ಣತೆಯಿದೆ; "ಶಕ್ಯಾನುಷ್ಠಾನ" ವಿದೆ; ಮನ ಹಿಡಿಯುವ ಆಕರ್ಷಣೆಯಿದೆ.

ಕೇಶಿರಾಜನ ಗ್ರಂಥದಲ್ಲಿ ಶಕ್ಯವಿದ್ದಷ್ಟು ಅಭ್ಯಾಸ-ಅನುಷ್ಠಾನವಿದೆ. ಅವನು ಗಜಗ, ಗುಣನಂದಿ, ಮನಸಿಜ, ಅಸಗ, ಚಂದ್ರಭಟ್ಟ, ಗುಣವರ್ಮ, ಶ್ರೀವಿಜಯ, ಹೊನ್ನ, ಹಂಪ-ಮೊದಲಾದ ಕವಿಗಳ, ಮಾತ್ರವಲ್ಲದೆ, ಇನ್ನೂ "ಪಲಂಬರ್" ಕವಿಗಳ ಕಾವ್ಯಗಳನ್ನು ನೋಡಿದ್ದಾನೆ "ಚುರ್ಚಿದಪೋಲ್ ಬಿಸಿಲಳುರೆ" ಎಂಬಲ್ಲಿ ಗುಣನಂದಿಯ ಹೆಸರನ್ನು "ತರವೇಳ್ ಮಾಣಿಕ್ಯ ಭಂಗಾರದ ಪುಟಿಕೆಗಳಂ" ಎಂಬಲ್ಲಿ ಹಂಸರಾಜನ ಹೆಸರನ್ನು ಹೇಳಿರುವನಲ್ಲದೆ, ಪೂನ್ನಕೃತವಾಗಿರಬಹುದಾದ ಭುವನೈಕರಾಮಾಭ್ಯುದಯದಿಂದಲೂ ನಾಗವರ್ಮನ ಕಾದಂಬರಿಗ್ರಂಥದಿಂದಲೂ ರನ್ನನ ಕಾವ್ಯಗಳಿಂದಲೂ ಉದಾಹರಣೆಗಳನ್ನು ತೆಗೆದುಕೊಂಡಿದ್ದಾನೆ. "ಇವಳಂ ಆ ಶೃಂಗಾರಸಾರಂ" .............. ಎನ್ನುವ ದೃಷ್ಟಾಂತವು ಕಾಳಿದಾಸನ ಊರ್ವಶಿಯ ವರ್ಣನೆಗೆ ಸಂವಾದಿಯಾಗಿದೆ. ಈ ರೀತಿ ದೃಷ್ಟಾಂತಗಳ ವೈಪುಲ್ಯದಲ್ಲಿ ಮಾತ್ರವಲ್ಲದೆ, ವಿಷಯಪ್ರತಿಪಾದನೆಯ ಸ್ಫೋಪಜ್ಞತೆಯಲ್ಲಿಯೂ ಕೇಶಿರಾಜನ ಶಕ್ಯಾನುಷ್ಠಾನವನ್ನು ಕಾಣುತ್ತೇವೆ. ಅಂತಲೇ A. C. Burnell ಅವರು ಈ ಗ್ರಂಥದ ಹೆಚ್ಚಳದ ಬಗ್ಗೆ ಬರೆಯುವಾಗ ಹೀಗೆ ಹೇಳಿದರು—"The great and real merit of the ಶಬ್ದಮಣಿ ದರ್ಪಣ is that it bases the rules on independent research and the usage of writers of repute; in this way, it is far ahead of the Tamil & Telugu treatises, which are much occupied with vain scholastic disputations".

ಆದರೆ, ಇವೆಲ್ಲಕ್ಕೂ ಹೆಚ್ಚು ಶಬ್ದಮಣಿದರ್ಪಣದ ಆಕರ್ಷಣೆಯು ಅದರ ದೃಷ್ಟಾಂತಗಳ ಸೌಂದರ್ಯದಲ್ಲಿದೆ. ಕೇಶಿರಾಜನು ಪ್ರಾಮುಖ್ಯತಃ ಕವಿ; ("ಆಂ ಕವಿಕೇಶವನೆಂ") ಅವನದು ಕವಿಹೃದಯ. ಇರುಮರುಳೆ ಶುಷ್ಕವೈಯಾಕರಣಂಗಂ ತಾರ್ಕಿಕಂಗಂ ವಿಷಯಮೆ ಕಾವ್ಯಮ್—ಎಂಬ ಆಪಾದನೆಗೆ ಅವನು ಎಡೆಯಾಗಲಾರನು. ವ್ಯಾಕರಣಾಂಗಗಳ ಸ್ಪಷ್ಟೀಕರಣಕ್ಕಾಗಿ ದೃಷ್ಟಾಂತಗಳಿರಬಹುದಾದರೂ ಕೇಶಿರಾಜನು ದೃಷ್ಟಾಂತಗಳ ಆಳಲ್ಲ. ಕೇವಲ ವ್ಯಾಕರಣಾಂಶಗಳ ಅಭಿವ್ಯಕ್ತಿಗಾಗಿ ದೃಷ್ಟಾಂತವನ್ನು ಉಪಯೋಗಿಸಿ, ತೃಪ್ತನಾಗತಕ್ಕ ವ್ಯಕ್ತಿ ಕೇಶಿರಾಜನಲ್ಲ. ವ್ಯಾಕರಣಾಂಶದಷ್ಟೇ, ತಾನು ಆಯ್ದುಕೊಂಡ ದೃಷ್ಟಾಂತಗಳ ಕಾವ್ಯಾಂಶಕ್ಕೂ ಅವನು ಮಾರುಹೋಗಿದ್ದಾನೆ. ಕಾವ್ಯ ಮತ್ತು ವ್ಯಾಕರಣ ಎರಡೂ ಅವನ ಕಣ್ಣು. ಅಂತಲೇ ಶುಷ್ಕವಾದ ವ್ಯಾಕರಣನಿಯಮದ ವಿವರಣೆಯಿದ್ದರೂ ಇಡೀ ದೃಷ್ಟಾಂತಭಾಗವನ್ನು ಕೊಡದೆ ಅವನ ಮನಸ್ಸಿಗೆ ಸಮಾಧಾನವಿಲ್ಲ. ಅಂತಲೇ, ಕೇಶಿರಾಜನ ವ್ಯಾಕರಣ ಮರೆತರೂ ಅವನ ದೃಷ್ಟಾಂತಗಳ ಕಾವ್ಯಾಂಶವು ಮನಸ್ಸಿನಲ್ಲಿ ವ್ಯಾಪಿಸಿರುತ್ತದೆ — ಹೂವು ಮರೆಯಾದರೂ ಅದರ ಪರಿಮಳವು ಇಡಗಿರುವ ಹಾಗೆ.

ಕವಿ ತನ್ನ ಕಾವ್ಯವು "ಸಿರಿಗೇಕ್ಷಿಪ ರಸ ಚಿತ್ರ" "ಸರಸತಿಯ ಎರಡನೆಯ ವೀಣೆ." ಎಂದು ಹೇಳಿಕೊಂಡಿದ್ದಾನೆ. ಅವನ ದೃಷ್ಟಾಂತಗಳು ಅವನ ಹಿರಿಮೆಯನ್ನು ಸಾರುತ್ತವೆ.

ಕೇಶಿರಾಜನದು ತುಂಬು ವ್ಯಕ್ತಿತ್ವ. ಅವನು ಕವಿಹೃದಯ; ಲೋಕಾನುಭವವುಳ್ಳವ; ಕಟಕಿ ವ್ಯಂಗ್ಯಗಳನ್ನೂ ಉಪಯೋಗಿಸಬಲ್ಲವ; ರಸಿಕ; ಧರ್ಮಪ್ರಜ್ಞೆಯುಳ್ಳವ.

**ಕಾವ್ಯಾಂಶ:—** ಬರಿಯ ವ್ಯಾಕರಣಾಂಶದ ಸ್ಪಷ್ಟನೆ ಮಾತ್ರ ಕೇಶಿರಾಜನಿಗೆ ಬೇಕಿಲ್ಲ. ಎಂಥ ಶುಷ್ಕವಾದ ಅಂಶವೇ ಆದರೂ ಇಡೀ ಕಾವ್ಯಭಾಗವನ್ನು ಹೇಳಿದ ವಿನಾ ಅವನಿಗೆ ಸಮಾಧಾನವಿಲ್ಲ. ಕಾವ್ಯಗ್ರಥನಕ್ಕೆ ಕಾವ್ಯಪ್ರತಿಭೆ ಬೇಕಿದ್ದಂತೆಯೇ ಕಾವ್ಯಸೌಂದರ್ಯವನ್ನು ಕಾಣುವುದಕ್ಕೂ ಕವಿಹೃದಯವೇ ಬೇಕು. ಕೇಶಿರಾಜನು ಈ ಅರ್ಥದಲ್ಲಿ ಕವಿ

...ಾಗಿದ್ದಾನೆ. 'ಮಾಡಿದಂ' ಎಂಬುದು ಕೃದಂತ ...ಂದು ಹೇಳಬೇಕಾದಾಗ ಅವನ ದೃಷ್ಟಾಂತವಿದು–

...ನೀಳ್ದ ಜಸದಿಂ ಬೆಳ್ಪಿಂಗಳಂ ಮಾಡಿದಂ

...ರ್ದಂ' ಕೃದಂತವೆಂದು ಹೇಳಬೇಕಾದಾಗ ಇಡೀ ...ವ್ಯಭಾಗವೇ ದೃಷ್ಟಾಂತ.

**ಮದಗಜವೆರಡಜ ಬಾಲದ**
**ಮೊದಲಂ ಪಿಡಿದೆತ್ತಿಯೊತ್ತಿ ಸುರ್ಗುತ್ತಿರೆ ಆ—**
**ಸ್ಯದಿಂ ಒಗುವ ರಕ್ತಮ್ ಉರಿಯೆನೆ**
**ತಿದಿಯೊತ್ತುವ ಕಮ್ಮರಂಬೊಲಿರ್ದಂ ಭೀಮಂ॥**

ಧಾತುವಿನಲ್ಲಿ 'ಆ' ಕಾರ ಬರುತ್ತಿದೆಯೆಂದು ಹೇಳಬೇಕಾದಾಗ—

**ಬಾರ ಮರಾಳಿಕಾಗಮನೆ, ನೋಡ ಚಕೋರ**
**ವಿಲೋಲ ನೇತ್ರೆ, ನಿಂ—**
**ದಾರಯ ಪೀವರಸ್ತನನಿತಂಬಭರಾಲಸೆ, ಕೇಳ**
**ಕಾಮುಕಾ —**
**ಳೋರಗ ಕೇಶಪಾಶೆ, ಎನಗುತ್ತರಮಂ ಕುಡ**
**ಚಾರುವೇಣುವೀ**
**ಣಾರವೆ, ನೀನಾರ ಮಗಳೆಲ್ಲಿಗೆ ಪೋದಪೆಯಾ**
**ವುದಾಶ್ರಯಂ॥**

ಇಲ್ಲಿ ಬರಿ "ಬಾರ, ನೋಡ, ಆರಯ, ಕೇಳ, ಕುಡ" ಎಂದು ಹೇಳಿದ್ದರೆ ವ್ಯಾಕರಣದೃಷ್ಟಿಯಿಂದ ಸಾಕಾಗುತ್ತಿತ್ತು. ಆದರೆ ಕೇಶಿರಾಜ ಕವಿ. ಅಂತೆಯೇ ಅವನ ದೃಷ್ಟಾಂತಗಳಲ್ಲಿ "ಪರಮಜನೇಂದ್ರವಾಣಿಯೆ ಪೆಣ್ರೂಪಮಂ ಧರಿಸಿ" ನಿಲ್ಲುತ್ತದೆ; "ನೇಸರು ಮೂಡಿದುದು ಮಿಟ್ಟು ಮೂಡುವ ತೆಱದಿಂ"; ...ವನೋ ಒಬ್ಬ ಸುಂದರನ ರೂಪವೆಂದರೆ—

**ತೊಡೆಗಳ್ ರಂಭಾ ಸ್ತಂಭಂಕ್ಕೆಡೆಗಳ್**
**ಕಣಳ್ ಮನೋಜ ವೀರನ ಗೇಣ್ಗಳ್**
**(ಖಡ್ಗಗಳು).**
**ನಿಡಿದೋಳ್ಗಳ್ ದಿಕ್ಕರಿಕರದ ಒಡನಾಡಿಗಳ್–**

—ಈ ಕಾವ್ಯಾಂಶವೆಲ್ಲ ಯಾಕೆ? ಬರಿಯ ದ್ವಿವಚನದಲ್ಲಿ 'ಗಳ್' ಬರುತ್ತದೆಂದು ಹೇಳುವುದಕ್ಕೆ.

— ವಿಶೇಷಣವು ವಿಶೇಷ್ಯದ ಲಿಂಗಾನುವರ್ತಿಯಾಗಿರುವಂತೆ ಹಲವು ಸಲ ವಿಶೇಷ್ಯವೂ ವಿಶೇಷಣದ ...ರ್ಯಭಾವಕ್ಕೆ ಒಳಗಾಗಬೇಕಾಗುತ್ತದೆ. ಇದಕ್ಕೆ ಕೇಶಿರಾಜನು ಕೊಟ್ಟ ದೃಷ್ಟಾಂತವಿದು—

**ಉದಯಾಸ್ತೋನ್ನತ ಶೈಲಸೇತು ಹಿಮವತ್ಕು-**
**ತ್ಕೀಲ ಪರ್ಯಂತ ಸಂ-**
**ಪದೆಯಂ ವಾರ್ಧಿತರಂಗ—ರಕ್ತ ನಿನದತ್**
**ಕಾಂಚೀಕಲಾಪಾಂಚಿತಾ—**
**ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ**
**ನಿರ್ವ್ಯಾಜದಿಂದಂ ನಿಮಿ**
**ರ್ಚಿದ ಗೆಲ್ಲಂ ಭುವನೈಕ ರಾಮಮಹಿಪಂಗಕ್ಕುಂ**
**ಪೆರರ್ಗಕ್ಕುಮೇ?**

ಎಂಥ ಸುಂದರವಾದ ಕಾವ್ಯಭಾಗ! ನಿಜ; ಈ ಕಾವ್ಯಭಾಗಗಳನ್ನು ಸ್ವತಃ ಕೇಶಿರಾಜನೇ ರಚಿಸಿಲ್ಲ. ಆದರೆ ಇತರರ ಕಾವ್ಯಗಳಲ್ಲಿಯ ಕಾವ್ಯತ್ವವನ್ನು ಕಾಣುವ ಕಣ್ಣು ಅವನಿಗಿದೆ.

ಕೇಶಿರಾಜನ ಸೂತ್ರಗಳೂ ಎಷ್ಟೋ ಸಲ ಕಾವ್ಯಮಯವಾಗಿವೆ. "ಕಡಲುಡಿಗೆಯಾದ" ಪೃಥ್ವಿಯಲ್ಲಿ 'ಅ'ಕಾರದಿಂದ ಳ ಕಾರದ ವರೆಗೆ ವರ್ಣಗಳಿವೆ. ಅನುಸ್ವಾರ ಮುತ್ತಿನ ಹಾಗೆ ವೃತ್ತತೆಯಿಂದ ಇರುತ್ತದೆ. ಹಾಗೆ ಅದು ಕಿವಿಯಲ್ಲಿ ಹಾಕಿಕೊಳ್ಳುವ ಬಾವಲಿಯ ಹಾಗೆ ಅಡಕಿಲಾಗಿ ನಿಂತರೆ, ವಿಸರ್ಗ ಜಿಹ್ವಾಮೂಲೀಯವಾದ '×ಕ', ಹಸುಬೆಯ ಲಕ್ಷಣದ ಹಾಗೆ ಕಾಣುತ್ತದೆ. ಉಪಧ್ಮಾನೀಯವಾದ '೦೦ಪ' ಕುಮಾರಿಸ್ತನಯುಗಳಾಕೃತಿಯಲ್ಲಿದೆ. ಸಮಾಸದಲ್ಲಿ ಶಬ್ದಾರ್ಥಗಳು "ಕಱು ತಾಯ ಬಳಿಯಂ ಉಳಿಯದ ತೆಱದಿಂ" ಅರ್ಥಾನುಗವಾಗಿ ವರ್ತಿಸುತ್ತವೆ. ಅಕ್ಷರ ಹುಟ್ಟಬೇಕಾದರೆ—ತನು ವಾದ್ಯ; ನಾಲಗೆ ವಾದನದಂಡ; ಕರ್ತೃ ಆತ್ಮ; ಅವನ ಮನೋವೃತ್ತಿ ನಿಮಿತ್ತವಾಗಿ ಹೊಟ್ಟೆಯಲ್ಲಿ ಅಕ್ಷರಗಳು ನೆಗಪಿದ ಕಹಳೆಯ ಆಕಾರದಲ್ಲಿ ಧವಳ ವರ್ಣವಾಗಿ ಹುಟ್ಟುತ್ತವೆ.

**ಲೋಕಾನುಭವಃ**— ಶಬ್ದಮಣಿದರ್ಪಣವು ಶಬ್ದದ ಮಣಿದರ್ಪಣವಾದಂತೆ ದೃಷ್ಟಾಂತಗಳ ಮೂಲಕ ಜೀವನ ಮಾರ್ಗದರ್ಪಣವೂ ಆಗಿದೆ. ಇಲ್ಲಿಯ ವ್ಯಾಕರಣಾಂಶಗಳೇನೇ ಇದ್ದರೂ ಇಂಥ ದೃಷ್ಟಾಂತಗಳ ಮೂಲಕ ಕವಿಯು ಕೊಡುವ ಲೋಕಾನುಭವವು ಮನೋಜ್ಞವಾಗಿದೆ.

ಹಾವು ಕಚ್ಚಿದಲ್ಲಿ ಇದು ಔಷಧಿ:—

**ಉರಗಂ ಕೊಂಡಲ್ಲಿಂ ನಾ-**
**ಲ್ವೆರಲನಿತಂ ಕಳೆದು ಕಟ್ಟೆ ಮೇಗಂ ಬೀಗಂ।**
**ಸೆರವಿಡುಗೆ, ಸುಡುಗೆ, ಕಡಿದಿರ**
**ದರಿದಿಕ್ಕುಗೆ, ನೀವಿ ಕಳೆಗೆ, ನಿರ್ವಿಷಮ್‌ಅಕ್ಕುಂ॥**

ಮುಂದೆ ಸಾಗಿದ ಇಂದಿನ ವಿಜ್ಞಾನವು ಎಷ್ಟರ ಮಟ್ಟಿಗೆ ಈ ಮಾತನ್ನು ಒಡಂಬಡುತ್ತದೆಂಬ ಮಾತು ಬೇರಿರಲಿ; ಆದರೆ, ಈ ಮಾರ್ಗದರ್ಶನವು ಕೇಶಿರಾಜನ ಕಾಲದ ಪ್ರಥಮಚಿಕಿತ್ಸೆ. ತದ್ದಿಗೆ ಔಷಧಿಯಿದು:

**ಪರಿಮರ್ದಿಸುವುದು ದುತ್ತೂ-**
**ರರಸಮಂ ಇಂಬಾಗಿ ಪಿರಿದು ನೆಲದೊಳ್**
**ಲವಣಂ।**
**ಬೆರಸು ಒರಸಿಕೊಂಡು ಪೂಸುಗೆ**
**ಕರಗುಗುಂ ವಿಷ್ಪೊರೆಯೆನಿಪ್ಪ ಕುರುವುಂ**
**ಜೀಗಂ॥**

ತನ್ನ ಅಭ್ಯಾಸದಲ್ಲಿ ಕೇಶಿರಾಜನು ಇವೆಲ್ಲ ಲೋಕಾನುಭವವನ್ನು ಗುರುತು ಹಾಕಿಕೊಂಡಿದ್ದಾನೆ. ಇನ್ನೂ ಕೆಲವು ಲೋಕೋಪದೇಶವನ್ನು ಗಮನಿಸಿರಿ: ವಿಧುವಿಲ್ಲದ ಇರುಳ್; ತನ್ನಯ ವಧುವಿಲ್ಲದ ಲೀಲೆ; ಮಧುರ ಮಧುವಿಲ್ಲದ ಪೂ; ದಧಿಯಿಲ್ಲದ ಉಣಿಸು ಶೋಭಿಸವು. ಹಾಗೆಯೇ, ಪಲ್ಲಿಲಿವಾಯ್, (ಅಂದರೆ ಹಲ್ಲು ಇಲ್ಲದ ಬಾಯಿ), ಆಗಿಲಿಲಿ (ಪರಿಮಳವಿಲ್ಲದ) ಗಂಧ, ಕೂರಿಲಿ ಕುಡಗೋಲು ಶೋಭಿಸವು. ನಿಜವಾದ ಪುರೋಹಿತನ್— ವೇದವಿದಂ, ಕಾಲತ್ರಯವೇದಿ, ಬಹುಶ್ರುತಂ, ಅಥರ್ವಕುಶಲಂ, ಶುಭವಂಶೋದಯಂ, ಉತ್ತಮಂ, ಆಶೀರ್ವಾದಪರ ಪರಹಿತನಾಗಿರುತ್ತಾನೆ.

"ಎನಿತುಂ ಕಾಯ್ದುಂ ಬೆನ್ನೀರ್ ಮನೆ ಸುಡದು" "ಏರ್ ಪೆತ್ತರ್ (ಗಾಯ ಹೊಂದಿದವರು) ಏರ್ ಪೆತ್ತರಂ ಪದುಳಂ ಮಾಱ್ಪುದುಚಿತಮ್" (ಸಂಕಟದಲ್ಲಿ ಇದ್ದವರಿಗೆ ಸಂಕಟದಲ್ಲಿರುವವರೇ ನೆರಿಯಾಗುವರು) "ಕಳ್ಳವಿಗೆ ಕುಡಿದು ಧನಮಂ" ವ್ಯಯಿಸಲಾಗದು "ಇನಿಯವು ವಿಷಯಸುಖಂ ನಂಜಿನ ಸವಿವೋಲ್" "ಮಹೇಂದ್ರ ಮಹೈಶ್ವರ್ಯಮ್ ಇವೆಲ್ಲಂ ಅಧ್ರುವಂ" "ಕವಿ ಪೊಱಗಿರೆ, ಕೀಳ್ (ಹೀನ ಕಬ್ಬಿಣದ ತುಣುಕು) ಒಳಗಿರೆ ತುರಗ ಮುಖವೊ? ನೃಪ ಮಂದಿರವೊ!" "ಕವಿಗೆ ಕೇಡಿಲ್ಲಂತುಂ" "ಎನ್ನೆವರಂ ಸಿರಿತಮಗುಂಟು ಅನ್ನವರಂ ಸೇವ್ಯರಲ್ತೆ ಖಳರುಂ" "ಪೊನ್ನುಳ್ಳವನೇ ಕುಲೀನಂ ಸತ್ಯವಾದಿ ಎನಿಸುಗುಂ" "ಪ್ರಾಯಂ ಕೂಸಾದೊಡೆ ಅಭಿಪ್ರಾಯಂ ಕೂಸಕ್ಕುಮೆ?" —ಇವೆಲ್ಲ ಕೇಶಿರಾಜನ ವ್ಯಕ್ತಿತ್ವವನ್ನು ಪೋಷಿಸಿದ ಅನುಭವಸೂತ್ರಗಳು. ಮನುಷ್ಯನು ಜೀವನದಲ್ಲಿ ಯಶಸ್ವಿಯಾಗಬೇಕಾದರೆ, ಒಳ್ಳೆಯವರಿಂದ ಕಲಿಯುವ ಹಾಗೆ ಕೆಟ್ಟವರಿಂದಲೂ ಒಳ್ಳೆಯ ಗುಣಗಳನ್ನು ಕಲಿಯಬೇಕಾಗುತ್ತದೆ, ಕಾಗೆ, ಬಕ, ಆಮೆ, ಮಿಂಚು—ಇವೆಲ್ಲ ಅವನ ಗುರುವಾಗಬೇಕಾದೀತು. ಯಾಕೆಂದರೆ ನೋಡಿ ನೋಡದ. ಹಾಗೆ, ವಾಯಸದಂತಿರೆ ನೋಡು, ಬಕದಂತೆ ಪೆಲ್ಲನೆ ಮೆಟ್ಟು, ಕಚ್ಛಪೋಪ್ರಾಯದೆ ಅಡಂಗು....ಮಿಂಚನೆ ಪೋಲ್ತಿರೆ ಬೀಸು—"ನೀಂ ಖಳನ್ಯಾಯದಿಂ ಎಲ್ಲಮಂ ನೆಱೆಯೆ ಕಲ್ತು ಉಪದೇಶಕನಾಗು ಲೋಕದೊಳ್" ಇದು ಕೇಶಿರಾಜನ ಲೋಕಾನುಭವ.

**ವ್ಯಂಗ್ಯ-ಕಟಕಿ:** ವೈಯಾಕರಣಿಯಾದ ಕೇಶಿರಾಜನು ನಗಲೂ ಬಲ್ಲ; ಹಲವು ಸಲ ಅದರಲ್ಲಿ ವ್ಯಂಗ್ಯ-ಕುಚೇಷ್ಟೆಯು ಇರಬಹುದು. ಉದಾಹರಣೆಗೆ 'ಯ'ಕಾರಾಗಮಕ್ಕೆ ಅವನು ಹೇಳಿದ್ದುದು— "ತಾಯೋರ್ವಳೆ ತಂದೆ ಬೇರೆ" ತದ್ಧಿತಗಳಲ್ಲಿ ಈ ಉದಾಹರಣೆ ಬರುತ್ತದೆ.

**ಒಕ್ಕಲಿತಿ ಜೋಡೆಯಾದಂತಕ್ಕುಮ್ ಆವಳ್**
**ಸಿತಗೆ ಪತಿಗೆ ಮಿಗೆ ಕಾಯ್ದುಳ್; ನೋಟಕ್ಕೆ**
**ಕಡುಸೊಂದಿ; ನಾಣಿಲಿ ಬಕ್ಕಂಬಯಲೊಳ್**
**ಅದಾರುಮಂ ಬಂಚಿಸುವಳ್**

ಬಹುವಚನವು ಮರ್ಯಾದೆಗಿದ್ದಂತೆ, ಅಪಹಾಸ್ಯದಲ್ಲಿಯೂ ಬರುವುದುಂಟು. ಯಾವನೋ ಯಾಚಕನು ಒಂದು ಸಲ ಒಬ್ಬ ಅರಸನಲ್ಲಿ ಹೋಗಿದ್ದ. ಅವನಿಂದ ಸಂಭಾವನೆ ದೊರಕಲಿಲ್ಲ. ಕೊಟ್ಟು ಮನುಷ್ಯ ಬಡವನಾಗಬಹುದು; ಆದರೆ ಕೊಡದೆ ಬಡವರಾಗುವುದನ್ನು ಕಾಣುವುದು ವಿರಳ. ಆ ಅರಸನಿಗೆ ವಿಪನ್ನಾವಸ್ಥೆಯುಂಟಾದಾಗ ಯಾಚಕನು ಹೇಳಿದ ಮಾತಿದು:—

**"ಬಡವಾದಿರರಸ! ಕಾಲೊಳ್**
**ನಡೆದಪಿರಿ!!**
**ಒಡನಾರುಂ ಇಲ್ಲ!! ಕಡಲೆಗಳೇಂ**
**ನಿಮ್ಮುಡಿಯೊಳಗೆ?**
**ಪಡುವ ದೇಗುಲದ ಎಡೆಯಾವುದು?**
**ಕುಡದ ನಿಮಗಮ್ ಈ ಎಡರಾಯ್ತೆ?—**

**ಶೃಂಗಾರ:** ಶೃಂಗಾರಕ್ಕೂ ವ್ಯಾಕರಣಕ್ಕೂ ಬಹು ದೂರದ ಹಾದಿ. ವೈಯಾಕರಣಿಗಳೆಂದರೆ ಸಾಮಾನ್ಯವಾಗಿ ಶುಷ್ಕರೆಂದು ಕಲ್ಪನೆ. ಬ್ರೌನಿಂಗ್ ಕವಿ Grammarian's funeral ದಲ್ಲಿ ಹೇಳಿದ ಹಾಗೆ ಹಳೆಯ ಕೂದಲುದುರಿದ ತಲೆಗಳು! ಆದರೆ, ಕೇಶಿರಾಜನು ನಕ್ಕಂತೆಯೇ ಶೃಂಗಾರದ ಪೆಪ್ಪರಮೆಂಟನ್ನು ನಾಲಗೆಯಲ್ಲಿ ಚಪ್ಪರಿಸಬಲ್ಲ.

ಉಪಧ್ಮಾನೀಯವು ಹೇಗೆ ಕಾಣಿಸುವದೆಂಬುದನ್ನು ಈಗಾಗಲೇ ನೋಡಿದ್ದಾಯಿತು. ಯಾವಳೋ ಒಬ್ಬ ಸ್ತ್ರೀಯ ಕಣ್ಣುಗಳು ಕಂಡದ್ದು ಹೀಗೆ — ನಡುವಣ ಕರ್ಪುರಂ, ಕಡೆಯಣ ಬೆಳ್ಪಂ, ತುದಿಯ ಕೂರ್ಪುರಂ ಎಸೆದಿರೆ. ಜನರಂ ಬಿಡದೆ, ಇಸಲೆ ತೆಗೆದ ಮದನನ ನಿಡಿ ಅಲರ್ ಕಣೆಗಳೆನೆ ಪೋಲ್ತುವು ಆಕೆಯ ಕಣ್ಗಳ್. ಕಾಮಕಾಳೋರಗ ಕೇಶಪಾಶೆಯ ಪರಿಚಯ ಈ ಮೊದಲೇ ಆಗಿದೆ. ಇನ್ನೊಬ್ಬ ಸ್ತ್ರೀಯ ಜನಕ ಅತಿ ಜಡನಾದ ಛಾಂದಸನಾಗಿರಲಾರ. (ಪು. ೧೫೧. ಶ. ಮ. ದ) ವಾಕ್ಯ ನಿರ್ವಾಹಕ್ಕೆ ಅವನು ಕೊಟ್ಟ ದೃಷ್ಟಾಂತವಿದು:—

ಅವತಂಸೋತ್ಪಲ ತಾಡನಂ ಕನಕಕಾಂಚೀ
ಬಂಧನಂ ನೂಪುರಾ—
ರವಝುಂಕಾರಿತ ಚಾರುವಾಮಚರಣಾಘಾತಂ
ಚಲದ್ ಭ್ರೂಲತಾ—
ಗ್ರವಿಭಾಗೋತ್ಕಟತರ್ಜನಂ ತರಳತಾತಾಮ್ರಾ
ಧರಂ ಚಕ್ರಿಗಿ—
ತ್ತುವಲಂಪಂ ಪ್ರಣಯಪ್ರಕೋಪ
ಪ್ರಾರಂಭದೊಳ್ಕಾಂತೆಯಾ ॥

ದೀರ್ಘಾದೇಶಕ್ಕೆ ವಂಶಸ್ಥವೃತ್ತದಲ್ಲಿ ಅವನು ಕೊಟ್ಟಿರುವ ದೃಷ್ಟಾಂತವು ಸುಪ್ರಸಿದ್ಧವೇ ಆಗಿದೆ.

ಎನಿತ್ತನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ
ಅನಿತ್ತನಿತ್ತಂ ವನದೊಳ್ ವನೇಚರಂ
ತನತ್ತು ಬಿಲ್ಲಾನದನಂತೆ ಕೀಸುವಂ ॥

ಪ್ರಶಾಂತ ಭಕ್ತಿ : ಇಷ್ಟೆಲ್ಲ ಇದ್ದರೂ ಕವಿ ಸುಮನೋಬಾಣನ ಯಾದವಕಟಕಾಚಾರ್ಯನ ದೌಹಿತ್ರನೂ ಯೋಗಿಪ್ರವರ ಚಿದಾನಂದ ಮಲ್ಲಿಕಾರ್ಜುನನ ಮಗನೂ ಆಗಿದ್ದ ಕೇಶಿರಾಜನ ಹೃದಯದ ಸ್ಥಾಯಿ ಧರ್ಮಪ್ರಜ್ಞೆ; ಭಕ್ತಿ. ಹರಿ ಭರಂಗೆಯ್ದು ಆರ್ತನೇ?

ತತ್ತ್ವಾಲೋಕದಿಂದ ಆಕಾಂಕ್ಷಿಸುವ ಮುಕ್ತಿ ಸಿಗುವದರಿಂದ ವ್ಯಾಕರಣವು ಉಪಾದೇಯವೆಂದು ಅವನ ಕಲ್ಪನೆ. ಅವರ್ಣವಾದಕ್ಕೆಡೆಯಾಗದೆ ವ್ಯಾಕೃತಿನಾಮಿಗಳು ಹನ್ನೆರಡು ದಿವಾಕರರ ಹಾಗೆ ಶೋಭಾಯಮಾನವಾಗಿವೆ. ನಾಲ್ಕು ಸಂಧ್ಯಕ್ಷರಗಳು "ಪದ್ಮೋಧರನ ಚಕ್ರ ಅಸಿ ಶಂಖ ಶಾರ್ಙ"ದ ಹಾಗೆ ಶೋಭಿಸುತ್ತವೆ. ಗುರು ಮುನೀಶ್ವರರ ಬಗೆಗೆ ಬಹುವಚನವನ್ನು ಉಪಯೋಗಿಸುವಾಗ ಅವನು ಕೊಡುವ ದೃಷ್ಟಾಂತವಿದು—

ಶ್ರೀಮತ್ ಸಮಂತಭದ್ರ
ಸ್ವಾಮಿಗಳ ಜಗತ್ಪ್ರಸಿದ್ಧ ಕವಿಪರಮೇಷ್ಠಿ
ಸ್ವಾಮಿಗಳ ಪೂಜ್ಯಪಾದ
ಸ್ವಾಮಿಗಳ ಪದಂಗಳ್ ಈಗೆ ಶಾಶ್ವತಪದಮಂ

ನಿಜ; ನಾವು ಈ ವರೆಗೆ ನೋಡಿದ ಕಾವ್ಯಭಾಗಗಳನ್ನೆಲ್ಲ ಕೇಶಿರಾಜನೇ ಸ್ವಂತವಾಗಿ ಬರೆದಿಲ್ಲ. ಆ ಈ ಕವಿಗಳ ಗ್ರಂಥಗಳಿಂದ ಉದಾಹರಣೆಯಾಗಿ ತೆಗೆದುಕೊಂಡಿದ್ದಾನೆ. ಆದರೆ, ನಾವು ಈ ಮೊದಲೇ ಹೇಳಿದಂತೆ ಕಾವ್ಯರಚನೆಗೆ ಬೇಕಾದ ಕವಿಹೃದಯವೇ ಕಾವ್ಯರಸಾಸ್ವಾದನಕ್ಕೂ ಬೇಕು. ಬಹುವಿಧವಾದ ತುಂಬು ವ್ಯಕ್ತಿತ್ವವುಳ್ಳ ಕೇಶಿರಾಜನೇ ಶುಷ್ಕವಾದ ವ್ಯಾಕರಣ ಶಾಸ್ತ್ರದಲ್ಲಿಯೂ ಕೂಡ ತನ್ನ ದೃಷ್ಟಾಂತಗಳ ಮೂಲಕ ಕಾವ್ಯ, ಕಟಕಿ, ಶೃಂಗಾರ, ರಸಿಕತೆ, ಲೋಕಾನುಭವ, ಧರ್ಮಶ್ರದ್ಧೆಯನ್ನು ಶಾಸ್ತ್ರಾಭ್ಯಾಸಿಗಳಿಗೆ ನೀಡಿದ್ದಾನೆ. ಅವನ ಪಾಂಡಿತ್ಯ ಶಾಸ್ತ್ರೀಯ ವಿವೇಚನೆ ತುಲನಾತ್ಮಕ ದೃಷ್ಟಿಗಳಷ್ಟೇ ಅವನ ದೃಷ್ಟಾಂತಗಳ ಈ ಸೊಗಸೂ ಅವನ ಗ್ರಂಥದ ಜನಾದರಕ್ಕೆ ಕಾರಣವಾಗಿದೆ.

" ಕವಿಗೆ ಕೇಡಿಲ್ಲೆಂತುಂ "

# ನರಕದಿಂದ ಸ್ವರ್ಗದೆಡೆಗೆ……

ಕತೆಗಾರರು : ಶ್ರೀ ರಂಗನಾಥ ದಿವಾಕರ



ಅಂದು ಶೇಖರ-ವಿಮಲೆಯರ ಮದುವೆ. ಶೇಖರನಲ್ಲಿದ್ದ ಉತ್ಸಾಹ ವಿಮಲೆಗಿರಲಿಲ್ಲ. ಶೇಖರನಿಗೆ ಅದೊಂದು ಒಡೆಯಲಾರದ ಒಗಟೇ ಆಗಿತ್ತು. ನನ್ನನ್ನು ಮದುವೆಯಾಗುವೆಯಾ ಎಂದು ಶೇಖರ ಕೇಳಿದಾಗ ಬಹು ಹೊತ್ತಿನ ವಿಚಾರದ ನಂತರ ಒಪ್ಪಿದ ವಿಮಲೆ ಮದುವೆಯ ದಿನದ ವರೆಗೂ ಸಂತೋಷವಾಗಿಯೇ ಇದ್ದಳು. ಕೆಲವೇ ದಿನಗಳ ಅವರ ಪರಿಚಯ ಪ್ರೇಮದಲ್ಲಿ ಪರ್ಯವಸಾನಹೊಂದಿತ್ತು.

ಪಂಜಾಬದಿಂದ ನಿರಾಶ್ರಿತೆಯಾಗಿ ಬಂದ ವಿಮಲೆ ತನ್ನ ಸೋದರತ್ತೆಯೊಂದಿಗೆ ವಾಸಿಸುತಿದ್ದಳು. ಶೇಖರ ಮೆಡಿಕಲ್ ವಿದ್ಯಾರ್ಥಿ, ಅದೇ ಓಣಿಯಲ್ಲಿ ಇರುತಿದ್ದ. ಶ್ರೀಮಂತ ಮನೆತನದಲ್ಲಿ ಜನಿಸಿದ ಶೇಖರನಲ್ಲಿ ಶ್ರೀಮಂತಿಕೆಯ ಶೀವಿ ಇರಲಿಲ್ಲ. ದಯೆ-ಕಾರುಣ್ಯಗಳ ಮೂರ್ತಿಯೆಂಬಂತೆ ಅವನು ಎಲ್ಲರಿಗೂ ಕಂಡುಬರುತಿದ್ದ. ತನ್ನ ಸುಸ್ವಭಾವದಿಂದ ಎಲ್ಲರಿಗೂ ಬೇಕಾದವನಾಗಿದ್ದ. ಅವನು ಇನ್ನೂ ತನ್ನ ಶಿಕ್ಷಣದ ಕೊನೆಯ ಹಂತದಲ್ಲಿದ್ದರೂ ಕನ್ಯಾಪಿತೃಗಳು ಓಡಾಡುತಿದ್ದರು; ಅವನನ್ನು ತಮ್ಮ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಎಲ್ಲರೂ ಹವಣಿಸುವವರೆ. ಇದು ಅವನ ತಂದೆ-ತಾಯಿಗಳಿಗೆ ಸಂತಸದ ಸುಗ್ಗಿಯನ್ನೇ ತಂದಿತ್ತು.

ಆದರೆ ಶೇಖರ ಎಲ್ಲರನ್ನು ನಿರಾಶೆಗೊಳಿಸಿದ. ತಂದೆ-ತಾಯಿಗಳ ವಿರೋಧವನ್ನು ಲೆಕ್ಕಿಸದೆ ವಿಮಲೆಯನ್ನು ಮದುವೆಯಾಗಲು ನಿರ್ಧರಿಸಿದ. ಅವನ ಈ ನಿರ್ಧಾರದಲ್ಲಿ ತಾನೊಂದು ಸತ್ಯವನ್ನು ಕಂಡುಕೊಂಡಿರುವನೆಂಬಂತೆ ಅವನು ನಡೆಯುತಿದ್ದ. ವಿಮಲೆಯ ಸೋದರತ್ತೆ ಶೇಖರನ ನಿರ್ಧಾರದಲ್ಲಿ ಓರ್ವ ಅಬಲೆಯ ಉದ್ಧಾರದ ಭಾವನೆಯನ್ನು ಕಂಡುಕೊಂಡಿದ್ದರೂ ಶೇಖರನೆಂದೂ ಹಾಗೆ ಭಾವಿಸಿರಲಿಲ್ಲ. ಅಂತಹ ಹುಚ್ಚು ಕಲ್ಪನೆ ಅವನ ತಲೆಯಲ್ಲಿಯೂ ಸುಳಿದಿರಲಿಲ್ಲ. ಅವನ ಮಟ್ಟಿಗೆ ವಿಮಲೆಯಲ್ಲಿ ತನ್ನ ಜೀವನ-ಸಂಗಾತಿಯಾಗುವ ಎಲ್ಲ ಗುಣಗಳೂ ಇದ್ದವು. ಅವಳನ್ನು ಮನಸಾರೆ ಮೆಚ್ಚಿಯೇ ತನ್ನ ಸಂಪ್ರದಾಯಶೀಲವಾದ ತಂದೆ-ತಾಯಿಗಳನ್ನು ಈ ಮದುವೆಗೆ ಒಪ್ಪಿಸಿದ್ದ. ಶ್ರೀಮಂತಪುತ್ರನ ಮದುವೆಯೆಂದಮೇಲೆ ಅದರ ಸಡಗರವನ್ನು ವರ್ಣಿಸಬೇಕೆ?

ಶೇಖರನಿಗೆ ಈ ಸಡಗರದ ಕಡೆಗೆ ಲಕ್ಷ್ಯವೇ ಇರಲಿಲ್ಲ. ವಿಮಲೆ ಸಪ್ಪಗೆ ಏಕಿದ್ದಾಳೆ ಎಂದೇ ಅವನು ವಿಚಾರಿಸುತಿದ್ದ. ತನ್ನ ತಂದೆ-ತಾಯಿಗಳಲ್ಲಿ ಯಾರಾದರೂ ಏನಾದರೂ ಅಂದಿರಬಹುದೇ? ಛೇ ಇರಲಾರದು. ಹಾಗಾದರೆ ಏಕೆ? ಏಕೆ, ಎಂದೇ ಅವನು ಆ ರಾತ್ರಿ ತಮ್ಮ ಪ್ರಥಮಮಿಲನದ ಏಕಾಂತ ದೊರೆಯುವ ವರೆಗೆ ಕಾಯಬೇಕಾಯಿತು.

ವಿಮಲೆ ಶಯ್ಯಾಗಾರಕ್ಕೆ ಬಂದಾಗ ಮನೆಯಲ್ಲಿಯ ಸದ್ದು ಅಡಗಿ ಶಾಂತತೆ ನೆಲಿಸಿತ್ತು. ಅತ್ಯಂತ ತವಕದಿಂದ ಅವಳ ಆಗಮನವನ್ನು ಪ್ರತೀಕ್ಷಿಸುತ್ತಿದ್ದ ಶೇಖರ. ವಿಮಲೆ ಬಂದೊಡನೆ ಅವಳನ್ನು ಅಪ್ಪಿ ಮುದ್ದಾಡಬೇಕು. ತನ್ನ ಪ್ರೇಮದ ಆಳವನ್ನು ಮತ್ತೊಮ್ಮೆ ಹೇಳಬೇಕು. ಏಕಿಷ್ಟು ದುಃಖಾವೇಗ, ಏಕೆ ಈ ನಿರುತ್ಸಾಹ ಎಂದು ಕಾರಣ ಕೇಳಬೇಕು. ಅವಳ ಮನದ ಭೀತಿಯನ್ನು ಹೋಗಲಾಡಿಸಬೇಕು, ನೀನೆನ್ನ ಹೃದಯದ ರಾಣಿ ಎಂದವಳಿಗೆ ಅಭಯ ಕೊಡಬೇಕು. ಹೀಗೇನೇನೊ ಕನಸು ಕಂಡಿದ್ದ.

ವಿಮಲೆ ಬಂದಳು. ಹೆಜ್ಜೆ ಭಾರವಾಗಿದ್ದವು. ಒಂದೊಂದನ್ನೇ ಕಿತ್ತಿ ಕಿತ್ತಿ ಇಡುತ್ತಿರುವಂತೆ ಕಾಣುತ್ತಿತ್ತು. ದೇಹದೊಂದಿಗೆ ಮನಸ್ಸೂ ಭಾರವಾಗಿತ್ತೆನೋ. ಶೇಖರ ಅವಳ ಕೈಹಿಡಿದುಕೊಂಡ. ವಿಮಲಾ ಏನಿದು ನಿನ್ನವಸ್ಥೆ ಎಂದು ಮೆಲ್ಲಗೆ ಕೇಳಿದ. ಉತ್ತರವಿಲ್ಲ. ಮೌನ. ಅವಳ ಮೌನವನ್ನು ಏನೆಂದು ಅರ್ಥಮಾಡಿಕೊಳ್ಳಬೇಕು? ಅವಳ ದುಃಖದಾವೇಗವನ್ನು ಕಡಿಮೆಮಾಡಲು ತನ್ನ ತೋಳಬಂಧನ ಲೇಸೆಂದುಕೊಂಡ ಶೇಖರ, ಬಿಗಿದಪ್ಪಿದ. ಹೌದು, ಶೇಖರ ವಿಮಲೆಯನ್ನು ಅಪ್ಪಿಕೊಂಡ. ಆದರೆ ವಿಮಲೆ ಬೆದರಿದ ಹರಿಣಿಯಂತೆ ಅವನ ಅಪ್ಪುಗೆಯಿಂದ ಬಿಡಿಸಿಕೊಂಡಳು. ಒಂದು

ಹೆಜ್ಜೆ ಹಿಂದೆ ಸರಿದಳು. ಶೇಖರನನ್ನು ಒಮ್ಮೆ ಕಣ್ತುಂಬ ನೋಡಿದಳು. ಆದರೆ ಏನನಿಸಿತೊ ಮುಖ ಕೆಳಗೆ ಹಾಕಿದವಳು ಮೇಲೆತ್ತಲಿಲ್ಲ. ಶೇಖರನಿಗೆ ಏನೆಂದು ತಿಳಿಯದಾಯಿತು. ಅವಳನ್ನು ಮೆಲ್ಲಗೆ ಕೈಹಿಡಿದು ಮಂಚದತ್ತ ಕರೆತಂದ. ಕುಳ್ಳಿಸಿರಿದ. ಅವಳ ಜಡದೇಹ ಅಲ್ಲಿ ಕುಳಿತಿತು. ಆದರೆ ಮನಸ್ಸು ಎಲ್ಲಿತ್ತೊ. ಹಿಂದೆ ಹಿಂದೆ ಐದಾರು ವರುಷಗಳ ಘಟನೆಗಳತ್ತ ಅದು ಓಡುತ್ತಿತ್ತು. ತಂದೆ-ತಾಯಿ ಅಕ್ಕ-ತಮ್ಮಂದಿರ ಸಾವು, ಕಾಳ ಭೀಕರ ಸನ್ನಿವೇಶಗಳನ್ನು ಅದು ನೆನೆಯುತ್ತಿತ್ತು-ಏಕೆ? ಏನೆಂಬುದು ಅವಳಿಗೂ ತಿಳಿಯದು.

ಪಂಜಾಬದಲ್ಲಿಯ, ಲಾಹೋರದ ತಮ್ಮ ಮನೆಯ ಹತ್ಯಾಕಾಂಡದ ರುದ್ರಸನ್ನಿವೇಶ ಅವಳ ಚಿತ್ತಭಿತ್ತಿಯ ಮೇಲೆ ಮತ್ತೆ ಮೂಡತೊಡಗಿತು. ಜಾತಿಯ ದ್ವೇಷಾಗ್ನಿಗೆ ತುತ್ತಾಗಿ ಸಾವಿರಾರು ನಿರಪರಾಧಿಗಳು ಅವಹೇಳನಕ್ಕೀಡಾದ ಚಿತ್ರ ಕಣ್ಮುಂದೆ ಬರತೊಡಗಿತು. ಲೂಟಿ, ಕಳವು, ಬೆಂಕಿಹಚ್ಚುವದು, ಮಹಿಳೆಯರ ಮಾನಭಂಗ, ಬಲಾತ್ಕಾರ, ಮಕ್ಕಳ ಚಿತ್ರಹಿಂಸೆ, ಗುಡಿಗುಂಡಾರಗಳ ನಾಶದ ಚಿತ್ರ ಮೂಡತೊಡಗಿದಂತೆ ಹಿಂಸೆಗೀಡಾದ ಜನರ ಆಕ್ರೋಶದ ಧ್ವನಿ ಕೇಳತೊಡಗಿತು. ಇದೆಲ್ಲವನ್ನು ನೋಡಿಯೂ ಕೇಳಿಯೂ ಹೇಗೆ ಜೀವಿಸಿದೆ ನಾನು! ಅದಕ್ಕೂ ಹೆಚ್ಚಿನ ದುರಂತವನ್ನು ಎದುರಿಸುವದಕ್ಕಾಗಿ, ಅವಮಾನವನ್ನು ಸಹಿಸುವದಕ್ಕಾಗಿ.

ಅದೋ ಅದೇ ಲಾಹೋರದಲ್ಲಿಯ ತಮ್ಮ ಮನೆ. ಮನೆಯಲ್ಲಿ ಸಂತಸದ ಕಳೆಯಿಲ್ಲ. ಊರಲ್ಲಿ ಸ್ಮಶಾನಶಾಂತಿಯಿರುವಾಗ ಮನೆಯಲ್ಲಿ ಹಿಗ್ಗೆಲ್ಲಿ? ಮನಕ್ಕೆಲ್ಲಿಯ ಶಾಂತಿ? ಒಮ್ಮೆ ಎಡಕ್ಕೆ ಹೊಡೆಬಡಿ ಆಕ್ರೋಶ, ಅಯ್ಯೋ ಎಂಬ ಕೂಗು ಕೇಳಿದರೆ, ಇನ್ನೊಮ್ಮೆ ಬಲಕ್ಕೆ. ಅಪ್ಪಾ ನನ್ನನ್ನು ಕೊಲ್ಲಿರಿ, ಎಂದಿಗೆ ಈ ಅವಮಾನಬೇಡ. ನಿಮಗೆ ತಂಗೆಂದಿರಿಲ್ಲವೇ, ಹೆಣ್ಣು ಮಕ್ಕಳಿಲ್ಲವೇ ಎಂಬ ದೈನ್ಯದ ನುಡಿಗಳು. ಮುಂದಿನ ಕ್ಷಣದಲ್ಲಿ ಪೈಶಾಚಿಕ ನಗು. ಅಬಲೆಯರ ನರಳಾಟ. ಸುತ್ತಲಿನ ಗದ್ದಲ ಸಮೀಪಕ್ಕೆ ಬರತೊಡಗಿದೆಯಲ್ಲ. ಎಲ್ಲರೊಂದಿಗೂ ಪ್ರೀತಿಯಿಂದಿರುತ್ತಿದ್ದ ತಮ್ಮ ಮನೆಯ ಸಮೀಪಕ್ಕೆ ಗೊಂದಲ. ಜನಸಮ್ಮರ್ದ ಸಾಗಿಬರುತ್ತಿತ್ತು. ತಂದೆ ಬಾಗಿಲು ಹಾಕಿದರು. ಪ್ರವಾಹದ ವಿರುದ್ಧ ಈಸಲು ಹವಣಿಸಿದರು. ಅವರಿನ್ನೂ ಎರಡು ಮೂರು ಹೆಜ್ಜೆ ಇಟ್ಟಿರಬೇಕು– ಬಾಗಿಲು ಧಡಾರನೆ ಮುರಿಯಿತು. ಹತ್ತೆಂಟು ಜನ ಒಳಗೆ ನುಗ್ಗಿದರು. ಏನು ಅಕರಾಳ ಮೂರ್ತಿಗಳವು! ಮುಖದಲ್ಲೆಲ್ಲ ಪೈಶಾಚಿಕ ಕಳೆ. ಒಬ್ಬನ ಚೂರಿಗೆ ತಂದೆ ಆಹುತಿಯಾದ. ರಕ್ತ ಚಿಮ್ಮಿತು. ಆದರೂ ತನ್ನ ಕಣ್ಣೇಕೆ ಮುಚ್ಚಲಿಲ್ಲ! ಹೌದು, ಎಲ್ಲರೂ ರಕ್ತದ ಮಡುವಿನಲ್ಲಿ ಹೊರಳಾಡುವದನ್ನು ನೋಡಬೇಕಾಗಿತ್ತು. ಅಕ್ಕಾ ಎಂದು ತಾನು ಅಕ್ಕನನ್ನು ತಬ್ಬಿಕೊಂಡಳು. ತಾಯಿ, ಪತಿ-ಪುತ್ರರ ಸಾವನ್ನು ನೋಡಿ ಗತಪ್ರಾಣಳಾಗಿದ್ದಳು. ಆದರೆ ಏನು, ಅವನು ಏನುಮಾಡುತ್ತಿದ್ದಾನೆ. ತಾಯಿಯ ಹೆಣದ ಮೇಲೆ ಕಾಲಿರಿಸಿದ್ದಾನೆ. ಅವಳ ನರಳಾಟ ತೀರಿತು. ತಾನು, ತನಗೇನಾಗಿದೆ? ಏನೂ ಕಾಣಿಸುತ್ತಿರಲಿಲ್ಲ. ಕೇಳಿಸುತ್ತಿಲ್ಲ. ಭಯದಿಂದ ಹೌಹಾರಿ ಎಚ್ಚರತಪ್ಪಿರಬೇಕು. ಎಚ್ಚರ ಕೊನೆಯವರೆಗೂ ತಪ್ಪಬಾರದಾಗಿತ್ತೇ?

ಮುಂದೆ ತನಗೆ ಎಚ್ಚರವೂ ಆಯಿತು. ಆಗಿನ ಅವಸ್ಥೆಯನ್ನು ನೆನೆದುಕೊಂಡು ಅಳು ಬಂತು. ಆದರೆ ಅಕ್ಕನೆಲ್ಲಿ, ತನ್ನ ಪ್ರೀತಿಯ ಅಕ್ಕನೆಲ್ಲಿ? ನೆರಳೊಂದು ಕಂಡಿತು. ಹೌದು ಅಕ್ಕನೇ ಇರಬೇಕು. ಅವಳಿಗೂ ಇದೇ ಅವಸ್ಥೆಯೇ? ಆದರೂ ಹೇಗೆ ಎದ್ದುಬಂದಳು? ನೆರಳು ಹತ್ತಿರ ಬಂತು. ಅಲ್ಲ, ಅಕ್ಕನಿಗಾಗಿ ತಾನು ಚೀರಬೇಕೆಂದಳು. ಆದರೆ ಚೀರಲಿಲ್ಲ. ಏಕೆ, ಆ ನೆರಳು ಬಾಯಿಬಿಗಿಹಿಡಿಯಿತು. ತನ್ನ ಚೀರುವಿಕೆಯಿಂದ ಆ ವ್ಯಕ್ತಿ ತಾನೆಸಗುವ ಕೃತ್ಯಕ್ಕೆ ವ್ಯತ್ಯಯ ಬರುವದೆಂದೂ ಭಾವಿಸಿರಬೇಕು. ಆದರೆ ತನ್ನೆದುರಿಗೆ ತಂದೆಯ ಕರುಣಾಜನಕ ಮೂರ್ತಿ ಸುಳಿದು ಹೋದಂತಾಯಿತು, ದೇವಾ ನೀನೇ ರಕ್ಷಕ ಎಂದು ಹಂಬಲಿಸಿದಂತಾಯಿತು. ಆದರೆ ದೇವರು ತನ್ನ ರಕ್ಷಣೆಗೆ ಬರಲಿಲ್ಲ. ಆ ನೆರಳು ತನ್ನ ಮೇಲೆ ಬಂದಿತು. ತಾನು, ತಾನು ಏನು? ಪಾರಾಗಲೆತ್ನಿಸಲಿಲ್ಲವೆ? ಆ ನೆರಳಿನ ಕಪಿಮುಷ್ಟಿಯಿಂದ ಬಿಡಿಸಿಕೊಳ್ಳಲು ಹೋರಾಡಲಿಲ್ಲವೆ? ಮೋರೆಯ ಮೇಲೆ ಥೂ ಥೂ ಎಂದು ಉಗುಳಲಿಲ್ಲವೆ? ಕಿಡಿಗಣ್ಣಿಂದ ನೋಡಲಿಲ್ಲವೆ? ಆದರೆ ಏನಾಯಿತು. ತಾನು ನಿರ್ಬಲಳಾದಳು. ಆ ನೆರಳಿನ ಹಿಡಿತ ಬಿಗಿಯಾಯಿತು. ಮುಂದೇನು; ಓ ಎಚ್ಚರವೇ ಇಲ್ಲ.

ಮತ್ತೆ ಎಚ್ಚರ ಬರಲಿಲ್ಲವೇ? ಬಂತು. ಆ ಪೈಶಾಚಿಕ ಬಲಾತ್ಕಾರದ ನಂತರವೂ ತಾನು ಸತ್ತಿರಲಿಲ್ಲ. ಎಚ್ಚರ ಬಂದಾಗ ತಾನು ಮಂಚದ ಮೇಲಿದ್ದಳು. ಬದಿಯಲ್ಲಿ ಬಿಳಿ ಬಟ್ಟೆ ಧರಿಸಿದ ನಾರಿಯೊಬ್ಬಳು ಮ್ಲಾನವದನದಿಂದ ಕುಳಿತಿದ್ದಳು. ಎಚ್ಚರ ಬಂದಾಗ ತಾನು ಗಳಗಳನೆ ತುಸು ಅತ್ತುಬಿಟ್ಟಳು. ಒಮ್ಮೆಲೇ ಸಾವಿರ ಚೇಳು ಕಡಿದ ಅನುಭವವಾಗಿದ್ದಿತು. ಕ್ಷಣಹೊತ್ತಿನನಂತರ, "ಮಗು ಸೈರಿಸಿಕೊ, ನಾರಿಯ ಜೀವನವೇ ಇಂತಹದು. ಅವಳ ಅಸಹಾಯಕತೆಯ ದುರುಪಯೋಗ ಮಾಡಿಕೊಳ್ಳಲು ಪುರುಷವರ್ಗ ಸದಾ ಹಾತೊರೆಯುತ್ತಿದೆ. ಆದರೂ ಬದುಕಬೇಕು. ಬದುಕಿ ಬಾಳಬೇಕು. ಧೈರ್ಯ ತಂದುಕೊ", ತನ್ನ ಬದಿಯಲ್ಲಿ ಕುಳಿತ ನಾರಿ ಹೇಳಿದಳು. ಓ ಅವಳಾರು. ನರ್ಸ ಇರಬೇಕು. ಹಾಗಾದರೆ ಅದು ಆಸ್ಪತ್ರೆ, ಇನ್ನಿಲ್ಲಿ ಭಯವಿಲ್ಲ. ಭಯ! ಇನ್ನೇಕೆ ಭಯ! ಆಗಬಾರದ್ದು ಆದಮೇಲೆ, ನಡೆಯಬಾರದ್ದು ನಡೆದಮೇಲೆ ಭಯ ಏಕೆ? ಏತಕ್ಕಾಗಿ ಭಯ? ಎಂದೇನೇನೊ ವಿಚಾರಿಸಿದಳು. ಮರುಕ್ಷಣ ಮನೆಯ ದೃಶ್ಯ ಮನದಮುಂದೆ ಬಂದಿತು. ಅಕ್ಕನ ನೆನಪಾಯಿತು. ಅಕ್ಕನೆಲ್ಲಿ! ಎಲ್ಲಿ ಅಕ್ಕ, ಇಲ್ಲಿಗೇನಾದರೂ ಬಂದಿರಬಹುದೆ? ತನ್ನಕ್ಕ ಬಂದಿದ್ದಳೆ, ನರ್ಸಳಿಗೆ ತಾನು ಕೇಳಿದಳು. ಅವಳು ಏನು ಹೇಳಿದಳು? ತನ್ನನ್ನು ಹೋಲುವಂತಹ ಒಬ್ಬ ಹೆಣ್ಣುಮಗಳು ನಿನ್ನೆ ಆಸ್ಪತ್ರೆಗೆ ತರಲ್ಪಟ್ಟಳು. ರಕ್ತಸ್ರಾವ ಬಹಳವಾಗಿ ಅತಿ ದುರ್ಬಲ ಪರಿಸ್ಥಿತಿಯಲ್ಲಿ ಅವಳಲ್ಲಿಗೆ ಬಂದಿದ್ದಳು. ಉಳಿಯುವ ಆಸೆಯೇನೂ ಇಲ್ಲವೆಂದು ಡಾಕ್ಟರರು ಅವಳನ್ನು ಪರೀಕ್ಷಿಸಿದ ಕೂಡಲೇ ಹೇಳಿದರು- ಅಂತವೇ ಆಯಿತು. ಅವಳು ಯಾರಾಗಿರಬಹುದು? ತನ್ನಕ್ಕನೇ ಆಗಿರಬೇಕು; ಹೌದು ತನ್ನಕ್ಕ ಸತ್ತುಹೋಗಿದ್ದಾಳೆ. ಈ ನರಕದಿಂದ ಪಾರಾಗಿ ಹೋದಳು-ದಾರುಣಅನುಭವದ ವ್ಯಥೆ ಅವಳಿಗೆ ಇಲ್ಲ ತಾನೆ? ತಾನು ಇಷ್ಟೆಲ್ಲ ವ್ಯಥೆ, ಹಿಂಸೆ ಅನುಭವಿಸಿಯೂ ಜೀವಿಸಿದ್ದಾಳೆ. ತಾನೇಕೆ ಜೀವಿಸಬೇಕು? ಇನ್ನು ಏನು ಉಳಿದಿದೆ ಜೀವನದಲ್ಲಿ ತನಗೆ? ತಾನು ಅಕ್ಕನಂತೆ ಸಾಯಲಿಲ್ಲವೇಕೆ? ರಕ್ಷಣೆಗೊದಗದ ದೇವ ಸಾವನ್ನಾದರೂ ಏಕೆ ಕರುಣಿಸಲಿಲ್ಲ. ಹಾಯ್ ತಾನೂ ಸಾಯಬೇಕು.

ಮರುದಿನ ಬೆಳಗಾದಾಗ ತಾನುಅಲ್ಲಿರಲಿಲ್ಲ; ಆದರೆ ಸತ್ತಿರಲಿಲ್ಲ. ಮೊದಲಿನ ಕೋಣೆಯಲ್ಲೂ ಇರಲಿಲ್ಲ. ಸಾಯಲು ಯತ್ನಿಸಿರಲಿಲ್ಲವೆ? ಹೌದು ಆಸ್ಪತ್ರೆಯ ಹಿಂದಿನ ಬಾವಿಯಲ್ಲಿ ಹಾರಿಕೊಂಡಿದ್ದಳಲ್ಲ. ಓ! ಆದರೆ ಯಾರೊ ತನ್ನನ್ನು ಬೆಂಬತ್ತಿ ಬಂದಿದ್ದಾರೆ-ಬಾವಿಯಿಂದ ಮೇಲೆ ತೆಗೆದಿದ್ದಾರೆ. ಹಾಗಾದರೆ ತಾನು ಸಾಯುವಂತಿಲ್ಲ. ಈ ನರಕದಿಂದ ಪಾರಾಗುವಂತಿಲ್ಲ. ಕ್ಷಣಹೊತ್ತು ಆಸ್ಪತ್ರೆಯವರೂ ನೀಚರೆನಿಸಿದರು. ತನ್ನನ್ನು ಬದುಕಿಸಲು ಅವರಿಗೇನು ಹಕ್ಕು, ಯಾಕಷ್ಟು ಶ್ರಮಪಡುತ್ತಿದ್ದಾರೆ. ಸುಲಭವಾಗಿ ಸಾಯಲು ತನಗೇಕೆ ಅವಕಾಶ ಕೊಡುತ್ತಿಲ್ಲ. ಹೌದು ಬಾಗಿಲಬಳಿಯಲ್ಲಿ ಅವರಾರು, ಹಾಗೆ ತಿರುಗಾಡುತ್ತಿದ್ದಾರೆ. ಓಹೋ! ಈಸಲ ಕಾವಲು ಬೇರೆ ಇಟ್ಟಿದ್ದಾರೆ. ತನಗೆ ಏನಾಗುತ್ತಿದೆ. ಏನೂ ಕಾಣಿಸುತ್ತಿಲ್ಲ. ಎಲ್ಲವೂ ಮಸುಕಾಗತೊಡಗಿದೆ. ಹಾಗಾದರೆ ಎಚ್ಚರ ತಪ್ಪುವದೆ?

ಯಾರದೋ ಪುರುಷರ ಧ್ವನಿ. ಹಾಗಾದರೆ ತಾನು ಮತ್ತೆಲ್ಲಿಗಾದರೂ ಬಂದಿರುವೆನೆ? ಇಲ್ಲ ಇನ್ನೂ ಆಸ್ಪತ್ರೆ. ಹಾಗಾದರೆ ಯಾರವರು? ತನ್ನ ಕಣ್ಣು ತೆರೆದುದನ್ನು ಕಂಡು ಅವರು ಒಳಗೆ ಬಂದರು. ಹೌದು ಡಾಕ್ಟರರು. ತನ್ನ ಮುಂಗುರುಳು ನೇವರಿಸುತ್ತ, ಮಗಳೇ ಹೆದರಬೇಡ ಎಂದರು. ಪಿತೃವಾತ್ಸಲ್ಯದ ಧ್ವನಿ. ಈ ನರಕದಲ್ಲಿ ಸಹ ಹೀಗಿರಬಹುದೆ? ಹೌದು, ಡಾಕ್ಟರರು ತನ್ನ ತಂದೆಯ ಗುರುತಿನವರು. ತನ್ನನ್ನು ಮಗಳಂತೆಯೇ ನೋಡಿಕೊಂಡರು. ಕರುಣೆಯ ಮಳೆಗರೆದರು. ತನ್ನ ಮನದ ದಿಕ್ಕನ್ನು ಬದಲಿಸಲೆತ್ನಿಸಿದರು. ಹೊಸ ಜೀವನದ ಸ್ವಪ್ನ ತಾನು ಕಾಣುವಂತೆ ಮಾಡಿದರು. ಬದುಕಬೇಕಾಗಿದೆಯೆಂದುಕೊಂಡಳು. ಆದರೆ? ಆದರೆ ನಡೆದುಹೋದ ಸಂಗತಿಯನ್ನು ತಾನೆಂದೂ ಮರೆಯುವಂತಿರಲಿಲ್ಲ.

ಮುಂದೆ. ಮುಂದೇನು. ಲಾಹೋರದಿಂದ ಹೊರಟ ನಿರಾಶ್ರಿತರ ತಂಡದಲ್ಲಿ ತಾನೂ ಸೇರಿದ್ದಳು. ಪೋಲೀಸರ ರಕ್ಷಣೆ ಆದೀಗ ಮೊದಲು ಬಾರಿ ತಮಗೆಲ್ಲ ದೊರೆತಿತ್ತು- ಲಾಹೋರ ಹಿಂದುಳಿಯಿತು. ಮನೆ ಮಾರು ಆಸ್ತಿ ಪಾಸ್ತಿ ಹಿಂದೆ ಉಳಿದವು. ಅಕ್ಕ, ತಮ್ಮ, ತಂದೆ, ತಾಯಿ ಪ್ರಾಣ ಬಿಟ್ಟ ಊರು ಹಿಂದುಳಿಯಿತು. ತಾನು ಹೊಸ ಬದುಕನ್ನು ಬಾಳಲು ಮುಂದೆ ಮುಂದೆ ಹೊರಟದ್ದಾಳೆ. ಆ ಹೊಸ ಬದುಕು ಎಂತಹದು! ಆದರೆ ಕುರುಕ್ಷೇತ್ರ ನಿರಾಶ್ರಿತಶಿಬಿರಕ್ಕೆ ತಾನು ಬಂದಾಗ

ಅಂತಃಕರಣದ ಬಳ್ಳಿಯೊಂದು ತಾನೇ ತಾನಾಗಿ ಸಿಕ್ಕಿತು. ತನ್ನಂತೆಯೇ ಅನಾಥಳಾಗಿ ಗಂಡ, ಮಕ್ಕಳನ್ನು ಕಳೆದುಕೊಂಡ ಸೋದರತ್ತೆ ಅಲ್ಲಿಗೆ ಬಂದುಸೇರಿದ್ದಳು. ತಾವಿಬ್ಬರೂ ಸೇರಿದಾಗ ಅಳಲಿಲ್ಲ, ಏಕೆ? ತಮ್ಮ ದುಃಖದ ಆವೇಗ ಕಣ್ಣೀರಿನ ಸೆಲೆಯನ್ನೇ ಬತ್ತಿಸಿಬಿಟ್ಟಿತ್ತೇನೋ. ತನ್ನ ಹೊಸ ಬದುಕಿಗೆ ಅತ್ತೆ ನೆರವಾಗಿ ನಿಂತಳು. ಹೊಲಿಗೆಯ ಯಂತ್ರ ತಮ್ಮ ಉದರನಿರ್ವಾಹಕ್ಕೆ ಅವಕಾಶವಿತ್ತಿತು. ಅತ್ತೆಯ ಆಗ್ರಹಕ್ಕೊಳಗಾಗಿ ಮನವಿಲ್ಲದಿದ್ದರೂ ತಾನು ಪುನಃ ಕಾಲೇಜು ಸೇರಿದಳು. ಯಾಂತ್ರಿಕವಾಗಿ ಜೀವನಸಾಗತೊಡಗಿತು—ಮನೆ ಕಾಲೇಜು, ಬಿಡುವಿನ ಸಮಯದಲ್ಲಿ ಅತ್ತೆಗೆ ನೆರವಾಗುವದು.

ಇಂತಹ ಒಂದು ಸಂದರ್ಭದಲ್ಲಿಯೇ ತನಗೆ ಶೇಖರನ ಪರಿಚಯವಾದುದು. ತಾನು ನಿರಾಶ್ರಿತೆ ಎಂದು ಹೀನವಾಗಿ ಎಲ್ಲರೂ ಕಾಣುವಾಗ ಶೇಖರ ತನ್ನನ್ನು ಗೌರವಯುತವಾಗಿ ಕಂಡ. ಅವನ ಮಾತು, ಅವನ ಸಾಮಿಪ್ಯ, ಒಡನಾಟ ತನಗೆ ಬೇಕೆನಿಸಿತು. ತಮ್ಮ ಪರಿಚಯ ಹೀಗೆ ಪ್ರೇಮದಲ್ಲಿ ಪರ್ಯವಸಾನ ಹೊಂದಿದಾಗ ಮತ್ತದಕ್ಕೆ ವಿಘ್ನಗಳು. ತನ್ನ ಅತ್ತೆಯೇ ಹೇಳಲಿಲ್ಲವೇ: "ವಿಮಲಾ ನಾವೀಗ ಬಡವರು, ನಿರಾಶ್ರಿತರು. ಅಂತಹ ಶ್ರೀಮಂತರೊಡನೆ ಸಂಬಂಧ ಸಾಧ್ಯವಿಲ್ಲ. ಜನಾಪವಾದಕ್ಕೆ ಅವಕಾಶ ಕೊಡಬೇಡ.'' ಶೇಖರನ ತಂದೆ ತಾಯಿಗಳು ಇದೇ ಮಾತನ್ನು ಹೇಳಿದ್ದರೆಂದು ಅವನು ಹೇಳಿರಲಿಲ್ಲವೆ? ಆದರೆ ಶೇಖರ ಯಾರನ್ನೂ ಲೆಕ್ಕಿಸಲಿಲ್ಲ. ತನ್ನನ್ನು ಮದುವೆ ಆಗುವದಾಗಿ ದೃಢನಿರ್ಧಾರದಿಂದ ಹೇಳಿದ. ತಾನೂ ಅವನ ನಿರ್ಧಾರದಲ್ಲಿ ಭಾಗಿಯಾಗಿದ್ದಳು. ಹೊಸ ಬದುಕೊಂದು ದೊರೆತಿತೆಂದು ಹಿರಿ ಹಿರಿ ಹಿಗ್ಗಿದಳು. ಆದರೆ ಮದುವೆಯ ದಿನ ಸಮೀಪಿಸಿದಂತೆ ಕಳೆದುಹೋದ ಘಟನೆ ಅವಳ ಕಣ್ಮುಂದೆ ಬಂದು ನಿಲ್ಲತೊಡಗಿತು, ಅವಳನ್ನು ಅಣಕಿಸತೊಡಗಿತು. ಅಂತೇ ಅವಳು ನಿರ್ವಿಣ್ಣಳಾದಳು. ನಾನೇಕೆ ಒಪ್ಪಿದೆ, ಎಂದವಳು ವಿಚಾರಿಸತೊಡಗಿದಳು. ಆದರೆ ಈಗ ಅವಳ ಕೈಮೀರಿ ಹೋಗಿತ್ತು. ಮದುವೆಯಾಗುವದಾಗಿ ಮಾತುಕೊಟ್ಟು ಹಿಂದೆಗೆಯುವದೇ? ಎಲ್ಲರನ್ನು ಎದುರಿಸಿ ಶೇಖರ ಮದುವೆ ಮಾಡಿಕೊಳ್ಳಲು ಮುಂದೆ ಬಂದಾಗ ತಾನು ಹಿಂದೆ ಸರಿದರೆ ಅವನು ತನ್ನ ಬಗ್ಗೆ ತಾಳಿದ ಗೌರವ ಭಾವನೆ ಉಳಿದೀತೆ? ಅವನ ಜೀವನ ಹೇಗಾದೀತು? ಆದರೆ? ತಾನು ಅವನೊಡನೆ ಅವನ ಜೀವನಸಂಗಾತಿಯಾಗಿ ಹೇಗೆ ಬಾಳಿ ಬದುಕಬೇಕು? ತಾನೇಕೆ ಈ ದುರ್ಘಟನೆಯನ್ನು ಅವನಿಗೆ ತಿಳಿಸಲಿಲ್ಲ? ತಾನು ಸ್ವಾರ್ಥಿಯೇ? ಆ ಘಟನೆಯನ್ನು ಹೇಳಿದ್ದರೆ ಶೇಖರ ಮದುವೆಯಾಗಲು ಒಪ್ಪದಿರಬಹುದಿತ್ತೆಂದೆ? ಈಗ ತಾನು ಇನ್ನಷ್ಟು ತೊಡಕಿನ ಸ್ಥಿತಿಗೆ ಸಿಲುಕಲಿಲ್ಲವೆ? ತಾನೀಗ ಶೇಖರನ ಧರ್ಮಪತ್ನಿ. ಅಗ್ನಿಸಾಕ್ಷಿಯಾಗಿ ತಮ್ಮ ಮದುವೆ ನೆರವೇರಿದೆ. ಧರ್ಮ-ಅರ್ಥ-ಕಾಮಗಳಲ್ಲಿ ಏಕ-ಜೀವರಾಗಿ ಏಕರಸವಾಗಿ ಬಾಳುವೆನೆಂದು ಪ್ರತಿಜ್ಞೆ ಮಾಡಿಲ್ಲವೆ? ಶೇಖರನಿಂದ ಈ ಘಟನೆ ಬಚ್ಚಿಡುವದು ಅವನನ್ನು ವಂಚಿಸಿದಂತಲ್ಲವೆ? ಹೌದು, ವಂಚನೆ ತಮ್ಮ ಜೀವನದ ಭದ್ರ ಬುನಾದಿಯಾಗಬೇಕೆ? ಇಲ್ಲ, ಆಗಲಾರದು. ತಾನು ವಂಚಕಿಯಾಗಲಾರಳು. ಅದು ಸಾಧ್ಯವಿಲ್ಲ. ಆದರಿಂದ ತಮ್ಮಿಬ್ಬರ ಬದುಕೂ ಹಸನಾಗಿರುವದು ಸಾಧ್ಯವಿಲ್ಲ. ತಾವು ಸಮರಸರಾಗಿ ಬಾಳಲಾರರು.

ವಿಮಲೆಯ ವಿಚಾರಧಾರೆ ನಿಂತಿತು. ಮನಸ್ಸು ಮುಂದಕ್ಕೆ ಓಡದಾಯಿತು. ಎಲ್ಲವೂ ಮಸಕಾಗಿ ಕಾಣತೊಡಗಿತು. ಶೇಖರ ಅವಳ ಬಳಿಯಲ್ಲಿಯೇ ಕುಳಿತಿದ್ದ. ಮುಂಗುರುಳು ನೇವರಿಸುತ್ತ ಮುಖದ ಮೇಲಿನ ಭಾವನೆಗಳ ವ್ಯತ್ಯಾಸವನ್ನು ಗಮನಿಸುತ್ತಿದ್ದ. ಅವಳ ಮನದಲ್ಲೇನೊ ತುಮುಲವಾದ ಹೋರಾಟ ನಡೆದಿದೆ ಎಂದವನು ಕಂಡುಕೊಂಡ. ಅದನ್ನರಿಯಬೇಕು. ಅವಳಿಗೆ ತಿಳಿಹೇಳಬೇಕು, ಭಯಬೇಡ, ಚಿಂತೆ ಸಲ್ಲದು ಎಂದು ಭರವಸೆ ನೀಡಬೇಕೆಂದುಕೊಂಡ, 'ವಿಮಲಾ' ಎಂದು ಮೆಲ್ಲಗೆ ಕೂಗಿ ಮಕ್ಕಳನ್ನು ರಂಬಿಸುವಂತೆ ಬೆನ್ನಮೇಲೆ ಕೈಯಾಡಿಸತೊಡಗಿದ. ಅವನ ಕೂಗು, ಅವನ ಸ್ಪರ್ಶ ಅವಳ ಅಂತರ್ಮುಖತೆಯನ್ನು ಭಂಗಗೊಳಿಸಿದವು. ಒಮ್ಮೆಲೇ ಕೂಗಿಕೊಂಡಳು, "ಶೇಖರ ನನ್ನನ್ನು ಮುಟ್ಟಬೇಡ, ನಾನು ಪಾಪಿ, ಪರಮ ಪಾಪಿ. ಚಾಂಡಾಲಿನಿ, ಅಯ್ಯೋ ನಾನು ವಂಚಿಕೆಯಾಗಲಾರೆ.''

"ವಿಮಲಾ, ಇದೇನಿದು ನಿನ್ನ ಮಾತು? ನಿನ್ನಂತಹ ಸ್ತ್ರೀ ಪಾಪಿಯೇ, ಚಾಂಡಾಲಿನಿಯೇ? ಹಾಗಾದರೆ ಆ ಶಬ್ದಗಳಿಗೆ ಅರ್ಥವಿಲ್ಲವೆಂದೇ ಹೇಳಬೇಕು'' ಶೇಖರ ಅವಳನ್ನು ಸಂತೈಸತೊಡಗಿದ.

"ಇಲ್ಲ ಶೇಖರ. ನೀನು ನನ್ನನ್ನು ಅಪಾರವಾಗಿ ಪ್ರೀತಿಸುತ್ತಿರುವದರಿಂದ ನಾನು ಹೇಳುವದು ನಿನಗೆ ಅರ್ಥವಾಗದು. ಅರ್ಥವಾದರೂ ನಿನಗದು ಬೇಕಾಗಿಲ್ಲ. ನಿನ್ನ ಪ್ರೀತಿಯ ಹೊನಲಲ್ಲಿ ನನ್ನ ಕೆಟ್ಟತನವೂ ನಿನಗೆ ಕಾಣದಾಗಿದೆ. ನಿನ್ನ ಆ ಪ್ರೀತಿಯೇ ನನ್ನನ್ನು ಮದುವೆಗೆ ಒಪ್ಪುವಂತೆ ಮಾಡಿತು. ಆದರೆ.... ''

"ವಿಮಲಾ, ಆದರೆ ಎಂದೇಕೆ ತಡವರಿಸುವೆ. ನಿನ್ನ ಮನದ ಹೊಯ್ದಾಟ ನನಗೆ ತಿಳಿಯುತ್ತದೆ. ನಾನು ಪ್ರೀತಿಗೆ ಕಟ್ಟುಬಿದ್ದು ನಿನ್ನನ್ನು ಅರ್ಥಮಾಡಿಕೊಂಡಿಲ್ಲವೆಂದು ನೀನು ಭಾವಿಸುವದು ತಪ್ಪು. ಎಲ್ಲ ದೃಷ್ಟಿಯಿಂದಲೂ ನೀನು ನನ್ನ ಜೀವನಸಂಗಾತಿಯಾಗಲು ತಕ್ಕವಳೆಂದೇ ನಿನ್ನ ಒಪ್ಪಿಗೆ ಪಡೆದೆ, ಮದುವೆಯಾದೆ. ನನ್ನ ಪ್ರೀತಿ ವ್ಯಾವಹಾರಿಕ ಪ್ರೀತಿಯಲ್ಲ, ಕಾಮುಕ ಪ್ರೀತಿಯಲ್ಲ.''

"ಅಂತೇ ನಾನಿಷ್ಟು ತೊಂದರೆಯಲ್ಲಿ ಸಿಲುಕಿದ್ದೇನೆ ಶೇಖರ. ನಿನ್ನನ್ನು ನಾನು ಹೃದಯಾಂತರಾಳದಿಂದ ಪ್ರೀತಿಸುತ್ತೇನೆ. ನಿನ್ನ ಗುಣಗಳನ್ನು ಕಂಡು ಮುಗ್ಧಳಾಗಿ ಒಲಿದುಬಂದೆ. ಆದರೆ. ಆದರೆ......'' ವಿಮಲೆ ಅಳತೊಡಗಿದಳು.

ಶೇಖರನಿಗೆ ಮೊದಲು ಗಾಬರಿಯೆನಿಸಿತಾದರೂ ಏನೊ ಹೇಳಿಕೊಳ್ಳಬೇಕಾದ ಸಂಗತಿಯನ್ನು ಹೇಗೆ ಹೇಳುವದೆಂದು ಭ್ರಾಂತಿಗೊಳಗಾಗಿ ವಿಮಲೆ ಈ ರೀತಿ ಸಂಕಟಕ್ಕೊಳಗಾಗಿರುವಳೆಂದು ಅವನು ಅರಿತುಕೊಂಡ. ಅವಳು ಏನು ಹೇಳಬಯಸುತ್ತಿರುವಳೆಂಬುದೂ ಅವನಿಗೆ ತಿಳಿದ ವಿಷಯವೇ ಆಗಿತ್ತೇನೊ ಎಂಬಂತೆ "ವಿಮಲೆ ನಿನ್ನ ಮನದ ಅಳಲು ಅರ್ಥವಾಗುತ್ತದೆ. ನನಗೆ ಆದರೆ ಆಗಿ ಹೋದುದಕ್ಕೆ ವ್ಯಥೆಪಡುವದರಿಂದ ಏನು ಸಾಧಿಸಿದಂತಾಯಿತು? ನನ್ನ ಪ್ರೀತಿ ನಿನ್ನ ವ್ಯಥೆಯನ್ನು ದೂರಮಾಡಲಾರದೆ? ನನ್ನ ಪ್ರೀತಿಯನ್ನು ನಂಬು. ನನ್ನನ್ನು ಅರಿತುಕೊ. ನನ್ನ ಹೃದಯದಲ್ಲಿ ನಿನಗಾಗಿ ಇರುವ ಸ್ಥಾನವನ್ನು ತಿಳಿದುಕೊ'' ಎಂದು ಅವಳನ್ನು ಸಮಾಧಾನಪಡಿಸಲೆತ್ನಿಸಿದ.

"ಶೇಖರ'', ವಿಮಲೆಯ ದನಿಯಲ್ಲಿ ಗಡಸುತನ ತುಂಬಿತ್ತು; ಯಾವುದೋ ಅವ್ಯಕ್ತ ಶಕ್ತಿಯೊಂದು ಅವಳಲ್ಲಿ ಹೊಕ್ಕು ಮಾತನಾಡಿಸುತ್ತಿರುವಂತೆ ಶೇಖರನಿಗೆ ಭಾಸವಾಯಿತು. ಶೇಖರ ಮಾತನಾಡದೆ ಏನೆಂಬಂತೆ ಅವಳೆಡೆಗೆ ಸಾಗಿದನು.

"ಇಂದಿನ ಈ ರಸನಿಮಿಷವನ್ನು ವಿಷನಿಮಿಷ ಮಾಡುತ್ತಿರುವದಕ್ಕೆ ಕ್ಷಮಿಸು. ನಾನೀಗ ಹೇಳುತ್ತಿರುವದು ಪ್ರೀತಿಯ ವಿಷಯವಲ್ಲ. ಸಮಾಜದ ದೃಷ್ಟಿಯಿಂದ ಕಂಡುಬರುವ ಪರಿಸ್ಥಿತಿಯ ಬಗೆಗೆ ಹೇಳುತ್ತಿರುವೆ. ಪುರುಷನ ಪಶುವೃತ್ತಿಯಿಂದ ಅಬಲೆಯರಿಗಾಗುವ ಅವಮಾನ ಅದಂತಿರಲಿ. ಅಬಲೆಯರಿಗೆ ಆ ಮೂಲಕ ಹತ್ತುವ ಸಾಮಾಜಿಕ ಕಲಂಕ ಸಾವಿಗಿಂತ ಮಿಗಿಲು. ಅಬಲೆಗಾಗುವ ಈ ಅನ್ಯಾಯವನ್ನು ತೊಡೆದೊಗೆಯುವ ವೀರ ವೀರೆಯರಿನ್ನೂ ಹುಟ್ಟಿದಂತಿಲ್ಲ! ಈ ಮೊದಲೇ ನಿನಗೆ ಎಲ್ಲವನ್ನೂ ಹೇಳಿಬಿಡಬೇಕಾಗಿತ್ತು. ಆದರೆ ನನ್ನ ಹೊಸ ಬದುಕಿನ ಕನಸು ಅಡ್ಡ ಬರುತ್ತಿತ್ತು. ಅದೇ ಕಾಲಕ್ಕೆ ಆ ಕನಸಿಗಾಗಿ ಇನ್ನೊಂದು ಪ್ರೇಮಮಯಿಯಾದ, ವಾತ್ಸಲ್ಯಪೂರಿತವಾದ, ಕರುಣಾರ್ದ್ರಹೃದಯದ ವ್ಯಕ್ತಿಯನ್ನು ಮೋಸಗೊಳಿಸುವದು, ವಂಚಿಸುವದು ತರವೇ? ಎಂದು ನನ್ನ ಮನಸ್ಸು ನಮ್ಮ ಮದುವೆಯ ನಿರ್ಧಾರವಾದ ದಿನದಿಂದ ಗಾಸಿಗೊಂಡಿದೆ; ಗಾಸಿಗೊಳ್ಳುತ್ತಲಿದೆ. ಇಂದು ಪ್ರಥಮಮಿಲನದ ದಿನ. ಈ ಸುದಿನಕ್ಕಾಗಿ ಎದುರು ನೋಡುತ್ತಿರುವ ತರುಣ ತರುಣಿಯರಿರುವಾಗ ನಾನು ಹೀಗೇಕೆ ವರ್ತಿಸಿದೆನೆಂದು ನಿನಗೆ ಆಶ್ಚರ್ಯವಾಗಿರಬಹುದು, ಕೋಪವೂ ಬಂದಿರಬಹುದು. (ಶೇಖರ ಹಾಗೇನೂ ಇಲ್ಲವೆಂಬಂತೆ ಗೋಣು ಅಲ್ಲಾಡಿಸಿದ) ಆದರೆ ನನ್ನ ಹೃದಯದಲ್ಲಿ ನಡೆದ ತುಮುಲಯುದ್ಧ ಸಹಜವಾಗಿ ನಿಲ್ಲಲಿಲ್ಲ. ನಿನಗಿಂದು ಹಾಲಾಹಲ ವಿಷವನ್ನುಣಿಸುತಿರುವೆ. ನನ್ನ ಜೀವನದ ಈ ಕಥೆ ನಿನ್ನ ಕಿವಿಯಲ್ಲಿ ಕಾದ ಸೀಸಿನ ರಸ ಹೊಯ್ದಂತೆನಿಸುವದು'' ಎಂದು ವಿಮಲೆ ತನ್ನ ಕರ್ಮಕಥೆಯನ್ನು ಶೇಖರನಿಗೆ ಒಂದೂ ಸಂಗತಿಯನ್ನು ಬಿಡದಂತೆ ಹೇಳಿದಳು.

ತನ್ನ ಈ ಕಥೆಯಿಂದ ಶೇಖರನಿಗೆ ತಾನು ಮಾಡಿದ್ದಕ್ಕೆ ಪಶ್ಚಾತ್ತಾಪವಾಗುವದು, ಮೊದಲೇ ಏಕೆ ಹೇಳಲಿಲ್ಲ ಪಾಪಿಷ್ಠೆ ಎಂದು ಕೂಗುವನು ಎಂದು ಭಾವಿಸಿಕೊಂಡಿದ್ದ ವಿಮಲೆ ಶೇಖರನನ್ನು ನೋಡಿದಾಗ ಅವನ ಮುಖದಲ್ಲಿ ಪಶ್ಚಾತ್ತಾಪದ ಚಿಹ್ನದ ಲವಲೇಶವೂ ಕಂಡು

ಬರಲಿಲ್ಲ ; ಅವನು ಆವಳನ್ನು ದೂಷಿಸಿ ಕೂಗಿಕೊಳ್ಳಲೂ ಇಲ್ಲ. ಅವನು ಸುಮ್ಮನೆ ಕುಳಿತುದನ್ನು ಕಂಡು, ಇದೇನು ಶೇಖರ ಮೌನಿಯೇಕಾದ ಎಂದವಳು ವಿಚಾರಿಸುವಷ್ಟರಲ್ಲಿಯೇ ಶೇಖರ ನಗಲಾರಂಭಿಸಿದ. ಆಹಾ ಇದೇನು. ಇಂತಹ ಪ್ರಸಂಗದಲ್ಲಿಯೂ ಶೇಖರ ನಗುತ್ತಾನಲ್ಲ. ಹುಚ್ಚೇನಾದರೂ ಹಿಡಿಯಿತೆ? ಈಗ ವಿಮಲೆ ನಿಜವಾಗಿಯೂ ಗಾಬರಿಗೊಂಡಳು. ಅವಳು ಗಾಬರಿಗೊಂಡುದು ಕಂಡುಬಂದೊಡನೆ ಶೇಖರ ನಗೆನಿಲ್ಲಿಸಿ, ಹುಚ್ಚು ಹುಡುಗಿ ಇದು ಯಾವ ಅಂತಹ ನಿನ್ನ ಅಪರಾಧವೆಂದು ಇಷ್ಟು ದಾರುಣ ಸಂಕಟಪಟ್ಟೆ. ವಿಮಲಾ ನೀನು ಎಷ್ಟೊಂದು ನಿರ್ಮಲಹೃದಯೆ. ನೀನು ನಿಜವಾಗಿಯೂ ಅಮಲೆ–ನಿರ್ಮಲೆ. ನಿನ್ನ ಈ ಕರ್ಮಕಥೆಯ ಹೇಳಿಕೆಯೇ ನೀನು ನಿರಪರಾಧಿಯೆಂಬುದಕ್ಕೆ ಸಾಕ್ಷಿ. ನನಗೆ ಸಮಾಜದ ಹೆದರಿಕೆಯಿಲ್ಲ ವಿಮಲಾ. ನಿನ್ನನ್ನು ಜೀವನಸಂಗಾತಿಯಾಗಿ ನಾನು ಆರಿಸಿಕೊಂಡು ನಿನ್ನ ಮನಸನ್ನೆಲ್ಲಿ ಗಾಸಿಗೊಳಿಸಿದೆನೊ ಎಂದೇ ನಾನು ಗಾಬರಿಗೊಂಡಿದ್ದೆ. ಆಯಿತಲ್ಲ ಇನ್ನಾದರೂ ನೀನು ಸಮಾಧಾನಹೊಂದು. ನೀನು ಕಲಂಕಿಣಿಯಲ್ಲ, ನಿನ್ನಲ್ಲಿ ಕಲಂಕದ ಲವಲೇಶವೂ ಇಲ್ಲ. ನಿನಗೆ ಗೊತ್ತಿರಲಿಕ್ಕಿಲ್ಲ. ಹೊಸ ರಜೋದರ್ಶನದೊಡನೆ ಸ್ತ್ರೀಯರು ಶರೀರತಃ ಶುದ್ಧರಾಗುವರೆಂಬದು ವೈಜ್ಞಾನಿಕ ಮತ್ತು ಆಯುರ್ವೇದ ದೃಷ್ಟಿಯಿಂದ ಕಂಡುಬಂದ ಮಾತು. ನೀನು ಜೀವತ್ಯಾಗಕ್ಕೂ ಸಿದ್ಧಳಾಗಿದ್ದಿ; ಪಶ್ಚಾತ್ತಾಪದಗ್ಧಳಾದ ನೀನು ಪಾವನೆ, ಪುಣ್ಯವಂತೆ. ನೀನು ಪಾಪಿಷ್ಠೆ, ಕಲಂಕಿಣಿಯೆಂದವರ ಬಾಯಲ್ಲಿ ಹುಳು ಬಿದ್ದೀತು. ಹೇಳು ನಿನ್ನ ಶಂಕೆ ಈಗಲಾದರೂ ನಿವಾರಣೆಯಾಯಿತಲ್ಲವೆ? ಎಂದ.

ಶೇಖರನ ಈ ಅಮೃತಮಯವಾದ ಮಾತಿನಿಂದ ಆನಂದತುಂದಿಲಳಾದ ವಿಮಲೆ ಗದ್ಗದಿತಳಾಗಿ ಶೇಖರನ ಎದೆಯಲ್ಲಿ ಮುಖ ಹುದುಗಿಸಿಕೊಂಡು ಬಿಟ್ಟಳು. ಅವಳಿಗೆ ಆನಂದದಿಂದ ಮುಂದೆ ಮಾತೇ ಹೊರಡದಾಯಿತು. ಇಬ್ಬರೂ ಎಲ್ಲವನ್ನು ಮರೆತು ಬಿಟ್ಟರು. ಗಂಡು ಹೆಣ್ಣೆಂಬುದನ್ನು ಕೂಡ ಮರೆತು, ಏಕಜೀವರಾದರು, ಏಕರಸರಾದರು.

[ ಒಂದು ಆದ ಸಂಗತಿಯ ಆಧಾರದಿಂದ ]

# ಪ್ರವಾಸಿಯು ಕರ್ನಾಟಕ

ಲೇಖಕರು : ಶ್ರೀ ಶಿವರಾಮ ಕಾರಂತ

ಕರ್ನಾಟಕದಲ್ಲಿ ಅನೇಕ ಪ್ರವಾಸ ತಾಣಗಳಿವೆ. ಸೊಬಗಿನ ಕಡಲ ತೀರ, ನಿಸರ್ಗಸುಂದರ ಪ್ರದೇಶ, ಚಾರಿತ್ರಿಕ ಸ್ಥಳಗಳು ಅನೇಕ ಪ್ರವಾಸಿಗಳನ್ನು ಆಕರ್ಷಿಸುವಂತಹವಿರುವವು. ಆದರೆ ಅಲ್ಲಿಲ್ಲೂ ಸಂಚಾರದ ಸೌಕರ್ಯ ಸೌಲಭ್ಯಗಳು ಸಾಕಷ್ಟು ಇಲ್ಲದಿರುವದರಿಂದ ಪ್ರವಾಸ ತುಂಬ ಕಷ್ಟಸಾಧ್ಯವಾಗಿದೆ. ಪ್ರವಾಸಿ ಕರ್ನಾಟಕವನ್ನು ಲೇಖಕರು ಇಲ್ಲಿ ವಿದೇಶಗಳಲ್ಲಿಯ ಸೌಲಭ್ಯ ಸೌಕರ್ಯಗಳೊಂದಿಗೆ ಹೋಲಿಸಿ ನಿರೂಪಿಸಿರುವರು.

ಸ್ವಿಜರ್‌ಲೇಂಡಿನಂಥ ದೇಶದ ಸಂಪದಭಿವೃದ್ಧಿಗೆ, ಅದು ಅಂತಾರಾಷ್ಟ್ರೀಯ ಪ್ರವಾಸಕ್ಷೇತ್ರವಾಗಿರುವುದು ಒಂದು ಮುಖ್ಯ ಕಾರಣ. ಬರಿದೆ ಆ ದೇಶದ ಸರೋವರಗಳನ್ನೂ ಪರ್ವತಗಳನ್ನೂ ನೋಡಲು ಹೋಗುತ್ತಿರುವ ಜನಗಳು, ಅಲ್ಲಿ ಸುರಿಯುವ ಹಣ ಸ್ವಲ್ಪವಲ್ಲ. ಇಂಥ ವ್ಯವಹಾರದಿಂದ ದೇಶದಲ್ಲಿ ಎರಡು ಬಗೆಯ ಉದ್ಯಮಗಳಿಗೆ ತುಂಬ ಸಂಪಾದನೆಯಾಗುತ್ತದೆ — ರೈಲು, ಮೋಟರಿನಂಥ ಸಾರಿಗೆಯುನ್ನು ನಡೆಯಿಸುವವರಿಗೆ ಮೊದಲಿನ ಲಾಭ. ಅನಂತರ— ಪ್ರವಾಸಿಗಳಿಗೆ ಉಳಿದುಕೊಳ್ಳುವುದಕ್ಕೆ ಅವಕಾಶ ಕಲ್ಪಿಸುವ ಹೊಟೇಲುಗಳಿಗೆ ತುಂಬ ಲಾಭ. ಅದಲ್ಲದೆ ಪ್ರವಾಸಿಗಳ ವಿರಾಮದ ಸಮಯವನ್ನು ರಸಿಕ ರೀತಿಯಿಂದ ಕಳೆಯುವುದಕ್ಕೆ ಸಹಾಯವಾಗುವ ನೃತ್ಯ, ನಾಟಕ, ಆಟಗಳೆಲ್ಲವಕ್ಕೂ ಧಾರಾಳವಾಗಿ ಹಣ ದೊರೆಯುತ್ತದೆ. ಸ್ವಿಜರಲೇಂಡಿನಷ್ಟಲ್ಲದಿದ್ದರೂ ಇಟಲಿ, ಫ್ರಾನ್ಸ್, ಇಂಗ್ಲಂಡ್, ಸ್ವೀಡನ್, ನಾರ್ವೆಯಂಥ ದೇಶಗಳು ಕೂಡ, ಅಂತಾರಾಷ್ಟ್ರೀಯ ಪ್ರವಾಸಿಗಳನ್ನು ಆಕರ್ಷಿಸುತ್ತವೆ. ಸ್ವಿಜರಲೆಂಡ್, ನಾರ್ವೆ, ಸ್ವೀಡನಿನಂಥ ದೇಶಗಳು.... ನಿಸರ್ಗದ ಚೆಲುವಿನಿಂದ ಪ್ರವಾಸಿಗಳ ಮನಸ್ಸನ್ನು ಸೆಳೆದರೆ, ಇಟಲಿಯು ಹೆಚ್ಚಾಗಿ ಐತಿಹಾಸಿಕ ಮತ್ತು ಕಲಾಸಂಪತ್ತಿನಿಂದ ಜನರನ್ನು ಆಕರ್ಷಿಸುತ್ತಿದೆ. ಫ್ರಾನ್ಸ್ ಕಲಾಸಂಪತ್ತಿನಿಂದಲೂ ಚಾರಿತ್ರಿಕ ಸ್ಥಳಗಳಿಂದಲೂ ನಿಸರ್ಗ ಸೌಂದರ್ಯದಿಂದಲೂ ವಿಲಾಸ ಜೀವನದ ಅನುಕೂಲತೆಗಳಿಂದಲೂ ಲೋಕದ ಜನಗಳನ್ನು ತನ್ನ ಕಡೆಗೆ ಸೆಳೆಯುತ್ತದೆ. ಇಂಥ ಆಕರ್ಷಣೆಗೆ ಬೆಂಬಲ ಕೊಟ್ಟು ಭಾರತ ದೇಶವು ಸಹ ಹಣ ಸಂಪಾದಿಸಬಹುದು. ಇದು ದೊಡ್ಡ ದೇಶ, ಸುಂದರವಾದ ನಿಸರ್ಗ ಮತ್ತು ಚಾರಿತ್ರಿಕ ಹಿನ್ನೆಲೆಗಳಿರುವುದರಿಂದ ಲೋಕದ ಅನೇಕರು ಈ ದೇಶವನ್ನು ಕಾಣುವ ಹಂಬಲ ತಾಳುತ್ತಾರೆ. ಭಾರತ ಸರಕಾರವು ಈ ಪ್ರವಾಸಿ ಉದ್ಯಮವನ್ನು ಹೆಚ್ಚಿಸಬೇಕೆಂಬ ಹಂಬಲದಲ್ಲಿಯೂ ಇದೆ. ಭಾರತದಲ್ಲಿ ಕರ್ನಾಟಕಕ್ಕೊಂದು ಲಾಭಾಂಶ ದೊರೆತರೆ ಒಳ್ಳೆಯದಲ್ಲವೇ? ದಿಲ್ಲಿಯ ಮಹಾಜನಗಳೆಂದಂತೆ, ನಮ್ಮ ಮುಂದಾಳುಗಳು, ಕರ್ನಾಟಕದಲ್ಲಿ 'ಟೂರಿಸ್ಟ್ ಟ್ರಾಫಿಕ್' ಬೆಳೆಯಿಸಬೇಕೆಂದು ಹೇಳುತ್ತಲೇ ಇದ್ದಾರೆ. ಇದಕ್ಕಾಗಿ ಅನ್ಯದೇಶಗಳಲ್ಲಿ ಪ್ರಚಾರ ನಡೆಯಿಸುವುದು ಒಂದು ಕ್ರಮ.



ಗೆರುಸೊಪ್ಪೆ ಜಲಪಾತ

ನಮ್ಮ ದೇಶದಲ್ಲಿ ಏನೇನು ನೋಡಲಿಕ್ಕಿದೆ—ಎಂದು ಲೇಖಗಳ ಮೂಲಕ, ಚಿತ್ರಗಳ ಮೂಲಕ ಪೋಸ್ಟರುಗಳ ಮೂಲಕ, ಜಾಹೀರಾತುಗಳ ಮೂಲಕ ಸಾರುವ ಕ್ರಮವಿದೆ. ಇಟಲಿ 'ಇನ್ ಟೂರಿಸ್ಟ್' ಎಂಬೊಂದು ಸಂಸ್ಥೆಯನ್ನೇ ಇದಕ್ಕಾಗಿ ತೆರೆದಿದೆ; ಅನ್ಯ ದೇಶಗಳಲ್ಲಿ ಅದರ ಅನೇಕ ಶಾಖೆಗಳಿವೆ.

## ಪ್ರವಾಸದ ಪರಿಸ್ಥಿತಿ

ನಾವು ಜಾಹಿರಾತು ಮಾಡಿದ್ದೇವೆ; ಜನಗಳನ್ನು 'ಬನ್ನಿ ಬನ್ನಿ' ಎಂದು ಕರೆದಿದ್ದೇವೆ—ಎಂಬುದರಿಂದಲೇ ಪ್ರವಾಸಿಗಳ ಸಂಖ್ಯೆ ಬೆಳೆಯುವುದಿಲ್ಲ. ಅದು ಬೆಳೆಯಬೇಕಾದರೆ—ನಮ್ಮ ಪ್ರಚಾರಕ್ಕಿಂತಲೂ ಹೆಚ್ಚಾಗಿ, ನಾವು ಕೊಡುವ ಪ್ರವಾಸ ಸೌಕರ್ಯ ಆಕರ್ಷಕವಾಗಿರಬೇಕು. ಸಂಚಾರಕ್ಕೆ ರೈಲು, ಮೋಟರುಗಳ ಅನುಕೂಲತೆ ಇರಬೇಕು; ಹೋದಲ್ಲಿ—ಎಲ್ಲ ತೆರನ ಜನಗಳು ಉಳಿದುಕೊಳ್ಳುವುದಕ್ಕೂ ಪ್ರವಾಸಿ ಮಂದಿರಗಳು ಬೇಕು. ಅಲ್ಲಿ ಶುಚಿಯಾದ ಮತ್ತು ರುಚಿಯಾದ ಆಹಾರಗಳನ್ನು ಒದಗಿಸುವವರು ಬೇಕು. ಇತರ ನಾಗರಿಕ ಅನುಕೂಲತೆಗಳು ಬೇಕು. ನಾವು ಒದಗಿಸುವ ಸೇವೆ (service) ಕೇವಲ ರಾಜ-ಕುಮಾರರು ಕೊಳ್ಳುವ ಸೇವೆಯಾಗಿರದೆ, ಜನಸಾಮಾನ್ಯರನ್ನು ಆಕರ್ಷಿಸುವಷ್ಟು ಮಿತಬೆಲೆಯಲ್ಲಿಯೂ ದೊರೆಯುವಂತಿರಬೇಕು.

ಹಾಗೆ ಮಾಡಿದುದಾದರೆ....ಭಾರತದ ಜನರೇ ಸಾಕಷ್ಟು ಪ್ರವಾಸಿಗಳಾದಾರು. ಅವರೂ ಸಂತೋಷಕ್ಕಾಗಿ ತಿರುಗಾಡಬಹುದು. ಆಗ—ಬರಿಯ ಪಿತೃಶ್ರಾದ್ಧಕ್ಕೋ, ರಾಜಧಾನಿಗಳಿಗೆ ಮಂತ್ರಿ ದರ್ಶನಕ್ಕೋ, ಹೋಗುವ ಜನಗಳಿಗಿಂತಲೂ ಪ್ರೇಕ್ಷಣೀಯ ಸ್ಥಳಗಳಿಗೆ ಹೋಗುವ ಪ್ರವಾಸಿಗಳ ಸಂಖ್ಯೆ ಹೆಚ್ಚೀತು. ಕರ್ನಾಟಕವೂ ಇದಕ್ಕೆ ಆಕ್ಷೇಪವಾಗಲಾರದು. ಈ ವಿಚಾರದಲ್ಲಿ ನಮ್ಮ ದೃಷ್ಟಿ ಹರಿದಿದೆಯೇ? ಸಂಚಾರಕ್ಕೆ ಹೊರಟ ಪ್ರವಾಸಿಯು ಗತಿಯೇನು? ದಾರಿಯಲ್ಲೂ ನಮ್ಮ ಟೂರಿಸ್ಟ್ ಸ್ವರ್ಗಗಳಲ್ಲೂ ಅಲ್ಲಿಂದ ಮರಳುವಾಗಲೂ ಪ್ರವಾಸಿಗೆ ಏನಾದೀತು—ಎಂದು ಹೇಳಬಲ್ಲಿರಾ? ಅವನು ಮರಳಿಬಂದ ಮೇಲೆಯೇ ಪ್ರವಾಸ ಮಾಡಿದ್ದು ಖಂಡಿತವಾದೀತು. ಮೊದಲೇ ಕುಳಿತಿರಲು ಎಡೆಯಿಲ್ಲದ ರೈಲಿನಲ್ಲಿ, ಪ್ರವಾಸದ ದರದಲ್ಲಿ ೧/೨ ಇಲ್ಲವೆ ೧/೩ ಬೆಲೆ ತಗ್ಗಿಸಿ, ೨೦ ಜನ ಕುಳಿತಿರಬಹುದಾದ ಬಂಡಿಯಲ್ಲಿ ೧೦೦ ಜನಗಳನ್ನು ತುಂಬಿಸಿ, ಸೌಕರ್ಯ ಕೊಡದೆಯೆ, ಹಿಂಸೆ ಕೊಟ್ಟು—ದುಡ್ಡು ಸಂಪಾದಿಸುವ ವಿಧಾನ ನಮ್ಮ ರೈಲುಸಾರಿಗೆಯದು. ಒಂದೂವರೆ ಸಾವಿರ ಮೈಲುದ್ದದ ಹಿಮಾಲಯವೂ ೩,೦೦೦ ಮೈಲುದ್ದದ ಸಮುದ್ರದಂಡೆಯೂ ಇದ್ದರೂ ಭಾರತದಲ್ಲಿ ಎಷ್ಟು ಜನ ಪ್ರವಾಸಿಗಳು ಅಲ್ಲಿಗೆ—ಹೋಗಿ ಬರುತ್ತಿದ್ದಾರೆ? ಯಾಕೆ ಜನರು ಹೆಚ್ಚಾಗಿ ಸಂಚಾರಕ್ಕೆ ಹೋಗುವುದಿಲ್ಲ?

ಕಾರಣವನ್ನು ತಿಳಿಯಲು ನಾವು ಟೂರಿಸ್ಟ್ ಸ್ವರ್ಗವಾದ ಸ್ವಿಜರ್‌ಲೆಂಡನ್ನು ನೆನೆಯಬೇಕಾಗುತ್ತದೆ. ಅಲ್ಲಿ ಪ್ರತಿಯೊಂದು ಬೆಟ್ಟದ ಸಂದಿಗೂ ಅಗ್ಗವಾದ, ಚುರುಕಾದ ರೈಲ್ವೆಯ ಸಂಪರ್ಕ ಕಲ್ಪಿಸಿದ್ದಾರೆ. ಎಂಥ ಕಡಿದಾದ ಬೆಟ್ಟಗಳನ್ನೂ



ಸೆಂಟ ಮೇರಿ ದ್ವೀಪದ ನೋಟ

ಏರುವ ರೈಲುಗಳಿವೆ. ನಮ್ಮಲ್ಲಿ ಸಿಮ್ಲಾ ದಾರ್ಜಿಲಿಂಗಿನಂಥ ಒಂದೆರಡು ಸ್ಥಳಗಳನ್ನು ಬಿಟ್ಟರೆ, ಉಳಿದ ಹಿಮಾಲಯದ ಭಾಗಗಳು ರೈಲು ಮೋಟರುಗಳ ಮಾತಿರಲಿ, ಹೇಸರ ಕತ್ತೆಗಳಿಗೂ ದೂರವಾಗಿ ನಿಂತಿವೆ. ನಮ್ಮ ದೇಶದಲ್ಲಿ ಇಷ್ಟೊಂದು ದೊಡ್ಡ ಕಡಲು ಕರಾವಳಿಯಿದೆ. ಸಮುದ್ರವನ್ನು ಮೆಚ್ಚಿ ಯಾರು ಅಲ್ಲಿಗೆ ನೋಡಹೋಗುತ್ತಾರೆ? ಗೋಕರ್ಣ, ರಾಮೇಶ್ವರ, ಪುರಿ, ದ್ವಾರಕಾ-ಇಷ್ಟು ಸ್ಥಳಗಳಿಗೆ ಪುಣ್ಯಸಂಪಾದನೆಗೆ ಜನ ಹೋಗಿ ಬರುತ್ತಿರಬಹುದು. ಬರಿಯ ಸಂತೋಷಕ್ಕಾಗಿ ಹೋಗಿ ಬರುವವರು ಎಷ್ಟುಮಂದಿ? ಹೋಗಬೇಕೆಂಬ ಲವಲವಿಕೆಯೇ ಜನಗಳಲ್ಲಿ ಇರಲಾರದೇನು? ಸೀಸ್, ಕೇನ್ಸ್‌ಗಳಲ್ಲಿ—ಸಮುದ್ರ ದಂಡೆಯಲ್ಲಿ ಹಬ್ಬಿದ ಮರಳು ಕಾಣಿಸದಷ್ಟು ಜನ ತುಂಬಿರುತ್ತಾರಲ್ಲ—ಏಕೆ? ಅಲ್ಲೇ ಆಗಲಿ, ಪ್ರವಾಸಿಗಳನ್ನು ಆಕರ್ಷಿಸುವ ಇತರ ಸ್ಥಳಗಳಲ್ಲೇ ಆಗಲಿ—ಎರಡು, ತೀರ ಹೆಚ್ಚಿನ ಸೌಕರ್ಯಗಳು ಅವಶ್ಯ. ನಡೆದೋ, ಮೋಟರುಗಳಲ್ಲೋ ಬಂದು ಹೋಗುವುದಕ್ಕೆ ಚೆನ್ನಾದ ದಾರಿ ಇರಬೇಕು; ಹೋದಮೇಲೆ ಜನರು ಉಳಕೊಳ್ಳುವುದಕ್ಕೆ ವಸತಿಬೇಕು. ನೆಪಕ್ಕೆ ಒಂದು ಸ್ಥಳದಲ್ಲಿ ಒಂದೇ ಒಂದು 'ಟ್ರಾವಲರ್ಸ್ ಬಂಗ್ಲೆ' ಇದ್ದರೆ ಸಾಲದು. ಅದು ಬರಿಯ ಎರಡು ಕುಟುಂಬಗಳಿಗಾಯಿತು. ಹೋಗುವ ಇತರರ ಪಾಡೇನು?

ನಮ್ಮ ಜೋಗಿನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಅಲ್ಲಿರುವ ಎರಡು ಬಂಗಲೆಗಳಿಂದ ಐದು ಕುಟುಂಬಗಳು ಅಲ್ಲಿರಬಲ್ಲುವು. ಇತರರು ಬಂದರೆ, ಮರದ ನೆರಳೇ ಆಶ್ರಯ. ರಾತ್ರಿಗೆ-ಮುಗಿಲು, ಮಂಜು ತುಂಬಿದ ಹವೆಯಲ್ಲಿ, ಮಲಗಿಕೊಂಡರೆ ಮಲಗಿದಾತ ಬೆಳಗಾಗುವಾಗ ಹೆಣವಾದಾನು. ಇನ್ನು ಇಂಥ ಟೂರಿಸ್ಟ್ ಸ್ವರ್ಗದಲ್ಲಿ, ಚೆನ್ನಾದ ಒಂದು ಹೋಟೇಲಾದರೂ ಇದೆಯೇ? ಇರುವ ಒಂದು ಹೊಟೇಲಿನಲ್ಲಿ—ಉಂಡು ತಿಂದು, ಆರೋಗ್ಯವಾಗಿ ಮನೆಗೆ ಮರಳಬಹುದು—ಎಂಬ ಧೈರ್ಯವಿಲ್ಲ. ಕ್ರಿಸ್‌ಮಸ್ ದಿವಗಳಲ್ಲಿ ದಿನಕ್ಕೆ ನೂರಾರು ಮೋಟರು ವಾಹನಗಳು ಬಂದುಹೋಗುವ ಜೋಗಿನ ಸ್ವರ್ಗದಲ್ಲಿಯೆ ಹೀಗಿದ್ದರೆ, ಉಳಿದ ಪ್ರವಾಸಿಸ್ವರ್ಗಗಳನ್ನು ಕುರಿತು ನಾವು ಹೇಳಬೇಕಾಗಿಲ್ಲ.

## ಸ್ವಿಝರ್ಲೆಂಡಿನಲ್ಲಿರುವ ಸೌಕರ್ಯಗಳು

ಸ್ವಿಝರ್ಲೆಂಡಿನ ವಿಚಾರ ಯೋಚಿಸಿ—ಅಲ್ಲಿ ಪ್ರತಿಯೊಂದು ತೆರನ ವರಮಾನವುಳ್ಳ ಜನಗಳ ಅನುಕೂಲತೆಗೆ ತಕ್ಕಂತೆ ಹೋಟೆಲುಗಳಿವೆ. ಶುಚಿಯಾದ ಆಹಾರವನ್ನು ಬೆಟ್ಟದ ತುದಿಯಲ್ಲೂ ಒದಗಿಸುವವರಿದ್ದಾರೆ. ಅವು—ನಾಲ್ಕು ದಿನ ಇದ್ದು ಹೋಗೋಣ—ಎಂಬ ಆಸೆ ಹುಟ್ಟಿಸುತ್ತವೆ. ನಾನು ಇಂಟರ್‌ಲೂಕಸ್ ಪಟ್ಟಣದಲ್ಲಿ ಒಂದು ಹೊಟೇಲಿನಲ್ಲಿ ಬರಿಯ ಎರಡು ದಿನ ಕಳೆದೆ. ಅಲ್ಲಿ ದಿನದ ಯಾವತ್ತೂ ಊಟಗಳಿಗೂ ವಸತಿಗೂ ಹಣ ಕೊಡಬೇಕಾಗಿತ್ತು. ಒಂದು ದಿನ ಬೆಳಿಗ್ಗೆ ಹೊರಟು ಯಂಗ್‌ಫ್ರೊ ಬೆಟ್ಟ ನೋಡಿಕೊಂಡು ಸಂಜೆ ಮರಳುವವನು. ನಾನು ಮಧ್ಯಾಹ್ನದ ಊಟಕ್ಕೆ ಹೋಟೇಲಿನಲ್ಲಿ ಉಳಿಯಲಿಲ್ಲ. ಹೋಟೇಲಿನವರಿಗೆ ಇದರಿಂದ ಲಾಭವೇ ಆಯಿತಲ್ಲ. ಅವರು ಮಾತ್ರ—ನಾನು ಬೆಟ್ಟಕ್ಕೆ ಹೋಗುತ್ತೇನೆಂದು ಗೊತ್ತಾದೊಡನೆಯೇ, ತಾವಾಗಿಯೇ ನನ್ನ ಲಂಚಿಗೆ ಬೇಕಾಗುವ ಎಲ್ಲ ಸಾಮುಗ್ರಿಗಳನ್ನು ಕಟ್ಟಿ ನನ್ನ ಕೈಯಲ್ಲಿ ಕೊಟ್ಟರು. ಇಷ್ಟೇ ಅಲ್ಲ, ಅಲ್ಲಿದ್ದ ಸಮಯ ಬೆಳಿಗ್ಗೆ, ಸಂಜೆ, ಹೋಟೇಲಿನ ಸೇವಕರು ಮನೆಯವರಿಗಿಂತಲೂ ಹೆಚ್ಚಾಗಿ ನನ್ನನ್ನು ಮಾತನಾಡಿಸಿದರು, ಆದರದಿಂದ ನೋಡಿಕೊಂಡರು. ಇದಕ್ಕೆ ಪ್ರತಿಯಾಗಿ—ನಮ್ಮ ನಗರದ ಹೋಟೇಲುಗಳಿಗೆ ಹೋದರೂ ಅವರ 'ಸೀಜನು' ಗಳಲ್ಲಿ ಒಂದಿಷ್ಟು ಕಾಫಿ ಕೊಟ್ಟರೆ ನಮ್ಮ ಪುಣ್ಯವೆನಿಸೀತು.

ಮೈಸೂರಿನ ಅತಿ ಹೆಸರಾದ ಒಂದು ಹೋಟೇಲಿಗೆ ಒಮ್ಮೆ ನಾನು ಊಟಕ್ಕೆ ಹೋಗಿದ್ದೆ. ಹೋಗಿ ಕುಳಿತರೆ, ಎಲೆ ಬಡಿಸಿದ ಅರ್ಧಗಂಟೆಯ ತನಕವೂ ಉಪ್ಪು ಬರಲಿಲ್ಲ. ಆಗ ಊಟದ ಎಲೆಯನ್ನು ಬಿಟ್ಟು, ಮರಳಿ ಬಂದು, ಬಸ್ಸನ್ನೇರಿ ನನ್ನ ಪ್ರವಾಸವನ್ನು ಮುಂದುವರಿಸಿದೆ. ಮೊದಲಿಗೆ ಉತ್ತಮ ಹೊಟೇಲುಗಳು ನಮ್ಮಲ್ಲಿ ಬಹುಕಡಿಮೆ. ಇರುವವುಗಳ ಬೆಲೆ—ಸಾಕಷ್ಟು ಹೆಚ್ಚು, ಲಂಡನಿನಲ್ಲಿ ಒಂದು ಕೊಟಡಿಯಲ್ಲಿ ಒಳ್ಳೆಯ ಸೌಕರ್ಯ ಪಡೆದು, ಇದ್ದು, ಬೆಳಗಿನ ಉಪಹಾರ ಪಡೆದುದಕ್ಕೆ—ದಿನಕ್ಕೆ ೬ ರೂಪಾಯಿ ಕೊಟ್ಟುದುಂಟು. ಮಂಗಳೂರಲ್ಲಿ ತೀರ ಹೊಲಸಾದ ಹಾಸಿಗೆಯುಳ್ಳ ಕಿಟಕಿಗಳಿಗೆ ಧೂಳಂಟಿದ, ಅದಕ್ಕಿಂತ ಸಣ್ಣ ಒಂದು ಕೊಟಡಿಗೆ, ಜನರ ನಿಗ್ಗಿನಲ್ಲಿ ಬಡಿಸಿದ್ದನ್ನು ಉಣ್ಣಬೇಕಾದ ಮಹಾಸೌಕರ್ಯದೊಡನೆ—ಏಳೆಂಟು ರೂಪಾಯಿಗಳನ್ನು ತೆರಬೇಕಾಗುತ್ತದೆ. ಇದು ಬಡದೇಶದಲ್ಲಿ ಬಡ ಪ್ರವಾಸಿಗಿರುವ ಅನುಕೂಲತೆ!

ನಾನು ಇಂಗ್ಲೆಂಡಿಗೆ ಸ್ಟೀಮರಿನಲ್ಲಿ ಸಂಚರಿಸುತ್ತಿದ್ದಾಗ, ನಮ್ಮ ದೇಶದ ಪ್ರಚಾರ ಖಾತೆಯವರು ಹಂಚಿದ ಒಂದು ಪ್ರವಾಸಿ ಪುಸ್ತಕವನ್ನು ನೋಡಿದೆ. ಅದರಲ್ಲಿ ಮುಂಬಯಿ ಮತ್ತು ದಿಲ್ಲಿ ನಗರಗಳಲ್ಲಿ—ಬಹು ಒಳ್ಳೆಯ ಹೋಟೇಲುಗಳಿವೆ ಎಂದು ತಿಳಿಸಿದ್ದರು. ದಿನಕ್ಕೆ ಬರಿಯ ೧೦೦-೧೫೦ ರೂ. ಚಾರ್ಜು ಮಾಡುತ್ತಾರೆಂದು ತಿಳಿಸಿತ್ತು. ಇದು ನಮ್ಮ ದೇಶಕ್ಕೆ ಪ್ರವಾಸಿಗಳನ್ನು ಆಕರ್ಷಿಸುವ ರೀತಿ! ದಿಲ್ಲಿಯ ಜನಪಥದಲ್ಲಿ ದಿನಕ್ಕೆ ೩೦ ರೂಪಾಯಿಗಳನ್ನೋ, ಅಶೋಕಾ ಹೊಟೇಲಿನಲ್ಲಿ ೭೦ ರೂಪಾಯಿಗಳನ್ನೊ ಕೊಡುವ ಪ್ರವಾಸಿಗಳಿಂದ, ನಾವು ಈ ಸಮಾಜವಾದಿ ದೇಶದ ಹಿರಿಮೆಯನ್ನು ಸಾಧಿಸಬಹುದೆಂದು ತಿಳಿದಿದ್ದೇವೆಯೋ ಏನೊ. ಅಂಥ ಹೋಟಲುಗಳಿಗೆ ನಾನು ವೈರಿಯಲ್ಲ. ಕಡಿಮೆ ವರಮಾನವಿರುವ, ಅಧಿಕಸಂಖ್ಯಾಕರಿಂದ ಪ್ರವಾಸ ಲಾಭವು ದೇಶಕ್ಕೆ ದೊರೆಯಬೇಕಾದುದು ಮುಖ್ಯವೆಂದು ನನಗೆ ಅನಿಸುತ್ತದೆ.

## ಯುರೋಪಿನಲ್ಲಿ ಪ್ರವಾಸ ಸೌಲಭ್ಯ

ಯುರೋಪಿನ ಸಾಮಾನ್ಯ ಯಾವ ಪ್ರಮುಖ ನಗರಗಳಿಗೆ ಹೋದರೂ ಅಲ್ಲಿನ ರೈಲು ನಿಲ್ದಾಣಗಳಲ್ಲಿ ನಿಮಗೆ ಹೊಟೇಲಿನ ಪರಿಚಯವನ್ನು ಒದಗಿಸುತ್ತಾರೆ. ಹೊಟೇಲುಗಳಲ್ಲಿ ಕನಿಷ್ಠ ೧-೨-೩ ಎಂದು ಮೂರು ತರಗತಿಗಳಿವೆ. ಊಟ ಕೊಡದ ಬರಿಯ ವಾಸದ ಪೆನ್ಸಿಯೆನುಗಳೂ ಇವೆ. ಎನ್‌ಕ್ವಾಯರಿ ಕಚೇರಿಯವರು ಟೆಲಿಫೋನ್ ಮಾಡಿ ಆಕಸ್ಮಿಕವಾಗಿ ಬಂದ ಪ್ರವಾಸಿಗೆ, ಅವನ ಅನುಕೂಲತೆಗೆ ತಕ್ಕ ಬೆಲೆಯ ಹೋಟೆಲು ಒದಗಿಸಬಹುದು. ಅಲ್ಲಿ ಬಡವರಿಗೂ ಹೋಟೆಲುಗಳಿವೆ. ಶ್ರೀಮಂತರಿಗೂ ಅವರ ಮಟ್ಟಕ್ಕೆ ಸರಿಯಾದ ಹೋಟೆಲುಗಳಿವೆ. ಬಡ ಹೋಟೆಲುಗಳು ಕೂಡ ತುಂಬ ಚೊಕ್ಕವಾಗಿರುತ್ತವೆ. ಅಂಥ ಚೊಕ್ಕತನವನ್ನು ನಮ್ಮ ದೇಶದ ಶ್ರೀಮಂತ ಹೋಟೆಲುಗಳಲ್ಲಿ ಕಾಣಲಾರೆವು.

ಯುರೋಪಿನಲ್ಲಿ ಅಸಂಖ್ಯಾತ ವಿದ್ಯಾರ್ಥಿಗಳು ಪ್ರವಾಸಮಾಡುತ್ತಾರೆ. ಹಾಗೆ ಬಡಜನರೂ ಮಾಡಬಹುದು. ಪ್ರತಿಯೊಂದು ಪ್ರೇಕ್ಷಣೀಯ ಸ್ಥಳದಲ್ಲೂ ವಿದ್ಯಾರ್ಥಿಗಳ ಸಲುವಾಗಿ "ಯುಥ್ ಹಾಸ್ಟೆಲ್ಸ್" ಎಂಬುವಿವೆ. ಅಲ್ಲಿ ವಿದ್ಯಾರ್ಥಿಗಳು



ಕಾರವಾರದ
ಕರಾವಳಿ ದೃಶ್ಯ

ಹೋಗಿ ಅಗ್ಗಕ್ಕೆ ಉಳಿದುಕೊಳ್ಳಬಹುದು. ತಮ್ಮ ಅಡುಗೆಯನ್ನೇ ತಾವು ಮಾಡಿಕೊಳ್ಳಬಹುದು. ಅಲ್ಲದೆ ಜನಗಳು ಬಹಿರಂಗವಾಗಿ ವಾಸಮಾಡುವುದಕ್ಕೆ ಮೋಟರುಗಳನ್ನೇ ತಮ್ಮ ಮನೆಯಾಗಿ ಬಳಸುವ ಹೊಸ ಅನುಕೂಲತೆಯೂ ಇದೆ. ಅಂಥ ಮೋಟರುಗಳು ತಂಗುವುದಕ್ಕೆ ಊರುಗಳಲ್ಲಿ ಮೈದಾನುಗಳಿರಬೇಕು, ಅವಕ್ಕೆ ಸಮೀಪ ಅಂಗಡಿಗಳಿರಬೇಕು. ನೀರು ಮೊದಲಾದ ಸೌಕರ್ಯ ಇರಬೇಕು. ಹೀಗೆ ನೂರು, ಸಾವಿರ ಜನರು ಕಡಿಮೆ ಆದಾಯದವರು, ಹೆಚ್ಚು ಆದಾಯದವರು-ತಮ್ಮ ಪ್ರವಾಸದ ಚಪಲ ತೀರಿಸಿಕೊಳ್ಳುವುದಕ್ಕೆ ಯಾವ ಅನುಕೂಲತೆಯನ್ನು ನಾವು ಕರ್ನಾಟಕದಲ್ಲಿ ಒದಗಿಸಿದ್ದೇವೆ? ಜೋಗ್ ನಂಥ ಸ್ಥಳಕ್ಕೆ, ಮಳೆಗಾಲದ ತಿಂಗಳುಗಳಲ್ಲಿ ಶಿರ್ಸಿ-ಸಿದ್ದಾಪುರದ ದಾರಿಯಿಂದ ಹೋಗುವುದಾದರೆ ಆ ಚೆಲುವನ್ನು ಹೇಳಿತೀರದು! ಕೈಲಾಸಂ ಸೊಳ್ಳೆಪರದೆ ಮಾಡುವ ಕ್ರಮವನ್ನು ಮುಗುವಿನ ಮಾತಿನಲ್ಲಿ ಹೀಗೆ ಬಣ್ಣಿಸಿದ್ದರು! "ಸಪೂರ ದಾರವನ್ನು ತೆಗೆದುಕೊಂಡು, ಪುಟ್ಟ ಪುಟ್ಟ ತೂತುಗಳನ್ನು ಬಿಗಿದು ಸೊಳ್ಳೆ ಪರದೆ ಮಾಡುತ್ತಾರೆ—" ಎಂದು. ಹಾಗೆಯೇ ದೊಡ್ಡ ದೊಡ್ಡ ಕುಣಿಗಳನ್ನು ಬಹು ಚಮತ್ಕಾರದಿಂದ ಜೋಡಿಸಿ, ಮಾಡಿದಂಥ ದಾರಿ ಮೇಲಿನದು. ಪಟ್ಟದಕಲ್ಲು, ಐಹೊಳೆ— ಮೊದಲಾದ ಅನೇಕ



ಐಹೊಳೆಯ ದುರ್ಗಾದೇವಾಲಯ

ಪ್ರವಾಸ ಯೋಗ್ಯಸ್ಥಳಗಳಿಗೆ ಇಂಥದೇ ಅಮೂಲ್ಯ ಸೌಕರ್ಯವನ್ನು ನಾವು ಒದಗಿಸಿದ್ದೇವೆ. ಇಂಥಲ್ಲಿ— ಒಂದು ತುತ್ತು ಅನ್ನ ಬೇಕೆಂದರೆ, ದೊರಕಿಸಿಕೊಳ್ಳುವ ದಾರಿಯಲ್ಲಿ ಇರುವುದಕ್ಕೆ ಜೇಳು ತುಂಬಿದ ಗುಡಿಯ ಪ್ರಾಕಾರಗಳೇ ಗತಿ.

ಪ್ರವಾಸಕ್ಷೇತ್ರಗಳಿಗೆ ಬರುವುದಕ್ಕೆ ಎಲ್ಲ ಕಾಲದ (all season) ದಾರಿ ಮತ್ತು ವಾಹನ ಸೌಕರ್ಯಗಳು ಹೇಗೆ ಬೇಕಾಗುತ್ತವೆಯೋ ಹಾಗೆಯೇ ಅಂಥ ಸ್ಥಳವನ್ನು ಸೇರಿದಮೇಲೆ ಊಟೋಪಚಾರಕ್ಕೆ, ವಸತಿಗೆ, ಹಿತಕರವಾದ ಅನುಕೂಲತೆಗಳು ಬೇಕು. ಬಡವರಿಗೂ ಶ್ರೀಮಂತರಿಗೂ, ಮಧ್ಯಮ ವರ್ಗದವರಿಗೂ— ವಾಸಿಸಲು ಸಮನಾದ ನಿರ್ಬಂಧವಿಲ್ಲದೆ ಹೋದರೆ —ಅಂಥ ಕ್ಷೇತ್ರಕ್ಕೆ ಬಂದವರು ಬಂದ ದಿನವೇ ಹೊರಡಬೇಕಾಗುತ್ತದೆ. ನಾಲ್ಕುದಿನ ಇದ್ದು ಸಂತೋಷಗೊಂಡು, ಅಭ್ಯಸಿಸಿ, ಕುಳಿತಿರಬಹುದಾದ ಊರುಗಳಾದ — ಹಂಪಿ, ಪಟ್ಟದಕಲ್ಲು, ಐಹೊಳೆಗಳಂಥ — ಸ್ಥಳಗಳಲ್ಲಿ ಒಂದು ದಿವಸ ಇರುವುದಕ್ಕೆ ಯಾವ ಅನುಕೂಲತೆಯೂ ಇಲ್ಲದ್ದನ್ನು ಕಾಣುವಾಗ, ನಾವಿನ್ನೂ ಮಾತಿನ ತೃಪ್ತಿಯಲ್ಲೇ ಇದ್ದೇವೆಂಬುದು ಸ್ಪಷ್ಟವಾಗುತ್ತದೆ.

### ಕರ್ನಾಟಕದಲ್ಲಿ ಪ್ರವಾಸಿಕರ ಸ್ಥಳಗಳು

ಕನ್ನಡನಾಡಿನ ದೃಷ್ಟಿಯಿಂದ— ನಮ್ಮ ಪ್ರವಾಸ ಕ್ಷೇತ್ರಗಳಾಗಬಹುದಾದ ಕೆಲವೊಂದು ಸ್ಥಳಗಳ ಪರಿಚಯ, ಅನುಕೂಲತೆ, ಮತ್ತು ಅನಾನುಕೂಲತೆಗಳನ್ನು ಕುರಿತು— ಇಲ್ಲಿ ವಿವೇಚಿಸಬಹುದು. ಮೊದಲಿಗೆ—ಪ್ರಕೃತಿ ಸೌಂದರ್ಯಕ್ಕೆ ಹೆಸರಾದ ಕ್ಷೇತ್ರಗಳನ್ನು ಕುರಿತು ವಿಚಾರ ಮಾಡೋಣ.

ಕಾರವಾರದಿಂದ ತೀರ ದಕ್ಷಿಣದ ಕಾಸರಗೋಡಿನ ತನಕ ಸುಮಾರು ೧೫೦ ಮೈಲು ಉದ್ದವಾದ ಬಹುಸುಂದರವಾದ ಕಡಲಕರಾವಳಿ ನಮಗಿದೆ. ಮೀಯುವ ತಾವುಗಳು, ಮರಳು ದಂಡೆಗಳು (Beaches), ಖಾರಿಗಳು (Back-waters), ದ್ವೀಪಗಳು, ಕಡಲಿಗೆ ಚಾಚಿದ ಬೆಟ್ಟಗಳು — ಇವೆಲ್ಲವುಗಳ ಸೌಂದರ್ಯವನ್ನು ಕಾಣಬಹುದಾದ ಸ್ಥಳಗಳಿವೆ. ಕಾರವಾರ, ಅಂಕೋಲೆಯ ಬೇಲಿಕೇರಿ, ಬಂಕೀಕೊಡಲ— ಗೋಕರ್ಣ, ಶಿರಾಲಿ— ಭಟ್ಕಳ ಹಂಗಾರಕಟ್ಟೆ, ತೋನ್ಸೆಪಾರ್—ಮಲ್ಪೆ, ಸುರತ್ಕಲ್, ಮಂಜೇಶ್ವರ—ಇವನ್ನು ಮಾತ್ರ ಮಾದರಿಗಾಗಿ ಹೆಸರಿಸಿದ್ದೇನೆ. ಇವುಗಳಲ್ಲಿ ಕೆಲವಕ್ಕೆ ಹೋಗುವ ದಾರಿಗಳು ಕೂಡ ಇಲ್ಲ. ಇದ್ದ ದಾರಿಗಳು ಸಮನಾಗಿಲ್ಲ. ಕಾರವಾರ ಒಳ್ಳೆಯ ಮರಳುದಂಡೆಯುಳ್ಳ ಊರು. ಬಳಿಯಲ್ಲಿ ದ್ವೀಪಗಳುಳ್ಳ ತೀರ ಹತ್ತಿರದಲ್ಲಿ ಉನ್ನತ ಪರ್ವತಾ



ಹಂಪೆಯ
ವಿಜಯವಿಠ್ಠಲನ
ದೇವಾಲಯ

ವಳಿಯುಳ್ಳ — ಒಂದು ಸೌಂದರ್ಯ ಸ್ಥಾನ. ಇಂಥಲ್ಲಿ ಹತ್ತೆಂಟು ಬಿದಿರುಮಡಲುಗಳ ವ್ಯವಸ್ಥಿತ ಗುಡಿಸಲುಗಳನ್ನಾದರೂ ಕಟ್ಟಬೇಕು. ಸರಕಾರವೇ-ರೆಸ್ಟೊರಾಂಟ್-ಅನುಕೂಲತೆ ಕಲ್ಪಿಸಬೇಕು. ಮುಂದೆ ಜನರು ಆ ಕೆಲಸಕ್ಕೆ ತಾವಾಗಿ ಬರುವ ಕಾಲ ಒದಗುತ್ತದೆ. ಇಂಥಲ್ಲಿ—ಗುತ್ತಿಗೆಯ ವ್ಯವಹಾರ ಇರಬಾರದು, ಸ್ಪರ್ಧೆಯ ಸೇವೆಯ ಏರ್ಪಾಟುಬೇಕು. ಈಜಾಟ, ನೌಕಾಯಾನಗಳಿಗೆ ಅನುಕೂಲತೆ ಒದಗಿಸಬೇಕು. ಈಜಾಡುವ ಸ್ಥಳಗಳಲ್ಲೆಲ್ಲ, ಆಪತ್ತಿನಲ್ಲಿ ಜೀವರಕ್ಷಣೆ ಮಾಡುವ life guardsಗಳನ್ನು ನೇಮಕ ಮಾಡಬೇಕು.

ಬೇಲಿಕೇರಿ ಎಂಬುದು ಅಂಕೋಲೆಯ ರೇವು; ಅದು ನದಿ, ಸಮುದ್ರ, ದ್ವೀಪ, ಪರ್ವತಗಳುಳ್ಳ—ಅತ್ಯಂತ ಮನೋಹರವಾದ ತಾವು. ಪ್ರವಾಸಿಗಳು ಇಳಿದುಕೊಳ್ಳುವುದಕ್ಕೆ ನೂರಿನ್ನೂರು ಎಕರೆ ವಿಶಾಲವಾದ ಒಂದು ಮೊರಡಿ ಇದೆ. ಅಲ್ಲಿರುವುದು ಒಂದು ಬಂಗ್ಲೆ ಮಾತ್ರ. ಊರಲ್ಲಿ ಒಂದು ಕಪ್ ಚೆನ್ನಾದ ಚಹಾ ಸಿಗಲಾರದಂಥ ಇಂಥ ಸ್ಥಳದಲ್ಲಿ ನಾವು ಯೋಗ್ಯ ಅನುಕೂಲತೆಯನ್ನು ಕಲ್ಪಿಸಿದ್ದಾದರೆ, ಸಾರ್ವದೇಶದ ಚೆಲುವನ್ನು ಜನರು ಇಲ್ಲಿ ಕಾಣಬಹುದು.

ಬಂಕಿಕೊಡ್ಲದಿಂದ ಗೋಕರ್ಣದ ತನಕ ಮರಳುಹಾಸಿದ ಉತ್ತಮ ಕಡಲ ದಂಡೆಯಿದೆ. ಇಂಥಲ್ಲಿ ಅತ್ಯುತ್ತಮ ಅನುಕೂಲತೆಗಳನ್ನೂ ಕುಟೀರ ರಚನೆ, ಮತ್ತು ಆಹಾರ ಸೌಕರ್ಯಗಳನ್ನೊದಗಿಸುವುದರ ಮೂಲಕ ಪ್ರವಾಸಿಯ ಕೇಂದ್ರವನ್ನಾಗಿ ಮಾಡಬಹುದು. ಶಿರಾಲಿಯಲ್ಲಿ ವೆಂಕಟಾಪುರ ಹೊಳೆಯು ಕಡಲನ್ನು ಕೂಡುವಲ್ಲಿಂದ—ಭಟ್ಕಳದ ರೇವಿನ ತನಕ, ವಿಹಾರಯೋಗ್ಯವಾದ ವಿವಿಧ ಸೊಬಗುಳ್ಳ ಕಡಲುದಂಡೆಯಿದೆ. ಅಲ್ಲಿಂದ ಎರಡು ಮೂರು ಮೈಲುಗಳೊಳಕ್ಕೆ ವನಭರಿತವಾದ ಒಂದು ನಡುಗಡ್ಡೆ ಸಮುದ್ರದಲ್ಲಿದೆ. ಹತ್ತು ವರ್ಷಗಳಿಗೊಮ್ಮೆ ಒಬ್ಬಾತ ಅಲ್ಲಿಗೆ ಹೋಗಿ ಬರುವವನಿಲ್ಲ. ಭಟ್ಕಳದ ರೇವಿನ ಬಳಿ ವಸತಿಗೃಹಗಳನ್ನೇ ಕಟ್ಟಿಸಲು ಬೇಕಷ್ಟು ತಾವು ಇದೆ.

ಹಂಗಾರಕಟ್ಟೆ — ಕೋಡಿಯಿಂದ ದಕ್ಷಿಣಕ್ಕೆ ಮಲ್ಪೆಯ ಬಂದರದ ತನಕವೂ ಇರುವ ತಾವು ಇನ್ನೊಂದು ನಂದನವನ. ಇಲ್ಲಿ ಒಂದು ಕಡೆ ನದಿ, ಮತ್ತೊಂದು ಕಡೆ ಸಮುದ್ರವಿರುವುದರಿಂದ, ದೋಣಿಯಾಟ ಈಜಾಟಗಳಿಗೆ — ಅನುಕೂಲ ಮಾಡಿಕೊಡಬಹುದು. ನಡುವೆ 'ತೋನ್ಸೆಪಾರಿ'ಗೆ ಇರುವ ಒಂದು ಮೈಲು ಸಮುದ್ರ ದೂರಕ್ಕೆ ಮೋಟರ್ ಲಾಂಚನ್ನು ಇರಿಸಿದ್ದಾದರೆ, ಸಾವಿರಾರು ಜನ ಹೋಗಿ ಬರಬಹುದಾದ ತಾವು ಆ ದ್ವೀಪ 'ಸೈಂಟ್ ಮೇರಿ ದ್ವೀಪ' ಎಂಬ ಪರ್ಯಾಯವಾದ ಹೆಸರು ಇದಕ್ಕಿದೆ. ಇಲ್ಲಿನ ನಿಸರ್ಗವೇ ಬೇರೆ ತೆರನದ್ದು. ಪ್ರಪಂಚದ ಎರಡು ಮೂರು ಕಡೆಗಳಲ್ಲಿ ಮಾತ್ರವೇ ಇರತಕ್ಕ 'ಬಾಸಾಲ್ಟ್' ಶಿಲೆಗಳ ಸ್ತಂಭಗಳಿಂದಾಗಿ ಇದು ಪ್ರಕೃತಿಯ ಒಂದು ದೇವಾಲಯದಂತಿದೆ. ಮಲ್ಪೆಗೆ ಸಮೀಪವಾಗಿ 'ದರಿಯಾ ಬಹದ್ದೂರ್ ಗಡ'ವಂತೂ ಇದ್ದೇ ಇದೆ. ಮಲ್ಪೆ ಒಂದು ಹೆಸರಾದ ರೇವಾದರು ಕೂಡ, ಒಂದು ದಿನ ಇಲ್ಲಿಯೇ ಇರಬೇಕೆಂಬವನಿಗೆ ನಿವಾಸದ ಅನುಕೂಲತೆ ಇಲ್ಲ, ಊಟದ ಅನುಕೂಲತೆ ಮೊದಲೇ ಇಲ್ಲ. ತೋನ್ಸೆಯಿಂದ ನಾವು ಕಡಲನ್ನು ಸೇರಬಹುದಾದಂತೆ, ನದಿಯ ಮೂಲಕ ಬಾರ್ಕೂರು, ಬೆರಡೂರು ಮೊದಲಾದ ಕಡೆಗಳಿಗೆ ನಿಸರ್ಗದ ಚೆಲುವನ್ನು ನೋಡುತ್ತ ದೋಣಿಯ ಪಯಣ ಮಾಡಬಹುದು.

ಸುರತ್ಕಲ್ ಮಂಜೇಶ್ವರದಂಥ ಕಡಲದಂಡೆಗಳು ಒಳ್ಳೆಯ ವಿಹಾರಕ್ಷೇತ್ರಗಳಾಗಬಲ್ಲವು.

## ಒಳನಾಡಿನ ನಿಸರ್ಗಸುಂದರ ಪ್ರದೇಶಗಳು

ಈಗ ಕರ್ನಾಟಕದ ಒಳನಾಡಿನ, ಕಣ್ಣಿಗೆ ವಿಶೇಷವಾಗಿ ಬೀಳದಿರುವ; ಕೆಲವೊಂದು ನಿಸರ್ಗ ಸುಂದರ ಪ್ರದೇಶಗಳನ್ನು ಕುರಿತು ವಿಚಾರ ಮಾಡುವ. ಜೋಗು ಜಲಪಾತದಷ್ಟು ಭವ್ಯವಲ್ಲದಿದ್ದರೂ — ಸಾಕಷ್ಟು ಮನೋಮೋಹಕವಾದ ಹತ್ತಾರು ಜಲಪಾತಗಳು ಪಶ್ಚಿಮ ಘಟ್ಟವೊಂದರಲ್ಲಿಯೆ ಇವೆ. ಅರಣ್ಯಪ್ರದೇಶದಲ್ಲಿ ಇರುವ ಇಂಥ ಸ್ಥಳಗಳಿಗೆ ಹೋಗಬಹುದಾದ ಕಾಲುದಾರಿಯೂ ಇಲ್ಲದಿರುವಂಥ ಸ್ಥಿತಿ ಇಂದಿನದು. ದಾಂಡೇಲಿಯ ಸಮೀಪದಲ್ಲಿ ಅಘನಾಶಿನಿ ಅಬ್ಬಿಯಾಗಿ ಕೆಳಗೆ ದುಮುಕುತ್ತದೆ.

ಸಿದ್ಧಾಪುರಕ್ಕೆ ಪಶ್ಚಿಮದಲ್ಲಿ ಸುಮಾರು ೩೦೦ ಅಡಿ ದುಮುಕುವ ಲೆಸಿಂಗ್ಟನ್ ಜಲಪಾತವಿದೆ. ಕುಟಚಾದ್ರಿ ಪರ್ವತದಿಂದ ನಾಲ್ಕೆಂಟು ಮೈಲು ಪೂರ್ವಕ್ಕೆ ಇನ್ನೊಂದು ಐನೂರು ಆರುನೂರಡಿ ಆಳಕ್ಕೆ ದುಮುಕುವ ಚೆಲುವಿನ ಜಲಪಾತವಿದೆ. ಇದರ ಬಳಿಗೆ ಹೋಗುವ ಸಮನಾದ ಗಾಡಿದಾರಿಗಳು ಇಲ್ಲ. ಕಡಲ ಕರಾವಳಿಯಿಂದಲೇ ಕಾಣುವ ಶಿರೂರಿನ ಮೂಡಣಕ್ಕಿರುವ 'ಗಂಗಾನಾಡು ಜಲ

ಪಾತ' ವರ್ಷದ ಎಂಟು ತಿಂಗಳಲ್ಲಿ ನೀರುಳ್ಳದ್ದಾಗಿದೆ. ನಾನೊಮ್ಮೆ ಅದರ ಬಳಿಗೆ ಹೋಗುವ ಸಾಹಸಮಾಡಿದ್ದೆ. ಅತಿ ಸಮೀಪವೆಂದರೆ ನಾಲ್ಕು ಮೈಲುದೂರದ ಕಾಡೊಂದರಲ್ಲಿ, ನಡು ಮುಟ್ಟುವ ಹುಲ್ಲಿನ ಎಡೆಯಲ್ಲಿ ನಿಂತು ಅರ್ಧ ಗಂಟೆ ಕಾಲ ಕಳೆಯುವುದಕ್ಕೆ ಸಾಕುಬೇಕಾಯಿತು. ಹೊಸಂಗಡಿ ಘಟ್ಟದಲ್ಲಿ ಇನ್ನೊಂದು ಜಲಪಾತವಿದೆ. ಸೋಮೇಶ್ವರದ ಬಳಿಯಲ್ಲಿ ಬಿನಕೆ ಅಬ್ಬಿ ಇದೆ. ಸಕ್ಲೇಶಪುರ ತಾಲೂಕಿಂದ ಹೊರಡುವ ಕೆಂಪನ ಹಳ್ಳವು ಎರಡು ಮೂರು ಕಡೆ ಬಹು ಮನೋಹರವಾದ ನೋಟ ಕೊಡಬಲ್ಲದು. ಇಲ್ಲಿ ಅಗಾಧವಾದ ಕೊರಕಲುಗಳಿವೆ. ಕೊಡಗಿನಲ್ಲಿ ಬಾರಾಪೊಳೆ ಇದೆ. ಇವಲ್ಲದೆ ನನ್ನ ಗಮನಕ್ಕೆ ಬಂದಿರಲಾರದ ಹತ್ತೆಂಟು ಜಲಪಾತಗಳಾದರೂ ಇದ್ದೇ ತೀರಬೇಕು. ಇಂಥಲ್ಲಿಗೆ ಜನರು ಹೋಗಬೇಕು ಹೇಗೆ ? ಇರಬೇಕು ಹೇಗೆ ?

ಬೇಸಗೆಯಲ್ಲಿ ಜನಗಳು ಹಿತೋಷ್ಣವಾದ ಹವೆಯನ್ನರಸಿ ಎತ್ತರವಾದ ನಿಸರ್ಗಸುಂದರ ತಾವುಗಳನ್ನು ಬಯಸಿ ಹೋಗುವುದುಂಟು. ಸರಾಸರಿ ಎರಡು ಮೂರುಸಾವಿರ ಅಡಿ ಎತ್ತರವಾದ ಪಶ್ಚಿಮ ಘಟ್ಟದ ಶ್ರೇಣಿಯಲ್ಲಿ ನಾಲ್ಕರಿಂದ ಆರು ಸಾವಿರ ಅಡಿಗಳಷ್ಟು ತನಕ ಉನ್ನತವಾದ ಕೆಲವು ಶಿಖರಗಳಿವೆ. ಪುಷ್ಪಗಿರಿ, ಬಳ್ಳಾಲ ರಾಜನ ದುರ್ಗ, ಹಿರಿಮರಿಗುಪ್ಪೆ, ಕುದುರೆಮುಖ, ಕುಟಚಾದ್ರಿ ಇಷ್ಟು ನನಗೆ ತಿಳಿದಂತೆ ಭವ್ಯವಾಗಿ ಕಾಣಿಸುತ್ತಿರುವ ಶೃಂಗಗಳು. ಹಿಂದೆ ಕುಟಚಾದ್ರಿ ಮತ್ತು ಕುದುರೆಮುಖಗಳಿಗೆ ಕುದುರೆಯ ದಾರಿಯೂ ಇತ್ತು. ಅಲ್ಲಿ ವಾಸದ ಮನೆಗಳೂ ಇದ್ದವು. ನಮ್ಮ ಉದಾಸೀನತೆಯಿಂದ ಅವುಗಳೆಲ್ಲ ನೆಲಸಮವಾಗಿ, ಈ ಸ್ಥಳಗಳು ಇಂದು ಪ್ರವಾಸಿಯ ಎಟುಕಿನಿಂದ ದೂರವಾಗಿವೆ. ನಾಗೋಡಿಯ ರಸ್ತೆಯ ಎಟುಕಿಗೆ ಸಿಗುವ ಕುಟಚಾದ್ರಿ ಶಿಖರಕ್ಕೆ ಮನಸ್ಸಿದ್ದರೆ ಐದಾರು ಮೈಲುಗಳ ಮೋಟರ್ ದಾರಿಯನ್ನು ಕಲ್ಪಿಸಬಹುದು. ಕೆಮ್ಮಣ್ಣು ಗುಂಡಿಯನ್ನೋ, ನಂದಿಯನ್ನೋ ಮೀರಿಸುವಂಥ ಆರೋಗ್ಯಧಾಮವನ್ನು ಇಲ್ಲಿ ನಿರ್ಮಿಸಬಹುದು. ನಾನು ಹೇಳಿದ ಈ ಎಲ್ಲ ಸ್ಥಳಗಳೂ ಅಂಥವೇ. ಉತ್ತರ ಕನ್ನಡ ಜಿಲ್ಲೆಯಲ್ಲಿ ಐತಿಹಾಸಿಕ ಪ್ರಸಿದ್ಧಿಯ ಪಶ್ಚಿಮ ಘಟ್ಟದ ಶಿಖರವಾದ ಗೋವರ್ಧನ ಗಿರಿಯಿದೆ. ಅದರ ಹೆಸರು ಇಂದು ಎಷ್ಟು ಜನಕ್ಕೆ ತಿಳಿದಿದೆ ? ಆಗುಂಬೆ, ಕೊಟ್ಟಿಗೆಹಾರ ಅದರಂತೆ ಉ. ಕನ್ನಡ ಜಿಲ್ಲೆಯ ಘಟ್ಟದ ಮೇಲಿನ ನಾಲ್ಕಾರು ಕಡೆಗಳು—ಪರ್ವತಾರಾಮಗಳಾಗಬಲ್ಲವು. ಕಾಳಿ ನದಿಯ ದಂಡೆಗಳು ಪುರಾತನ ಗೇರಸೊಪ್ಪೆಯಂಥ ಊರು, ವನ, ನದಿ, ಐತಿಹಾಸಿಕ ಅವಶೇಷಗಳಿಂದ ಕೂಡಿದ ನಯನಮನೋಹರವಾದ ವಿಲಾಸವಾದ ತಾವು. ಡೋಣಿಯಿಂದ ಆ ಸ್ಥಳಗಳಿಗೆ ಹೋಗುವುದೆಂದರೆ ಸಂತೋಷದ ಹಬ್ಬವಾದೀತು. ಇಂಥ ಒಂದೊಂದು ಮೂಲೆಯಿಂದಲೂ ಆರೆಂಟು ಮೈಲಿನೊಳಗಾಗಿ ಅಷ್ಟೆ ವಿವಿಧ ಚೆಲುವಿನ, ನಾಲ್ಕಾರು ನಿಸರ್ಗದ ಚೆಲುವುಳ್ಳ ಸ್ಥಳಗಳನ್ನು ಆರಿಸಬಹುದು. ಇವನ್ನು ಕೇಂದ್ರ ತಾಣಗಳನ್ನಾಗಿ ಮಾಡಬಹುದು.

## ಚಾರಿತ್ರಿಕ ಸ್ಥಳಗಳು

ಚಾರಿತ್ರಿಕ ಪ್ರಸಿದ್ಧಿಯಿಂದಲೂ ಸಮತುಲ್ಯವಾದ ವಾಸ್ತು ಮತ್ತು ಶಿಲ್ಪಗಳ ಸೊಬಗಿನಿಂದಲೂ ಕೂಡಿರುವ ಹತ್ತೆಂಟು ತಾವುಗಳೂ ಕರ್ನಾಟಕದಲ್ಲಿವೆ. ಪಟ್ಟದಕಲ್ಲು, ಐಹೊಳೆ, ಇಟ್ಟಗಿ, ಲಕ್ಕುಂಡಿ, ಡಂಬಳ, ಹಾನಗಲ್ಲು, ಬಂಕಾಪುರ, ಬನವಾಸಿ—ಇಂಥ ಊರುಗಳಲ್ಲಿ ಏನು ಚೆಲುವು ನೆಲೆಸಿದೆ. ಪುರಾತನ ಶಿಲ್ಪಗಳಲ್ಲಿ ಎಂದು ತಿಳಿಸಿ ತೋರಿಸುವ ಪ್ರಯತ್ನವನ್ನು ಯಾರೂ ಮಾಡಿದಂತೆಯೇ ಇಲ್ಲ. ( ಜನಕ್ಕೆ ಬೇಲೂರು ಹಳೇಬೀಡುಗಳ ಪರಿಚಯವಿದೆ; ಆದರೆ ಅಲ್ಲಿ ಅನುಕೂಲತೆ ಯಾವುದೂ ಇಲ್ಲ. ಸೋಮನಾಥಪುರ ಯಾರೂ ಕೇಳಿಲ್ಲದ ಇನ್ನೊಂದು ತಾವು. )

ಗೇರಸೊಪ್ಪೆ ಇಲ್ಲವೆ ನಗರಬಸ್ತಿಯು ಕೂಡ ಇಂಥ ಒಂದು ಊರು. ಬನವಾಸಿಯ ಹೆಸರನ್ನು ಎಲ್ಲರೂ ಬಲ್ಲರು. ಇದರ ಐದಾರು ಮೈಲಿನೊಳಗಾಗಿ ಬಹುದೊಡ್ಡ ಸರೋವರವಿದೆಯೆಂದು ಎಷ್ಟು ಜನ ಬಲ್ಲರು ? ಇಂಥಲ್ಲಿನ ಪಕ್ಷಿಗಳ ವಲಸೆ, ಸುತ್ತುಮುತ್ತಲಿನ ಕಾಡಿನ ಸೊಬಗು, ವರದಾ ನದಿಯ ಚೆಲುವು, ಬನವಾಸಿಯ ವಾಸ್ತು—ಇಂಥ ಮಿಶ್ರ ಆಕರ್ಷಣೆಗಳು ಸೇರಿವೆ.

ಬಿಟ್ಟನಿಂದ ನೈಸರ್ಗಿಕ ಚೆಲುವಿರಲಿ, ದ. ಕನ್ನಡದ ಕಾರ್ಕಳದಲ್ಲಿರುವಂತೆ ನೈಸರ್ಗಿಕ ಮತ್ತು ವಾಸ್ತುಗಳ ಬೆಡಗಿರಲಿ, ಜತೆಯಲ್ಲಿ ಮೋಟರ್ ಸಾರಿಗೆಯ ಅನುಕೂಲತೆಯೂ ಇರಲಿ—ಇಷ್ಟೆಲ್ಲ ಇದ್ದುದರಿಂದಲೂ ತನ್ನಂತೆಯೇ ಪ್ರವಾಸ ಪ್ರೇಮ ಜನರಲ್ಲಿ ಬೆಳೆಯಬೇಕೆಂದಿಲ್ಲ. ಇಂಥಲ್ಲಿ ಏನೆಲ್ಲ ಚೆಲುವುಗಳಿವೆ—ಎಂಬ ವಿವರವನ್ನು ಜನಕ್ಕೆ ಆಕರ್ಷಕವಾಗಿ ತೋರಿಸುವ ಸಂಸ್ಥೆಗಳು ಬೇಕು. ಅದಲ್ಲದೆ ಕೆಲವೊಂದು ಸಾಹಸಿ ಮೋಟರ್ ಕಂಪೆನಿಯ ಮಾಲಕರಾದರೂ 'ಟೂರಿಸ್ಟ್ ಬಸ್ಸು'ಗಳನ್ನು ಒದಗಿಸಿ ತಾವಾಗಿ ಪ್ರವಾಸಕ್ರಮ ಏರ್ಪಡಿಸಬೇಕು. ಯುರೋಪಿನಲ್ಲಿ ಇನ್‌ಟೂರಿಸ್ಟ್, ಅಮೇರಿಕನ್ ಎಕ್ಸ್‌ಪ್ರೆಸ್, ಥಾಮಸ್ ಕುಕ್—ಇವರಂಥವರು 'ವಾಹನ-ಊಟ-ವಸತಿ' ಇವುಗಳನ್ನೆಲ್ಲ ವಹಿಸಿಕೊಂಡು ಪಯಣ ಏರ್ಪಡಿಸುತ್ತಾರೆ. ಮೋಟರಿನ ಜತೆಯಲ್ಲಿ ಅಡುಗೆ, ಡೇರೆ, ಮೊದಲಾದ ಅನುಕೂಲತೆಗಳನ್ನು ಕೊಡುತ್ತೇವೆಂದು ತಿಳಿಸಿ, ವ್ಯವಸ್ಥಿತ ಪ್ರಚಾರವನ್ನು ನಾವೂ ತೊಡಗಿದರೆ ಖಂಡಿತಕ್ಕೂ ಮಧ್ಯಮ ವರ್ಗದ ಜನರು ಇಂಥ ಪ್ರವಾಸಗಳನ್ನು ಕೈಕೊಂಡಾರು. ಸೌಕರ್ಯವನ್ನು ಕಲ್ಪಿಸಲಾರದೆ, ಕಲ್ಪಿಸುವ ಸೌಕರ್ಯ ಹಿತವಾಗಿರದೆ, ಮಧ್ಯಮ ವರ್ಗದ ಜನರ ಎಟುಕಿಗೂ ಬಾರದೆ ಹೋದರೆ—ನಾವು ಟೂರಿಸಂ ಬೆಳೆಸುತ್ತೇವೆ ಎನ್ನುವ ಮಾತು ಅರ್ಥವಿಲ್ಲದ್ದು. ಬರಿಯ ಅಮೇರಿಕದ ಜನರು ಬಂದು ಹಣ ಕೊಡಬೇಕೆನ್ನುತ್ತೀರಾ ? ದೇಶದ ಜನರೂ ನೋಡಬೇಕೆನ್ನುತ್ತೀರಾ ? ಆಗ್ರಾನಗರಕ್ಕೆ ತಾಜಮಹಲನ್ನು ನೆನೆದುಕೊಂಡು ಹೋದರೆ ಅಥವಾ ಫತ್ತೇಪುರ ಸಿಕ್ರಿಗೆ ಹೋದರೆ—ಎಷ್ಟು ಜನರಿಗೆ ಮಿತಬೆಲೆಯಲ್ಲಿ ಇರುವ ಸೌಕರ್ಯ ಸಿಕ್ಕೀತು ? ಈ ಸ್ಥಳಗಳಂತು ರೈಲುಹಾದಿಗೆ ಸಮೀಪವಾಗಿವೆ. ಜನರು ಬೆಳಗ್ಗೆ ಬಂದು ಸಂಜೆ ಹೋದಾರೆಂದೆನಿಸಿಕೊಳ್ಳಿ. ಪ್ರಸಿದ್ಧ 'ಸಾಂಚಿ' ಯಲ್ಲೇನು ಸೌಕರ್ಯವಿದೆ! ಅತ್ಯದ್ಭುತ ಸ್ಥಳವಾದ 'ಖಜುರಾಹೊ' ಮತ್ತು 'ಕೋನಾರ್ಕ' ಗಳನ್ನು ಎಷ್ಟು ಮಂದಿ ನೋಡಿದ್ದಾರೆ. ಹೋದವನು ಎಲ್ಲಿರಬೇಕು ? ಅನ್ನಕ್ಕೇನು ಮಾಡಬೇಕು ? ಇರುವುದಕ್ಕೇನು ಮಾಡಬೇಕು ? ಅಂಥ ಸ್ಥಳಗಳ ಚಿತ್ರಗಳನ್ನು ರೈಲ್ವೆನಿಲ್ದಾಣಗಳಲ್ಲಿ ಹಚ್ಚಿಬಿಟ್ಟರೆ ನಮ್ಮ ಕೆಲಸವಾಯಿತೇ ?

ಇವು ಪರೋಪಕಾರದ ಕೆಲಸಗಳಾಗಬೇಕಿಲ್ಲ ; ವ್ಯವಸ್ಥಿತವಾಗಿ ನಡೆದರೆ—ಲಾಭ ತರುವ ವ್ಯವಹಾರಗಳಾಗುತ್ತವೆ—ಎಂಬ ನಂಬಿಕೆಯಿಂದ ನಾವು ಈ ಕೆಲಸಕ್ಕೆ ತೊಡಗಬೇಕು.



ಕುಟಚಾದ್ರಿ ಬೆಟ್ಟ

ಕನ್ನಡದಲ್ಲಿ

# ಪ್ರಕಟನೋದ್ಯಮ ಅಥವಾ ಪ್ರಕಾಶನ

ಲೇಖಕರು : ಶ್ರೀ ಕೂಡಲಿ ಚಿದಂಬರಂ, ' ಕಾವ್ಯಾಲಯ ' ಮೈಸೂರು

ಕನ್ನಡದಲ್ಲಿ ಗ್ರಂಥಗಳ ಪ್ರಕಟನೆ ಹೆಚ್ಚುತ್ತಿದೆ ; ಪ್ರಕಟನೋದ್ಯಮವು ಭರದಿಂದ ಬೆಳೆಯತೊಡಗಿರುವದು. ಆದರೆ ಅದು ಅನೇಕ ತೊಂದರೆಗಳನ್ನು ಕಷ್ಟನಿಷ್ಠುರಗಳನ್ನು ಎದುರಿಸುತ್ತಿರುವದು. ಇವೆಲ್ಲ ದೂರಾಗಬೇಕಾದರೆ ಈ ಉದ್ಯಮದಲ್ಲಿ ಒಂದು ವ್ಯವಸ್ಥೆ ಬೇಕು, ಸಂಘಟನೆ ಬೇಕು. ಯಾವ ದಿಶೆಯಲ್ಲಿ ಈ ಕಾರ್ಯ ನಡೆಯಬೇಕಾಗಿದೆಂಬುದನ್ನು ಲೇಖಕರು ಇಲ್ಲಿ ವಿವರಿಸಿರುವರು.

೧

'ಪ್ರಕಟನ ಕರ್ತ' ಮತ್ತು 'ಪ್ರಕಾಶನ' ಎಂಬ ಪದಗಳನ್ನು ನಾವು ಇಂಗ್ಲಿಷಿನ ' Publisher ' ಮತ್ತು Publishing ಎಂಬ ಪದಗಳಿಗೆ ಸಮಾನಾರ್ಥಕಗಳನ್ನಾಗಿ ಉಪಯೋಗಿಸುತ್ತೇವೆ. ಪುಸ್ತಕ, ಪಂಚಾಂಗ, ಕೈಪಿಡಿ, ಕ್ಯಾಟಲಾಗು, ಪತ್ರಿಕೆ (ದಿನಪತ್ರಿಕೆ, ಮಾಸಪತ್ರಿಕೆ ಇತ್ಯಾದಿ) ಇವೇ ಮೊದಲಾದವುಗಳನ್ನು ಪ್ರಕಟಿಸುವವರೆಲ್ಲ ಪ್ರಕಾಶಕರು. ಆದರೂ 'ಪ್ರಕಟನಕಾರ ' ಅಥವಾ 'ಪ್ರಕಾಶಕ' ಎಂದರೆ ಗ್ರಂಥಪ್ರಕಾಶಕನೆಂದೇ ರೂಢಿಯಲ್ಲಿ ಅರ್ಥ. ಪ್ರಕಟನೆಗೆ ಸಂಬಂಧಪಟ್ಟ ಉದ್ಯೋಗ ಪ್ರಕಟನೋದ್ಯಮ ಅಥವಾ ಪ್ರಕಾಶನ ಕೃತಿಗಳನ್ನು ಪರೀಕ್ಷಿಸಿ, ಪುಸ್ತಕರೂಪದಲ್ಲಿ ಅಚ್ಚು ಮಾಡಿಸಿ, ಅವು ಸಾರ್ವಜನಿಕರಿಗೆ ಬೆಲೆಗೆ ದೊರೆಯುವಂತೆ ಮಾಡುವುದು ಪ್ರಕಾಶಕನ ಕೆಲಸ.

೨

ಆಧುನಿಕ ಯಂತ್ರ ನಾಗರಿಕತೆಯ ಪರಿಣಾಮವಾಗಿ ಪ್ರಕಟನೋದ್ಯೋಗ ಹುಟ್ಟಿತು. ಅದರ ಚರಿತ್ರೆ, ಅದ್ದರಿಂದ, ವಿಶೇಷವಾಗಿ ಇತ್ತೀಚಿನ ೨೦೦-೩೦೦ ವರ್ಷಗಳಿಗೆ ಸೇರಿದ್ದು. ಕ್ರೈಸ್ತಮತ ಪ್ರಚಾರಕ್ಕಾಗಿ ಸ್ಥಾಪಿತವಾದ ಮಿಶನರಿ ಸಂಸ್ಥೆಗಳು ನಮ್ಮ ನಾಡಿನ ಮೊದಲ ಪ್ರಕಾಶಕರು. ಮೊದಮೊದಲು ಪ್ರಕಟವಾದ ಪುಸ್ತಕಗಳು ಸಹಜವಾಗಿ ಕ್ರೈಸ್ತ ಧರ್ಮದ ಮತಗ್ರಂಥಗಳು. ಕಾಲಕ್ರಮದಲ್ಲಿ, ನಮ್ಮ ಭಾಷಾಸಾಹಿತ್ಯಗಳ ಪರಿಚಯವನ್ನು ಹೊಂದಿದ ಮಿಶನರಿಗಳಲ್ಲಿ ಕೆಲವರು ನಮ್ಮ ಹಿಂದಿನ ಕವಿಗಳ ಗ್ರಂಥಗಳಲ್ಲಿ ಕೆಲವನ್ನು ಸಂಪಾದಿಸಿ ಪ್ರಕಟಿಸಿದರು. ದೇಶೀಯರಲ್ಲಿ ಪ್ರಕಟನೆಗೆ ಮೊದಲು ತೊಡಗಿದವರು ಪ್ರಾಯಶಃ ಶೆಟ್ಟರು. ಅವರು ತಮ್ಮ " ಸ್ವಕೀಯ ಮುದ್ರಾಕ್ಷರ ಶಾಲೆ " ಗಳಲ್ಲಿ ಕುಮಾರವ್ಯಾಸ ಭಾರತ, ಜೈಮಿನಿ ಭಾರತ ಮೊದಲಾದ ಕೆಲವು ಪ್ರಚಲಿತ ಕಾವ್ಯಗಳನ್ನೂ, ಶೃಂಗಾರ ಶುಕಸಪ್ತತಿ, ಅರೇಬಿಯನ್ ನೈಟ್ಸ್ ಕಥೆಗಳು ಮುಂತಾದ ಹಲವು ಜನಪ್ರಿಯ ವಚನ ಗ್ರಂಥಗಳನ್ನೂ ಪ್ರಕಟಿಸಿದರು. ವಾಣೀವಿಲಾಸ ಭಾರತಾದಿ ಗ್ರಂಥಗಳು ರಾಜಾಶ್ರಯದ ಮೂಲಕ ಪ್ರಸಿದ್ಧವಾದವು. ಆದರೆ ಈ ಶತಮಾನದ ಆದಿ ಭಾಗದಲ್ಲೂ ಅದಕ್ಕೆ ಕೊಂಚ ಮೊದಲೂ ಗ್ರಂಥ ರಚನೆಯಲ್ಲಿ ತೊಡಗಿದ ಲೇಖಕರು ತಂತಮ್ಮ ಗ್ರಂಥಗಳನ್ನು ಪ್ರಾಯಶಃ ತಾವೇ ಪ್ರಕಟಿಸುತ್ತಿದ್ದರು. ಅವರ ಸಹಾಯಕ್ಕೆ ಬರುವ ಪ್ರಕಟನಕಾರರು ಆಗಿನ ಕಾಲದಲ್ಲಿ ಇರಲಿಲ್ಲ. ಆರ್. ರಘುನಾಥರಾಯರು, ಬಿ. ವೆಂಕಟಾಚಾರ್ಯರು, ಗಳಗನಾಥರು, ಪುಟ್ಟಣ್ಣನವರು, ಇವರೇ ಮೊದಲಾದವರು ತಮ್ಮ ತಮ್ಮ ಕೃತಿಗಳ ಮುದ್ರಣ ಪ್ರಕಟನ ವ್ಯಾಪಾರ ವ್ಯವಸ್ಥೆಗಳನ್ನು ತಾವೆ ನಿರ್ವಹಿಸಿದರು.

ಸ್ವಲ್ಪ ಇತ್ತೀಚಿನಕಾಲದಲ್ಲಿ ಕೂಡ ಡಿ. ವಿ. ಜಿ. ಯವರೂ ಶ್ರೀನಿವಾಸರೂ ಇತರ ಕೆಲವು ಲೇಖಕರೂ ತಮ್ಮ ಬರಹಗಳ ಪ್ರಕಾಶನಕ್ಕಾಗಿ ತಾವೇ ಶ್ರಮಪಟ್ಟದ್ದಾರೆ. ೧೯೨೫ರ ಸುಮಾರಿನಿಂದ ಈ ಪರಿಸ್ಥಿತಿ ಬದಲಾವಣೆ ಹೊಂದುತ್ತ ಬಂದಿದೆಯೆನ್ನಬಹುದು. ಆಗ ಕನ್ನಡದಲ್ಲಿ ನೂತನೋತ್ಸಾಹವೊಂದು ತಲೆದೋರಲಾರಂಭಿಸಿತು. ನವಚೈತನ್ಯದಿಂದ ಕೂಡಿದ ಹಲವು ಮಂದಿ ಲೇಖಕರು ಸಾಹಿತ್ಯಕ್ಷೇತ್ರದಲ್ಲಿ ಪದಾರ್ಪಣ ಮಾಡಿದರು. ಕರ್ನಾಟಕ ಸಂಘಗಳೂ ಸಾಹಿತ್ಯ ಸಂಘಗಳೂ ಕೆಲಸ ಮಾಡಲಾರಂಭಿಸಿದವು. ಸಾಹಿತ್ಯಪ್ರಿಯರಾದ ನೂತನ ಪ್ರಕಾಶಕರು ಕಾಣಿಸಿಕೊಂಡರು. ೧೯೨೫ರಿಂದ ೧೯೪೧ರ ವರೆಗಿನ ಅವಧಿ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲೂ ಗ್ರಂಥಪ್ರಕಾಶನದಲ್ಲೂ ಗಮನಾರ್ಹವಾದ ಕಾಲ. ವಿದ್ವಾಂಸರಿಂದ ಮನ್ನಣೆ ಹೊಂದಿ, ಜನಪ್ರಿಯವಾಗಿ ಆಧುನಿಕ ಕನ್ನಡ ಸಾಹಿತ್ಯಕ್ಕೆ ತಳಹದಿಯಾಗಿ, ಹಲವಾರು ಗ್ರಂಥಗಳು ಈ ಅವಧಿಯಲ್ಲಿ ರಚಿತವಾದವು. ಲಾಭಾಕಾಂಕ್ಷೆಗಿಂತಲೂ ಹೆಚ್ಚಾಗಿ ಸೇವಾಮನೋಧರ್ಮದಿಂದ ಪ್ರೇರಿತರಾಗಿ, ಸಾಹಿತ್ಯಾಭಿಮಾನಿಗಳಾದ ಪ್ರಕಾಶಕರು ಗ್ರಂಥಗಳ ಪ್ರಕಟನೆಗಾಗಿ ದುಡಿದರು. ಕನ್ನಡ ಪುಸ್ತಕಗಳಿಗೆ ಗೌರವ ದೊರೆಯಿತು, ಆದರೆ ಮಾರುಕಟ್ಟೆ ಕಂಡು ಬರಲಿಲ್ಲ.

೧೯೪೨ರ ತರುವಾಯ, ಎಂದರೆ ಎರಡನೆಯ ಮಹಾಯುದ್ಧದ ಅವಧಿಯಲ್ಲಿ, ಜನರ ಕೈಯಲ್ಲಿ ಹಣ ಓಡಾಡಲಾರಂಭಿಸಿತು; ಕನ್ನಡ ಪುಸ್ತಕಗಳು ಚಲಿಸತೊಡಗಿದವು. ಹೊಸಬರು ಪ್ರಕಟನ ಪ್ರಪಂಚವನ್ನು ಪ್ರವೇಶಿಸಿದರು. ೧೯೪೭ರ ನಂತರ ಕೆಲವು ಕಾಲ ಹಣದ ಅಡಚಣೆಯಿಂದ ಪುಸ್ತಕ ವ್ಯಾಪಾರದಲ್ಲಿ ನಿರುತ್ಸಾಹ ತೋರಿ ಬಂದಿತಾದರೂ ೧೯೫೨ರ ಸುಮಾರಿನಿಂದ ಪ್ರಕಟನೋದ್ಯಮವು ವ್ಯಾಪಾರಪಥದಲ್ಲಿ ಕಾಲಿಡಲಾರಂಭಿಸಿದೆ. ಮೇಲಿನ ವಿವರಣೆ ಕನ್ನಡ ಪ್ರಕಟನಚರಿತ್ರೆಯ ಅತಿ ಸ್ಥೂಲವಾದ ಒಂದು ರೂಪರೇಖೆ.

೩

ಈಗ ಕನ್ನಡನಾಡಿನಲ್ಲಿ ಹಲವರು ಪ್ರಕಾಶಕ* ರಿದ್ದಾರೆ. ಅವರ ಕಾರ್ಯರೀತಿ ಒಬ್ಬೊಬ್ಬರದು ಒಂದೊಂದು ಬಗೆ, ವ್ಯಾಪಾರನೀತಿ ಒಂದೊಂದು ತೆರ. ಪ್ರಕಾಶಕನ ಅಭಿರುಚಿಗೆ ಅನುಸಾರವಾಗಿ, ವ್ಯಕ್ತಿತ್ವಕ್ಕೆ ಅನುಗುಣವಾಗಿ ಅವನ ಸಂಸ್ಥೆಯಿಂದ ಗ್ರಂಥಗಳು ಪ್ರಕಟವಾಗುತ್ತವೆ ಎಂದು ಸಾಮಾನ್ಯವಾಗಿ ಹೇಳಬಹುದು. ಪುಸ್ತಕಗಳ ಅಚ್ಚುಕಟ್ಟಿನಲ್ಲಿ ಸಂಸ್ಥೆ ಸಂಸ್ಥೆಗೆ ವ್ಯತ್ಯಾಸ ತೋರುವುದೂ ಸಹಜ. ಬೇರೆ ಬೇರೆ ಪ್ರಕಾಶಕರ ಕಾರ್ಯ ವಿಧಾನಗಳೂ ನೀತಿಯೂ ಬೇರೆ ಬೇರೆಯಾದರೂ ಅವರೆಲ್ಲರ ಕಾರ್ಯಕ್ಷೇತ್ರ ಒಂದೇ, ಗುರಿ ಒಂದೇ : ಹಸ್ತಪ್ರತಿಗಳನ್ನು ಸಂಪಾದಿಸುವುದು, ಪರೀಕ್ಷಿಸುವುದು, ಗ್ರಂಥಕರ್ತರೊಡನೆ ಒಪ್ಪಂದಕ್ಕೆ ಬರುವುದು, ಸ್ವೀಕೃತ ಹಸ್ತಪ್ರತಿಗಳನ್ನು ಪುಸ್ತಕರೂಪದಲ್ಲಿ ಮುದ್ರಿಸಿ ಪ್ರಕಟಿಸುವುದು, ಅಚ್ಚಾದ ಗ್ರಂಥಗಳು ಜನರಿಗೆ,— ಮುಖ್ಯವಾಗಿ ಪುಸ್ತಕ ವ್ಯಾಪಾರಿಗಳ ಮೂಲಕ— ಬೆಲೆಗೆ ದೊರೆಯುವಂತೆ ಮಾಡುವುದು,—ಇವು ಪ್ರಕಾಶಕರಿಗೆಲ್ಲ ಸರ್ವ ಸಾಧಾರಣವಾದ ಕರ್ತವ್ಯಗಳು.

ಗ್ರಂಥವನ್ನು ಪ್ರಕಟಿಸುವುದಕ್ಕೆ ಮೊದಲು ಅದನ್ನು ಓದಿ ವಿಮರ್ಶಿಸಿ ಪ್ರಕಟನೆಗೆ ಅರ್ಹವೆ ಅಲ್ಲವೆ ಎಂಬುದನ್ನು ನಿರ್ಧರಿಸಬೇಕಲ್ಲವೆ? ಇದು ಬಹು ಜವಾಬ್ದಾರಿಯ ಕೆಲಸ. ಪ್ರಕಾಶಕನಲ್ಲಿಗೆ ಸಾಧಾರಣವಾಗಿ ನಾನಾ ವಿಷಯಗಳಿಗೆ ಸಂಬಂಧಪಟ್ಟ ಕೃತಿಗಳು ಪ್ರಕಟನೆಗಾಗಿ ಬರುತ್ತವೆ. ಈ ನಾನಾಬಗೆಯ ಗ್ರಂಥಗಳನ್ನು ವಿಮರ್ಶಿಸಲು ಪ್ರಕಾಶಕನು ಸಮರ್ಥನೆ? ಒಬ್ಬ ವ್ಯಕ್ತಿಯೇ ಸಾಹಿತ್ಯವನ್ನೂ ಸಂಗೀತವನ್ನೂ ಅಲಂಕಾರ ಶಾಸ್ತ್ರವನ್ನೂ ಅರ್ಥಶಾಸ್ತ್ರವನ್ನೂ ರಾಜ್ಯ ಶಾಸ್ತ್ರ

* ಈ ಲೇಖನದ ವಿಷಯ ಗ್ರಂಥ ಪ್ರಕಾಶನ ( General publishing ) ; ಅದ್ದರಿಂದ ಇಲ್ಲಿ ಪುಸ್ತಕ ಪ್ರಕಾಶಕರನ್ನೂ ( Educational publishers ) ಪಠ್ಯಪುಸ್ತಕಗಳನ್ನೂ ಕುರಿತು ಬರೆಯುತ್ತಿಲ್ಲ.

ವನ್ನೂ, ತತ್ತ್ವಶಾಸ್ತ್ರವನ್ನೂ ಆಹಾರ ವಿಜ್ಞಾನವನ್ನೂ, ಭೌತ ವಿಜ್ಞಾನ ಶಾಸ್ತ್ರಗಳನ್ನೂ—ಹೀಗೆ ನಾನಾ ಶಾಸ್ತ್ರ ಕಲೆಗಳನ್ನು ಅರಿತು, ತತ್ತತ್ಸಂಬಂಧವಾದ ಗ್ರಂಥಗಳನ್ನು ಪರೀಕ್ಷಿಸಲು ಸಮರ್ಥನಾಗಿರುತ್ತಾನೆಯೆ ಎಂಬ ಶಂಕೆ ತಲೆದೋರುವುದು ಸಹಜ. ಸಮರ್ಥನೊ ಅಸಮರ್ಥನೊ, ಕನ್ನಡ ಪ್ರಕಾಶಕನು ಕಷ್ಟಕರವಾದ ಅಥವಾ ಅಸಾಧ್ಯವಾದ ಈ ಪರೀಕ್ಷಣ ಕೆಲಸವನ್ನು ಸದ್ಯದಲ್ಲಿ ಸ್ವಯಂ ನಿರ್ವಹಿಸುತ್ತಿದಾನೆ. ಇದು ತೀರ ಅಸಮರ್ಪಕವಾದ ಸ್ಥಿತಿ. ಪಾಶ್ಚಾತ್ಯ ದೇಶಗಳಲ್ಲಾದರೆ, ಒಂದೊಂದು ಹಸ್ತಪ್ರತಿಯೂ ಅದರ ಸಾಹಿತ್ಯ ಭಾಗದಲ್ಲಿ ವಿದ್ವಾಂಸನಾದ ಗ್ರಂಥಪರೀಕ್ಷಕ (Reader) ನ ವಿಮರ್ಶೆಗೆ ಒಳಪಡುತ್ತದೆ. ಅನೇಕ ಗ್ರಂಥಗಳು ಪ್ರಕಟನೆಗೆ ಸ್ವೀಕೃತವಾಗುವ ಮೊದಲು ಮೂರು ನಾಲ್ಕು ಮಂದಿ ಪರೀಕ್ಷಕರ ಸಮೀಕ್ಷಣಕ್ಕೆ ಗುರಿಯಾಗಿ ಆಮೇಲೆ ಪ್ರಕಾಶಕನ ಅಥವಾ ಪ್ರಕಾಶಕಸಂಸ್ಥೆಯ ಆಡಳಿತ ವರ್ಗದ ಸಮಾಲೋಚನೆಗೆಬರುತ್ತವೆ ಹೀಗೆಉತ್ತೀರ್ಣವಾಗಿ ಗ್ರಂಥವು ಪ್ರಕಟನೆಗೆ ಸ್ವೀಕೃತವಾಗಬೇಕು. ಗ್ರಂಥ ಶೋಧನೆಯಲ್ಲಿ ನಮ್ಮ ಸಂಸ್ಥೆಗಳಿಗೂ ಪಾಶ್ಚಾತ್ಯ ಪ್ರಕಾಶಕ ಸಂಸ್ಥೆಗಳಿಗೂ ಎಷ್ಟು ವ್ಯತ್ಯಾಸವಿದೆ!

ಈ ಕೊರತೆಯನ್ನು ನಾವು ನೀಗಲಾರವೆ ಎಂದು ಕೇಳಬಹುದು. ಗ್ರಂಥಪ್ರಕಟನ ಯೋಗ್ಯವಾಗಿದೆಯೆ ಇಲ್ಲವೆ ಎಂದು ತಿಳಿಯಲು ಅದನ್ನು ಶೋಧಿಸಿ ನೋಡಬೇಕು. ಶೋಧನೆಗೆ ವೆಚ್ಚ ತಗಲುತ್ತದೆ. ಆ ವೆಚ್ಚ ಪುಸ್ತಕದ ಮೇಲೆ ಬೀಳುತ್ತದೆ; ಎಂದರೆ ಕೊಳ್ಳುವ ಜನ ಅದನ್ನು ಭರಿಸಬೇಕು. ಅವರು ಹಾಗೆ ಭರಿಸುತ್ತಾರೆಯೆ? ಗ್ರಂಥ ಪ್ರಕಟನೆಗೆ ಈಗ ತಗಲುತ್ತಿರುವುದಕ್ಕಿಂತ ಹೆಚ್ಚಿನ ಪ್ರಮಾಣದ ಖರ್ಚುಗಳನ್ನು ಸಹಿಸಲು—ಈಗಿನ ಪುಸ್ತಕ ದರದ ಸಂಬಂಧದಲ್ಲಿ—ಪ್ರಕಾಶಕನಿಗೆ ಸಾಧ್ಯವಿಲ್ಲ; ಈಗಿಗಿಂತ ಹೆಚ್ಚಿನ ವೆಚ್ಚವನ್ನು ಹೊರಲು ಪುಸ್ತಕಕ್ಕೆ ತ್ರಾಣವಿಲ್ಲ, ಎಂದರೆ ಹೆಚ್ಚು ಬೆಲೆಯನ್ನು ಕೊಡಲು ಕೊಳ್ಳುವವರಿಗೆ ಶಕ್ತಿಯಿಲ್ಲ. ಹೀಗೆ ಪ್ರಕಟನೋದ್ಯಮದ ಮೊದಲ ಹಂತದಲ್ಲಿಯೇ ನಮ್ಮಲ್ಲಿ ದಕ್ಷತೆಗೆ ಧಕ್ಕೆ ಬರುವ ಸಂಭವವಿದೆ. ಈ ಬಗೆಯ ಪರಿಸ್ಥಿತಿಯಲ್ಲಿ ಪುಸ್ತಕದ್ಯೋಗ್ಯತೆಯನ್ನು ಕಾಪಾಡಲು ಪ್ರಕಾಶಕನು ವಿಶೇಷ ಶ್ರಮವಹಿಸಬೇಕಾಗುತ್ತದೆ. ಹಸ್ತಪ್ರತಿಯನ್ನು ವಿಮರ್ಶಿಸುವ ಮೊದಲು ಗ್ರಂಥಗಳಿಂದಲೂ ತಿಳಿದವರಿಂದಲೂ ವಿಷಯಗಳನ್ನು ಸಂಗ್ರಹಿಸುವುದು ಅಗತ್ಯವಾಗುತ್ತದೆ.

೪

ಹಸ್ತಪ್ರತಿಯನ್ನು ಪ್ರಕಟನೆಗೆ ಸ್ವೀಕರಿಸಿದ ಮೇಲೆ ಗ್ರಂಥಕರ್ತನೊಡನೆ ಒಪ್ಪಂದ ಮಾಡಿಕೊಳ್ಳುವುದು ಮುಂದಿನ ಹೆಜ್ಜೆ. ೨೫-೩೦ ವರ್ಷಗಳ ಹಿಂದೆ ಕನ್ನಡ ಪುಸ್ತಕಮಾರಾಟದ ವಸ್ತುವೆಂದು ಪರಿಗಣಿತವಾಗಿರಲಿಲ್ಲ. ಆ ಕಾಲದಲ್ಲಿ ಅನೇಕ ಲೇಖಕರು ತಮ್ಮ ಗ್ರಂಥಗಳಿಗೆ ಸಂಭಾವನೆಯನ್ನು ನಿರೀಕ್ಷಿಸುತ್ತಿರಲಿಲ್ಲ. ಗ್ರಂಥವನ್ನು ಬೆಳಕಿಗೆ ತರುವುದೇ ಆಗ ಒಂದು ಉಪಕಾರವಾಗಿತ್ತು. ಇಷ್ಟಮಿತ್ರರಲ್ಲಿ ಉಚಿತವಾಗಿ ಹಂಚಲು ಅಗತ್ಯವಾದ ಪ್ರತಿಗಳನ್ನು ಒದಗಿಸಿದಲ್ಲಿ ಅದರಿಂದ ಲೇಖಕರು ತೃಪ್ತರಾಗುತ್ತಿದ್ದರು. ಒಂದು ಗ್ರಂಥದ ಒಂದು ಸಾವಿರ ಪ್ರತಿ ಖರ್ಚಾಗಲು ಒಂದು ತಲೆಮೊರೆ ಅಥವಾ ಹೆಚ್ಚುಕಾಲ ಹಿಡಿಯುತ್ತಿತ್ತು. ಈ ಸ್ಥಿತಿ ಕ್ರಮೇಣ ಸುಧಾರಿಸಿ ೧೯೪೦ ರ ವೇಳೆಗೆ ಪ್ರಕಟನೆಗಳಿಗೆ ಪ್ರತಿಫಲವಾಗಿ ಸಂಭಾವನೆಯನ್ನು ನಿರೀಕ್ಷಿಸುವುದು ಸಹಜವಾಯಿತು, ಸಾಮಾನ್ಯವಾಯಿತು. ಪ್ರಕಟನೆಯ ಶರತ್ತುಗಳೆಂದರೆ ಈ ಕಾಲದಲ್ಲಿ, ಸಂಭಾವನೆಯನ್ನು ಗೊತ್ತುಪಡಿಸುವುದು ಮಾತ್ರವಾಗಿತ್ತು. ಸಂಭಾವನೆಯ ಪ್ರಮಾಣ ಸಾಮಾನ್ಯವಾಗಿ ಬಾಯಿಮಾತಿನಿಂದ ನಿರ್ಧರವಾಗುವುದು ರೂಢಿಯಾಗಿತ್ತು. ಲೇಖಕ ಪ್ರಕಾಶಕರ ಸಂಖ್ಯೆ ಹೆಚ್ಚಿ ಪುಸ್ತಕ ವ್ಯಾಪಾರ ಬೆಳೆದಂತೆ ಪ್ರಕಾಶನದ ವಿಷಯದಲ್ಲಿ ಜಟಿಲತೆಗಳು ತೋರಿಬಂದು ಲೇಖಕ ಪ್ರಕಾಶಕರ ಬಾಂಧವ್ಯದಲ್ಲಿ ಹೆಚ್ಚಿನ ನಿರ್ದಿಷ್ಟತೆ ಅಪೇಕ್ಷಣೀಯವಾಯಿತು. ಲೇಖಕರು ತಮಗೆ ಪ್ರಕಾಶಕರಿಂದ ದೊರೆಯಬೇಕಾದ ಸಹಾಯ ಸಂಭಾವನೆಗಳನ್ನು ಖಚಿತಪಡಿಸಿಕೊಳ್ಳಲು ಇಷ್ಟಪಟ್ಟರು. ಈಗ್ಗೆ ಐದಾರು ವರ್ಷಗಳ ಕೆಳಗೆ ಕಾದಂಬರಿಯುಗ ಆರಂಭವಾಗುವ ವೇಳೆಗೆ ಲೇಖಕ ಪ್ರಕಾಶಕರ ಸಂಬಂಧ ಲಿಖಿತ ಕರಾರುಗಳ ಮೂಲಕ ಸ್ಪಷ್ಟಗೊಳ್ಳುವುದು ಸರ್ವಸಾಧಾರಣ ಪದ್ಧತಿಯಾಯಿತು.

ಗ್ರಂಥಕಾಣಿಕೆ ಸಾಮಾನ್ಯವಾಗಿ ಗ್ರಂಥದ ಮುಖಬೆಲೆಯ ಶೇಕಡ ಇಷ್ಟೆಂದು ಗೊತ್ತಾಗಿರುತ್ತದೆ. ಶೇಕಡ ೭॥ ಯಿಂದ ೧೫ರ ವರೆಗೆ ಕಾಣಿಕೆಯ ದರ ರೂಢಿಯಲ್ಲಿದೆಯೆನ್ನಬಹುದು.

ತಮ್ಮ ಗ್ರಂಥಕ್ಕೆ ಹೆಚ್ಚಾಗಿ ಗಿರಾಕಿಯುಳ್ಳ ಲೇಖಕರು ಅಥವಾ ಕಾದಂಬರಿಕಾರರು ಗ್ರಂಥದ ಪ್ರಕಟನೆಗೆ ಮೊದಲು ಅಥವಾ ಅದು ಪ್ರಕಟವಾದ ಕೂಡಲೆ ಸಂಭಾವನೆಯ ಹಣವನ್ನು ಪೂರ್ತಿಯಾಗಿ ಅಥವಾ ಎರಡು ಮೂರು ಕಂತುಗಳಲ್ಲಿ ನಿರೀಕ್ಷಿಸುವುದುಂಟು. ಇತರ ಲೇಖಕರ ಸಂಭಾವನೆಯ ಸಂದಾಯದ ಕಾಲ ಲೇಖಕ ಪ್ರಕಾಶಕರ ಅನುಕೂಲ ಅನನುಕೂಲಗಳನ್ನು ಅವಲಂಬಿಸುತ್ತದೆ. ಈ ವಿಷಯದಲ್ಲಿ ಪ್ರಾಯಶಃ ಸರ್ವಸಾಮಾನ್ಯವಾದ ಪದ್ಧತಿ ಯಾವುದೂ ಇಲ್ಲ.

ಮುಂದುವರಿದ ದೇಶಗಳಲ್ಲಿ ಗ್ರಂಥಪ್ರಕಟನೆ ನಷ್ಟಸಂಭವವುಳ್ಳ (Risky) ಉದ್ಯಮವೆಂದು ಪರಿಗಣಿತವಾಗಿದೆ. ಆದ್ದರಿಂದ ಅಲ್ಲಿ ಲೇಖಕರೂ ಪ್ರಕಾಶನದ ನಷ್ಟದಲ್ಲಿ ಪಾಲುಗೊಳ್ಳುವುದುಂಟು.

ಈ ಕಾರಣದಿಂದ ಪಾಶ್ಚಾತ್ಯ ದೇಶಗಳಲ್ಲಿ ಲೇಖಕ ಪ್ರಕಾಶಕರ ಸಂಬಂಧವನ್ನು ಗೊತ್ತುಪಡಿಸುವ ಕರಾರುಗಳು ಮುಖ್ಯವಾಗಿ ಎರಡು ರೀತಿಯವಾಗಿರುತ್ತವೆ. (i) ಪುಸ್ತಕದ ಪ್ರತಿಗಳು ಮಾರಾಟವಾದಂತೆ ವರ್ಷಕ್ಕೊಮ್ಮೆ ಅಥವಾ ಎರಡು ಬಾರಿ ಗ್ರಂಥಕಾಣಿಕೆಯನ್ನು ಸಲ್ಲಿಸುವ ಶರತ್ತುಳ್ಳ ಕರಾರು (Royalty Agreement); (ii) ಪುಸ್ತಕದ ಮಾರಾಟದಿಂದ ಬಂದ ಹಣದಿಂದ ಮೊದಲು ಅದರ ಖರ್ಚು ವೆಚ್ಚಗಳನ್ನೆಲ್ಲ ಪೂರೈಸಿ, ಅನಂತರ ಅದರಿಂದ ಬರುವ ಲಾಭಾಂಶವನ್ನು ವರ್ಷಕ್ಕೊಮ್ಮೆ ಲೇಖಕ ಪ್ರಕಾಶಕರು ಹಂಚಿಕೊಳ್ಳುವ ಶರತ್ತುಳ್ಳ ಕರಾರು (Profit sharing Agreement). ನಮ್ಮಲ್ಲಿ ಲೇಖಕ ಪ್ರಕಾಶಕರ ಸಂಖ್ಯೆ ಹೆಚ್ಚಿ ಪುಸ್ತಕಗಳು ಪ್ರವಾಹ ರೂಪದಲ್ಲಿ ಬರಲಾರಂಭಿಸಿದರೆ ಮೇಲ್ಬಗೆಯ ಕರಾರುಗಳು ನಮ್ಮಲ್ಲಿಯೂ ರೂಢಿಗೆ ಬರುವುದರಲ್ಲಿ ಸಂಶಯವಿಲ್ಲ.

ನಮ್ಮಲ್ಲಿ ಅನೇಕರು ಗ್ರಂಥದ ಒಂದು ಆವೃತ್ತಿಗೆ ಮಾತ್ರ ಅನ್ವಯಿಸುವಂತೆ ಕರಾರನ್ನು ಮಾಡುತ್ತಾರೆ. ಪ್ರಪಂಚದ ಮೇಲೆಲ್ಲ ಇರುವ ಪದ್ಧತಿಯ ಪ್ರಕಾರ ಕರಾರುಗಳು ಗ್ರಂಥದ ಪೂರ್ಣ ಜೀವಾವಧಿಗೆ ಅಂದರೆ ಗ್ರಂಥದ ಕಾಪಿರೈಟಿನ ಪೂರ್ಣ ಅವಧಿಗೆ ಅನ್ವಯವಾಗುವಂತೆ ಏರ್ಪಟ್ಟಿರುತ್ತವೆ. ನಮ್ಮ ದೇಶದಲ್ಲೂ ಕರಾರುಗಳ ಕಾಲವ್ಯಾಪ್ತಿ ಹೆಚ್ಚುವುದು ನ್ಯಾಯಸಮ್ಮತವಾಗಿದೆ.

ಲೇಖಕ ಪ್ರಕಾಶಕರ ಹಕ್ಕು ಬಾಧ್ಯತೆಗಳನ್ನು ಕುರಿತ ಅನೇಕ ವಿವರಾಂಶಗಳನ್ನು ಯೂರೋಪ್ ಅಮೇರಿಕಾ ದೇಶಗಳ ಕರಾರುಗಳಲ್ಲಿ ನಮೂದಾಗಿರುತ್ತವೆ. ಅವುಗಳನ್ನೆಲ್ಲ ಕುರಿತು ಇಲ್ಲಿ ಬರೆಯಲು ಅವಕಾಶ ಸಾಲದು. ಪುಸ್ತಕೋದ್ಯಮ ಬೆಳೆದಂತೆ ಆ ವಿಷಯಗಳು ನಮ್ಮಲ್ಲಿಯ ಕರಾರುಗಳಲ್ಲಿಯೂ ಕಾಣಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ. ಜ್ಞಾನಪ್ರಸಾರದ ದೃಷ್ಟಿಯಿಂದಲೂ ವ್ಯಾಪಾರದ ಬೆಳೆವಣಿಗೆಯ ದೃಷ್ಟಿಯಿಂದಲೂ ಲೇಖಕ ಪ್ರಕಾಶಕರ ಹಿತ ರಕ್ಷಣೆಯ ದೃಷ್ಟಿಯಿಂದಲೂ ಅವು ಕರಾರಿನ ವಿಷಯಗಳಾಗುವುದು ಒಳಿತೆಂದು ಹೇಳಬಹುದು.

*

ಗ್ರಂಥಕರ್ತನೊಡನೆ ಒಪ್ಪಂದಕ್ಕೆ ಬಂದ ಮೇಲೆ ಗ್ರಂಥದ ಪ್ರಕಟನೆಗೆ ವ್ಯವಸ್ಥೆ ಮಾಡುವದು ಮುಂದಿನ ಕೆಲಸ. ಹಸ್ತಪ್ರತಿಯನ್ನು ಮುದ್ರಣಕಾರನಲ್ಲಿಗೆ ಒಯ್ದು ಅದು ಅಚ್ಚಿನಲ್ಲಿ ಎಷ್ಟು ಪುಟಗಳಾಗುತ್ತದೆ ಎಂದು ಅಂದಾಜು ಮಾಡಿಸಬೇಕು. ಪುಸ್ತಕಕ್ಕೆ ಯಾವ ಆಕಾರ ಸೂಕ್ತವಾಗುತ್ತದೆ ಎಂದು ನಿರ್ಧರಿಸಬೇಕು. ಕನ್ನಡದಲ್ಲಿ ಪುಸ್ತಕಗಳು ಸಾಮಾನ್ಯವಾಗಿ ಕ್ರೌನ್ ಅಷ್ಟಪತ್ರಾಕಾರದಲ್ಲಿ, ಅಷ್ಟಡೆಮಿ ಅಷ್ಟಪತ್ರಾಕಾರದಲ್ಲಿ ಹೊರಬೀಳುತ್ತವೆ. ಕ್ರೌನ್ ಆಕಾರ ನಮ್ಮ ಜನಕ್ಕೆ ಹೆಚ್ಚು ಪ್ರಿಯವಾದುದೆಂದು ತೋರುತ್ತದೆ. ಅಪರೂಪವಾಗಿ, ಪುಸ್ತಕಗಳು ಫೂಲ್ಸ್‌ಕ್ಯಾಪ್ ಅಷ್ಟದಳ ಮೊದಲಾದ ಆಕಾರಗಳಲ್ಲಿಯೂ ಕಾಣಿಸಿಕೊಳ್ಳುವುದುಂಟು. ಒಟ್ಟಿನಲ್ಲಿ ಕನ್ನಡ ಪುಸ್ತಕಗಳ ಆಕಾರದಲ್ಲಿ ವೈವಿಧ್ಯವಿಲ್ಲ, ಗ್ರಂಥದ ವಿಷಯಕ್ಕೂ ಅದರ ಆಕಾರಕ್ಕೂ ಒಂದು ಬಗೆಯ ಸಂಬಂಧವಿದೆಯೆಂಬುದನ್ನು ನಮ್ಮಲ್ಲಿ ಅನೇಕರು ತಿಳಿದಂತೆ ಇಲ್ಲ. ಬೇರೆ ಬೇರೆ ಆಕಾರದ ಕಾಗದಗಳು ನಮ್ಮಲ್ಲಿ ದೊರೆಯದಿರುವುದೂ ಇದಕ್ಕೆ ಒಂದು ಕಾರಣವಿರಬಹುದು. ಇಂಗ್ಲಿಷಿನ ಕಾದಂಬರಿ, ಕವಿತಾ ಸಂಗ್ರಹ, ಕಲಾಗ್ರಂಥ, ತತ್ತ್ವಶಾಸ್ತ್ರದ ಅಥವಾ ವಿಜ್ಞಾನ ಶಾಸ್ತ್ರದ ಪುಸ್ತಕ-ಇವುಗಳನ್ನು ಎದುರಿಗಿಟ್ಟರೆ ಅವುಗಳ ಬಾಹ್ಯಾಕಾರ ಮೈಕಟ್ಟುಗಳಲ್ಲಿಯೇ ಒಂದು ಭೇದ ಅಥವಾ ವೈವಿಧ್ಯ ಕಂಡುಬರುತ್ತದೆ. ಕನ್ನಡದಲ್ಲಿ ಸಾಮಾನ್ಯವಾಗಿ ಎಲ್ಲ ಬಗೆಯ ಪುಸ್ತಕಗಳೂ 'ಅಚ್ಚೊತ್ತಿದಂತೆ ಒಂದೇ ಬಗೆ'.

ಆಕಾರವನ್ನು ನಿರ್ಧರಿಸಿದ ಮೇಲೆ ಪುಸ್ತಕಕ್ಕೆ ಬೇಕಾಗುವ ಕಾಗದವನ್ನು ಹುಡುಕಬೇಕು. ಈ ವಿಷಯದಲ್ಲಿಯೂ ನಮ್ಮಲ್ಲಿ ಆಯ್ಕೆಗೆ ಅವಕಾಶ ಸಾಲದು. ಹೊರದೇಶದಿಂದ ಕಾಗದಗಳು ಬರುತ್ತಿದ್ದಾಗ ಬೇರೆ ಬೇರೆ ರೀತಿಯ ಕಾಗದಗಳನ್ನು ಆರಿಸಬಹುದಾಗಿತ್ತು. ಪ್ರಕಾಶಕನ ಅಭಿರುಚಿಗೆ ತಕ್ಕಂತೆ ಕಾಗದವನ್ನು ಅದರ ಆಕಾರ, ರಚನೆ, ದಪ್ಪ, ಬಣ್ಣ, ದರ ಇವುಗಳನ್ನು ಸಮೀಕ್ಷಿಸಿಕೊಳಬಹುದಾಗಿತ್ತು. ಈಗ ದೊರೆಯುವುದು ಸಾಧಾರಣವಾಗಿ ಒಂದು ತೂಕದ ಒಂದು ಬಗೆಯ ಕಾಗದಗಳು ಮಾತ್ರ. ಯಾವ ಆಕಾರವಾದರೆ ಏನು, ಯಾವ ತೂಕವಾದರೇನು, ಸದ್ಯಃ ಪುಸ್ತಕಕ್ಕೊಂದಿಷ್ಟು ಕಾಗದ ದೊರೆಯುತ್ತದಲ್ಲ ಎಂದು ತೃಪ್ತಿಪಟ್ಟುಕೊಳ್ಳಬೇಕು. ದೇಶದ ಅಗತ್ಯಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಕಾಗದ ದೊರೆಯದಿರುವಾಗ ವೈವಿಧ್ಯಕ್ಕೆ ಎಡೆಯಲ್ಲಿ ಬಂತು? ಇಂಥ ಪರಿಸ್ಥಿತಿಯಲ್ಲಿ ಪುಸ್ತಕಗಳನ್ನು ಕಲಾತ್ಮಕವಾಗಿ ತಯಾರಿಸುವುದು ತೀರ ಶ್ರಮಸಾಧ್ಯವೆಂದು ತಿಳಿಸಬೇಕೆ?

ಇನ್ನು ಗ್ರಂಥಕ್ಕೆ ಸೂಕ್ತವಾದ ಟೈಪು (ಮೊಳೆ) ಗಳನ್ನು ಆರಿಸುವ ವಿಚಾರಕ್ಕೆ ಬರುತ್ತಲೆ ನಮ್ಮ ದಟ್ಟ ದಾರಿದ್ರ್ಯ ವ್ಯಕ್ತವಾಗುತ್ತದೆ. ಸ್ಥೂಲವಾಗಿ ಹೇಳುವುದಾದರೆ ಕನ್ನಡದಲ್ಲಿ ಪುಸ್ತಕದ ಕೆಲಸ (book work)ಕ್ಕೆ ಇರುವುದು ಒಂದೇ ಟೈಪು-12 pt. ನ ಟೆಕ್ಸ್ಟ್ ಟೈಪು. ಇದರ ರೂಪದಲ್ಲಿ ಒಂದು ಮುದ್ರಣಾಲಯದ ಮೊಳೆಗೂ ಇನ್ನೊಂದರದಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ, ಅವಳಿ ಮಕ್ಕಳಲ್ಲಿ ಇರುವಂತಹ ಸೂಕ್ಷ್ಮ ವ್ಯತ್ಯಾಸ. ತಲೆ ಬರಹದ ಟೈಪುಗಳು, ದಪ್ಪ ಅಕ್ಷರಗಳು (Antique), ವಕ್ರಾಕ್ಷರಗಳು (Italics) ಇವುಗಳ ಕಥೆ ಬೇರೆಯಾಗಿಲ್ಲ. ಕನ್ನಡದ ಮೊಳೆಗಳಲ್ಲಿ ವೈವಿಧ್ಯವನ್ನು ತರುವ ದಿಶೆಯಲ್ಲಿ, ನೂತನ ಅಂದ ಚಂದಗಳನ್ನು ಸೃಷ್ಟಿಸುವ ದಾರಿಯಲ್ಲಿ ಗಣ್ಯವಾದ ಮತ್ತು ಯಶಸ್ವಿಯಾದ ಪ್ರಯೋಗ ಪ್ರಯತ್ನಗಳು ನಡೆದಿಲ್ಲ. ಒಟ್ಟಿನಲ್ಲಿ, ಯಾವ ಕನ್ನಡ ಪುಸ್ತಕವನು ತೆರೆದರೂ ಒಂದೇ ಬಗೆಯ ಮೊಳೆ ಕಣ್ಣಿಗೆ ಬೀಳುತ್ತದೆ.

ಕಾಗದ ಮುದ್ರಣಗಳ ವ್ಯವಸ್ಥೆಯನ್ನು ಮಾಡುತ್ತಿರುವಾಗಲೆ ಪುಸ್ತಕದ ವಿಷಯಕ್ಕೆ ಅಗತ್ಯವಾದ ಚಿತ್ರಗಳನ್ನು ಬರೆಸುವ ಏರ್ಪಾಟನ್ನೂ ಪ್ರಕಾಶಕನು ಯೋಚಿಸಬೇಕು, ನಮ್ಮಲ್ಲಿ ಚಿತ್ರಕಾರರಿದ್ದಾರೆಯೆ ಎಂದರೆ ಪ್ರೋತ್ಸಾಹವಿಲ್ಲವೆಂದು ಹೇಳುವವರು ಬಹು ಮಂದಿ ಇದ್ದಾರೆ. ಅದು ಸ್ವಲ್ಪ ಮಟ್ಟಿಗೆ ನಿಜ. ಆದರೆ ಗ್ರಂಥದ ವಿಷಯಕ್ಕೆ ಅಥವಾ ಒಂದು ಸನ್ನಿವೇಶಕ್ಕೆ ತಕ್ಕ ಭಾವಯುತವಾದ ಚಿತ್ರವನ್ನು ಬರೆಯಲು ಬಲ್ಲವರು ತೀರ ವಿರಳ. ನಮ್ಮ ಚಿತ್ರಕಾರರಲ್ಲಿ ಬಹು ಮಂದಿಗೆ ಸಾಹಿತ್ಯದ ಗಂಧವಿಲ್ಲ, ಲೇಖಕನ ಆಶಯವನ್ನು ಗ್ರಹಿಸುವ ಸಾಮರ್ಥ್ಯ ಅಥವಾ ಅಭ್ಯಾಸ ಸಾಲದು. ಅಲ್ಲದೆ ಚಿತ್ರಗಳನ್ನು ಸೇರಿಸಿದರೆ ಪುಸ್ತಕದ ಬೆಲೆ ಹೆಚ್ಚುತ್ತದೆ. ಹೆಚ್ಚು ಬೆಲೆಯನ್ನು ಕೊಟ್ಟುಕೊಳ್ಳುವ ಜನ ನಮ್ಮಲ್ಲಿಲ್ಲ. ಹೀಗಾಗಿ ನಮ್ಮ ಮಕ್ಕಳ ಪುಸ್ತಕಗಳು ಕೂಡ ಹೂವಿಲ್ಲದ ಗಿಡಗಳಂತೆ ಚಿತ್ರವಿಹೀನವಾಗಿರುತ್ತವೆ.

ಜೇಬಿನ ಕಾದಂಬರಿಗಳು ಮಾರುಕಟ್ಟೆಯನ್ನು ಪ್ರವೇಶಿಸಿದ ಮೇಲೆ ಪುಸ್ತಕದ ಹೊದಿಕೆಯ ಮೇಲೆ ತ್ರಿವರ್ಣ ಚಿತ್ರವನ್ನು ಹಾಕುವುದು ಕಡ್ಡಾಯವಾದ ರೂಢಿಯಾಗುತ್ತಿದೆ. ಈ ಒಂದು ಚಿತ್ರಕ್ಕಾಗಿ ಖರ್ಚು ಮಾಡುವ ಹಣವನ್ನು ಗಮನಿಸಿದರೆ ಅದರಿಂದ ಯಾವ ಸಾರ್ಥಕ್ಯ ಎಂದು ಕೇಳಬೇಕಾಗುತ್ತದೆ. ಅದರಿಂದ ಪ್ರಕಾಶಕನಿಗೆ ಹೆಚ್ಚಿನ ಖರ್ಚು, ಪುಸ್ತಕಕ್ಕೆ ಹೆಚ್ಚಿನ ಬೆಲೆ, ಕಲೆಗೆ ಮಾತ್ರ

ಯಾವ ಲಾಭವೂ ಇಲ್ಲ. ಆದರೆ ಪುಸ್ತಕದ ಮೇಲೆ ಗಂಡು ಹೆಣ್ಣಿನ ಚಿತ್ರವೊಂದಿದ್ದರೆ ಕೊಳ್ಳುವ ಜನಕ್ಕೇನೊ ತೃಪ್ತಿ.

ಪುಸ್ತಕವೆಲ್ಲ ಅಚ್ಚಾದ ಮೇಲೆ ಹೊದಿಕೆಯನ್ನು ಅಚ್ಚು ಮಾಡಿಸಿ ಬೈಂಡು ಮಾಡಿಸಬೇಕು. ಹೊದಿಕೆ (cover) ಯ ರಚನೆ ಮುದ್ರಣಗಳು ಗಮನವಿಟ್ಟು ಮಾಡಬೇಕಾದ ಕೆಲಸಗಳು. ಸ್ತ್ರೀ ಪುರುಷರಿಗೆ ಉಡುಪು ಹೇಗೊ ಪುಸ್ತಕಕ್ಕೆ ಹೊದಿಕೆ ಹಾಗೆ. ಉತ್ತಮವಾದ, ಆಕರ್ಷಕವಾದ ಹೊದಿಕೆಯಿಂದ ಪುಸ್ತಕದ ಸೌಂದರ್ಯ ಘನತೆಗಳು ಹೆಚ್ಚುತ್ತವೆ. ಹೊದಿಕೆ ತಯಾರಾದ ಮೇಲೆ ಪುಸ್ತಕ ಬೈಂಡಾಗುತ್ತದೆ. 'ಪಿನ್ನು ಹೊಡೆದು' ಅಥವಾ 'ಟಾಕಾ ಹಾಕಿ' ಹೊದಿಕೆಯನ್ನು ಅಂಟಿಸುವುದು ನಮ್ಮಲ್ಲಿ ಸರ್ವಸಾಮಾನ್ಯವಾದ ಬೈಂಡಿಂಗ್ ರೀತಿ. ಸೆಕ್ಷನ್ ಹೊಲಿಗೆ ಹಾಕಿದರೆ ಪುಸ್ತಕ ತೆರೆಯಲು ಸುಲಭವಾಗಿ, ಅದರ ಒಟ್ಟಿನ ಅಂದ ಹೆಚ್ಚುತ್ತದೆ. ಆದರೆ ಕಮ್ಮಿ ಖರ್ಚಿನ ದೃಷ್ಟಿಯಿಂದ ಪಿನ್ನು ಹೊಡೆದು ಬೈಂಡು ಮಾಡುವುದೇ ಹೆಚ್ಚು ರೂಢಿಯಲ್ಲಿದೆ.

ಸೆಕ್ಷನ್‌ಹೊಲಿದು, ದಪ್ಪರಟ್ಟುಹಾಕಿ'ಕ್ಯಾಲಿಕೊ ಬಟ್ಟೆ'ಯಿಂದ ಬೈಂಡುಮಾಡಿ, ರಕ್ಷಾ ಕವಚ (jacket) ತೊಡಿಸಿ ಪುಸ್ತಕ ಹೊರಡಿಸುವುದು ವಿರಳ. ಈ ರೀತಿ ಚೆನ್ನಾಗಿ ಬೈಂಡಾದ ಪುಸ್ತಕಗಳ ಅಂದವನ್ನಾಗಲಿ ಬಾಳಿಕೆಯನ್ನಾಗಲಿ ಹೊಗಳುವುದು ಅನಾವಶ್ಯಕ. ಯಾವ ಬಗೆಯ ರಟ್ಟನ್ನೂ ಎಂಥ ಕ್ಯಾಲಿಕೋವನ್ನೂ ಉಪಯೋಗಿಸಿ, ಯಾವ ರೀತಿಯಲ್ಲಿ ಬೈಂಡು ಮಾಡಿಸಿದರೆ, ಹೆಚ್ಚು ಬಾಳಿಕೆ ಬಂದೀತು ಎಂಬ ವಿಷಯದಲ್ಲಿ ನಮ್ಮಲ್ಲಿ ಪ್ರಯೋಗಗಳು ನಡೆಯುತ್ತಿಲ್ಲವೆಂದು ತಿಳಿಸುವುದೂ ಅನಾವಶ್ಯಕ. ಹವಾಗುಣದಿಂದ ಬಾಗದಿರುವ ರಟ್ಟಾಗಲಿ, ಕಣ್ಣಿಗೆ ಅಂದವಾದ, ಗಟ್ಟಿಯಾದ, ಸುಲಭವಾಗಿ ಹುಳು ಹೊಡೆಯದಿರುವ-ಬಟ್ಟೆಯಾಗಲಿ ಈಗ ದೊರೆಯುವುದು ಕಷ್ಟವಾಗಿದೆ; ಉತ್ತಮ ಬೈಂಡಿನ ಪುಸ್ತಕ ವಿರಳ.

ಪುಸ್ತಕ ಪ್ರಕಟನೆ ಒಂದು ಕಲೆ; ಪುಸ್ತಕದ ತಯಾರಿಕೆಯ ಒಂದೊಂದು ಹಂತದಲ್ಲೂ ಅದರ ಆಕಾರ ಮೈಕಟ್ಟುಗಳನ್ನು ನಿರ್ಧರಿಸುವುದರಲ್ಲಿ, ಕಾಗದವನ್ನು ಚುನಾಯಿಸುವುದರಲ್ಲಿ, ಚಿತ್ರಗಳನ್ನು ಬರೆಸುವುದರಲ್ಲಿ, ಟೈಪುಗಳನ್ನು, ಮುದ್ರಣಕಾರನನ್ನು ಗೊತ್ತುಮಾಡುವುದರಲ್ಲಿ (ಪುಸ್ತಕಗಳನ್ನು ಮುದ್ರಿಸುವ ಕಲೆಯನ್ನು ಬಲ್ಲ ಮುದ್ರಣಕಾರರ ಸಂಖ್ಯೆ ನಮ್ಮಲ್ಲಿ ಬಹು ಕಡಿಮೆ) ಹೊದಿಕೆಯನ್ನು ತಯಾರಿಸುವುದರಲ್ಲಿ, ಬೈಂಡು ಮಾಡಿಸುವುದರಲ್ಲಿ ಹೀಗೆ ಒಂದೊಂದು ಅಂಶದಲ್ಲೂ ಪ್ರಕಾಶಕನ ಅಭಿರುಚಿ ವ್ಯಕ್ತವಾಗಿ ಪುಸ್ತಕ ರೂಪುಗೊಳ್ಳುತ್ತದೆ. ಆದ್ದರಿಂದಲೇ ಒಂದೊಂದು ಸಂಸ್ಥೆಯ ಪ್ರಕಟನೆಗಳು ಒಂದೊಂದು ರೀತಿ(Style)ಯವು ಆಗುವ ಸಂಭವ. ಇಂದಿನದು ಮಾತ್ರ ಬೇಸರ ತರುವಂಥ ಸಮತೆಯ ಪರಿಸ್ಥಿತಿ. ಮನಮೆಚ್ಚಿದ ಸಾಮಾನುಗಳನ್ನು ತಂದುಕೊಟ್ಟು ಸುಖಭೋಜನವನ್ನು ಏರ್ಪಡಿಸು ಎಂದು ಹೇಳಲವಕಾಶವಿಲ್ಲ; ಇದ್ದುದರಲ್ಲೇ ಹಬ್ಬಮಾಡು ಎಂದು ಹೇಳಿ ಸಮಾಧಾನಪಟ್ಟುಕೊಳ್ಳುವ ಕಾಲ. ಒಂದುಕಡೆ ಉತ್ತಮವಾದ ಸರಕುಗಳ ಅಭಾವ, ಇನ್ನೊಂದುಕಡೆ ಎಷ್ಟೇ ಸುಲಭ ಬೆಲೆಗೆ ಕೊಟ್ಟರೂ ಪುಸ್ತಕದ ಬೆಲೆ ಹೆಚ್ಚು ಎಂದು ಕೂಗುವ ಜನ ಇಂಥ ದುಷ್ಕಾಲದಲ್ಲಿಯೂ ಪ್ರಕಾಶಕನು ಒಮ್ಮೊಮ್ಮೆ ಪುಸ್ತಕವನ್ನು ಅಂದವಾಗಿ ತಯಾರಿಸಿ ಪ್ರಕಟಿಸಿದರೆ ಅವನು ಅಭಿನಂದನೀಯನೇ ಸರಿ, ಅದು ಸಂತೊಷಪಡುವ ವಿಷಯವೇ ಹೌದು.

೬

ಪುಸ್ತಕ ಅಚ್ಚಾಗಿ ಬೈಂಡಾಗಿ ಮುದ್ರಣಾಲಯದಿಂದ ಹೊರಬಿದ್ದ ಮೇಲೆ ಅದರ ಜೀವನದಲ್ಲಿ ಅತಿ ಕಷ್ಟಕರವಾದ ದಶೆ ಆರಂಭವಾಗುತ್ತದೆ. ಪ್ರತಿಗಳು ಸಿದ್ಧವಾದಮೇಲೆ ಅವುಗಳನ್ನು ಮಾರಬೇಕು; ಗ್ರಂಥವನ್ನು ಪ್ರಕಟಿಸುವುದು ಒಂದು ವಿಧದಲ್ಲಿ ಸುಲಭ, ಅದನ್ನು ಮಾರುವುದು ಕಷ್ಟ.

ಪುಸ್ತಕದ ಮಾರಾಟವಾಗುವ ಮೊದಲು ಅದು ಪ್ರಕಟವಾಗಿರುವ ಅಥವಾ ಮಾರಾಟಕ್ಕೆ ಸಿದ್ಧವಾಗಿರುವ ಸಂಗತಿ ಜನರಿಗೂ ಪುಸ್ತಕ ವ್ಯಾಪಾರಿಗಳಿಗೂ ಗೊತ್ತಾಗಬೇಕು; ಅದನ್ನು ಗೊತ್ತುಪಡಿಸಲು ಪ್ರಕಾಶಕರು ಸಾಮಾನ್ಯವಾಗಿ ಹಲವು ಬಗೆಯ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಾರೆ.

(೧) ಪುಸ್ತಕ ಸಿದ್ಧವಾಗುತ್ತಿರುವಂತೆಯೆ ಅದಕ್ಕೆ ಸಂಬಂಧಪಟ್ಟಂತೆ ಪ್ರಸಾರಣ ಪತ್ರಗಳನ್ನೂ (Circulars) ಹಸ್ತಪ್ರತಿಗಳನ್ನೂ (Handbills) ಗ್ರಂಥಪ್ರಶಂಸೆಯ ಪತ್ರಗಳನ್ನೂ (Blurbs) ತಯಾರಿಸಿ ಹಂಚುತ್ತಾರೆ. ಅವುಗಳಲ್ಲಿ ಗ್ರಂಥದ ವಿಷಯ ಸಾಮಾನ್ಯವಾಗಿ ಸ್ಥೂಲವಾಗಿ ವ್ಯಕ್ತವಾಗಿರುತ್ತದೆ. ಗ್ರಂಥಪ್ರಶಂಸೆಯ ಪತ್ರದಲ್ಲಿ ಗ್ರಂಥದ ವಿಷಯ ಪರಿಚಯದ ಜೊತೆಗೆ ಅದರ ಯೋಗ್ಯತೆಯನ್ನೂ ವಿವೇಚಿಸುತ್ತಾರೆ. ಇದನ್ನು ಸರಿಯಾದ ರೀತಿಯಲ್ಲಿ ತಕ್ಕಷ್ಟು ಪ್ರಾಮಾಣ್ಯದಿಂದ ತಯಾರಿಸಿದಲ್ಲಿ ಗ್ರಂಥದ ವಿಷಯದಲ್ಲಿ ಕೊಳ್ಳುವವರಿಗೆ ಸುಮಾರಾಗಿ ಸರಿಯಾದ ಅಭಿಪ್ರಾಯವುಂಟಾಗಿ ಮಾರಾಟಕ್ಕೆ ಸಹಾಯವಾಗುತ್ತದೆ. ಕೇವಲ ಹೊಗಳಿಕೆಯ ಪತ್ರಗಳಿಂದ ಪ್ರಕಾಶಕನಿಗಾಗಲಿ ಕೊಳ್ಳುವವರಿಗಾಗಲಿ ಪ್ರಯೋಜನವಾಗಲಾರದು. ಜೇಬಿನ ಕಾದಂಬರಿಗಳು ಪ್ರಕಟವಾಗಲು ಆರಂಭವಾದಂದಿನಿಂದ ಹೊದಿಕೆಯ ಚಿತ್ರಪತ್ರವನ್ನು ವ್ಯಾಪಾರಿಗಳಿಗೆ ಕಳಿಸಿಕೊಡುವ ರೂಢಿ ಬಂದಿದೆ. ಕಾದಂಬರಿಯಿರಲಿ ಬೇರೆಗ್ರಂಥವಿರಲಿ ಹೊದಿಕೆಯ ಮೇಲೆ ಚಿತ್ರವಿರಲಿ ಇಲ್ಲದಿರಲಿ, ಹೊದಿಕೆಯನ್ನು ವ್ಯಾಪಾರಿಗಳಿಗೆಲ್ಲ ಕಳಿಸಿ ಜನರ ಗಮನವನ್ನು ಪುಸ್ತಕದ ಕಡೆ ಸೆಳೆಯುವ ಪ್ರಯತ್ನ ನಡೆಸುವುದು ಈಗ ಸರ್ವಸಾಧಾರಣ ಪದ್ಧತಿಯಾಗಿದೆ.

(೨) ಪುಸ್ತಕ ಸಿದ್ಧವಾದೊಡನೆ ಅಥವಾ ಮಾರಾಟಕ್ಕೆ ಪ್ರತಿಗಳು ಸಿದ್ಧವಾಗುವುದಕ್ಕೆ ಸ್ವಲ್ಪ ಮೊದಲು ಹಲವು ಪ್ರತಿಗಳನ್ನು ವಿಮರ್ಶೆಗಾಗಿ ಪ್ರಮುಖ ಪತ್ರಿಕೆಗಳಿಗೆ ಪ್ರಕಾಶಕರು ಕಳಿಸುತ್ತಾರೆ. ಪತ್ರಿಕೆಗಳಲ್ಲಿ ಬರುವ ವಿಮರ್ಶೆಯನ್ನು ಓದಿ ಜನ ಪುಸ್ತಕ ಕೊಳ್ಳಲು ಹವಣಿಸಬಹುದೆಂಬ ನಿರೀಕ್ಷೆಯಿದೆ. ದಕ್ಷರಾದ ವಿದ್ವಾಂಸರು ಗ್ರಂಥವಿಮರ್ಶೆಯಲ್ಲಿ ತೊಡಗಿದರೆ ನಮ್ಮ ನಿರೀಕ್ಷೆ ಸಫಲವಾಗುವ ಸಂಭವವುಂಟು. ಅಂಥವರ ವಿಮರ್ಶೆಯಿಂದ ಜನಕ್ಕೂ ಲೇಖಕನಿಗೂ ಪ್ರಕಾಶಕನಿಗೂ ಪುಸ್ತಕ ವ್ಯಾಪಾರಿಗೂ ಪ್ರಯೋಜನವುಂಟು. ನಮ್ಮಲ್ಲಿ ಸಾಹಿತ್ಯಶಾಸ್ತ್ರ ಕಲೆಗಳಿಗಾಗಿಯೇ ಮೀಸಲಾಗಿರುವ ಪತ್ರಿಕೆಗಳು ವಿರಳ. ಸಮರ್ಥರಾದವರನ್ನು ವಿಮರ್ಶೆಗಾಗಿ ನಿಯೋಜಿಸುವ ಪತ್ರಿಕೆಗಳೂ ವಿರಳ. ಈಗ ಬರುತ್ತಿರುವ ವಿಮರ್ಶೆಗಳಲ್ಲಿ ಬಹುಪಾಲು ವಿಷಯದ ಸರಿಯಾದ ನಿವೇಚನೆಯಿಲ್ಲದ ಸ್ವಾರಸ್ಯವಿಲ್ಲದ ಬರಹಗಳು.

(೩) ಪತ್ರಿಕೆಗಳಲ್ಲಿ ಹೊಸ ಪ್ರಕಟನೆಗಳನ್ನು ಜಾಹೀರಾತುಪಡಿಸುವುದರ ಮೂಲಕ ಅವು ಜನರ ಗಮನಕ್ಕೆ ಬರುತ್ತವೆ. ನಮ್ಮ ಪುಸ್ತಕಗಳ ಬೆಲೆ ಕಡಮೆ, ಅವುಗಳ ಮಾರಾಟದ ಸಂಖ್ಯೆಯೂ ಅಲ್ಪ, ಜಾಹೀರಾತಿನ ದರಗಳು ಹೆಚ್ಚು. ನಮ್ಮ ಪುಸ್ತಕಗಳು ಜಾಹೀರಾತಿನ ಬೆಲೆಯನ್ನು ಹೆಚ್ಚಾಗಿ ಹೊರಲಾರವು; ಈ ವಿಷಯದಲ್ಲಿ ಸೋಪು, ಸಿಗರೇಟು ಮೊದಲಾದ ಸರಕುಗಳೊಡನೆ ಸ್ಪರ್ಧಿಸಲಾರವು. ಅಲ್ಲದೆ ಪುಸ್ತಕ ಜಾಹೀರಾತಿಗೆ (Book advertisement) ತಕ್ಕುದಾದ ಪ್ರತ್ಯೇಕ ಪತ್ರಿಕೆ

ಗಳೂ ನಮ್ಮಲ್ಲಿ ಅಪರೂಪ. ಹೆಚ್ಚಿನ ಜಾಹೀರಾತಿಗೆ ತಗಲುವ ವೆಚ್ಚಕ್ಕೆ ಅನುಗುಣವಾದ ಪ್ರತಿಫಲವಿದೆಯೆ ಎಂಬುದು ಅನುಮಾನಾಸ್ಪದವಾದ ವಿಷಯ. ಈ ಕಾರಣಗಳಿಂದ ಪ್ರಕಾಶಕರು ಜಾಹೀರಾತಿಗೆ ಮಿತವಾಗಿ ಖರ್ಚು ಮಾಡುತ್ತಾರೆ.

(೪) ಪ್ರಕಾಶಕರು ತಮ್ಮ 'ಪುಸ್ತಕ ಪಟ್ಟಿ' (Catalogues) ಗಳನ್ನು ಆಗಾಗ್ಗೆ ಮುದ್ರಿಸಿ ಪುಸ್ತಕ ವ್ಯಾಪಾರಿಗಳಿಗೂ ಬೇಡಿಕೆಯಿರುವವರಿಗೂ ಕಳಿಸಿ ಆ ಮೂಲಕ ತಮ್ಮ ಪ್ರಕಟನೆಗಳ ವಿಷಯವನ್ನು ಪ್ರಸಿದ್ಧ ಪಡಿಸುತ್ತಾರೆ.

(೫) ಪಾಶ್ಚಾತ್ಯ ದೇಶಗಳಲ್ಲಿ ದೊಡ್ಡ ಪ್ರಕಾಶಕ ಸಂಸ್ಥೆಗಳು ತಮ್ಮ ಚಟುವಟಿಕೆಗಳನ್ನೂ ಪ್ರಕಟನೆಗಳ ವಿಚಾರವನ್ನೂ ತಿಳಿಸುವುದಕ್ಕಾಗಿಯೇ ಮಾಸಪತ್ರಿಕೆಗಳನ್ನು ಹೊರಡಿಸುವುದುಂಟು. ಅವುಗಳಿಗೆ 'House Organs' (ಪ್ರಕಟನಾಲಯದ ಪತ್ರಿಕೆ ಅಥವಾ ಪ್ರಕಾಶಕವಾಣಿ) ಎಂದು ಹೆಸರು. ನಮ್ಮಲ್ಲಿ ವಾಹಿನೀ ಪ್ರಕಾಶನದವರೂ ಶಾರದಾ ಪ್ರಕಟನಾಲಯದವರೂ ಈ ದಿಶೆಯಲ್ಲಿ ಕಾರ್ಯಾರಂಭಮಾಡಿ ಕೈ ಬಿಟ್ಟಿದಾರೆ. ಹೆಚ್ಚು ಸಂಖ್ಯೆಯಲ್ಲಿ ಪ್ರಕಟನೆಗಳು ಇಲ್ಲದಿದ್ದರೆ ತಿಂಗಳು ತಿಂಗಳಿಗೂ ವರದಿ ಮಾಡುವ ಪತ್ರಿಕೆಯನ್ನು ಹೊರಡಿಸುವುದು ಕಷ್ಟವಾಗುತ್ತದೆ.

೭

ಪುಸ್ತಕ ಪ್ರಕಟವಾದಕೂಡಲೆ ಅದರ ಮಾರಾಟ ಆರಂಭವಾಗಬೇಕು. ಪುಸ್ತಕ ಮಾರಾಟಕ್ಕೆ ಮುಖ್ಯವಾದ ಸಾಧನ ಪುಸ್ತಕ ವ್ಯಾಪಾರಿಗಳು—ಪುಸ್ತಕದ ಅಂಗಡಿಗಳು. ಪುಸ್ತಕೋದ್ಯಮದ ವ್ಯವಸ್ಥೆಯಲ್ಲಿ ಪುಸ್ತಕ ವ್ಯಾಪಾರದಷ್ಟು ಅವ್ಯವಸ್ಥಿತವಾದ ಭಾಗ ಮತ್ತೊಂದಿಲ್ಲ. ಕನ್ನಡ ದೇಶ ವಿಶಾಲವಾಗಿದ್ದರೂ ಪ್ರಮುಖ ಪುಸ್ತಕ ವ್ಯಾಪಾರಸಂಸ್ಥೆಗಳು ಹೆಚ್ಚಾಗಿಲ್ಲ. ಅವುಗಳ ಸಂಖ್ಯೆಯನ್ನು ಬೆರಳುಗಳಿಂದ ಎಣಿಸಬಹುದು. ದೇಶದ ಅನೇಕ ಮುಖ್ಯಪಟ್ಟಣಗಳಲ್ಲಿ ಹಲವು ಜಿಲ್ಲಾ ಮುಖ್ಯ ಸ್ಥಳಗಳಲ್ಲಿ ಕೂಡ, ಪುಸ್ತಕದಂಗಡಿಗಳು ಇಲ್ಲ. ಅನೇಕ ಊರುಗಳಲ್ಲಿ ಪುಸ್ತಕಗಳನ್ನು ಓದಲಿಚ್ಛಿಸುವ, ಕೊಳ್ಳಲಿಚ್ಛಿಸುವ ಜನ ಈಗ ಇದಾರೆ. ಆದರೆ ಅವರಿಗೆ ಪುಸ್ತಕಗಳು ದೊರಕುವುದಿಲ್ಲ, ಪುಸ್ತಕಗಳನ್ನು ಮಾರುವ ಅಂಗಡಿ ಅವರೂರಲ್ಲಿ ಇರುವುದಿಲ್ಲ. ಪುಸ್ತಕ ವ್ಯಾಪಾರವೊಂದರಿಂದಲೇ ಜೀವನ ಹರಿಯುವುದಿಲ್ಲವಾದ್ದರಿಂದ ಆ ಸ್ಥಳಗಳಲ್ಲಿ ಪುಸ್ತಕದಂಗಡಿಗಳು ಇಲ್ಲ. ಈ ಜನಕ್ಕೆ ಪುಸ್ತಕಗಳನ್ನು ಒದಗಿಸಲು ಅವರಿರುವಲ್ಲಿಗೇ ಪುಸ್ತಕಗಳನ್ನು ಸಂಚಾರ ವ್ಯವಸ್ಥೆಯಿಂದ ಒಯ್ಯಬೇಕು. ಪುಸ್ತಕದಂಗಡಿ ಒಂದು ವೇಳೆ ಇದ್ದರೂ ಅಲ್ಲಿನ ಗಿರಾಕಿ ಮಿತವಾದದ್ದರಿಂದಲೂ ಸ್ಥಳಕ್ಕೆ ಸಾರಿಗೆಯ ಅನುಕೂಲವಿರದಿರುವುದರಿಂದಲೂ ಪೋಸ್ಟಿನಲ್ಲಿ ತರಿಸುವುದು ಲಾಭಕರವಲ್ಲದಿರುವುದರಿಂದಲೂ ಅಲ್ಲಿಗೇ ಪುಸ್ತಕಗಳನ್ನು ಒಯ್ಯಬೇಕು. ಹಿಂದೆಲ್ಲ ಉತ್ತರ ಕರ್ನಾಟಕದ ಪ್ರಕಾಶಕರು ಪುಸ್ತಕಗಳನ್ನು ಹೊತ್ತು ಊರೂರು ತಿರುಗಿ ಮಾರಾಟ ಮಾಡುತ್ತಿದ್ದರು. ಈಗಿನ ಬೆಲೆಏರಿಕೆಯ ದಿನಗಳಲ್ಲಿ ಹಾಗೆ ಮಾಡುವುದು ಆರ್ಥಿಕವಾಗಿ ಸಾಧ್ಯವೆ ಎಂಬುದು ಪರೀಕ್ಷಿಸಬೇಕಾದ ವಿಷಯ. ನಾಲ್ಕಾರು ಮಂದಿ ಪ್ರಕಾಶಕರು ಒಟ್ಟಾಗಿ ಸೇರಿ ವ್ಯವಸ್ಥೆ ಮಾಡಿದರೆ ಸಂಚಾರ ವ್ಯಾಪಾರಕ್ರಮ ಯಶಸ್ವಿಯಾಗಲು ಅಡ್ಡಿಯಿಲ್ಲ.

ಅನೇಕ ದೇಶಗಳಲ್ಲಿ ಪುಸ್ತಕ ಭಂಡಾರಗಳು ಪುಸ್ತಕಗಳಿಗೆ ಒಳ್ಳೆಯ ಗಿರಾಕಿಯನ್ನೊದಗಿಸುತ್ತವೆ. ಕನ್ನಡ ದೇಶದಲ್ಲಿ ಸಾರ್ವಜನಿಕ ಪುಸ್ತಕ ಭಂಡಾರಗಳು ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಾಗಿವೆ ಸಂಖ್ಯೆಯಲ್ಲಿ. ಸ್ಕೂಲು ಲೈಬ್ರರಿಗಳ ಸಂಖ್ಯೆ ತಕ್ಕಮಟ್ಟಿಗಿದ್ದರೂ ಅವುಗಳಿಗೆ ಸಲೀಸಾಗಿ ಪುಸ್ತಕಗಳನ್ನು ಒದಗಿಸುವಂತಿಲ್ಲ; ಸರಕಾರದ ರೂಲ್ಸುಗಳ ಮತ್ತು ಇತರ ರೀತಿಯ ಅಡಚಣೆಗಳು ಇವೆ.

ವ್ಯಾಪಾರದ ಅಭಿವೃದ್ಧಿಗೆ ಸಾಲ ಅವಶ್ಯಕವಾದ ಒಂದು ಅಂಗ. ಕನ್ನಡದಲ್ಲಿ ಈಗ ಪ್ರತಿತಿಂಗಳೂ ತಕ್ಕಮಟ್ಟಿನ ಸಂಖ್ಯೆಯಲ್ಲಿ ಪುಸ್ತಕಗಳು ಪ್ರಕಟವಾಗುತ್ತಿವೆ. ಅವೆಲ್ಲವುಗಳನ್ನೂ ಕೊಂಡಿಡುವುದು ಪುಸ್ತಕ ವ್ಯಾಪಾರಿಗೆ ಕಷ್ಟ. ಸಾಲದ ಮೇಲೆ ಪುಸ್ತಕಗಳನ್ನು ಪಡೆಯುವುದು ಅನೇಕ ಸಂದರ್ಭಗಳಲ್ಲಿ ಅವನಿಗೆ ಅನಿವಾರ್ಯವಾಗುತ್ತದೆ. ಆದರೆ ಸಾಲದ ಮೇಲೆ ಪುಸ್ತಕ ಕೊಟ್ಟರೆ ಹಣದ ಜೊತೆಗೆ ವಿಶ್ವಾಸವೂ ಹೋಗಿ ನಿಷ್ಠುರ ಪ್ರಾಪ್ತಿಯಾಗುವ ಸಂದರ್ಭಗಳು ಅಪರೂಪವಲ್ಲ. ಈ ಪರಿಸ್ಥಿತಿ ಬದಲಾವಣೆಯಾದರೆ ವ್ಯಾಪಾರದ ಬೆಳವಣಿಗೆಗೆ ಸಹಾಯಕವಾಗುತ್ತದೆ. ಪುಸ್ತಕ ವ್ಯಾಪಾರದಲ್ಲಿ ಈಗ ಪ್ರಚಲಿತವಾಗಿರುವ ಪುಸ್ತಕ ವಿನಿಮಯ ಪದ್ಧತಿಯೂ ವ್ಯಾಪಾರಕ್ಕೆ ಹಾನಿಕರವಾಗಿದೆ. ಅದು ಪುಸ್ತಕಗಳ ನೈಜವಾದ ಚಲನೆಯನ್ನು ಅಡ್ಡಿಪಡಿಸುತ್ತದೆ.

೮

ಪ್ರಕಟನೋದ್ಯಮ ನಮ್ಮಲ್ಲಿನ್ನೂ ಶೈಶವಾವಸ್ಥೆಯಲ್ಲಿದೆ. ಇತರ ವ್ಯಾಪಾರಗಳೊಡನೆ ಹೋಲಿಸಿದರೆ ಪ್ರಕಾಶನ ಒಂದು ದೊಡ್ಡ ವ್ಯಾಪಾರವಲ್ಲ. ಅದರಲ್ಲಿ ಶ್ರಮಕ್ಕೆ ತಕ್ಕ ಫಲವಿಲ್ಲ. ಆದರೆ ಅದರಲ್ಲಿ ತೋರಿಬರುವ ಒಂದು ಆದರ್ಶಜೀವನದ ರೀತಿ ಯುವಕನನ್ನು ಸೆಳೆಯುತ್ತದೆ. ಅದು ಮೇಲೆ ತೋರುವಷ್ಟು ಸುಲಭವಾದ ಕೆಲಸವಲ್ಲ, ಬಹು ಜವಾಬ್ದಾರಿಯುತವಾದ ಉದ್ಯೋಗ. ಅದು ಒಂದು ಕಡೆ ಕಲೆ ಇನ್ನೊಂದು ಕಡೆ ವ್ಯಾಪಾರ. ಕಲಾಭಿಜ್ಞನಿಗೆ ಅವಶ್ಯಕವಾದ ಅಭಿರುಚಿಯೂ ಜ್ಞಾನದಾಹವೂ ಪ್ರಕಾಶಕನಿಗೆ ಅಗತ್ಯವಾದ ಕಾರ್ಯೋತ್ಸಾಹ ಸಾಧನಶಕ್ತಿವಸ್ತುಗಳು. ವಿದ್ವಾಂಸನಿಗೆ ಕೆಲವು ಸಾಹಿತ್ಯ ಶಾಸ್ತ್ರಗಳಲ್ಲಿ ಮಾತ್ರ ಆಸಕ್ತಿಯಿರಬಹುದು. ಪ್ರಕಾಶಕನಿಗೆ ಜ್ಞಾನವಿಷಯಕಗಳಾದ ಎಲ್ಲ ವಿಚಾರಗಳಲ್ಲೂ ಆಸಕ್ತಿ ಇರಬೇಕು. ಜೊತೆಗೆ ವ್ಯಾಪಾರಜ್ಞಾನ ಸಾಮರ್ಥ್ಯವೂ ಇರಬೇಕು. ಆದ್ದರಿಂದಲೆ ಮುಂದುವರಿದ ದೇಶಗಳಲ್ಲಿ ಸಹ ಪ್ರಕಾಶನ ಕಷ್ಟಕರವಾದ ಕೆಲಸವೆಂದೂ ನಷ್ಟ ಸಂಭವವುಳ್ಳ ಉದ್ಯಮವೆಂದೂ ಪರಿಗಣಿತವಾಗಿದೆ.

ನಮ್ಮ ದೇಶ ಈಗ ಪ್ರಗತಿಪಥದಲ್ಲಿದೆ. ಅನೇಕ ಅಭಿವೃದ್ಧಿ ಕಾರ್ಯಗಳು ನಡೆಯುತ್ತಿವೆ. ಓದುವವರೂ ಬರೆಯುವವರೂ ಹೆಚ್ಚುತ್ತಿದ್ದಾರೆ. ಶಾಲೆ ಕಾಲೇಜುಗಳ ಸಂಖ್ಯೆ ಹೆಚ್ಚಾಗುತ್ತಿದೆ. ಸಾರ್ವಜನಿಕ ಪುಸ್ತಕ ಭಂಡಾರಗಳೂ ಇಂದಲ್ಲ ನಾಳೆ ದೇಶದ ಮೇಲೆಲ್ಲ ಹರಡಬಹುದು. ಇವೆಲ್ಲ ಲೇಖಕರಿಗೂ ಪ್ರಕಾಶಕರಿಗೂ ಧೈರ್ಯ ತರುವ ಸಂಗತಿಗಳು; ಪ್ರಕಟನೋದ್ಯಮದ ಭವಿಷ್ಯ ಆಶಾದಾಯಕವಾಗಿದೆಯೆಂದು ಸೂಚಿಸುತ್ತವೆ. ಆದರೆ ಉದ್ಯಮದ ವ್ಯವಸ್ಥಿತವಾದ ಬೆಳವಣಿಗೆಗೆ ಪ್ರಕಾಶಕರ ಮತ್ತು ಪುಸ್ತಕ ವ್ಯಾಪಾರಿಗಳ ಸಂಘಟನೆ ಅತ್ಯಾವಶ್ಯಕ. ಪ್ರಕಾಶಕರು ಸುಸಂಘಟಿತರಾದ ಹೊರತು ಉದ್ಯಮದ ಕುಂದು ಕೊರತೆಗಳನ್ನು ನೀಗಲಾರರು, ಅಡ್ಡಿ ಬರುವ ಆತಂಕಗಳನ್ನು ಎದುರಿಸಲಾರರು, ಸ್ಪರ್ಧೆಯಿಂದ ಹುಟ್ಟುವ ದೋಷ-ದೌರ್ಬಲ್ಯಗಳನ್ನು ತೊಡೆಯಲಾರರು.



# ಶಾರದೆಯ ಹೆಜ್ಜೆಗಳು

ಲೇಖಕರು : ಪ್ರೊ. ಪಾಂಡುರಂಗರಾವ ದೇಸಾಯಿ ಎಂ. ಎ.

ಪ್ರಾಧ್ಯಾಪಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಕನ್ನಡದ ಕೆಲ ಶಬ್ದಗಳು ವಿಶಿಷ್ಟ ಪ್ರಯೋಗವುಳ್ಳವುಗಳಾಗಿರುವವು. ಅವುಗಳ ಚಾರಿತ್ರಿಕ ಮತ್ತು ಶಾಬ್ದಿಕ ಪ್ರಯೋಗದ ವೈಶಿಷ್ಟ್ಯಗಳನ್ನು ಲೇಖಕರು ಇಲ್ಲಿ ನಿರೂಪಿಸಿರುವರು.

ಮಾತು ಮಾನವ ಸಂಸ್ಕೃತಿಯ ವಿಕಾಸಕ್ರಮದಲ್ಲಿ ಅಮಿತವಾದ, ಅತುಲವಾದ ಪ್ರಭಾವವನ್ನು ಬೀರಿದೆ. ಅಂತೆಯೆ ಅನೇಕ ಜನಾಂಗದವರು ಮಾತನ್ನು ದೇವತೆಯಾಗಿ ಕಲ್ಪಿಸಿ ಗೌರವಿಸುತ್ತಿರುವರು. ಭಾರತೀಯರಂತೂ ವಾಕ್ಕನ್ನು ಸೃಷ್ಟಿಯ ಆದಿಕರ್ತಾರನ ಅರ್ಧಾಂಗಿಯಾಗಿ ಭಾವಿಸಿ, ಶಾರದೆ, ಸರಸ್ವತಿ ಮೊದಲಾದ ನಾಮರೂಪಗಳಿಂದ ಈ ದೇವಿಯನ್ನು ಆರಾಧಿಸುತ್ತ ಬಂದಿರುವರು. ಒಬ್ಬ ಸಂಸ್ಕೃತ ಕವಿ ಭಗವತೀಸರಸ್ವತಿಯ ಶುಭ್ರ ಕಾಂತಿಯನ್ನು ವರ್ಣಿಸಿ, ತ್ರಿಮೂರ್ತಿಗಳಿಂದಲೂ ಪೂಜಿತೆಯೆಂದು ಅರ್ಥಗರ್ಭಿತವಾಗಿ ಈಕೆಯನ್ನು ಸ್ತುತಿಸಿದ್ದಾನೆ. ಭಾಷೆಗಳ ವಿರಾಟ ಸ್ವರೂಪವನ್ನೂ ಭಾಷಾ ಪ್ರಚಾರದ ವೈಚಿತ್ರ್ಯವನ್ನೂ ಅರಿತವರು ಇಂಥ ಆಲಂಕಾರಿಕ ವರ್ಣನೆಗಳ ಔಚಿತ್ಯವನ್ನು ಅಂಗೀಕರಿಸದೆ ಇರರು.

ಇಂಥ ಈ ಶಾರದೆಯ ಅನಂತ ಹೆಜ್ಜೆಗಳು ನಮ್ಮ ಸಂಸ್ಕೃತಿಯ ವಿಸ್ತೀರ್ಣ ಪಟದ ಮೇಲೆ ಎಲ್ಲೆಲ್ಲಿಯೂ ಮೂಡಿ ನಿಂತಿವೆ. ಅವುಗಳ ಯಥಾರ್ಥಸ್ವರೂಪವನ್ನು ಗುರುತಿಸುವುದು ಭಾಷಾಸಂಶೋಧನದ ಒಂದು ಮಹತ್ತ್ವದ ವಿಚಾರವಾಗಿದೆ. ಕನ್ನಡ ಸಾರಸ್ವತಪ್ರಪಂಚದಲ್ಲಿ ಇಂಥ ಸಂಶೋಧನಗಳು ಅಂಶರೂಪವಾಗಿ ನಡೆದಿವೆ. ಈ ಮಾರ್ಗದಲ್ಲಿ ಅಲ್ಪ ಪ್ರಯತ್ನವೇ ಪ್ರಸ್ತುತ ಲೇಖನ.

## ಮಣಿಕಟ್ಟು

ಈ ಮಾತಿಗೆ ಹರಡು, ಮುಂಗೈ ಎಂಬ ಪರ್ಯಾಯ ಪದಗಳು ಬಳಕೆಯಾಗುತ್ತವೆ. ಆದರೆ ಇಂಗ್ಲೀಷಿನ Wrist ಎಂಬ ಶಬ್ದಕ್ಕೆ ಮಣಿಕಟ್ಟು ಎಂಬ ಪದ ಹೆಚ್ಚು ಸಮರ್ಪಕವಾಗಿದೆ. ಈ ಸಂದರ್ಭದಲ್ಲಿ ಒಂದೆರಡು ಮಾತುಗಳು ಗಮನಾರ್ಹವಾಗಿವೆ. ಕನ್ನಡ ಮಣಿಕಟ್ಟು ಸಂಸ್ಕೃತ ಮಣಿಬಂಧದ ಸರಳಾನುವಾದವಾಗಿದೆ. ಕನ್ನಡ ಮಣಿಕಟ್ಟಿನಿಂದ ಮರಾಠೀ ಮನಗಟ ಬಂದಿದೆ.

ಆದರೆ ಮುಂಗೈಯ ಒಂದು ಸ್ಥಳಕ್ಕೆ ಈ ಹೆಸರು ಬರಲು ಕಾರಣವೇನು? ಮಣಿಬಂಧ ಅಥವಾ ಮಣಿಕಟ್ಟಿನಲ್ಲಿಯ ಮಣಿ ಎಂಬ ಪದದ ಅಭಿಪ್ರಾಯವೇನು? ಈ ಅಂಶಗಳು ಇಲ್ಲಿ ವಿಚಾರಣೀಯವಾಗಿವೆ. ಸಾಮಾನ್ಯವಾಗಿ ಕೋಶಕಾರರೆಲ್ಲ ಮಣಿ ಎಂದರೆ ರತ್ನ, ಬೆಲೆಯುಳ್ಳ ವಸ್ತು, ಮುಂತಾಗಿ ಅರ್ಥ ಹೇಳಿದ್ದಾರೆ. ಇದು ನಿಜವಿದ್ದರೆ, ಇಂಥ ಒಂದು ವಸ್ತುವನ್ನು ಕೆಲವೇ ಜನಗಳು ಸುಮ್ಮನೆ ಕಟ್ಟಿಕೊಳ್ಳುತ್ತಿರುವ ಕಾರಣದಿಂದ ಆ ಸ್ಥಳಕ್ಕೆ ಈ ಸಾರ್ವತ್ರಿಕ ಪದ ರೂಢಿಯಲ್ಲಿ ಬರಲು ಕಾರಣವೇನು ಎಂಬ ಸಮಸ್ಯೆಗೆ ಸರಿಯಾದ ಉತ್ತರ ದೊರೆಯದು.

ಈ ವಿಷಯವನ್ನು ಪರಿಶೋಧಿಸುತ್ತಿರುವಾಗ, ಇದಕ್ಕೆ ಘನವಾದ ಒಂದು ಪ್ರಾಚೀನ ಐತಿಹಾಸಿಕ ಹಿನ್ನೆಲೆಯಿದ್ದು, ಈ ಪ್ರಯೋಗದ ಉಗಮವು ಸಾವಿರಾರು ವರ್ಷಗಳ ಹಿಂದಿನ ವೇದಕಾಲದ ಒಂದು ಸಂಪ್ರದಾಯದಲ್ಲಿ ಸಿಕ್ಕುತ್ತದೆ ಎಂದು ಗೋಚರವಾಯಿತು. ಅದು ಹೇಗೆ ಎಂಬುದನ್ನು ವಿವರಿಸುವೆ.

ವೇದವಾಙ್ಮಯದಲ್ಲಿ, ನೂತನ ರಾಜನು ರಾಜ್ಯದ ಪ್ರಮುಖರ ಸಮ್ಮುಖದಲ್ಲಿ ರಾಜ್ಯಾರೋಹಣ ಮಾಡುತ್ತಿದ್ದನೆಂದು, ಈ ಸಮಾರಂಭದಲ್ಲಿ ಆತನ ಪರಮ ಅಧಿಕಾರದ ದ್ಯೋತಕವಾಗಿ ಒಂದು ವಸ್ತುವನ್ನು ಆತನ ಕೈಗೆ ಕಟ್ಟುತ್ತಿದ್ದರೆಂದು, ನಿರ್ದೇಶಗಳು ದೊರೆಯುತ್ತವೆ. ಆ ವಸ್ತುವಿಗೆ ಮಣಿ ಎನ್ನುತ್ತಿದ್ದರು. ಅದರ ಇನ್ನೊಂದು ಹೆಸರು ಪರ್ಣ. (K. P. Jayaswal, *Hindu Polity*, 1924, chap XXII, pp. 9–10). ಹೆಸರು ಮಣಿಯಾದರೂ ನಿಜವಾಗಿ ಇದು ಮುತ್ತಲು ಮರದ ತುಂಡು. ಅತ್ಯಂತ ಗೌರವಾಸ್ಪದವಾದ ಈ ಸಮಾರಂಭ ಮತ್ತು ಅದರಲ್ಲಿನ ಅಪೂರ್ವವಾದ ಈ ಸನ್ನಿವೇಶ, ಇವು ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿದುಕೊಂಡು, ಸಾಮಾಜಿಕರ ನುಡಿಯಲ್ಲಿ ಬೆರೆತು, ನೆಲೆಯಾಗಿ ನಿಂತು, ಪರಂಪರಾಗತವಾಗಿ ನಡೆದು ಬಂದಿದ್ದರೆ ಆಶ್ಚರ್ಯವಿಲ್ಲ. ಇಂತು ಆದಿಯಲ್ಲಿ ಮಣಿ ಎಂಬುದು ಸಾಂಕೇತಿಕವಾಗಿ ಬೆಲೆಯುಳ್ಳ ವಸ್ತುವಾಗಿದ್ದಿತು. ಅನಂತರ ಅದು ರತ್ನದ ಸ್ವರೂಪವನ್ನು ತಳೆದಿರಬೇಕು. ಕಾಲಾಂತರದಲ್ಲಿ ಮಣಿಬಂಧನದ ಆ ಸ್ಥಳವು ಮಣಿಬಂಧನೆಂದು ಪ್ರಚಾರದಲ್ಲಿ ಬಂದಿರಬೇಕು. ಈ ಸಂದರ್ಭದಲ್ಲಿ, ಕೆಲವೊಂದು ಸಾಂಪ್ರದಾಯಿಕ ವ್ರತಾಚರಣೆಯಲ್ಲಿ ಪವಿತ್ರವಾದ ದಾರವೇ ಮೊದಲಾದವನ್ನು ಮುಂಗೈಗೆ ಕಟ್ಟಿಕೊಳ್ಳುವ ರೂಢಿ ಈಗಲೂ ಪ್ರಚಲಿತವಿದ್ದ ವಿಷಯವನ್ನು ನೆನೆಯಬಹುದು.

ಮೇಲಿನ ವಿವೇಚನೆ ಯಥಾರ್ಥವಾಗಿದ್ದಲ್ಲಿ ನಮ್ಮ ಸಂಸ್ಕೃತಿ ಮತ್ತು ಭಾಷಾಪ್ರಯೋಗಗಳಿಗೆ ಎಷ್ಟು ಪುರಾತನ ಕಾಲದ ಚರಿತ್ರೆ ಇದೆ ಎಂಬ ಸಂಗತಿ ಪ್ರಕಾಶಕ್ಕೆ ಬರುತ್ತದೆ.

## ವಾರೀ

ಒಂದು ನಾಣ್ಯವು ಒಂದು ಪ್ರದೇಶದಲ್ಲಿ ರೂಢಿಯಲ್ಲಿದ್ದು, ಕಾಲಾಂತರದಲ್ಲಿ ಬಳಕೆ ತಪ್ಪಿದ ಕಾರಣದಿಂದ ಅದು ಅಲ್ಲಿಂದ ಮಾಯವಾಗುತ್ತದೆ. ಹೀಗೆ ಕಾಣೆಯಾದ ಆ ನಾಣ್ಯವು ಅನ್ಯ ಪ್ರಾಂತಕ್ಕೆ ಪ್ರಯಾಣಮಾಡಿ ತನ್ನ ನೈಜ ಮೂಲ್ಯದ ಮೂಲಕ ಅಲ್ಲಿ ಮಾನ್ಯತೆಯನ್ನು ಪಡೆಯುತ್ತದೆ. ಇಂಥ ಘಟನೆಗಳು ಭಾಷಾಪ್ರಪಂಚದಲ್ಲಿ ದೊರೆಯುತ್ತವೆ. ಇದಕ್ಕೆ ಒಂದು ಉದಾಹರಣೆ 'ವಾರೀ' ಎಂಬ ಪದ. ಇದರ ಮೂಲ ಸಂಸ್ಕೃತದ ವೃ ಎಂಬ ಧಾತು ಆಗಿರಬಹುದು.

ಸರದಿ ಎಂಬ ಅರ್ಥದಲ್ಲಿ ಸಂಸ್ಕೃತ 'ವಾರ' ಎಂಬ ಶಬ್ದವಿದೆ. ಅದರ ಕನ್ನಡ ಪರ್ಯಾಯ ಬಾರಿ ಎಂದಾಗಿದೆ. ಆದರೆ ಹೆಚ್ಚುಕಡಿಮೆ ಇದೇ ಅರ್ಥದ ಮತ್ತು ಬಾರಿಯ ಪೂರ್ವಭಾವಿಯಾಗಿದ್ದ ವಾರೀ ಎಂಬ ಶಬ್ದ ಹಿಂದೆ ಕನ್ನಡದಲ್ಲಿ ಇದ್ದಂತೆ ಶಾಸನಸಾಹಿತ್ಯದಿಂದ ನನಗೆ ಗೋಚರವಾಗಿದೆ. ನಾನು ತಿಳಿದಮಟ್ಟಿಗೆ ಇದರ ಪ್ರಯೋಗ ಶುದ್ಧ ಸಾಹಿತ್ಯದಲ್ಲಿ ದೊರೆತಿಲ್ಲ.

ಇದೀಗ ಮರಾಠೀ ಭಾಷೆಯಲ್ಲಿ ವಾರೀ ಎಂಬ ಮಾತು ಬಹಳವಾಗಿ ಪ್ರಚಾರದಲ್ಲಿದೆ. ಸಾಮಾನ್ಯವಾಗಿ ಪಂಢರಪುರ, ಮೊದಲಾದ ಪವಿತ್ರ ಸ್ಥಳಗಳಿಗೆ ನಿಯಮಿತವಾಗಿ ಯಾತ್ರೆಮಾಡುವ ಸಂಪ್ರದಾಯಕ್ಕೆ ವಾರೀ ಎನ್ನುವರು. ಧಾರವಾಡದಿಂದ ಆರು ಮೈಲು ದೂರದಲ್ಲಿರುವ ಹೆಬ್ಬಳ್ಳಿ ಎಂಬ ಗ್ರಾಮದಲ್ಲಿ ದೊರೆತ ಒಂದು ಶಾಸನದ ಕೊನೆಯಲ್ಲಿ "ಶ್ರೀಪಂಡರಂಗೆಯ ಶ್ರೀವಿಠ್ಠಲ ದೇವರ ವಾರಿಯ ಶ್ರೀಹರಿದಿನಂಗಳ ಧರ್ಮಕ್ಕೆ ಕಲುವರ್ಮ ಸಿಂಗ ಗಾವುಂಡನು" ಒಂದು ವೃತ್ತಿಯನು ಹಾಕಿಕೊಟ್ಟಂತೆ ಹೇಳಿದೆ. ಈ ಶಾಸನದ ಕಾಲ ಕ್ರಿ. ಶ. ೧೨೪೯.

ಈ ಶಾಸನವು ಎರಡು ದೃಷ್ಟಿಯಿಂದ ಮಹತ್ವವುಳ್ಳದು. ಒಂದನೆಯದಾಗಿ, ಈಗ ಮರಾಠಿಯಲ್ಲಿಯಂತೆ ಅದೇ ಸಂದರ್ಭ ಮತ್ತು ಅರ್ಥದಲ್ಲಿ ಹಿಂದೆ ಕನ್ನಡ ನುಡಿಯಲ್ಲಿ ವಾರೀ ಎಂಬ ಶಬ್ದ ಬಳಕೆಯಾಗುತ್ತಿತ್ತು ಎಂಬ ಸಂಗತಿಯನ್ನು ಪ್ರಥಮತಃ ಇದು ಎತ್ತಿ ತೋರಿಸುತ್ತದೆ. ಎರಡನೆಯದಾಗಿ, ಪಂಢರಪುರದ ವಿಠ್ಠಲನನ್ನು ಉದ್ದೇಶಿಸಿ ಪ್ರಚಾರದಲ್ಲಿದ್ದ ವಾರೀಸಂಪ್ರದಾಯದ ಪ್ರಾಚೀನತೆಗೆ ಒಂದು ನಿಶ್ಚಿತಾಧಾರವನ್ನು ಇದು ಮೊದಲು ಬಾರಿ ಒದಗಿಸುತ್ತದೆ.

ಮೇಲೆ ಉದಾಹರಿಸಿದ ಶಾಸನಭಾಗದಲ್ಲಿ ಬರುವ ಪಂಡರಂಗೆ ಎಂದರೆ ಈಗಿನ ಪಂಢರಪುರ ಎಂಬ ಅಂಶ ಸ್ಪಷ್ಟವಿದೆ.

ಇದಾದ ಬಳಿಕ ವಾರೀ ಶಬ್ದದ ಪ್ರಯೋಗವುಳ್ಳ ಇನ್ನೊಂದು ಶಾಸನವು ನನಗೆ ದೊರೆತಿತು. ಈ ಶಾಸನ ಧಾರವಾಡ ತಾಲೂಕಿನ ಮದನಭಾವಿ

ಗ್ರಾಮದಲ್ಲಿ ರಾಮಲಿಂಗ ದೇವರ ಮುಂದುಗಡೆ ನಿಂತಿದೆ. ಇದರ ವಿತಿ ಕ್ರಿ. ಶ. ೧೧೬೪ ರಲ್ಲಿ ಬರುವ ಕಾರ್ತಿಕ ಶುಕ್ಲ ಪಂಚಮಿ ಇಲ್ಲವೆ ದ್ವಾದಶಿ ಸೋಮವಾರ ಎಂದು ಇಟ್ಟುಕೊಳ್ಳಬಹುದು. ಇದರಲ್ಲಿ ಗೋವೆಯ ಕದಂಬ ವಂಶದ ಎರಡನೆಯ ಜಯಕೇಶಿ ರಾಜನು ರಾಜ್ಯವಾಳುತ್ತಿದ್ದ ವಿಷಯವನ್ನು ಹೇಳಿ ಮುಂದೆ ಆತನು ಮಂದೂರು ಗ್ರಾಮದ (ಎಂದರೆ ಇಂದಿನ ಮದನಭಾವಿಯ) ಸ್ವಯಂಭು ಕಲಿದೇವರಿಗೆ ಸೋಮವಾರದ ವಾರಿಯನ್ನು ಮಾಡಿದಂತೆಯೂ ಆ ವ್ರತದ ಉದ್ಯಾಪನ ಸಮಯದಲ್ಲಿ ಆ ಊರಿಗೆ ಬಂದು ಆ ದೇವರಿಗೆ ಭೂಮಿಯನ್ನು ದತ್ತಿ-ಬಿಟ್ಟಂತೆಯೂ ನಿವೇದಿಸಿದೆ.

ಪ್ರಸ್ತುತ ವಾರೀ ಶಬ್ದದ ಜಿಜ್ಞಾಸೆಯಲ್ಲಿ ಈ ಶಾಸನದ ಸಹಾಯವು ಸಂಸ್ಮರಣೀಯವಾಗಿದೆ. ಮೊದಲನೆಯದಾಗಿ, ಅದು ವಾರೀ ಪದದ ಪ್ರಚಾರವನ್ನು ಇನ್ನೂ ಒಂದು ನೂರು ವರ್ಷ ಹಿಂದಕ್ಕೆ (ಎಂದರೆ ೧೨ ನೆಯ ಶತಮಾನಕ್ಕೆ) ತಳ್ಳುತ್ತದೆ. ಎರಡನೆಯದಾಗಿ, ಪಂಢರಪುರದ ವಿಠ್ಠಲನಿಗೆ ಮಾತ್ರವಲ್ಲ, ಶಿವನ ಪ್ರೀತ್ಯರ್ಥವಾಗಿಯೂ ವಾರೀ ಮಾಡುವ ಪದ್ಧತಿ ಹಿಂದೆ ಪ್ರಚಲಿತವಿದ್ದಿತು ಎಂಬ ನೂತನ ವಿಷಯವನ್ನು ಇದು ಬೆಳಕಿಗೆ ತರುತ್ತದೆ. "ಸೋಮವಾರದ ವಾರೀ" ಮತ್ತು ಈ "ವ್ರತದ ಉದ್ಯಾಪನೆ" ಎಂಬ ಮಾತುಗಳನ್ನು ಈ ಶಾಸನವು ಸ್ಪಷ್ಟವಾಗಿ ಸಾರಿ ಹೇಳುತ್ತದೆ. ಮಾತ್ರವಲ್ಲದೆ, ಶಾಸನದ ತೇದಿ ಕಾರ್ತಿಕದ ಸೋಮವಾರವಾಗಿದೆ. ಈ ಅಂಶಗಳನ್ನು ಈ ಸಂದರ್ಭದಲ್ಲಿ ನಾವು ಲಕ್ಷಿಸಬೇಕಾದುದು.

ಉತ್ತರ ಕರ್ನಾಟಕದಲ್ಲಿ ಕೆಲ ಜನರಿಗೆ ವಾರೀ ಸಂಪ್ರದಾಯದ ಪರಿಚಯವಿದೆ. ಆದರೆ ವಾರೀ ಪದದ ಪ್ರಯೋಗ ಅವರ ನುಡಿಯಲ್ಲಿ ಇಲ್ಲ. ದಕ್ಷಿಣದವರಿಗೆ ಈ ವಿಶಿಷ್ಟ ಸಂಪ್ರದಾಯವೂ ಈ ಪದಪ್ರಯೋಗವೂ ಅರಿದು. ತಿರುಪತಿಯಂಥ ಪ್ರಸಿದ್ಧ ವೈಷ್ಣವ ಕ್ಷೇತ್ರಗಳಿಗೆ ಮತ್ತು ಶ್ರೀಶೈಲದಂಥ ಪ್ರಸಿದ್ಧ ಶೈವ ಕ್ಷೇತ್ರಗಳಿಗೆ ಭಕ್ತಿಯಿಂದ, ಹರಕೆಹೊತ್ತು, ನಿಯಮಬದ್ಧವಾಗಿ, ವ್ರತವೆಂದು ಹೋಗುವ ವಾಡಿಕೆ ಅಂದಿಗೂ ಇಂದಿಗೂ ಸಾರ್ವತ್ರಿಕವಾಗಿದೆ. ಆದರೆ ಅದಕ್ಕೆ ಪಂಢರಪುರದಂತೆ ವಾರೀಸಂಪ್ರದಾಯದ ವೈಭವವಾಗಲಿ, ಭಾಷಾ ಪ್ರಯೋಗದ ಬೆಂಬಲವಾಗಲಿ ಇದ್ದಂತೆ ತೋರುವುದಿಲ್ಲ.

ಮೇಲೆ ವಿವರಿಸಿದ ಶಾಸನಗಳ ಸಾಕ್ಷ್ಯವನ್ನು ಪರೀಕ್ಷಿಸಿದರೆ ವಾರೀಸಂಪ್ರದಾಯ ಮತ್ತು ಕನ್ನಡ ನುಡಿಯಲ್ಲಿ ವಾರೀ ಪದದ ಪ್ರಯೋಗ ಇವು ೧೨ ನೆಯ ಶತಮಾನದಷ್ಟು ಹಿಂದಿನ ಕಾಲದಲ್ಲಿ ರೂಢವಾಗಿದ್ದವು ಎಂದು ವ್ಯಕ್ತವಾಗುತ್ತದೆ. ಅಷ್ಟು ಹಿಂದಿನ ಮಹಾರಾಷ್ಟ್ರದಲ್ಲಿ ಇವುಗಳ ಪ್ರಚಾರವಿದ್ದಂತೆ ಆಧಾರ ದೊರೆತಿಲ್ಲ. ಕೆಲ ಶತಮಾನಗಳ ಅನಂತರವೇನೋ ಅವು ಅಲ್ಲಿ ಗೋಚರವಾಗುತ್ತವೆ. ಈ ಕಾರಣದಿಂದ ಇವು ಕರ್ನಾಟಕದಿಂದ ಮಹಾರಾಷ್ಟ್ರವು ಎರವಲಾಗಿ ಎತ್ತಿಕೊಂಡ ವಸ್ತುವೆಂದು ಹೇಳಬಹುದು. ಇದೀಗ ಅವುಗಳ ಬೆಲೆ ಮತ್ತು ಬಳಕೆಯನ್ನು ನಾವು ಕಳೆದುಕೊಂಡಿದ್ದೇವೆ. ನಮ್ಮ ಮಹಾರಾಷ್ಟ್ರೀಯ ಬಂಧುಗಳು ಮಾತ್ರ ಈ ನಾಣ್ಯಗಳ ಬೆಲೆಯನ್ನು ಅರಿತು ಅಭಿವೃದ್ಧಿಗೊಳಿಸಿದ್ದಾರೆ.

## ಬರವೊಳ್ಳಿತ್ತು

ಸರಿ—ಒಳ್ಳೆಯದು, ಎಂಬ ಅಭಿಪ್ರಾಯವನ್ನು ಸೂಚಿಸಲು 'ಬರ್‌ ಚಾಂಗಲೆ' ಎಂಬ ಜೋಡಿ ಮಾತುಗಳು ಮರಾಠೀ ನುಡಿಯಲ್ಲಿ ಬಹುವಾಗಿ ಬಳಕೆಯಲ್ಲಿವೆ. ಇವುಗಳಲ್ಲಿ 'ಬರ' ಎನ್ನುವುದಕ್ಕೆ ಸಂಸ್ಕೃತ 'ವರಂ' ಶಬ್ದ ಮೂಲವಾಗಿದೆ. ಇದೇ ರೀತಿಯಲ್ಲಿ ಸಂಸ್ಕೃತ 'ವರಂ' ದಿಂದ ಬಂದ 'ಬರಂ' ಎಂಬ ಮಾತು ಹಿಂದೆ ಕನ್ನಡದಲ್ಲಿಯೂ ಬಳಕೆಯಲ್ಲಿರಬೇಕು. ಇದಕ್ಕೆ ಶಾಸನಾಧಾರವಿದೆ. ಶಾಸನದಲ್ಲಿನ ಇಂಥ ಪ್ರಯೋಗದ ಉದಾಹರಣೆ ಇಂತಿದೆ.

> ಶ್ರೀಮತು ಕೊಂಕಣಾಧಿಪತಿ ಶ್ರೀವನ್ಯಹಾಮಂಡಳೇಶ್ವರಂ ಜಯಕೇಸಿದೇವರ ವಿವಾಹೋತ್ಸವ ಕಾಲದಲ್ಲಿ ಶ್ರೀವತ್ ತ್ರಿಭುವನ ಮಲ್ಲದೇವರು ಕುಂದೂರ್ವಿನೂಱಱ ಒಳಿಯ ಬಾಡಂ ಕನಕಾಪುರವಂ ಶ್ರೀಸೌರಾಷ್ಟ್ರದ ಶ್ರೀ ಸೋಮನಾಥದೇವರ ಧೂಪಕ್ಕೆ ಕೊಟ್ಟೆವುಮು ನಿನ್ನ ದರ್ಮವಾಗಿ ನೀ ಕಡೆಂದು ಬೇಡಲು ಬರವೊಳ್ಳಿತ್ತೆಂದಾ ದೇವಂಗೆ ಧಾರಾಪೂರ್ವಕಂ ಮಾಡಿ ಜಯಕೇಸಿದೇವರಾಚಂದ್ರಾರ್ಕತಾರಂ ಬರಂ ಕೊಟ್ಟರು.॥

ಇಲ್ಲಿ 'ಬರಂ' ಮತ್ತು 'ಒಳ್ಳಿತ್ತು' ಎಂಬ ಒಂದೇ ಅಭಿಪ್ರಾಯದ ತದ್ಭವ ಮತ್ತು ಶುದ್ಧ ಕನ್ನಡ ಪದಗಳನ್ನು ಜೊತೆಯಾಗಿ ಸೇರಿಸಿ ಅರ್ಥಪುಷ್ಟಿಯನ್ನು ಉಂಟುಮಾಡಿದ ಸಂನಿವೇಶ ಸ್ವಾರಸ್ಯಪೂರ್ಣವಾಗಿದೆ. ಮೇಲೆ ನಾವು ಕಳೆದುಕೊಂಡ ನಾಣ್ಯಗಳ ಕಥೆಯನ್ನು ವಿವರಿಸಿದ್ದೇವೆ. ಅದಕ್ಕೆ ಮತ್ತೊಂದು ಉದಾಹರಣೆ ಇದು.

ಈ ಶಾಸನ ಧಾರವಾಡ ತಾಲೂಕಿನ ಕನಕೂರು ಎಂಬ ಗ್ರಾಮದಲ್ಲಿ ದೊರೆತಿದೆ. ಇದರ ಕಾಲ ಕಲ್ಯಾಣಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಆಳಿಕೆಯ ಕ್ರಿ. ಶ. ೧೧೦೪ ( Bombay Karnatak Inscription, Vol. I, Part II Inscription No. 154 ). ಶಾಸನೋಕ್ತ ಕನಕಾಪುರ ಎಂದರೆ ಇಂದಿನ ಕನಕೂರು. ಶಾಸನದಲ್ಲಿ ಹೇಳಿದಂತೆ, ಈ ಗ್ರಾಮವನ್ನು ಸೌರಾಷ್ಟ್ರದ ಸೋಮನಾಥ ದೇವರ ಧೂಪಕ್ಕಾಗಿ ದತ್ತಿ ಬಿಟ್ಟ ವಿಷಯ ಅರ್ಥಗರ್ಭಿತವಾಗಿದೆ. ಇದರಿಂದ ಆನುಷಂಗಿಕವಾಗಿ ಕೆಲವು ಜಿಜ್ಞಾಸೆಗಳು ಹುಟ್ಟುತ್ತವೆ. ಆದರೆ ಪ್ರಸ್ತುತ ಸಂದರ್ಭದಲ್ಲಿ ಅವುಗಳ ಚರ್ಚೆ ಅನಾವಶ್ಯಕ.

## ವಜ್ರಬೈಸಣಿಗೆ

ಇದೊಂದು ವಿಲಕ್ಷಣ ಪದ. ಭಾಷಾ ದೃಷ್ಟಿಯಿಂದ ಮಾತ್ರವಲ್ಲ, ಚರಿತ್ರೆಯ ವಿಚಾರದಿಂದಲೂ ಆಳವಾದ ಅಭ್ಯಾಸಕ್ಕೆ ಅರ್ಹವಾಗಿದೆ. ಈ ಪದದ ರಹಸ್ಯವನ್ನು ಕಂಡುಹಿಡಿಯಲು ಅನೇಕ ಸಂಶೋಧಕರು ಇದುವರೆಗೆ ಶ್ರಮಿಸಿದ್ದಾರೆ. ಆದರೆ ಅವರು ಬಳಸಿದ ದಾರಿ ಗುರಿ ತಪ್ಪಿದ ಕಾರಣದಿಂದ ಅವರ ಪರಿಶ್ರಮಗಳು ಸಫಲವಾಗಿಲ್ಲವೆಂದು ಹೇಳಬೇಕಾಗಿದೆ. ಅದು ಹೇಗೆ ನೋಡುವ.

ಅಯ್ಯಾವೊಳೆ ಐನೂರ್ವರು ಎಂಬ ವ್ಯಾಪಕ ಔದ್ಯಮಿಕ ಸಂಘವೊಂದು ಪ್ರಾಚೀನ ಕರ್ನಾಟಕದಲ್ಲಿ ತನ್ನ ಸಾಮುದಾಯಿಕ ಚಟುವಟಿಕೆಗಳನ್ನು ನಡೆಯಿಸುತ್ತಿದ್ದಿತು. ಈ ಮಹಾ ಸಂಘದ ಬಹುಮುಖ ಕಾರ್ಯಕಲಾಪಗಳ ವರ್ಣನೆಗಳು ಅನೇಕ ಶಾಸನಗಳಲ್ಲಿ ಬರುತ್ತವೆ. ಈ ಸಂಘದ 'ಮಹಾನಾಡು'ಗಳು ಅಂದರೆ ಸಂಮೇಲನಗಳು ಅನೇಕ ಸ್ಥಳಗಳಲ್ಲಿ ಕಾಲಕಾಲಕ್ಕೆ ನಡೆಯುತ್ತಿದ್ದವು. 'ಮಹಾನಾಡು' ಎಂಬ ಪದಸಂಮೇಲನ ಎಂಬ ಅರ್ಥದಲ್ಲಿ ಅಂದು ಬಹುವಾಗಿ ಬಳಕೆಯಲ್ಲಿದ್ದಿತು. ಈ ಪದ ಇಂದಿನ ಕನ್ನಡ ನುಡಿಯಲ್ಲಿ ಕಾಣೆಯಾಗಿದೆ. ಆದರೆ ತಮಿಳಿನಲ್ಲಿ ಮಾತ್ರ ಇಂದಿಗೂ ಅದೇ ಅರ್ಥದಲ್ಲಿ ಬಳಕೆಯಲ್ಲಿದೆ. ಈ ವಿಷಯವನ್ನು ಹಿಂದೊಮ್ಮೆ ಚರ್ಚಿಸಿದ್ದೇನೆ ( ಕನ್ನಡ ನುಡಿ, ೧೯೫೧ ನವೆಂಬರ ಸಂಚಿಕೆ) 'ಮಹಾನಾಡು' ಪದದ ಈ ವಿಶಿಷ್ಟ ಅರ್ಥವನ್ನು ಅರಿಯದ ಕೆಲವರು ಅದನ್ನು ದೊಡ್ಡ ನಾಡು ಎಂಬ ಸಾಮಾನ್ಯ ಅರ್ಥದಲ್ಲಿ ಗ್ರಹಿಸಿದ್ದಾರೆ ಇದು ಸರಿಯಲ್ಲ.

ಈ ಸಂಘದ ಸದಸ್ಯರು ಕೆಲವೊಂದು ವಿಶಿಷ್ಟ ಸಂದರ್ಭಗಳಲ್ಲಿ ದೇವಾಲಯಗಳಲ್ಲಿ ನೆರೆದು ದೇವರ ಸನ್ಮುಖದಲ್ಲಿ ಧಾರ್ಮಿಕವೇ ಮೊದಲಾದ ವ್ಯವಹಾರಗಳನ್ನು ನೆರವೇರಿಸುತ್ತಿದ್ದರು. ಇಂಥ ಸನ್ನಿವೇಶಗಳಲ್ಲಿ ಅವರು "ವಜ್ರಬೈಸಣಿಗೆಯಾಗಿ" ಕೂಡುತ್ತಿದ್ದರೆಂದು ಇಲ್ಲವೆ "ವಜ್ರಬೈಸಣಿಗೆಯನಿಕ್ಕಿ" ಕೂಡುತ್ತಿದ್ದರೆಂದು, ಮುಂತಾಗಿ ಶಾಸನಗಳು ವರ್ಣಿಸುತ್ತವೆ. ಈ 'ವಜ್ರಬೈಸಣಿಗೆ' ಪದಕ್ಕೆ ಅರ್ಥವಿವರಣೆ ಮಾಡಲು ಹೋಟ ವಿದ್ವಾಂಸರು ಅದು ಈ ಸಂಘದ ಧ್ವಜಚಿಹ್ನ ಇಲ್ಲವೆ ಲಾಂಛನವೆಂದು ( Symbol or insignia of the guild ), ಅಧಿಕಾರಸೂಚಕ ಗದೆಯೆಂದು ( Mace ), ವಜ್ರದ ಪೀಠವೆಂದು, ಮುಂತಾಗಿ ನಾನಾ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ, ಆದರೆ ಈ ವಿವರಣೆಗಳು ಸಮರ್ಪಕವೆಂಬಂತೆ ತೋರುತ್ತ ಇಲ್ಲ.

ಇವು ಅಸಮರ್ಪಕವೆನ್ನಲು ಮುಖ್ಯ ಕಾರಣ ಇವುಗಳಲ್ಲಿ ಹೊಂದಿಕೆಯಿಲ್ಲದುದು. ಎರಡನೆಯದಾಗಿ, ಸಂದಿಗ್ಧತೆ. ಇಂಥ ಅಭಿಪ್ರಾಯಗಳನ್ನು ಸಮರ್ಥಿಸಲು ಅನ್ಯ ಆಧಾರವಾಗಲಿ, ಸೂಚನೆಯಾಗಲಿ ದೊರೆಯದೆ ಇದ್ದುದು. ಈ ಮಹಾಸಮಿತಿಗೆ ಸಾಮಾನ್ಯ ಲಾಂಛನವೊಂದು ಇದ್ದ ಹಾಗೆ ನಿರ್ದೇಶವಿಲ್ಲ. ಮಾತ್ರವಲ್ಲ; ಈ ಸಮಿತಿಗೆ ಸೇರ್ಪಡೆಯಾಗಿದ್ದ ಕೆಲವೊಂದು ಪಂಗಡಗಳಿಗೆ ಮುಮ್ಮುರಿ ದಂಡ, ಭಲ್ಲುಂಕಿ ದಂಡ, ವಿಶುದ್ಧ ಗುಡ್ಡಧ್ವಜ ( ಇವುಗಳ ವಿವರಣೆ ಇನ್ನೊಮ್ಮೆ ಮಾಡಲಿರುವೆ), ಮುಂತಾದ ಸಂಕೇತಗಳು ಇದ್ದಂತೆ ಕಂಡುಬಂದಿದೆ. ಈ ಸಮಿತಿ ತನ್ನ ಅಧಿಕಾರಸೂಚಕವಾಗಿ ಗದೆಯಂಥ ಒಂದು ಉಪಕರಣವನ್ನು ಇಟ್ಟುಕೊಂಡಂತೆ ತಿಳಿದುಬಂದಿಲ್ಲ. ಮೂರನೆಯದಾಗಿ, ದೇವಾಲಯದಂಥ ಧಾರ್ಮಿಕ ಸ್ಥಲಗಳಲ್ಲಿ ಲೌಕಿಕ ವೈಭವದ ಕುರುಹಾದ ವಜ್ರಸಿಂಹಾಸನವನ್ನು ಸ್ಥಾಪಿಸುವುದು ನಮ್ಮ ಸಂಸ್ಕೃತಿ ಮತ್ತು ಪರಂಪರೆಗೆ ಅನುಗುಣವಾಗಲಾರದು.

ಈ ಕಾರಣಗಳಿಂದಾಗಿ ನಾವು ಬೇರೊಂದು ಬಗೆಯಿಂದ ಈ ಪದದ ಅಭಿಪ್ರಾಯವನ್ನು ವಿಮರ್ಶಿಸಬೇಕಾಗಿದೆ. ಈ ವಿಚಾರದಲ್ಲಿ ಈ ವರೆಗೆ ತಪ್ಪು ತಿಳಿವಳಿಕೆ ಉಂಟಾಗಲು ಮುಖ್ಯಕಾರಣ ರತ್ನ ( Diamond ) ಎಂಬ ಅರ್ಥದಲ್ಲಿ 'ವಜ್ರ' ಎಂಬ ಶಬ್ದವನ್ನು ಗ್ರಹಿಸಿದುದು. ವಜ್ರ ಶಬ್ದಕ್ಕೆ ಅನ್ಯಾರ್ಥಗಳೂ ಇವೆ. ಮೋನಿಯರ್ ವಿಲ್ಯಮ್ಸ ಕೋಶದಲ್ಲಿ ವಜ್ರದ ಆಕಾರವು ಕತ್ತರಿಯಂತಹದು ( Having the form of two transverse bolts crossing each other thus × ) ಎಂದು ವಿವರಿಸಿಕೊಡುವ ಒಂದು ವಿಧಾನ ( Particular posture of sitting ), ಮುಂತಾದ ಅರ್ಥಗಳನ್ನು ಕೊಟ್ಟಿದೆ. ಇದು ಪ್ರಸ್ತುತ ಜಿಜ್ಞಾಸೆಯಲ್ಲಿ ಗ್ರಾಹ್ಯವೆಂದು ನನಗೆ ತೋರುತ್ತದೆ.

ಈ ಪದದ ಯಥಾರ್ಥ ತಿಳಿವಳಿಕೆಗೆ ಹೆಚ್ಚು ಸಹಾಯ ಅದರಲ್ಲಿನ ಇನ್ನೊಂದು ಶಬ್ದದಿಂದ ದೊರೆಯುತ್ತದೆ. ಅದು 'ಬೈಸಣಿಗೆ'. ಇದರ ಮೂಲ ಸಂಸ್ಕೃತ 'ಉಪವೇಶನ' ದಿಂದ ಉಂಟಾದ 'ಉಪವೇಶನಿಕಾ' ಆಗಿರಬೇಕು. 'ಉಪವೇಶನಿಕಾ' ಎಂದರೆ ಕೂಡುವ ರೀತಿ. ಸಂಸ್ಕೃತ 'ಉಪ ವಿಶ್' ( ಕೂಡು) ಪ್ರಾಕೃತದಲ್ಲಿ 'ಬೈಸ' ಆಗುತ್ತದೆ.

ಇಂತು ವಜ್ರ ಮತ್ತು ಉಪವೇಶನಿಕಾ ಈ ಉಭಯ ಶಬ್ದಗಳ ಸಂಯೋಗದಿಂದ ಉಂಟಾದ ವಜ್ರಬೈಸಣಿಗೆ ಎಂಬ ಪದದ ಅರ್ಥವನ್ನು ರೂಢಿಯ ಮಾತಿನಲ್ಲಿ ಹೇಳುವುದಾದರೆ, ಅದು 'ಚಕ್ಕಳಮುಕ್ಕಳಿ ಹಾಕಿ ಕೂಡುವುದು' ಎಂದಾಗುತ್ತದೆ. ಇಲ್ಲಿ 'ಹಾಕಿ' ಎಂಬ ಸ್ಥಳದಲ್ಲಿ 'ಇಕ್ಕಿ' ಎಂಬ ಮಾತನ್ನೂ ಬಳಸಬಹುದು. ಹೀಗೆ ಪ್ರಯೋಗಗಳು ಸಿಕ್ಕುತ್ತವೆ; ಉದಾಹರಣೆಯಾಗಿ 'ಅಂಬೆಗಾಲು ಹಾಕು' ಇಲ್ಲವೆ 'ಇಕ್ಕು'.

ಹೀಗೆ ಚಕ್ಕಳಿ ಮುಕ್ಕಳಿ ಹಾಕಿ ಕೂಡುವುದಕ್ಕೆ ಶಾಸ್ತ್ರೀಯ ಪರಿಭಾಷೆಯಲ್ಲಿ ವಜ್ರಾಸನ ಎನ್ನುವರು ಯೋಗಶಾಸ್ತ್ರದಲ್ಲಿ ಇದನ್ನು ಹೀಗೆ ವರ್ಣಿಸಿದೆ:-
ಜಂಘೋಭ್ಯಾಂ ವಜ್ರವತ್ ಕೃತ್ವಾ ಗುದಪಾರ್ಶ್ವೇ
ಪದಾವುಭೌ।

ಈ ವರ್ಣನೆಯಲ್ಲಿ ಬರುವ 'ವಜ್ರವತ್ ಕೃತ್ವಾ' ಎಂಬ ಮಾತು ಲಕ್ಷಣೀಯವಾಗಿದೆ. ಈ ವಜ್ರಾಸನವು ಪದ್ಮಾಸನದಿಂದ ಭಿನ್ನವಾಗಿದೆ. ಪದ್ಮಾಸನದಲ್ಲಿ ಪಾದಗಳು ಮೇಲುಗಡೆ ಬರುತ್ತವೆ. ವಜ್ರಾಸನದಲ್ಲಿ ಕೆಳಗಡೆ.

ಮೇಲೆ ವಿವೇಚಿಸಿದ ವಜ್ರಬೈಸಣಿಗೆ ಪದದ ಅರ್ಥವನ್ನು ಕುರಿತು ಒಂದು ಸೂಚನೆಯನ್ನು ಸುಮಾರು ಮೂವತ್ತು ವರ್ಷಗಳ ಹಿಂದೆ ದಿವಂಗತ ಆರ್. ನರಸಿಂಹಾಚಾರ್ ಬಾರ್ನೆಟ ಸಾಹೇಬರಿಗೆ ಕೊಟ್ಟರು. ಅದನ್ನು ಬಾರ್ನೆಟ್ Epigraphia Indica, Vol. XIX, p. 30 ರಲ್ಲಿ ಅಡಿಟಿಪ್ಪಣಿಯ ರೂಪದಿಂದ ಕಾಣಿಸಿದ್ದಾರೆ. ಆದರೆ ಈ ಸೂಚನೆಯನ್ನು ಕೈದೀಪವಾಗಿ ಎತ್ತಿಕೊಂಡು ಬಾರ್ನೆಟ್ ಆಗಲಿ, ಬೇರೆ ಸಂಶೋಧಕರಾಗಲಿ, ಜಿಜ್ಞಾಸೆಯನ್ನು ಮುಂದುವರಿಸಲಿಲ್ಲ.

ವಜ್ರಬೈಸಣಿಗೆಯ ಅರ್ಥವನ್ನು ಕುರಿತು ಅನ್ಯ ಸಂಶೋಧಕರು ಮಾಡಿದ ಸೂಚನೆಗಳಿಗಾಗಿ ಈ ಮುಂದಿನ ಕೆಲವು ಗ್ರಂಥಸಂದರ್ಭಗಳನ್ನು ನೋಡಬಹುದು :

1. Rice, *Mysore and Coorg* etc. p. 182; 2. N. Venkataramanayya, *Studies in the Third Dynasty of Vijayanagar* p. 308; 3. Saletore, *Karnataka's Trans-Oceanic Contacts*, pp. 26–27; 4. ಸೋಮಶೇಖರ ಶರ್ಮ, ಭಾರತಿ ( ತೆಲುಗು ), Vol. XXIV No, 7; 5. ಸಂಭಾವನೆ, 'ಶಾಸನಗಳಲ್ಲಿ ಪರಿಭಾಷೆ', ಪು. ೨೧೨,



# ನಾ ಕಂಡ ಹೊಸ ಕವಿಗಳು

ಲೇಖಕರು : ಶ್ರೀ. ದ. ಬಾ. ಕುಲಕರ್ಣಿ, ಧಾರವಾಡ

ಕನ್ನಡದ ಕಾವ್ಯಮಾರ್ಗ ಹೊಸತಾಗುವಂತೆ ಹೊಸ ಕವಿಗಳು ಉದಯವಾಗುವದು ಸ್ವಾಭಾವಿಕ. ನವ್ಯತೆ, ಅಧುನಿಕತೆ ಅವರ ಕವನಗಳಲ್ಲಿ ಒಡಮೂಡುವದು. ಈ ಕವಿಗಳಲ್ಲಿಯ ಕೆಲವರ ಗುಣಗಳನ್ನು ಎತ್ತಿತೋರಿಸುವದೇ ಈ ಲೇಖನದ ಉದ್ದೇಶವಾಗಿರುವದು.

೧

ಆರೇಳು ವರುಷಕ್ಕೆ ಮೊದಲು ಕೆಲವು ಜನ ಕನ್ನಡ ಅಧುನಿಕ ಕವಿಗಳನ್ನು ಕುರಿತು ಬರೆದಿದ್ದೆ. ಕವಿಗಳು ಏನೆಂದುಕೊಂಡರೋ ತಿಳಿಯದು. ಆದರೆ ಅದನ್ನೋದಿದ ಸಾಹಿತ್ಯಿಕ ಮಿತ್ರರು ಮೆಚ್ಚಿಕೊಂಡು 'ನೀವು ನೋಡಿದ ಇನ್ನುಳಿದ ಕವಿಗಳ ಬಗ್ಗೆ ಯಾಕೆ ಬರೆಯಬಾರದು?' ಎಂದರು. ಇನ್ನು ಬರೆಯಬೇಕಾದರೆ ಅತ್ಯಾಧುನಿಕರ ಬಗ್ಗೆ ಬರೆಯಬೇಕು. ನನ್ನ ಸಮವಯಸ್ಸಿನವರ ಬಗ್ಗೆ ಬರೆಯುವಾಗ ಮಾತು ಸ್ವಲ್ಪ ಬಿಚ್ಚಾಗಿ ಅವರು ಕುಸ್ತಿಗೆ ಬಂದಾರೆ'ಂದು ಹಿಂದಿನ ಲೇಖನದಲ್ಲಿ ಶಂಕೆ ವ್ಯಕ್ತಮಾಡಿದ್ದೆ. "ಯಾಕೆ—ನಾವು ಕವಿಗಳಲ್ಲವೇನು? ನಮ್ಮನ್ನು ಕಂಡಿಲ್ಲವೇನು ನೀವು?" ಎಂದೇ ಒಂದಿಬ್ಬರು ಸ್ನೇಹದಿಂದ ಏರಿಬಂದರು.

**ಕವಿ ವಿನಾಯಕ—**

ಅಧುನಿಕ—ಅತ್ಯಾಧುನಿಕ ಎಂದೆ; ಇಂದಿನ ಹೊಸ ಕವಿಗಳು ಎಂದೆ. ಇಂದಿನ ಹಳೆಯ ಕವಿಗಳೆಂದು ಕಳೆದ ಬಾರಿ ಬರೆದ ಅದ್ಯ ಕವಿಗಳನ್ನೂ ಕರೆಯುವಂತಿಲ್ಲ. ಯಾಕೆಂದರೆ 'ಪಯಣ', 'ಕಲೋಪಾಸಕ'ದ ಕವಿ ವಿನಾಯಕರು ಸ್ವಚ್ಛಂದ ಛಂದದ 'ಸಮುದ್ರಗೀತ'ಗಳನ್ನು ಬರೆದರು. ಮುಂದೆ 'ಅಭ್ಯುದಯ' ಪಂಥಕ್ಕೆ, ನವ್ಯಕಾವ್ಯ ಪಂಥಕ್ಕೆ 'ಪ್ರವರ್ತಕ'ರಾಗಿ ನಾಂದಿ ಹಾಡಿದರು. ಇಂದಿಗೂ ಹಾಗೇ 'ಉಗವು'—'ದ್ಯಾವಾಪೃಥಿವೀ'—ಎಂದು ಮುಂದುವರಿದಿದ್ದಾರೆ. 'ಕುವೆಂಪು' ಒಮ್ಮೆ ಮಾತನಾಡುತ್ತ—ವೇದಿಕೆಯಿಂದಲ್ಲ; ಸಂಭಾಷಣೆಯಲ್ಲಿ — 'ನಾಳೆ, ನಾಡಿದ್ದು ನವ್ಯವಾಗಬಹುದಾದಂಥವನ್ನು ನಾನು ನಿನ್ನೆ-ಮೊನ್ನೆಯೇ ಬರೆದುಹಾಕಿದ್ದೇನೆ' ಎಂದರು. ಕವಿಗಳೂ ಕಾಲಕ್ಕೆ ತಕ್ಕಂತೆ ವೇಷ ಬದಲಿಸಬೇಕಾಗುತ್ತದೆ; ಬಿಸಿಲು ಬಂದಂತೆ ಕೊಡೆ ಹಿಡಿಯಬೇಕಾಗುತ್ತದೆ. ಕವಿ ಕಾಲದ ನೆರಳು—ಛಾಯೆ. ತಲೆಗೆ ಬಿಸಿತಾಗಿದರೂ ಕಾಲಡಿ ನೆಳಲೇ.



ವಿನಾಯಕ

*　*　*

ಈ ಶತಮಾನದ ಮೂರು-ನಾಲ್ಕನೆಯ ದಶಕದ ಕವಿಗಳಿಗೆ ಮುಂಚಿನ ಕವಿಗಳ 'ಪ್ರಯೋಗಸಿದ್ಧಪಾಕ' ಸಿಕ್ಕಿರಬಹುದು. ಜೀವನದಲ್ಲಿ ಮುಂಚಿನವರಷ್ಟು ಈಚಿನವರು ಸುಖಿಗಳಾಗಿಲ್ಲ. ಕಾರಣ ವೈಯಕ್ತಿಕವಾಗಿದ್ದರೆ ಹೇಳುವ ಕಾರಣವಿದ್ದಿಲ್ಲ. ಆದರೆ ಇದು ಒಂದು ತಲೆಮಾರಿನ ಸಮಾಜವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತಿರುವುದರಿಂದ ಅವರ ಕಾವ್ಯಾವಸ್ಥೆಯ ಮೇಲೂ ಅದರ ಪರಿಣಾಮವಾಗುತ್ತದೆ. ಕಾಲೇಜಿನ ವ್ಯಾಸಂಗಕ್ಕೆ ಹೇಗೂ ಅನುವುಮಾಡಿಕೊಂಡು, ಪದವಿ ಪಡೆದು, ತಾವು ನಿರೀಕ್ಷಿಸಿಕೊಂಡ ಬದುಕಿನ ಕನಸು ಒಡೆದು 'ಉಧೋ' ಎಂಬಂತಾದ ಸಂದರ್ಭ ಬಹುಮಟ್ಟಿಗೆ ನಮ್ಮ ಈಚಿನ ಪೀಳಿಗೆಗೆ ಒಛೆದಿದೆ. ಈ ಕಾಲದಲ್ಲಿ ಜೀವನದ ಅವಶ್ಯಕತೆಗಳು ಹೆಚ್ಚಿದವು. ಅವನ್ನು ಪಡೆಯುವ ಚೈತನ್ಯ ಉಡುಗಿತು. ಇದರ ಪರಿಣಾಮವೇ ಇಂದಿನ ಕವಿಗಳ ಉಲ್ಲಾಸರಾಹಿತ್ಯಕ್ಕೆ ಕಾರಣವಾಗಿದ್ದರೆ ಆಶ್ಚರ್ಯವಲ್ಲ.

ಒಂದೊಮ್ಮೆ ಪ್ರಸಿದ್ಧಿಗೆ ಬಂದ ಕವಿಗಳನ್ನು ಆರಾಧಿಸಿ, ಅವರ ಅಭಿಪ್ರಾಯದ ಪ್ರಸಾದದಲ್ಲಿಯೇ ತೃಪ್ತಿಪಡೆದರು — ಕೆಲವರು ಹೊಸ ಕವಿಗಳು, ಮುಂದೆ ಮನಸ್ಸು ಬಲಿತಾಗ ತಮ್ಮತನವನ್ನು ಹುಡುಕಾಡಿದರು. ಕೆಲವರು ಕಂಡರು; ಕೆಲವರು ಆಗಲೆ ಕಳೆದುಕೊಂಡುದನ್ನು ಕಂಡುಕೊಂಡರು. ಮುಂಚಿನವರಿಗಾದರೆ ನವಸೃಷ್ಟಿಕಾರ್ಯದ ಹುಮ್ಮಸ್ಸಿತ್ತು. ಪರಂಪರೆಯೊಡನೆ ಹೋರಾಟವಿತ್ತು. ಪಡೆದ ಫಲವನ್ನು ರುಚಿಯಾಗಿ ಮಾಡಿಕೊಂಡು — ಹಂಚಿಕೊಂಡು — ತಿನ್ನುವ ಔದಾರ್ಯವಿತ್ತು.

ಆ ಕಾಲದ ರಾಜಕೀಯ ಅಂದಿನ ಜನತೆಯ ಮೇಲೆ ಒಳ್ಳೆಯ ಪರಿಣಾಮವನ್ನೇ ಮಾಡಿತ್ತು. ಆಗಿನ ರಾಜಕೀಯ ಕೆಲಸಗಾರರು ಇಂದು ಧುರೀಣರಾಗಿದ್ದಾರೆ, ಇಲ್ಲವೆ ಅವರ ನೆರಳಾಗಿ ಮಂತ್ರಿಗಳಾಗಿದ್ದಾರೆ. ಸಾಹಿತಿಗಳು ಪೀಠಸ್ಥರಾಗಿದ್ದಾರೆ. ಜನ ಅವರನ್ನು ಹಾಗೆ ಗೌರವಿಸಿತು.

ಇಂದಿನವರಿಗೆ ಈ ಭಾಗ್ಯವಿಲ್ಲ. ಡಿಪ್ರೆಶನ್—ಎಲ್ಲ ರಂಗದಲ್ಲಿಯೂ ಬಂದು ಹಿಗ್ಗುವ ಜನದ ಮನಸ್ಸು ಉಡುಗಿಹೋಯಿತು. ರಾಜಕೀಯದಲ್ಲಿ 'ಸಾಧಿಸುವ' ವೃತ್ತಿ ಬೆಳೆಯಿತು. ಸಾಹಿತ್ಯ ಅನುಕರಣ ಪಥ ಹಿಡಿಯಿತು. ಜನತೆಯಲ್ಲಿ ಶ್ರದ್ಧೆಯ ಅಂಶ ಕಡಿಮೆಯಾಗತೊಡಗಿತು. ಬಡತನ ಕಂಗೊಳಿಸಿತು. ಮುಂದಾಳುಗಳು ಹೊಸ ಜನರನ್ನು ಸೇವಕರನ್ನಾಗಿ ಕಂಡರು. ಸ್ವಂತ ವ್ಯಕ್ತಿತ್ವದ ವಿಕಾಸಕ್ಕೆ ಅಸ್ಪದ ಕಡಿಮೆಯಾಯಿತು. ಈ ಕಾಲಖಂಡ ಸುದೀರ್ಘವಾಗಿ, ಒಂದೆರಡು ಪೀಳಿಗೆಗಳೇ ನಿಷ್ಕ್ರಿಯವಾದವೆನ್ನಬಹುದು.

ಇಂಥ ಸಾಂಕ್ರಾಮಿಕ ಕಾಲದಲ್ಲಿ ಬೆಳೆಯಬೇಕಾದ ಪೀಳಿಗೆ ಗ್ರಹಣಗತಿ ಹೊಂದಿದ್ದರಿಂದ ಎರಡನೆಯ, ಮೂರನೆಯ ದಶಕದ ಮುಂದಾಳುಗಳು ಇಂದೂ ಮುಂದಾಳುಗಳಾಗಿಯೇ ಉಳಿಯುವಂತಾಗಿದೆ. ಅವರ ನಂತರ ಅವರಷ್ಟು ಯೋಗ್ಯತೆಯ, ಅವರಷ್ಟು ಕ್ರಿಯಾಶೀಲತೆಯ ಪೀಳಿಗೆ ಕಾಣದಾಗಿದೆ. ಅದು ಹೊಸದಾಗಿ ಹುಟ್ಟಿಬರುವಾಗ ಬೆಳಗಾದೀತು. ಈ ಡೊಗರನ್ನು ಅಗ್ನಿದಿವ್ಯದಿಂದಲೇ ತುಂಬಬೇಕಾಗಿದೆ.

*　*　*

ಛಂದಸ್ಸು ಎಂದರೆ ಹಳೆಯ ಛಂದಸ್ಸು ಬಿಟ್ಟು ಬರೆದ ಭಾವಗೀತೆಗಳಿಗೆ ನಾವು ಅಧುನಿಕವೆಂದೆವು. ಅದನ್ನು ಇಂಗ್ಲಿಷಿನ ರೋಮ್ಯಾಂಟಿಕ್ ಯುಗಕ್ಕೆ ಹೋಲಿಸಿದೆವು. ಅದಕ್ಕೇ ಒಂದು ಛಂದಃಶಾಸ್ತ್ರ ಬರೆಯುವ ವ್ಯಾಪ್ತಿ ಪಡೆಯಿತು. ಆ ಪ್ರಕಾರ ಹಾದಿ ಬಿಟ್ಟು ಬರೆದದ್ದು ಅತ್ಯಾಧುನಿಕವೆನ್ನುತ್ತಾರೆ — ಕೆಲವರು. ಆದರೆ ಗೋಕಾಕರು ನವ್ಯಕಾವ್ಯಕ್ಕೆ ಲಕ್ಷಣ ಹೇಳುತ್ತಾರೆ. ಅಡಿಗರು ಈ ವರೆಗೆ ಬರೆದ, ದಾರಿಯಲ್ಲಿ ನಾನಿನ್ನು ಬರೆಯಲಾರೆ — ಎನ್ನುತ ಬೇರೆ ಮಾರ್ಗದಲ್ಲಿಯೇ ಬರೆಯತೊಡಗಿದ್ದಾರೆ. 'ನಡೆದದ್ದೇ ದಾರಿ' ಎಂಬ ರಾಜಕಾರಣದ ವ್ಯಾಖ್ಯೆ ಕಾವ್ಯಕ್ಕೂ ಬಡಿದುಕೊಂಡಿತಲ್ಲಾ — ಎಂದು ಎದೆ ಬಡೆದುಕೊಳ್ಳುವಂತೆ ನವ ಕಾವ್ಯದ ಕರೆ ದುಂದುಮಿಸಿತ್ತು. ಆದರೆ ಅದರ ಕಾವೂ ಇಂದು ಬಿಸಿಯಾರಿದೆ.

ನನ್ನ ಉದ್ದೇಶ ಕಾವ್ಯ ವಿಮರ್ಶೆಯಲ್ಲ; ಕವಿಗಳ ವೈಯಕ್ತಿಕ ಸರಣಿ. ಇವರೆಲ್ಲ ಕವಿಗಳಾದುದರಿಂದ ಕಾವ್ಯಸರಣಿಯನ್ನೆ ವ್ಯಕ್ತಿತ್ವಕ್ಕೆ ಗುರಿಮಾಡಿಕೊಂಡರೆ ಕಾವ್ಯಕ್ಕೆ ಕೈಯಿಕ್ಕಬೇಕಾದೀತು. ಮೇಲಾಗಿ ಸಮಕಾಲೀನ, ಸಮ ವಯಸ್ಕರ ಬಗ್ಗೆ ಬರೆಯುವಾಗ ಮಾನವನ ಪುರಾತನತೆ ಮುಂಗಾಟ ಬಂದರೇನು ಮಾಡಬೇಕು?

ನಾನು ಕಂಡ ಇಂದಿನ ಕವಿಗಳಲ್ಲಿ ಕಾವ್ಯಸಂಗ್ರಹ ಕಾಣದವರೂ ಇದ್ದಾರೆ. ಅಂದಾಕ್ಷಣ ಅವರು ಕವಿಗಳಲ್ಲವೆಂದು ಹೇಗೆ ಬಿಡಲಿ? ಕಾವ್ಯಸಂಗ್ರಹ ಪಡೆದರೂ ಕವಿಯೆನಿಸಿಕೊಳ್ಳಲಿಲ್ಲವಲ್ಲಾ — ಎಂದು ಗೋಳಾಡುವವರಿದ್ದಾರೆ. ಅವರನ್ನೇನು ಮಾಡಲಿ? ಆದ್ದರಿಂದ ಕಾವ್ಯಗುಣಕ್ಕೆ ಕೈಯಿಕ್ಕುವುದು ಉಚಿತವಲ್ಲವೆಂದು ಕಂಡವರನ್ನು ಕಂಡಂತೆ ಹೇಳಿಬಿಡುತ್ತೇನೆ.

**ನೋಗೇರಿ ಗೋಪಾಲಕೃಷ್ಣ ಅಡಿಗ—**

ಇವರು ಇಂದಿನ ತಲೆಮಾರಿನ 'ಪ್ರಮುಖ' ರು ಎಂದು ಹೆಸರಾಗಿದ್ದಾರೆ. 'ಪ್ರಮುಖ' ಎಂದೆ, ಹಿರಿಯ ಎಂಬುದನ್ನವರು ಒಪ್ಪಲಿಕ್ಕಿಲ್ಲ. ಹಿರಿತನದ ಜತೆಗೆ ಬರುವ ಹಳೆತನವನ್ನವರು ಒಪ್ಪುವದಿಲ್ಲ. ಬಂದ ನಾಲ್ಕು ಕವನ ಸಂಗ್ರಹ ಗಳಿಗೂ ಒಂದೊಂದು ಮನ್ವಂತರವನ್ನು ಸಾರುವ 'ಹಟ' ಅವರದು.



ಅಡಿಗ

ಹದಿನೈದು ವರುಷಕ್ಕೂ ಮೊದಲು ಅವರನ್ನು ಕಂಡೆ. ಆಗ ಅವರು 'ಕಲ್ಲಾಗು-ಕಲ್ಲಾಗು' ಎಂಬ ಪದ್ಯ ಬರೆದಿದ್ದರು. ತಾನು ಕವಿ, 'ಕಲ್ಲಾಗು' ಎನ್ನುತ್ತಾನಲ್ಲಾ—ಎಂದುಕೊಂಡೆ. ಮುಂದೆ ಒಂದೆರಡು ವರುಷಗಳ ನಂತರ ಕಂಡಾಗ ಆಗಲೆ ಅವರದೊಂದು ಕವನಸಂಗ್ರಹ ಪ್ರಕಟ ವಾಗಿ ಕವಿಮುದ್ರೆ ಬಿದ್ದಿತ್ತು. ಮದುವೆಯೂ ಆಗಿತ್ತು. ನೋಡುವದಕ್ಕೆ ಸಂಕೋಚದ ಪ್ರಾಣಿ ಎಂಬಂತೆ ಕಂಡರೂ ಇವರು ಆಡುವ ಮಾತು ಸ್ಪಷ್ಟ. ವಿಮರ್ಶಕ ಮೆಚ್ಚಿದ್ದನ್ನು ಮುಕ್ತಮನಸ್ಸಿ ನಿಂದ ಯಾಕೆ ಹೇಳುವದಿಲ್ಲ—ಎಂಬ ಕೊರಗು ಇವರಿಗೆ. ಇಂಗ್ಲಿಷ್ ಓದಿನಿಂದಲೇ ಇರಬೇಕು, ತೃಪ್ತಿಯೇ ಇಲ್ಲದ ಜೀವ. ಜೀವನದಲ್ಲಿ ಹೇಗೊ ಹಾಗೆ ಸಾಹಿತ್ಯದಲ್ಲೂ ಒದ್ದಾಟ: ಅದೇ ಹೋ-ರಾಟ- ಅದರಿಂದ ಅರ್ಥವ್ಯಾಪ್ತಿ ಬೆಳೆಯುತ್ತ ದಂತೆ. ಇದು ಇಂದಿನದಲ್ಲ ಎಂದು ನಾಳಿನದಕ್ಕೆ ಕೈಯಿಕ್ಕುವಾಗ ಅದೂ ಒಮ್ಮೆ ಹಳೆಯದಾದೀ-ತಲ್ಲ—ಎಂಬ ಬೇಗುದಿ ಇವರದು. ತನ್ನ ಕಾಲದ ಚೈತನ್ಯವನ್ನು ಗುರುತಿಸಿ ಮುಕ್ತವಾಗಿ ಹೇಳುವ ಹಸನಾದ ದೃಷ್ಟಿಯಿದೆ ಇವರಿಗೆ. ಚಿತ್ತಾಳರ ೫೦ ಪುಟದ ಸಂಗ್ರಹಕ್ಕೆ ೨೦ ಪುಟದ ವಿಮರ್ಶೆ ಬರೆ ದರು. ನವ್ಯ ಕವಿತೆಯನ್ನು ಹೊತ್ತು ಹತ್ತು ದಿಕ್ಕಿಗೂ ತಿರುಗಿದರು. ತಾನು ಕಂಡ ದರ್ಶನ ವನ್ನು ಕಾಣಿಸುವುದರ ಬಗ್ಗೆ ತುಂಬ ಕಳಕಳಿ. ಹಿಂದಿನವರ ಬಗ್ಗೆ—ಅವರ ಕೃತಿಗಳ ಬಗ್ಗೆ ಆದರ ತುಂಬ ಇದೆ. ಆದರೆ ಇಂದೂ ಹಾಗೇ ಬರೆದರೆ ಆಗುವದಿಲ್ಲ—ಎಂಬ ಪಂಥ. ಅದಕ್ಕಾಗಿ ಹತ್ತು ಜನರನ್ನು ಎದುರು ಹಾಕಿಕೊಂಡರು, ಹತ್ತು ಜನ ರನ್ನು ಬೆನ್ನಿಗೆ ಕಟ್ಟಿಕೊಂಡರು. ಜಂಬ ಇವರಿ-ಗಾಗುವದಿಲ್ಲ, ಅದನ್ನು ಅಣಕ ಮಾಡಿ ಖಂಡಿಸು ವುದೂ ಜಂಬವಾದೀತೆಂಬ ಹೆದರಿಕೆಯೂ ಇಲ್ಲ ಇವರಿಗೆ.

* *

**ಬ. ಹೆ. ಶ್ರೀಧರ—**

ಇವರ ರೀತಿಯೇ ಭಿನ್ನ. ಇವರ ಕವಿತ್ವಕ್ಕೆ ವ್ಯಕ್ತಿತ್ವದ ಮುದ್ರೆಯಿದೆ. ಬಾಲಪುರಂದರ ಎಂಬ ಕಾವ್ಯನಾಮದಿಂದ ಕವಿತೆ ಬರೆಯುತ್ತಿದ್ದರು. ಆಗ ಹೂವಿನಶಾಲು ಹೊದ್ದುಕೊಂಡ ಇವರ ಭಾವ-ಚಿತ್ರ ನೋಡಿದ್ದೆ. ಮುಂದೆ ಅವರನ್ನು ಕಂಡಾಗ ಸರ್ಕಸ್ಸಿನ ರಿಂಗ್ ಮಾಸ್ಟರಿನ ಕರಿಕೋಟು ಹಾಕಿ, ಹಾಗೇ ಕೂದಲು ಕತ್ತರಿಸಿದ್ದರು. ಕಂಡರೆ ಸಾಕು ಶ್ರಾವಣದ ಮಳೆಯಂತೆ ಮಾತು. ಮಧ್ಯೆ ಮಧ್ಯೆ ಸಂಸ್ಕೃತ ಸೆಳಕುಗಳು, ಗಾದಿ ಮಾತುಗಳ ಸಿಡಿಪನಿ. ಹೇಳಿದ್ದನ್ನೆ ಹತ್ತು ದಾರಿಯಲ್ಲಿ ಹೇಳಿ ಸಮರ್ಥಿಸು ತ್ತಾರೆ, ಅಂದದ್ದನ್ನೆ ಆಗಾಗ ಅನ್ನುತ್ತಾರೆ. ಇವರ ಬಾಯಿ ಮುಚ್ಚಿದಾಗ ನಾವು ಮಾತಾಡಬೇಕೆಂದರೆ ಅದಕ್ಕೆ ಬೀಗನೆ ಇಲ್ಲ. ಕಂಡವರ ಹತ್ತಿರ ಯಾಕೆ ಮಾತಾಡಿ ಯಾರು? ಸ್ನೇಹಿತರ ಹತ್ತಿರ ಯಾಕೆ ಬಿಟ್ಟಾರು? ಮನೆ-ಯಾಕೆ ಇವರ ಮಾತು ಸಹಿಸಿ ಕೊಂಡದ್ದೂ ಅಲ್ಲದೆ ಇವರ ಬರಹಗಳನ್ನು ಕೂಡಿಸಿಡು ತ್ತಾರೆ. ಪ್ರೀತಿ ಸಹ್ಯವಾದಂತೆ ಅದನ್ನು ಹೊತ್ತುತರುವ ಮಾತು ಸಹ್ಯವಾಗ ದಿದ್ದೀತೆ?



ಬ. ಹೆ. ಶ್ರೀಧರ

ನಾನು ಮನೆಗೆ ಹೋದಾಗ ಬೇಸಗೆಯೆಂದು ಕಾಣುತ್ತದೆ; ಅಂಗಿ ಕಳಿಚಿದರು. ಕೊರಳಲ್ಲಿ ಬಂಗಾರದ ಪದಕವಿತ್ತು. 'ಇದೇನು ಸ್ವಾಮೀ' ಎಂದೆ. 'ಸಂಸ್ಕೃತ ಮೆಡ್ಲು; ಇನ್ನೂ ಮಾರದೆ ಉಳಿಸಿಕೊಂಡಿದ್ದೇನೆ'—ಎಂದರು. ಸಂಸ್ಕೃತ ಈಸು ಕಲಿತಂತೆ—ಎಂದು ಹೇಳುತ್ತಾರೆ. ಇವರ ವಾಣಿಗೆ ಅದು ಸದಾ ಪದಕವಾಗಿಯೇ ಇದ್ದೀತು.

ಇವರಿಗೆ ಸ್ತ್ರೀ ಜಂಬ ಕಂಡರಾಗುವದಿಲ್ಲ. ಆಧುನಿಕ ಸ್ತ್ರೀ ಎಂದರೆ ಜಂಬವೆಂದು ಇವರ ಅಭಿ-ಪ್ರಾಯವಾಗಿತ್ತು, ಒಂದೊಮ್ಮೆ. ಅಭ್ಯಾಸ—ಅಳವಿಲ್ಲದ್ದು ಜಂಬವೆನ್ನುತ್ತಾರೆ. ಜಂಬ ಸ್ತ್ರೀ ಸಹಜ ಅಭ್ಯಾಸವೆಂದು ಹೇಳಿದ ಗಂಡಿಗೆ ಸ್ತ್ರೀ ಇಂದು ಅಭಿಪ್ರಾಯ ವ್ಯಕ್ತಮಾಡುವ ಕಾಲ ಬಂದಿದೆ. ಆಧುನಿಕ ಸಂಕೋಚ—ಅದೇ ಜಂಬ ದಿಂದ ಶ್ರೀಧರರು ಉತ್ತರ ಕಾಣದೆ ತಮ್ಮ ಅಭಿ-ಪ್ರಾಯಕ್ಕೆ ಇನ್ನೂ ಅಂಟಿಕೊಂಡಿರಬೇಕು. ಅಡಿ ದಂತೇ-ನೀರು ಕುಡಿದಂತೆ ಬರೆಯುತ್ತಾರೆ. ಹೊಗೆ ಸೊಪ್ಪು ತಿಂದು ಮಾತು ಕಡಿಮೆ ಮಾಡುವ ಯತ್ನ ನಡೆದಿದೆ. ಆದರೆ ಆ ಚಟ ಮಾತಿನ ಮುಂದೆ ಓಡ ಲಾರದು.

* *

**ಪಾಂಡೇಶ್ವರ ಗಣಪತಿರಾಯರು—**

ಎಂದಿಗೂ 'ಇಂದಿ'ನ ಕವಿ, ಆದರೆ ಹಳೆಯ ಪಂಥ. ಚಿನ್ನ-ಅಪರಂಜಿ ಹಳೆಯದಾಗುವದುಂಟೇ ಎಂಬ ಪ್ರವೃತ್ತಿ; ಕುಳ್ಳು ಆಳು; ತೀಕ್ಷ್ಣನೋಟ. ಮೆಚ್ಚಿದವರನ್ನು ಅಟ್ಟಕ್ಕೇರಿಸುತ್ತಾರೆ; ಸೇರದವರ ಬಳಿಯಿಂದ ಸರಿದು ಹೋಗುತ್ತಾರೆ. ಪತ್ರಿ-ಕೋದ್ಯಮವನ್ನು ಇವರು ಬಿಟ್ಟರೂ ಅದು ಇವರನ್ನು ಬಿಡಲಿಲ್ಲ. ಕಾವ್ಯ 'ಹಾಬಿ' ಶ್ರದ್ಧೆ ಇವರ ಉಸಿರು. ಯಾವ ಗಾಳಿ ಬಂದರೂ ಎಂಥ ಆಪತ್ತು ವಿಪತ್ತು ಬಂದರೂ ಜೀವನಶ್ರದ್ಧೆ ಯನ್ನು ಕಾಪಾಡಿಕೊಂಡಿ ದ್ದಾರೆ. ಒಂದಿಷ್ಟು ಬದು ಕಿನ ಅತೃಪ್ತಿ ಒಮ್ಮೊಮ್ಮೆ ಕಾಡುವದೂ ಉಂಟು. ಸಾಭಿನಯವಾದ ಮಾತು ಗಾರಿಕೆ, ಭಾವಕ್ಕೆ ತಕ್ಕ ಆವೇಶ. ಆ ಎತ್ತರವಲ್ಲದ, ತೋರವೂ ಇಲ್ಲದ ಆ ಪುಟ್ಟದೇಹದಲ್ಲಿ ಇದನ್ನೆಲ್ಲಾ ಬಿಡಿ-ಬಿಡಿಯಾಗಿ ಕಾಣಬಹುದು. ಅಂಥ ವಿರಳ ವಾದ ವ್ಯಕ್ತಿತ್ವ.



ಪಾಂಡೇಶ್ವರ

* *

**ವಿ. ಜಿ. ಭಟ್ಟ—**

ಇದ್ದಂತೆ ಕವಿತೆ ಬರೆಯುತ್ತಾರೆ. ಬರೆಯುವ ದೊಂದು ಮಾಡುವದೊಂದು ಎಂಬುದಿಲ್ಲ. ಲೋಕ ವನ್ನು ಕಂಡಂತೇ ಹೇಳುತ್ತಾರೆ. ಆದರೆ ಕಾಣು ವದೇ ವಕ್ರವಾದರೆ ಮಾಡುವದೇನು? ಅದು ಅವರ ದೃಷ್ಟಿದೋಷವೆಂದು ನಮಗೆ, ನಮ್ಮ ದೃಷ್ಟಿ ದೋಷವೆಂದು ಅವರಿಗೆ ಕಂಡರೆ ಆಶ್ಚರ್ಯವಲ್ಲ. ಕವಿಗೆ ಸ್ಥೈರ್ಯಬೇಕು— ಎಂದು ಅವರಿಗೆ ಹೇಳಿ ನೋಡಿರಿ. ಯಾಕೆ ಬೇಕು-ಎಂದು ತಟ್ಟನೆ ಕೇಳು ತ್ತಾರೆ. ಜೀವಕ್ಕಿಲ್ಲದ ತಾಳ್ಮೆ ಸಾಹಿತ್ಯದಲ್ಲಿ ತುಂಬಿ ಕೃತ್ರಿಮ ಮಾಡುವುದು ಇವರಿಗೆ ಸರ್ವಥಾ ಸಮ್ಮ ತವಿಲ್ಲ. ಜೀವನದಲ್ಲಿ ಅದನ್ನು ಸಾಧಿಸುವ ಹಟವೂ ಇಲ್ಲ. ಇದ್ದಂತೆ ಇರುವುದು, ಇದ್ದಂತೆ ಬರೆಯು ವುದು, ಬರೆದಂತೆ ಪ್ರಕಟಿಸುವುದು. ತಮ್ಮನ್ನು ಇನ್ನೊಬ್ಬರ ರುಚಿಗೆ ತಿದ್ದುವದನ್ನು ಇವರು ವಿರೋ ಧಿಸುತ್ತಾರೆ. ಇನ್ನೊಬ್ಬರ ರುಚಿಯಬಗ್ಗೆ ಆಕ್ಷೇ ಪವೂ ಇಲ್ಲ. ಉಮರನಂತೆ ಜೀವನ ಬೇಡುತ್ತಾರೆ. ಒಂದಿಷ್ಟು ಚಾ, ಒಂದೊಂದು ಪುಸ್ತಕ, ಒಂದಿಷ್ಟು ವಿರಾಮ, ಇವನ್ನು ದೊರಕಿಸುವದಕ್ಕಾ ಗಿಯೇ ದುಡಿಯ ಬೇಕಾಗುತ್ತದೆ. ದುಡಿ ಯುತ್ತಾರೆ. ಚಾ ಸಿಗು ತ್ತದೆ. ಪುಸ್ತಕ ಸಿಕ್ಕ ಬಹುದು. ವಿರಾಮದ್ದೇ ತೊಂದರೆ. ಮೈಗೆ ಸಿಕ್ಕೀತೂ. ತಲೆ ಮಾತ್ರ ವಿರಾಮಕ್ಕೆ ತಯಾರಿರಬೇಕಲ್ಲ! ಆಸಾಮಿ ಧಾರಾಳ. ಮಡದಿಗೆ, ಮಕ್ಕಳಿಗೆ ಹೇಗೊ ಹಾಗೆ ಸ್ನೇಹಿ ತರಿಗೆ, ಪರಿಚಿತರಿಗೆ ಇದ್ದದ್ದು ಕೊಡುತ್ತಾರೆ. ಅವರಲ್ಲಿ ಇಲ್ಲದ್ದನ್ನು ಬೇಡಿ ಅದು ತಾಳ್ಮೆಯಾಗಿ-



ವಿ. ಜಿ. ಭಟ್ಟ

ರಲಿ, ದುಡ್ಡಾಗಿರಲಿ—ಅವರನ್ನು ರೇಗಿಸಿದರೆ ಕವಿತೆಯನ್ನೆ ಬರೆದಾರು. ಬರಹಕ್ಕೆ ಕ್ರಮವೆಂಬುದು ಬೇಕಿಲ್ಲ. ಅದರದೊಂದು ಕ್ರಮವಿದೆ, ಅದು ಚುಟುಕು. ಅದು ಚುಟುಕಾಗಿಯೇ ಇರುತ್ತದೆ. ನನ್ನ ಒಂದು ಪುಸ್ತಕಕೊಟ್ಟು ಇಂದು ಓದಿ ಮುಗಿಸಿರಿ—ಎಂದೆ. ಎರಡುತಾಸಿನ ಓದದು. ಅಂಕಲಿಪಿಯನ್ನೂ ಕೂತಮೆಟ್ಟಿನ ಮೇಲೆ ಓದಿದವನಲ್ಲ ನಾನು...ಎಂದರು. ಬರಹವೂ ಅಷ್ಟೆ. ಬಿಟ್ಟಲ್ಲಿ ಮುಕ್ತಾಯ. ಮನಸ್ಸಿಗೆ ಮಿಂಚಿದಂತೆ ಬರೆಯುತ್ತಾರೆ. ಮೋಡ ಕಂಡರೆ ಕಂಡಿತು, ಇಲ್ಲವಾದರೆ ಇಲ್ಲ. ಮೋಡವಿಲ್ಲದೆ ಮಿಂಚು ಹೊಳೆಯಲಾರದಲ್ಲಾ—ಎಂಬ ಕೊರಗಿಲ್ಲಾ. ಬಿಳಿಯ ಹಾಳೆಯ ಮೇಲೆ ಬಿಳಿಯ ಖಡುವಿನ ಗೆರೆಯಾದರೂ ದುಃಖವಿಲ್ಲ.

* * *

## ಮೇವುಂಡಿ ಮಲ್ಲಾರಿ—

ಸಂಗ್ರಹ ಕಾಣದ ಕವಿ. ಬಾಳಿನ ಕಹಿಯಿಂದ ನಂಜುಂಡನಾದ ಕವಿ ನೂರಾರು ಒಳ್ಳೆಯ ಕವಿತೆ ಬರೆದಿದ್ದರೂ ಇಂದವರ ಬಳಿ ಒಂದೂ ಇಲ್ಲ. ನಾಲ್ವತ್ತೆರಡರ ಗದ್ದಲದಲ್ಲಿ ಇವರ ಮನೆ ಝಡತಿಯಾಯಿತು. ಇದ್ದ ಹಾಳೆಗಳೆಲ್ಲಾ ಹಾರಾಡಿದವು. ಇವರು ಸ್ಥಾನ ಬದ್ಧತೆಯಿಂದ ಸ್ವಸ್ಥಾನಕ್ಕೆ ಮರಳುವಾಗ ಸಂಗ್ರಹಿಸಿಟ್ಟ ಸಾಹಿತ್ಯ ಒಂದೂ ಉಳಿದಿದ್ದಿಲ್ಲ. ಮುಂದೆ ಇವರ ಬಾಳೂ ಬರಿದೆನಿಸಿತು. ಆ ವರೆಗೆ ಉಪಾಸನೆಗೆಂದು ಬರೆಯುತ್ತಿದ್ದವರು ಮುಂದೆ ವೃತ್ತಿ ಲೇಖಕರಾದರು. ಸ್ವಂತ ಬರಹವಿಲ್ಲ. ಬರೇ ಭಾಷಾಂತರಗಳು ಬಂದವು. ಅದೂ ಮಾರುವ ಗದ್ಯ ಸಾಹಿತ್ಯ.


ಮಲ್ಲಾರಿ

ಇವರನ್ನು ಕಂಡರೆ ಯಾರಿಗೂ ಕವಿಯಂತೆ ಕಂಡಾರು; ಅಂಥಾ ನಿರ್ಲಿಪ್ತತೆ, ಮನೆಯ ಬಗ್ಗೆಯೂ ಹಾಗೇ. ಇವರನ್ನು ನಾಲ್ವತ್ತೆರಡರಲ್ಲಿ ಹಿಡಿದಾಗ ಎದೆಯೊಡೆದುಕೊಂಡ ಮಡದಿ ಇವರು ಮನೆಗೆ ಮರಳುವವರೆಗೆ ಜೀವ ಹಿಡಿದು, ಗಂಡನನ್ನು ಕಂಡು ಸಂತಸ ಹಿಗ್ಗಿಸಿಕೊಂಡು ಬೇನೆಗೆ ತುತ್ತಾದರು. ಆಯಿತು, ಈ ಕವಿಯ ಕಾವ್ಯಝರಿ ಬತ್ತಿತು. ಈಗ ಅವರಿಗೆ ಬಿಡದ ಕರ್ಮವೆಂಬಂತೆ ಜೀವಧಾರಣೆಗೆ ದುಡಿಯುವದು, ಅದಕ್ಕೆ ಚೇತನವನ್ನು ಸಿಗರೇಟಿನಿಂದ ಪಡೆಯುವದು.

ಮಾತು ಕಡಿಮೆ; ಇಲ್ಲವೇ ಇಲ್ಲವೆನ್ನಬಹುದು. ಭಿನ್ನಾಭಿಪ್ರಾಯ ಬಂದಾಗ ಎದುರೇ ಚೀಟಿ ಬರೆದುಕೊಡುತ್ತಾರೆ. ಸಂಕೋಚವೇನಲ್ಲವದು. ದುಡುಕಿ ಆಡೇನೆಂಬ ಭಯವೂ ಅಲ್ಲ. ದುಡುಕು ಜೀವಕ್ಕೇ ಗೊತ್ತಿಲ್ಲ. ಅದು ಸ್ವಭಾವ. ನೀವು ಹೊಗಳಿರಿ, ತೆಗಳಿರಿ. ಮುಖದಮೇಲೆ ಯಾವ ಭಾವವೂ ಇಲ್ಲ. ಆಗಾಗ ಬರುವ ಒತ್ತಾಯದ ನಗೆ ದುಃಖಕ್ಕೂ ಬರುತ್ತದೆ; ಸಂತೋಷಕ್ಕೂ ಬರುತ್ತದೆ.

ಮಲ್ಲಾರಿಗೆ ಭಾವಾವೇಶ ಬಂದದ್ದನ್ನೊಮ್ಮೆ ನೋಡಿದೆ. ಹಂಪಿಯಲ್ಲಿ ವಿಜಯನಗರ ಷಟ್ ಶತ ಸಾಂವತ್ಸರಿಕ ಉತ್ಸವದ ಜಾತ್ರೆಯಲ್ಲಿ ಯಾರೋ ಒಬ್ಬರು ಬರಹಗಾರರನ್ನು, ಪುಸ್ತಕ ಮಾರುವವರನ್ನು ವಂಚಕರೆಂದು ಹೀಯಾಳಿಸಿದರು,—ಅದೂ ನನ್ನ ಹತ್ತಿರ. ಅಲ್ಲೇ ನಿಂತ ಮಲ್ಲಾರಿಗೆ ತಡೆಯಲಿಲ್ಲ. ಆ ಗೃಹಸ್ಥನಮೇಲೆ ಏರಿಹೋದರು. ವೃಥಾರೋಪವನ್ನು ಅವರು ಅಂದು ಎದುರಿಸಿದ್ದು ಹಾಗೆ. ಇಂದು ಅಂಥ-ಎಂಥ ಆರೋಪವೂ ಅವರಿಗೆ ಸಹ್ಯ.

ಮಲ್ಲಾರಿಯ ಕೈಬರಹ ಮತ್ತು ಭಾಷೆ ಪರಿಶುದ್ಧ. ಅವರು ಜೀವನದಲ್ಲೇ ಸಾಧಿಸಿದ ಶಿಸ್ತು ಅವರ ಲಿಪಿಯಲ್ಲಿ ಸದಾ ಕಾಣುವಂಥಾದ್ದು. ಒಂದು ಲೇಖನವನ್ನೆ ಬರೆಯಲಿ; ಲೆಕ್ಕವನ್ನೆ ಬರೆಯಲಿ. ಅಲ್ಲಿ ಅಸಡ್ಡೆಯನ್ನು ಅವರು ಮಾಡಲಾರರು.

ನನಗೆ ಬಹಳ ಹಿಂದೆ ಬರೆದ ಒಂದು ಪತ್ರದ ಮಾತು ನೆನಪಾಗುತ್ತದೆ: "ಸ್ನೇಹದಲ್ಲಿ ವಂಚನೆ, ದ್ರೋಹದ ಭಾವನೆ ಬಂದುದು ನನ್ನ ಪತನ." ಇಂದಿನ ಅವರ ನಿಷ್ಕ್ರಿಯೆಯಲ್ಲೂ ಆ ನಿಷ್ಠೆಯಿದೆ; ಉಳಿದದ್ದು ಅದೊಂದೇ. ತನ್ನ ದುಃಖವನ್ನು ಯಾರೊಬ್ಬರೆದುರೂ ತೋಡಿಕೊಂಡಿದ್ದಿಲ್ಲ. ಮನಸ್ಸು ಪ್ರಸನ್ನನಾದಾಗ ಗೆಳೆಯರನ್ನು ಹುಡುಕಿಕೊಂಡು ಹೋಗಿ ಅದನ್ನು ಹಂಚಿಬಿಡುತ್ತಾರೆ. ಸ್ವಂತ ಜೀವದ ಬಗ್ಗೆಯಂತೂ ಕ್ರಮಾತೀತವಾದ ವಿಕ್ರಮ. ಇವರನ್ನು ಯಾರೂ ಹಿಡಿದು ಹಾಕಲಾರರು. ಇವರಂತೂ ತಾನಾಗಿ ಯಾರನ್ನೂ ಹಿಡಿಯ ಹೋಗುವದಿಲ್ಲ. ಜೀವನದಲ್ಲಿ ಈ ಅಸಡ್ಡೆ. ಈ ನಿರ್ಲಿಪ್ತತೆ, ಈ ನಿರಹಂಕಾರ—ನಿರಾಡಂಬರತೆ, ನಿಷ್ಕ್ರಿಯೆಗಳೂ ಒಂದು ಜೀವಕ್ಕೆ ಸುಮ್ಮನೆ ಬರುವದಿಲ್ಲ. ಅದಕ್ಕೂ ತಪಸ್ಸು ಬೇಕು. ಆದ್ದರಿಂದ ಇವರು ಇವರೇ. ಇನ್ನೊಬ್ಬರು ಮಲ್ಲಾರಿಯಾಗಲು ಸಾಧ್ಯವೇ?

* * *

## ಈಶ್ವರ ಸಣಕಲ್ಲ—

ಇವರನ್ನು ನೆನೆದರೆ ಇವರು ಮಲ್ಲಾರಿ ಯಾಗಲು ಸಾಧ್ಯವಿತ್ತು ಎನಿಸದಿರುವದಿಲ್ಲ. ಸ್ವಲ್ಪದರಲ್ಲೆ ತಪ್ಪಿದೆ. ಅದಿಷ್ಟನ್ನೆ ಹೇಳಿ ಬಿಡುತ್ತೇನೆ. ಇವರು ತಮ್ಮ 'ಕೋರಿಕೆ' ಪದ್ಯದಲ್ಲಿ "ಜಗವೆಲ್ಲ ನಗುತಿರಲಿ, ಜಗದಳುವು ನನಗಿರಲಿ" ಎಂದರು. ದೈವ 'ತಥಾಸ್ತು' ಎಂದಿತು. ಈ ವಿನೀತಭಾವ, ಈ ಕೈಂಕರ್ಯ, ಮೈವೆತ್ತು ನಿಂತಂತೆ ಇವರ ಇರುವು. ಮುಖದಲ್ಲಿ ಎಳೆದುತಂದ ಕಿರುನಗೆ. ಮುಟ್ಟಿದರೆ ಮುದುಡುವ ಸಂಕೋಚಭಾವ. ಅದು ಅವರ ಸೌಜನ್ಯ ಲಾಂಛನ. ಜೀವನದ ಕಹಿಯುಂಡು, ಅದನ್ನು 'ಸಿಹಿ' ಎನ್ನುವ ನಾಟಕೀಯತೆಯಿಲ್ಲ ಇವರಿಗೆ. ಆ ಕಹಿಯನ್ನು ಹಂಚುವ 'ಔದಾರ್ಯ'ವೂ ಇಲ್ಲ. ಇವರು ಬೇಕಾದುದನ್ನು ಕಾವ್ಯಯೋಗದಲ್ಲಿ ಪಡೆಯುತ್ತಾರೆ. ಸಿರಿ-ಸಂಪದಗಳು ಯಥೇಷ್ಟವಾಗಿ ಇವರ ಕಾವ್ಯಾರಾಧನೆಯಲ್ಲಿವೆ. ಅದರಿಂದಲೇ ಬಾಳಿನ ಅಸಹನೆ ಸಹ್ಯವಾಗಿರಬೇಕು. ಯಾರ ಬಗ್ಗೆಯೂ ಯಾವುದರ ಬಗ್ಗೆಯೂ ಕೆರಳುವದನ್ನು ಇವರು ಆದರಿಂದಲೇ ಮರೆತಿರಬೇಕು. ಸಾಹಸ—ದುಡುಕು—ಯಾಚನೆ ಇವೆಲ್ಲದರ ಹೊಸವೇಷ 'ಚಾಣಾಕ್ಷಗಿರಿ' ಇಲ್ಲದ್ದರಿಂದಲೇ ಇವರ 'ಬಾಳಬಟ್ಟೆ' ಎಂಬ ಎರಡನೆಯ ಕವನ ಸಂಗ್ರಹ ಇಪ್ಪತ್ತು ವರುಷ ಕಳೆದರೂ ಹೊರಕ್ಕೆ ಬರಲಿಲ್ಲ.

* * *

## 'ಗೀತಾಪ್ರಿಯ'—

ಈ ಹೆಸರಿನಿಂದ ಬರೆಯುವ ಶೇ. ಗೋ. ಕುಲಕರ್ಣಿ ಸಂಪತ್ಸಮೃದ್ಧ ಕನಸಿನ ಮಾತಾಡುತ್ತಾರೆ. ಕರ್ನಾಟಕತ್ವದ ಬಗ್ಗೆ ಅವರ ಕನಸು ಭವ್ಯವಾಗಿದೆ. ಅದು ನನಸಾಗುವ ಆಸೆ ಅವರಿಗಿಲ್ಲ. ವ್ಯಕ್ತಿತ್ವ ವಿಕಾಸದ ನೂರು ಯೋಜನೆಗಳಿವೆ. ಬೇರೆ ವೈಚಾರಿಕ ಹವ್ಯಾಸಗಳಿವೆಯೆಂದೋ ಏನೋ ಯಾವುದಕ್ಕೂ ಅಂಟಿಕೊಳ್ಳುವ ಜೀವನವಲ್ಲ. ವಿಚಾರಮಥನ ಸದಾ ನಡೆದಿರುತ್ತದೆ. ಆಚಾರಕ್ಕದು ಇಳಿಯಲಾರದಲ್ಲಾ ಎಂದು ಕೊರಗುತ್ತಾರೆ. ಶ್ರಮವಿಭಾಗ ವಿಧಾನ ಅವಶ್ಯಕ. ವಿಚಾರ-ಆಚಾರ ಒಬ್ಬೊಬ್ಬರಿಗೇ ಏಕೆ? ಶಾಂತಿನಿಕೇತನಕ್ಕೇ ಹೋಗಿ ಬಂದರು. ಠಾಕೂರರಂಥವರು ಕರ್ನಾಟಕಕ್ಕೆ ದೊರೆಯದೆ ಇದಕ್ಕೆ ಉದ್ಧಾರವಿಲ್ಲವೆನ್ನುತ್ತಾರೆ. ಭಾರತೀಯರಾದ ಕನ್ನಡಿಗರಿಲ್ಲವಲ್ಲಾ—ಎಂದು ಇವರ ಚಿಂತೆ. ಹಾಗೆ ಕೇಳಿದರೆ ಕನ್ನಡಿಗರೆಲ್ಲ ಭಾರತೀಯರು — ಅವರು ಕನ್ನಡಿಗರಾದರೆ ಸಾಕು —ಎಂದು ನೋಡಿರಿ. ಸಣ್ಣ ಕೆರೆಯಲ್ಲಿ ಮೀನ ಹಿಡಿಯುವ ಜಾತಿಯಲ್ಲ ಅವರದು.


ಗೀತಾಪ್ರಿಯ

ಇವರು ಬರೆದ ಒಂದು ಕಾದಂಬರಿಯಲ್ಲಿ ನೂರು ರೂಪಾಯಿ ಪಾಕೆಟ್ ವೆಚ್ಚಕ್ಕೆ ಒಂದು ಪಾತ್ರಕ್ಕೆ ಕೊಡಿಸಿದ್ದರು. ಆಗ ಅಗ್ಗತೆಯ ಕಾಲ. ಇಷ್ಟು ಯಾಕೆ ಎಂದು ಯಾರೋ ಆಕ್ಷೇಪಿಸಿದರು. ಕಾದಂಬರಿಯಲ್ಲಿ ಕೊಟ್ಟಿದ್ದಾರೆ, ಕೊಡಲಿ—ಎಂದೆ ನಾನು. ಮುಂದೆ ತುಟ್ಟಿಯ ಕಾಲ ಬಂತು. ನೂರು ಸಲೀಲವಾಗಿ ಖರ್ಚು ಮಾಡುವ ಪರಿಸ್ಥಿತಿ ಬಂತು. ಈಗಾದರೂ ನನ್ನ ಕಾದಂಬರಿ ವಾಸ್ತವವೇ ಎಂದು ಕೇಳಿದರು. ಹೌದು; ಹತ್ತು ವರುಷದ ಮುಂದಿನದನ್ನು ಅಂದೇ ಈ ಕವಿ ಕಂಡಿದ್ದ. ವೆಚ್ಚಕ್ಕೇನು-ಯಾವ ಕಾಲವೂ ಆದೀತೆಂಬ ರೀತಿ.

ಕವಿತೆ ಬರೆಯುತ್ತಾರೆ. ಭಾಷೆಯಲ್ಲಿ ಆಡಂಬರವಿಲ್ಲ. ಹಗುರಾದ ಮಾತು. ಸಂಗ್ರಹಕ್ಕೆ 'ನನ್ನ ಗೀತಗಳು" ಎಂದು ಕರೆದರು. ಹೆಸರಿಗೂ ಹರಿದಾಟವಿಲ್ಲ. ಮಾತಿನ ವ್ಯಾಪ್ತಿ ಕವಿತೆಯಲ್ಲಿ ಸಂಕೋಚಗೊಂಡು ಸಾಂಕೇತಿಕತೆಯನ್ನೂ ಸೂಕ್ಷ್ಮತೆಯನ್ನು ಪಡೆಯುತ್ತದೆ.

ಮಾತು ಜಾಸ್ತಿ ಎಂದು ಕೆಲವರು ಇವರನ್ನು ಆಕ್ಷೇಪಿಸಿದರೂ ಇವರನ್ನು ಹುಡುಕಿಕೊಂಡು

ಹೋಗುತ್ತಾರೆ. ಒಬ್ಬ ಗೆಳೆಯ ಇವರು ಮಾತಾಡು ವುದನ್ನು ನಿಲ್ಲಿಸಲು ಕೇಳಿಕೊಂಡ : ನನಗೆ ಹಸಿವೆ ಯಾಗಿದೆ ; ನಿನಗೇನು ಮಾತೇ ಆಹಾರ— ಎಂದ. ಇವರಿಗೆ ಹೇಳುವ ಸಾವಿರ ವಿಷಯಗಳಿವೆ. ನಡೆಯ ಬೇಕಾದ ನೂರು ಯೋಜನೆಗಳಿವೆ. ನನ್ನನ್ನು ಕೇಳಿದರೆ— ಎಂದು ಮಾತು ಆರಂಭಿಸುತ್ತಾರೆ. ( ಈಗ ಬಿಟ್ಟುಬಿಟ್ಟಿದ್ದಾರೆ. ) ಎದುರು ಕೇಳುವ ಒಬ್ಬರು ಸಿಕ್ಕೇ ಇರುತ್ತಾರೆ. ಅವರು ಕೇಳಲೇ ಬೇಕು ತಾನೆ !

* * *

ಕೊಟ್ಟಲಗಿ ರಾಮಚಂದ್ರ—

ಬಹಳ ದಿನಗಳಿಂದ ಕವಿತೆ ಬರೆಯುತ್ತಿದ್ದಾರೆ. ಇವರ 'ಪಿಪಾಸೆ' ಕವನಗಳನ್ನು ಓದಿದ ವಿಮರ್ಶಕನೊಬ್ಬ 'ಸುಂದರವಾಗಿ ಅಳುವ ಕವಿ' ಎಂದು ಟೀಕಿಸಿದ. ಅದು ಟೀಕೆಯೇನಲ್ಲ. ಮಾತುಮಾತಿಗೆ ಸಾವು, ಅಡಿಗಡಿಗೆ ಪತನ-ಇವರ ಕವಿತೆಯಲ್ಲಿ. ಇನ್ನು ನೀಲಾಂಬರಿ ಕವಿತೆಗಳನ್ನು-ಅವನ್ನೇ-ಬರೆಯುವದಿಲ್ಲವೆಂದು ಮಾತುಕೊಟ್ಟುದಕ್ಕೆ ನಿದರ್ಶನವಾಗಿ 'ಪ್ರತಿಮಾ' ಬಂತು. ಅದರಲ್ಲಿ ಇನ್ನೊಂದು ಭರವಸೆ : ಇದು ನನ್ನ ಕೊನೆಯ ಕವನಸಂಗ್ರಹ—ಎಂದು. ಹೀಗೆ ತಂತಾನೆ ನಿರ್ಬಂಧ ಹಾಕಿಕೊಂಡಾಗ ಅದನ್ನು ಮುರಿಯುವ ಸ್ವಾತಂತ್ರ್ಯವೂ ತನ್ನ ಕಡೆಯೇ ಇರುತ್ತದೆ. ಬೇಂದ್ರೆಯವರು ಒಮ್ಮೆ "ಕುಣಿಯೋಣಬಾರ" ಸಭೆಯಲ್ಲಿ ( ಕೆಲವು ದಿನ ) ಹಾಡುವದಿಲ್ಲವೆಂದು ಪ್ರಮಾಣ ಮಾಡಿದ್ದರು—ಯಾರೋ—ಏನೋ ಅಂದರೆಂದು. ಕೆಲವು ದಿನವಾಯಿತು. ಅವರು ಹಾಡಲಿ, ಬಿಡಲಿ—ಹಿಂದೆ ಹಲವು ಸಲ ಹಾಡಿದ್ದಾರೆ. ಮುಂದೆ ರಸಿಕರು ಹಾಡಿಕೊಳ್ಳುತ್ತಾರೆ. ಅಂದೂ—ಆ ಕೆಲವು ದಿನವೂ ಹಾಡಿಕೊಂಡರು.



ಕೊಟ್ಟಲಗಿ

ಕವಿತೆ ಬರೆಯುತ್ತೇನೆ—ಬರೆಯುವದಿಲ್ಲ, ಹಾಡುತ್ತೇನೆ— ಹಾಡುವದಿಲ್ಲ ಎಂಬ ಪಂಥ ಯಾಕೋ—ಏನೋ !

ಕನ್ನಡಕ್ಕೆ ಮರಾಠಿಯ ವಿವಿಧತೆ ಬರಬೇಕೆಂದು ಇವರ ಹವ್ಯಾಸ. ವೈಪುಲ್ಯ ಕನ್ನಡಕ್ಕೆ ಸಾಕು—ಎಂಬ ವಾದ. ಸಾಹಿತ್ಯವೆಂಬ ವಿಷಯಗೇಡಿತನಕ್ಕೆ ಮರಗುತ್ತಾರೆ. ಖಗೋಲವೂ—ಭೂಗೋಲವೂ ಸಾಹಿತ್ಯವಾಗಬೇಕು—(ಹಿಂದೆ ವೈದ್ಯಕವೂ ಕಾವ್ಯವಾದಂತೆ) ವಿಜ್ಞಾನ ಅಜ್ಞಾನವನ್ನು ಹೊಡೆದೋಡಿಸಬೇಕು—ಎಂಬ ವಿಚಾರ. ಅಧ್ಯಾತ್ಮ ಜಲಕ್ಕೆ ಮೋಹಿತರಾಗಿ ಅದರಲ್ಲಿ ಬೀಳಲು ದಂಡೆಯ ವರೆಗೆ ಹೋಗುತ್ತಾರೆ. ಮನಸ್ಸು ನೀರಲ್ಲಿ ನೆಟ್ಟರೂ ಕಾಲು ನೆಲವನ್ನು ಬಿಟ್ಟಿಲ್ಲ.

ಸಂಕೋಚವನ್ನು ಅಸಡ್ಡೆಯ ನಾಟಕೀಯತೆಯಿಂದ ಮರೆಸುತ್ತಾರೆ. ಮುಂದೆ ಬೀಳುವ ಹವ್ಯಾಸವಿಲ್ಲ, ಹಿಂಜರಿವ ಹಟವಿಲ್ಲ, ನಿಂತಲ್ಲಿ ತೃಪ್ತಿಯಿಲ್ಲ, ಇದ್ದ ಶ್ರದ್ಧೆಯನ್ನು ತೋರಗೊಡುವಂತಿಲ್ಲ, ಅಭಾವವೇ ಸ್ವಭಾವವಾದಂತೆ ರೀತಿ.

* * *

ಪಾಡಿಗಾರು ವೆಂಕಟರಮಣಾಚಾರ್ಯರು—

ಒಂದು ಕಾಲಕ್ಕೆ ರಭಸದಿಂದಲೇ ಪದ್ಯ ಬರೆದರು. ಇಂದವರು ಬರೆಯಬಾರದೆಂದೇನೂ ಬಿಟ್ಟಿಲ್ಲ. ಬರೆದರೇನು—ಬರೆಯದಿದ್ದರೇನು ಎಂಬ ವೈರಾಗ್ಯಪಂಥ. ಅಂದು ಹೂ—ಕಾಯಿಗಳ ಮೇಲೆ ಬರೆದರು. ಇಂದು ಸೃಷ್ಟಿಯ ಉದ್ದೇಶದ ಬಗ್ಗೆ ಬರೆಯುತ್ತಾರೆ. ಹಲವರ ಪದ್ಯಗಳನ್ನು



ಪಿ. ವಿ. ಆಚಾರ್ಯ

ಪ್ರಕಟಿಸುವ ಸ್ಥಳದಲ್ಲಿ ಇದ್ದುಕೊಂಡು ಸ್ವಂತ ಕೃತಿಗಳ ಪ್ರಕಟಣೆಗೆ ಅಸಡ್ಡೆ. ಒಂದು ಸಂಗ್ರಹ ಮಾಡಹೋಗಿ ಅರ್ಧಕ್ಕೇ ಬಿಟ್ಟು ನಿಶ್ಚಿಂತೆಯಿಂದಿದ್ದರು. ಅದರೆ ಒಮ್ಮೆ ಇವರ "ನವನೀರದ" ಬಂದೇ ಬಂತು. ರಾಜ್ಯಸರಕಾರದ ಬಹುಮಾನವನ್ನೂ ತಂದಿತು.

ಮುಂದೆ ವಕ್ರತೆಯನ್ನೆ ತಮ್ಮ ಪ್ರಿಯವಾದ ಫಾರ್ಮು ಮಾಡಿಕೊಂಡರು. ನೇರವಾದ ದಾರಿಯಲ್ಲಿ ಏನು ಸೊಗಸಿದೆ? ಬಳಸಿಕೊಂಡು ಹೋದರೇನಂತೆ—ಎಂಬ ತರ್ಕ ಇವರದು. ಕವಿತ್ವಕ್ಕೆ ಹೊಸತನ ಬರುವುದು ವಸ್ತುವಿನ ಆಯ್ಕೆಯಲ್ಲಿಲ್ಲ. ಅದರೊಡನೆ ತಾದಾತ್ಮ್ಯ ಹೊಂದುವುದರಲ್ಲಿದೆ ಎನ್ನುತ್ತಾರೆ. ಹಿಂದಿನವರು ರಥ ಕುದುರೆಗಳಲ್ಲಿ ಆತ್ಮೀಯತೆ ಕಂಡರು. ಇಂದಿನವರಿಗೆ ಹತ್ತಲು ಮೋಟಾರು ಬೇಕು ; ಅದರೆ ಅದರಲ್ಲಿ ಆತ್ಮೀಯತೆ ಕಾಣದು—ಎನ್ನುತ್ತಾರೆ. 'ಜಡ' ವಸ್ತುವಿನಲ್ಲಿ ಎಂಥ ಮಾನಸಚೇತನ ಹರಿಯಿಸಬೇಕೆಂದು ಅಡಿಗರು ಇವರನ್ನು ಕೇಳಿದರು. 'ಸಿಗರೇಟಿನ ಹೊಗೆ ವರ್ತುಲ ವರ್ತುಲ' ಎಂದು ಅದರಲ್ಲಿ ಹೇಗೆ ತಾದಾತ್ಮ್ಯ ಕಂಡಿರಿ ನೀವು? ಎಂದರಿವರು. ಅಡಿಗರಿಗೆ ಮೋಟಾರು ಕೊಟ್ಟು ನೋಡಬೇಕು. ಬಹುಶಃ ಅದರ ಆತ್ಮೀಯತೆಯನ್ನು ಕವಿತೆಯಲ್ಲಿ ಕಂಡಾರು. ಈ ಜೀವಕ್ಕೂ ತೃಪ್ತಿಯಿಲ್ಲ. ಮೈಯಲ್ಲಿ ಮಾಂಸವಿಲ್ಲ. ತಲೆತುಂಬ ವಿಚಾರದ ಗಾಳಿ. ಅದಕ್ಕೆ ದೇಹವನ್ನು ಸದಾ ದಂಡಿಸುವ ಹವ್ಯಾಸ. ಕೈಗೆ ಮೈಗೆ ಆ ದುಡಿಮೆ ಆಗದಿದ್ದರೆ ಇವರ 'ಸಾಕ್ಷಿಚೇತನ' ಸದಾ ಎಚ್ಚರಿಸುತ್ತದಂತೆ. ನಾಲ್ಕುದಿನ ಮಲಗಿಕೊಂಡೇ ಅದರ ಮಾತು ಕೇಳಿದರೆ ಆಗಾದರೂ ದೇಹದ ಮಾತು ಕೇಳೀತು.

* * *

ಹಿಂದಿನ ಲೇಖನದಲ್ಲಿ ಒಬ್ಬರಿಗೆ 'ಪ್ರಸಂಗ ಕವಿ' ಎಂದು ಕರೆದೆ. ಅವರು ನೊಂದುಕೊಂಡರು. ಯಾರಾದರೂ ಒಂದು ಪ್ರಸಂಗದಲ್ಲಿ ಕವಿತೆ ಬರೆಯಹೇಳಿದರೆ ಕವಿಯಾದವನು ಏನು ಮಾಡಬೇಕು ? ನಾನೂ ಪ್ರಸಂಗಕ್ಕೆ ನಾಲ್ಕು ಕವಿತೆ ಬರೆದಿದ್ದೇನೆ. ಅದೂ ಅಂಥವರ ಹಬ್ಬ—ಹರಿದಿನದಲ್ಲಿ, ಸತ್ತ ಸಂತಾಪದಲ್ಲಿ. ಕವಿತೆಗೆ ಪ್ರೇರಣೆಯೊಂದೇ ಸ್ಫೂರ್ತಿಯಲ್ಲ. ಪ್ರಸಂಗವೂ ಕಾವ್ಯಸ್ಫುರಣೆಗೆ ಪ್ರೇರಕವಾದೀತು.

ಗಂಗಪ್ಪ ವಾಲಿ—

ಇವರನ್ನು ಪ್ರಸಂಗಗಳು ಹುಡುಕಿಕೊಂಡು ಹೋಗುವವೋ—ಇವರೇ ಪ್ರಸಂಗದ ಬೆನ್ನು ಹತ್ತುವರೋ—ಅಂತೂ ಅವರು ಅಂಥ ಪ್ರಸಂಗದಲ್ಲಿ ತಪ್ಪದೆ ಕವಿತೆ ಬರೆಯುತ್ತಾರೆ. ಮೆದುವಾದ ಮನಸ್ಸು. ಹದವಾದ ಶಬ್ದ ರಚನೆ. ಕೂಗಿ ಕರೆದರೂ ಮುರುಟಿಕೊಳ್ಳುವ ಸ್ವಭಾವ. ನಾದದ ಕಿವಿಯಿದೆ- ಕನ್ನಡ ಸಿನಿಮಾಕ್ಕೂ ಹಾಡು ಬರೆದು ಕೊಟ್ಟರು. ಕಿರಾಣಿ ಅಂಗಡಿಯಲ್ಲಿ ಕುಳಿತು ಕವಿಯಾಗಿ ಉಳಿದಿದ್ದಾರೆ. ಸಾಹಿತ್ಯ ಸೃಷ್ಟಿಗೆ ಜೀವನ ವೃತ್ತಿ ಪ್ರೇರಕವೇ ಆಗಬೇಕು. ಸ್ವತಃ ನೋಯುವ ಸ್ವಭಾವ. ಇನ್ನೊಬ್ಬರನ್ನು ನೋಯಿಸುವದು ಇವರ ಕೈಲಾಗದ ಕೆಲಸ.

* * *

ಡಿ. ಎಸ್. ಕರ್ಕಿ—

ಇವರ ನಡಿಗೆಯಲ್ಲಿ ಕಾವ್ಯವಿದೆ. ಭಾವದೇವಿ ಸುಳಿದಾಡಿದಂತೆ ಬಳುಕಿ ನಡೆಯುತ್ತಾರೆ. ಸಮಾಧಾನದ ಜೀವ. ಕನ್ನಡದ ಹಗುರಾದ ಶಬ್ದಗಳ ಕೋಶದಿಂದಲೇ ಇವರು ಪ್ರಸಂಗಕ್ಕೆ ತಕ್ಕ ಶಬ್ದ ಆಯ್ದುಕೊಳ್ಳುತ್ತಾರೆ. ಮೆಲುಮಾತಿನಿಂದ—ತಮ್ಮ ನಡೆಯಂತೆ ಕಾವ್ಯ ರಚಿಸುತ್ತಾರೆ. ಕನ್ನಡ ಲಿಪಿಯ ಸೊಬಗನ್ನು ಪದ್ಯವಾಗಿ ಹಾಡಿದರು. ಕಳಕಳಿ ಇವರ ಸ್ವಭಾವ. ಬಿರುಸು ಕಂಡಲ್ಲಿ ಇವರು ಬಹುಶಃ ಸುಳಿಯಲಾರರು.



ಡಿ.ಎಸ್. ಕರ್ಕಿ

* * *

ಪರಮೇಶ್ವರ ಭಟ್ಟರು

ಇವರ 'ರಾಗಿಣಿ' ಇಂದು ಕಾಳಿದಾಸನನ್ನು ವರಿಸಿದ್ದಾಳೆ. ಅಂದು ನಾನು ಅದೇ ಕಂಡಾಗ ಅಂದದೇ ತೆರೆದ ತುಮಕೂರು ಕಾಲೇಜಿನಲ್ಲಿ ಕನ್ನಡ ಮೇಷ್ಟ್ರು ಆಗಿದ್ದರು. ನೋಡುವಾಗ ಇವರ ಯಾವ ವಿದ್ಯಾ-

ರ್ಥಿಯೂ ಇವರ ಮುಂದೆ 'ಲಘುತ್ವ' ವನ್ನು ಮರೆತು 'ಗುರು' ವಾಗಿಯೇ ಕಾಣುವಂತಿತ್ತು. ಅಂಥ ಕಿರಿ ಅಗಲ—ಎತ್ತರದ ಆಳು; ಹರಿತವಿಲ್ಲದ ಪಾಂಡೇಶ್ವರರಂತೆ ಇಂದು ಏನೂ ಬದಲಾವಣೆಯಿಲ್ಲ. ತಲೆ ಮಾತ್ರ ನರೆತಿದೆ. ಮುಖ ಎಳೆತನ ಕಳೆದುಕೊಂಡಿದೆ. ಆದರೆ ಅಂದಿನ ಸರಳತನ ನವೋನವವಾಗಿದೆ.

ಭಟ್ಟರು ದೊಡ್ಡವರಾದರೆಂದು ಹಿರಿಯರು ಜತೆಗೆ ಕರೆದರೆ ಇವರು ಗಾಂಭೀರ್ಯ ಕೊಂಡುಕೊಂಡು ಹೋಗಿ ಅಲ್ಲಿ ಕೂಡಬೇಕು. ಹುಡುಗತನ ಅವರನ್ನಲ್ಲಿ ಕೂಡಗೊಡುವದಿಲ್ಲ. ಎದುರಿಸಿದ ಗ್ರಹಕ್ಕೆ ವಶವಾಗಿ ಗೋಳಾಡುತ್ತಾರೆ. ಮುಂದೆ ಆ ಗೋಳಿನ ವಿಶ್ಲೇಷಣೆಮಾಡಿ ನಗುತ್ತಾರೆ. ಆ ಭಾರ ಇಳಿಯುತ್ತದೆ.

ತಮ್ಮ ಭಾಷಣಗಳಿಗೇ ಅವರು ಪಟ್ಟೆ (ರೆಕಾರ್ಡ್)ಗಳೆನ್ನುತ್ತಾರೆ. ಧಾರವಾಡಕ್ಕೆ ಬಂದಾಗ ಹತ್ತಾರು ಕಡೆ ಭಾಷಣಕ್ಕೆ ಕರೆ ಬಂದವು. ಯಾವ ಪಟ್ಟೆ ಇಡಲಿ—ಎಂದು ಕೇಳುತ್ತಿದ್ದರು. ಆಗ ಅವರಲ್ಲಿ ನಾಲ್ಕಾರು ರೆಡಿಮೇಡ್ ಭಾಷಣಗಳಿದ್ದವು. ಕಾಲೇಜಿನ ಪಾಠದ ಪಟ್ಟೆಗಳು ಹಲವಿದ್ದರೂ ಸಾರ್ವಜನಿಕರಿಗೆಂದು ಅವಕ್ಕೆ ಹಿಂದೆ—ಮುಂದೆ ಎಳೆಹಚ್ಚಿ ಅಲಂಕಾರ ಮಾಡಿ ಭಾಷೆಯ ಮೋಡಿಯಿಂದ ಒಪ್ಪಕೊಟ್ಟು ಬಹು ಸುಂದರವಾಗಿ ಮಾತಾಡುತ್ತಾರೆ. ಯಾರ ಹಾಗೆ ಮಾತಾಡಲಿ, ಹೇಳಿ-ಎಂದು ಸುಖಸಂಕಥಾವಿನೋದಕ್ಕೆ ಕೇಳುವದುಂಟು. ಕೆಲವರ ಅಂಗವಿನ್ಯಾಸವನ್ನು ಯಥಾವತ್ತಾಗಿ ಚಿತ್ರಿಸಿ ತೋರಬಲ್ಲರು- ಯಕ್ಷಗಾನ ನಾಟಕದ ತಾಟಕೆ—ಶೂರ್ಪನಖಿಯರ ಕೀರಲು ಸ್ವರವನ್ನು ಹಾಗೇ ಕೊರೆಯಬಲ್ಲರು. ಈಗ ಅವರೇ ಅಂಥದಕ್ಕೆ ಗುರಿಯಾಗುವಷ್ಟು ಪ್ರಸಿದ್ಧಿ ಬಂದಿದೆ. ಅವರ ಭಾಷಣ ವೃತ್ತಿಯಿಂದ ಕನ್ನಡ ಅಭ್ಯಾಸದಿಂದ ಬಹುಜನ ಸ್ವಂತ ಬುದ್ಧಿ ಕಳೆದುಕೊಳ್ಳುತ್ತಾರೇಕೋ ! ಈಗ ಭಟ್ಟರು ಸ್ವಯಂ ಕವಿತ್ವ ಮಾಡುವದು ಕಡಿಮೆ. ಪಂಪ ರನ್ನರ ರಾಜ್ಯದಲ್ಲಿ ಮುಳುಗೆದ್ದು ಅದರದೇ ಪ್ರಸಂಗಗಳ ಗೋಳು ಹೊಯ್ದುಕೊಳ್ಳುತ್ತಾರೆ. ಕಾಳಿದಾಸನೊಬ್ಬ ಇಂದವರ ಆರಾಧ್ಯದೇವತೆ. ಅವನ ಕೃತಿಗಳನ್ನೆಲ್ಲ ಸುಂದರವಾಗಿ ಕನ್ನಡದಲ್ಲಿ ತರಬೇಕೆನ್ನುತ್ತಾರೆ. ಹೀಗೆ ಸುಂದರವಾಗಿ ನಾಲ್ಕಾರು ಸಂಪುಟಗಳು ಬರಬೇಕು ಎಂದು ಇಂಗ್ಲೀಷ ಪುಸ್ತಕಗಳ ಸುಂದರವಾದ ಬೈಂಡ್ ತೋರಿಸುತ್ತಾರೆ. ಬಹುಬೇಗ ಸ್ವಂತ ಕೃತಿರಚನೆ ಬಿಟ್ಟು ದೊಡ್ಡ ಹೊಂಡಕ್ಕಿಳಿದಿರಲ್ಲಾ— ಎಂದರೆ ಏನು ಸ್ವಾಮೀ— ಒಂದುವರೆ ಪಟ್ಟೆವಾಯಿತು— ಎನ್ನುತ್ತಾರೆ.

* * *

**ಕೃಷ್ಣಮೂರ್ತಿ ಪುರಾಣಿಕ—**

ಕರ್ನಾಟಕ ಕಾಲೇಜಿನಲ್ಲಿದ್ದಾಗ ಒಂದು ಕವಿತೆ ಬರೆದು ಓದಿದ್ದರು. "ಸುಡು ಸುಡಲೆ ಸುಡು ಜೀವ ಸುಡುಗಾಡ ಸೇರೇಳು" ಎಂದು ಮೊದಲಾದ ಆ ಬೆಂದೊಡಲ ಬಿಸಿಯುಸಿರು "ಮದುವೆಯಾಗಿತ್ತಂತೆ, ವಿಧವೆಯಾಗಿ ಹೆಂಡತಿ" ಎನ್ನುವಾಗ ಸಭೆಯಲ್ಲಿದ್ದ ಮುದವೀಡು ಕೃಷ್ಣರಾಯರ ಮನಸ್ಸಿಗೆ ತಟ್ಟಿ 'ಅಯ್ಯೋ' ಎನಿಸಿತು. ಮುಂದೆ "ಗಿರಿಯ ತೊರೆದು ಹೊರಗೆ ಬಾರೊ ಗಿರಿಯ ನಾಯಕಾ" ಎಂದು ವೆಂಕಟನನ್ನು ಕರೆದಾಗ ಕಾಲೇಜಿನ ಉಲಕೋಚಿ ಶ್ರೋತೃವೃಂದ "ಬಂದಾರೆ ಬರಲಿ" ಎಂದು ಗದ್ದಲಮಾಡಿತ್ತು.



ಪುರಾಣಿಕ

ಪುರಾಣಿಕರು ಇಂದು ಕಾದಂಬರಿಕಾರರಾಗಿದ್ದರೂ ಕವಿಯ ಹಾಗೇ ಇರಲೆಳಿಸುತ್ತಾರೆ. ಅದು ಸಾಹಿತ್ಯದ ಪ್ರಥಮಾಕರ್ಷಣೆ ಅವರಿಗೆ. ಅವರ ಜೋಡುಸ್ವರದಲ್ಲಿ, ಅವರ ನೆತ್ತಿಯವರೆಗೆ ಹಬ್ಬಿದ ಹಣೆಯಲ್ಲಿ, ಅವರ ನಿಲುವಿನಲ್ಲಿ—ಅದೇಕೆ ಅವರು ಕೈಯಲ್ಲಿ ಹಿಡಿಯುವ ತೊಗಲಚೀಲದಲ್ಲಿ ಕವಿತ್ವದ ಯತ್ನವಿದೆ.

* * *

ಆಯ್ತು ಎನ್ನುವಂತಿಲ್ಲ. ಇನ್ನೂ ಬಹುಸಂಖ್ಯೆಯ ಕವಿಗಡಣ 'ಅವುಕ್' ಎಂದು ಹೆದರಿಸುತ್ತಿದೆ. ಜಯಕರ್ನಾಟಕದ ಮೊದಲ ಸಂಚಿಕೆಯಿಂದಲೇ ಪದ್ಯ ಬರೆಯುತ್ತಿದ್ದ—'ಕಳೆದ ಪುಟಗಳ ವಿನೀತ' ಮತ್ತು ಒಂದಿಷ್ಟೂ ಬಿಸಿಯನ್ನು ಮೈಗೆ ತಾಗಿಸಿಕೊಳ್ಳದೆ ಬೆಳೆದ ಮುಕ್ತಹಾಸದ ಕವಿ ಶಿಂಪಿ ಲಿಂಗಣ್ಣ, ನಸುಕಿನ ನರೇಗಲ್ಲ, ಸಂಗಮ, 'ಶಿವೋಹಂ'ದ ಶಿವರುದ್ರಪ್ಪ, ನಯ-ನಾಜೂಕಿನ ಕಣವಿ, ಕಠಾರಿ ಮೊನೆಯ ರಾಮಚಂದ್ರ ಶರ್ಮ, ಚೆನ್ನಬಸಪ್ಪ, ಹಕಾರಿ, ಮೈಸೂರು ಮಲ್ಲಿಗೆಯ ಕವಿ, ಮಿಸ್ಟಿಕ್ ಕವಿ ಯಕ್ಕುಂಡಿ, ಐಕ್ಯಗಾನದ ಕಿಞ್ಞಣ್ಣರೈ, ಅಮ್ಮೆಂಬಳ, ಇದಿನಬ್ಬ, ಕೀರ್ತಿ, ಜಡಭರತ, ಗದಗಕರ—ಇನ್ನೂ ಅನೇಕರು ಕಣ್ಣ ಮುಂದೆ ನಿಂತಿದ್ದಾರೆ. ಅಲ್ಲದೆ ಮುಂದಿನ ಬುಶ್ ಕೋಟ್ ಕವಿಗಳೂ ಸಮವಸ್ತ್ರದ ಸೈನಿಕರಂತೆ 'ಮಾರ್ಚ' ಮಾಡುತ್ತಿದ್ದಾರೆ. ಅವರಿಗೆ ವೈಶಿಷ್ಟ್ಯ-ವೈವಿಧ್ಯಕ್ಕೆ ಅವಕಾಶಕೊಟ್ಟು ಸದ್ಯಃ ವಿಶ್ರಮಿಸಲೇಬೇಕು. ಈ ಲೇಖನಮಾಲೆ ಮುಗಿಯದೆ ಸಾಗುವ ಭಯವಿದೆ. ಹೀಗೆಂದು ಓದುಗರು ಗಾಬರಿಪಡಬೇಕಾಗಿಲ್ಲ. ನಾನು ಅಂಥ ಆತುರ ವೇಗದಿಂದ ನಿಮ್ಮನ್ನು ದಣಿಸಲಾರೆ.




'ತಮಸೋ ಮಾ ಜ್ಯೋತಿರ್ಗಮಯ'

ನೂರು–ಸಾವಿರ–ಲಕ್ಷ ಯುಗ–ಯುಗಗಳಾಚೆಯಲಿ
ಆದಿ–ಅಂತ್ಯಗಳ ಮೀರಿ ನಿಂತಿರುವ ಮುಗಿಲಿನಲಿ
ಶಶಿ–ಭಾನು–ತಾರಾಳಿ ಬೆಳಗುತಿವೆ ದೀಪಮಾಲೆ !

ದಾರಿ ಅರಿಯದ, ಕೊನೆಯ ಕಾಣದ ಇರುಳಿನಲಿ
ಬುವಿಯೆದೆಯ ಮೇಲುರಿಯುತಿದೆ ಪಣತಿದೀಪ !
ಅನಂತಾಕಾಶದಲಿ ಕುಡಿಯಾಡಿ– ಹೊಗೆತೂರಿ
ಮಲಿನವಾಗಿವೆ ಮನುಜನಿಕ್ಕಿದ ಎಣ್ಣೆದೀಪ !

ಸಾವನಪ್ಪಿದ ದೀಪ ಹಚ್ಚಬೇಡೆಲೊ ಭೂಪ—
ಹಚ್ಚು ; ಬೇಡೆನಲಾರೆ ಸಾವನರಿಯದ ದೀಪ !
ಸ್ಥಿರಪ್ರಕಾಶದ ಪ್ರಖರಕಿರಣನು ನೀನು ;
ನಿನ್ನಾತ್ಮಬೆಳಕಿನಲಿ ಇರಿಸು ಜ್ಯೋತಿಯ ರಾಶಿ !

ಬೆಳಕಿಗಾಗಿಯೆ ಬಂದ ಬೆಳಕಿನಿಂದೆ ಬಂದ
ದಾರಿಕಾರರು ನಾವು ಬೆಳಕುದಾರಿಯೊಳಿಂದು !
ಬಿಕ್ಕೆ ಬೇಡಲು ಬೇಡ– ಭಾಸ್ಕರನೆ ನಿನ್ನೊಳಿಹ !
ನೀನೆ ದೀಪವಾಗಿರುವಾಗ ಬೇರುಂಟೆ ದೀಪ ?

ಬ್ರಹ್ಮಾಂಡನಾಟಕದ ರಂಗಮುಂಟಪದೊಳಗೆ—
ನಿನ್ನ ಪಾತ್ರದ ರಚನೆ ಕೀಳಾಗದಿರಲಿ !
ಕಾಲಭೈರವನಲ್ಲಿ ಸೂತ್ರಧಾರನು ಜೋಕೆ
ಮಥಿಸು ಮಾಯೆಯ–ನೀನು–ಮಾಯವಾಗಲಿ "ನಾನು"

ಆಗ ನೋಡುವೆ ನೀನು ಹಗಲಿರುಳ ದಾರಿಯಲಿ
ಮೃತ್ಯು ಅರಿಯದ–ಕುಡಿಯು ಆರದ ಬೆಳಕನು !
ಜಗವೆ ಹಾಡುವುದಾಗ– " ತಮಸೋ ಮಾ ಜ್ಯೋತಿರ್ಗಮಯ "

—ರಾಘವೇಂದ್ರ

# ರೆಡಿಯೊ ನಾಟಕ

ಲೇಖಕರು : ಶ್ರೀರಂಗ

ರಂಗಭೂಮಿಯ ಮೇಲಿನ ನಾಟಕ ನೋಡುವದಾದರೆ, ರೆಡಿಯೋ ನಾಟಕ ಕೇಳಬೇಕಾದುದು. ಅಂತೆಯೇ ಅದರ ತಂತ್ರ ಮೊದಲಿನದಕ್ಕಿಂತ ಭಿನ್ನವಾಗಿರಬೇಕಾದುದು ಸ್ವಾಭಾವಿಕ. ರೆಡಿಯೊ ನಾಟಕ ತನ್ನದೇ ಆದ ಕೆಲ ವೈಶಿಷ್ಟ್ಯಗಳನ್ನು ರೂಪಿಸಿಕೊಂಡಿದೆ. ಅವೇನೆಂಬುದನ್ನು ಲೇಖಕರು ಇಲ್ಲಿ ನಿರೂಪಿಸಿರುವರು.



ರೆಡಿಯೊನಾಟಕ ಎಂಬುದು ನಮ್ಮಲ್ಲಿ ಕಳೆದ ೨೦-೨೫ ವರ್ಷಗಳಿಂದಲೆ ಪರಿಚಿತವಾಗಿ ಬಂದಿದೆ. ಸಾಮಾನ್ಯವಾಗಿ "ನಾಟಕ" ಎಂಬುದರ ಬಗ್ಗೆ ಲೇಖಕ, ವಿಮರ್ಶಕ ಮತ್ತು ವಾಚಕ ಈ ಮುವ್ವರಿಗೂ ಒಂದು ನಿಶ್ಚಿತ ಅಭಿಪ್ರಾಯವಿದೆ. ನಾಟಕದ ವೈಶಿಷ್ಟ್ಯವೆಂದರೆ ವೇಷ-ಭೂಷಣಗಳನ್ನು ತೊಟ್ಟು, ರಂಗಸ್ಥಳದಲ್ಲಿ, ಪ್ರೇಕ್ಷಕರ ಎದುರು ನಟರು ತಮ್ಮ ಮಾತು, ಅಭಿನಯಗಳಿಂದ ಪ್ರದರ್ಶನವನ್ನು ಮಾಡುವುದು. ಮಿಕ್ಕ ಎಲ್ಲ ತರದ ಸಾಹಿತ್ಯವನ್ನು ವಾಚಕನು ತನ್ನೊಬ್ಬನ ಮಟ್ಟಿಗೆ ಓದಿಕೊಂಡು ರಂಜಿತನಾಗಬಹುದು; ಅಲ್ಲಿ ರಸಾಸ್ವಾದನೆಗೆ ಮಿಕ್ಕವರ ಸಾನ್ನಿಧ್ಯ ಅಗತ್ಯವಿರುವುದಿಲ್ಲ. ನಾಟಕದ ಸ್ವರೂಪ ಬೇರೆ; ಇದನ್ನು ವಾಚಕನು ತನ್ನ ಮಟ್ಟಿಗೆ ಓದಿಕೊಂಡು ಸಂತೃಪ್ತನಾಗಲಾರ. ನಾಟಕವನ್ನು ರಂಗಭೂಮಿಯ ಪ್ರಯೋಗದಲ್ಲಿಯೆ ನೋಡಬೇಕು, ಇಷ್ಟೆ ಅಲ್ಲ—ಅನೇಕರ ಸಾನ್ನಿಧ್ಯವನ್ನು ದೊರಕಿಸಿಕೊಂಡರೇನೇ ನಾಟಕದ ರಸಾಸ್ವಾದನೆ ತೃಪ್ತಿಯನ್ನು ಕೊಡುವುದು.

ರೆಡಿಯೊನಾಟಕವು ರಂಗಭೂಮಿಯ ನಾಟಕದಿಂದ ಈ ದೃಷ್ಟಿಯಲ್ಲಿ ಪೂರ್ತಿಯಾಗಿ ಭಿನ್ನವಾಗಿದೆ ಎಂದು ಹೇಳಬಹುದು. ರಂಗಸ್ಥಲದ ನಾಟಕದಂತೆ ರೆಡಿಯೊನಾಟಕವೂ ಕೇವಲ ಓದಿದರೆ ತೃಪ್ತಿಯನ್ನು ನೀಡದು ಎಂಬುದು ನಿಜವಾದರೂ ರೆಡಿಯೊ ನಾಟಕವನ್ನು ಸಾಮೂಹಿಕವಾಗಿ ಕೇಳಿದರೇನೇ ತೃಪ್ತಿ ಎಂದು ಹೇಳಬೇಕಾಗಿಲ್ಲ. ಒಬ್ಬನೇ ಕುಳಿತುಕೊಂಡು ಕೇಳಬಹುದು, ಸಮೂಹದಲ್ಲಿ ಸೇರಿಕೊಂಡು ಕೇಳಬಹುದು; ಆದರೆ ಸಾಮೂಹಿಕವಾಗಿ ಕೇಳುವ-ನೋಡುವ ರಂಗಸ್ಥಲದ ನಾಟಕದ ಬಗ್ಗೆ ಶ್ರೋತೃಗಳ ವ್ಯಕ್ತವಾದ ಪ್ರತಿಕ್ರಿಯೆಯನ್ನು ಕಾಣಲಾರೆವು.

ರೆಡಿಯೊನಾಟಕದ ವೈಶಿಷ್ಟ್ಯವೆಂದರೆ ಇದು ಪ್ರೇಕ್ಷಕರಿಲ್ಲದ ನಾಟಕ. ರಂಗಭೂಮಿ ಇಲ್ಲ, ರಂಗಸಜ್ಜಿಕೆ ಇಲ್ಲ, ವೇಷಭೂಷಣಗಳಿಲ್ಲ, ಬೆಳಕಿನ ಬೆಡಗಿಲ್ಲ, ಎದುರು ಪ್ರೇಕ್ಷಕರೂ ಇಲ್ಲ! ಎಲ್ಲಿಯೊ ಒಂದು ಸ್ಟುಡಿಯೊದಲ್ಲಿ "ಪಾತ್ರ" ವಹಿಸುವವರು ತಮ್ಮ ದಿನನಿತ್ಯದ ಉಡಿಗೆತೊಡಿಗೆಗಳಲ್ಲಿ, ಧ್ವನಿವರ್ಧಕ ಯಂತ್ರದ ಮುಂದೆ ನಿಂತು ತಮ್ಮತಮ್ಮ ಮಾತುಗಳನ್ನು ಓದುವರು. "ಶ್ರೋತೃ"ಗಳು ತಂತಮ್ಮ ಮನೆಗಳಲ್ಲಿಯೋ ಬೇರೆ ಅನುಕೂಲಸ್ಥಲಗಳಲ್ಲಿಯೆ ಒಂದು ರೆಡಿಯೊದ ಮುಂದೆ ಕುಳಿತು ನಾಟಕವನ್ನು ಕೇಳುವರು. ಉಪಚಾರಕ್ಕಾಗಿ "ನಟ"ರ ಹೆಸರುಗಳನ್ನು ತಿಳಿದುಕೊಳ್ಳಬಹುದು; ಆದರೆ "ಪಾತ್ರ"ಗಳನ್ನು ಶ್ರೋತೃ ತನ್ನ ಮನಸ್ಸಿನಲ್ಲಿಯೆ ರೂಪಿಸಿಕೊಂಡು ಸಮಾಧಾನವನ್ನು ಹೊಂದಬೇಕಾಗುವುದು.

ಇಂತಹ ಒಂದೆರಡು ಮುಖ್ಯ ವೈಶಿಷ್ಟ್ಯಗಳಿಗಾಗಿ ರೆಡಿಯೊನಾಟಕವು ತನ್ನದೇ ಒಂದು ತಂತ್ರವನ್ನು ಬೆಳೆಯಿಸಿಕೊಂಡಿದೆ. ಬರೆಯುವ, ಅಭಿನಯಿಸುವ ಮತ್ತು ಪ್ರದರ್ಶಿಸುವ ದೃಷ್ಟಿಗಳಿಂದ ರೆಡಿಯೊ ನಾಟಕವು ರಂಗನಾಟಕದಿಂದ ತೀರ ಬೇರೆಯದಾಗಿದೆ. ಈ ಕಾರಣಕ್ಕಾಗಿ ಶ್ರೇಷ್ಠನಾಟಕಕಾರನ ನಾಟಕಗಳು ರಂಗದಲ್ಲಿಯಂತೆ ರೆಡಿಯೊ ಪ್ರಸಾರದಲ್ಲೂ ಯಶಸ್ವಿಯಾಗುವವು ಎನ್ನಲಾಗದು ; ರಂಗಭೂಮಿಯ ಮೇಲೆ ಪರಿಣಾಮಕಾರಕವಾದ ಪ್ರಯೋಗವು ರೆಡಿಯೊ ಪ್ರಸಾರದಲ್ಲಿ ಪರಿಣಾಮಕಾರಕವಾದೀತೆಂಬ ಭರವಸೆ ಇಲ್ಲ ; ರಂಗಭೂಮಿಯ ಮೇಲೆ ಕಣ್ತುಂಬುವ, ಮನಮೆಚ್ಚಿಸುವ ನಟ ಧ್ವನಿವರ್ಧಕ ಯಂತ್ರದ ಮುಂದೆ ಏಕಾಂತ ಸ್ಟುಡಿಯೊದಲ್ಲಿ ಅಭಿನಯಿಸಬಲ್ಲನೆಂದು ಹೇಳಲಾಗದು ; ರಂಗಸ್ಥಲದ ಪ್ರದರ್ಶನಕ್ಕಾಗಿ ನಾಟಕಪ್ರಯೋಗವನ್ನು ನಿರ್ದೇಶಿಸುವವನು ಅಷ್ಟೆ ಪ್ರಭಾವಶಾಲಿಯಾಗಿ ರೆಡಿಯೊನಾಟಕವನ್ನು ನಿರ್ದೇಶಿಸಬಲ್ಲನೆಂದೂ ಹೇಳಲಾಗದು. ಈ ಎರಡು ವಿಧದ ನಾಟಕಗಳು ಒಂದರಿಂದೊಂದು ವಿಶಿಷ್ಟವಾಗಿವೆ ಎಂದು ಹೇಳುವುದೆ ಇಲ್ಲಿ ಮುಖ್ಯ ಉದ್ದೇಶವಾಗಿದೆಯಲ್ಲದೆ ಮೇಲಿನ ವಾಕ್ಯಗಳನ್ನು ವೇದಪ್ರಮಾಣ ಎಂದು ಒತ್ತಿ ಹೇಳುವುದಕ್ಕಲ್ಲ.

ಇನ್ನೂ ಒಂದು ವೈಶಿಷ್ಟ್ಯವಿದೆ ರೆಡಿಯೊನಾಟಕದಲ್ಲಿ. ಹಿಂದಿನಂತೆ ಇಂದು ಇಡೀ ರಾತ್ರಿ ನಾಟಕ ಪ್ರಯೋಗ ನಡೆಯದಿದ್ದರೂ ರಂಗಭೂಮಿಯ ಪ್ರಯೋಗವು ಕನಿಷ್ಠ ೨-೩ ಗಂಟೆ ಕಾಲ ನಡೆಯಬೇಕು ಎಂಬ ಅಪೇಕ್ಷೆ ಸಾಮಾನ್ಯವಾಗಿರುವುದು. ಆದರೆ ರೆಡಿಯೊನಾಟಕದ ಅವಧಿ ಸಾಮಾನ್ಯವಾಗಿ ಅರ್ಧ ಗಂಟೆ ; ತೀರ ವಿಶಿಷ್ಟಸಂದರ್ಭಗಳಲ್ಲಿ ಒಂದುಗಂಟೆ. ಆದರೆ ಬರೀಕೇಳುವ ನಾಟಕ ಇದಾದುದರಿಂದ ಯಾವ ಸಂದರ್ಭಗಳಲ್ಲೂ ಶ್ರೋತೃಗಳು ಒಂದುಗಂಟೆಗೆ ಮಿಕ್ಕಿ ರೆಡಿಯೊನಾಟಕವನ್ನು ದಕ್ಕಿಸಿಕೊಳ್ಳಲಾರರು. ಇಷ್ಟೇ ಅಲ್ಲ, ತೀರ ಅಲ್ಪ ಅವಧಿಯಲ್ಲಿ ಶಕ್ಯವಿದ್ದಷ್ಟು ಹೆಚ್ಚು ಪರಿಣಾಮವನ್ನುಂಟುಮಾಡುವುದು ರೆಡಿಯೊನಾಟಕಗಳಲ್ಲಿ ನಾವು ಬಯಸುವ ಮುಖ್ಯ ಗುಣವಾಗಿದೆ.

ರೇಡಿಯೊನಾಟಕಕ್ಕೆ ಪ್ರೇಕ್ಷಕರಿಲ್ಲ. ಬರೀ ಶ್ರೋತೃಗಳು; ರೇಡಿಯೊ ನಾಟಕದ ಅವಧಿ, ಗಾತ್ರ ಚಿಕ್ಕದು. ಈ ಚಿಕ್ಕ ಅವಧಿಯಲ್ಲಿಯೆ ಒಂದು ಕ್ಷಣವೂ ಯಾವ ಸದ್ದೂ ಕೇಳದಂತೆ ಇರಕೂಡದು. ಇಂತಹ ಕಾರಣಗಳಿಗಾಗಿ ರೆಡಿಯೊ ನಾಟಕದಲ್ಲಿ ಪ್ರಾರಂಭದಿಂದ ಕೊನೆಯವರೆಗೆ ಅವಿರತವಾಗಿ ಮಾತು ಇಲ್ಲವೆ ಘಟನೆ ( ಸದ್ದಿನ ರೂಪದಲ್ಲಿ )

ಇರಬೇಕಾಗುವದು. ಇದಲ್ಲದೆ, ಪ್ರಾರಂಭವು ರೆಡಿಯೊ ನಾಟಕಕ್ಕೆ ಅತಿ ಮುಖ್ಯ ಮತ್ತು ಮಹತ್ವದ್ದಾಗಿದೆ. ರಂಗಭೂಮಿಯಲ್ಲಿ ತೆರೆಯು ಏಳುವ ಕ್ಷಣದಿಂದ ನೋಡಬೇಕಾದ, ನೋಡಿದರೇನೇ ಅರ್ಥವಾಗುವ ಅನೇಕ ಸಂಗತಿಗಳಿರುವವು. ತೆರೆ ಏಳುವುದು, ರಂಗಭೂಮಿಯಲ್ಲಿ ಬೆಳಕು ಇಲ್ಲವೆ ಕತ್ತಲೆ ಇರುವುದು, ರಂಗಸಂವಿಧಾನದಿಂದಲೆ ಸನ್ನಿವೇಶದ ಸಂದರ್ಭವನ್ನು ಊಹಿಸಲು ಶಕ್ಯವಾಗುವದು, ಪಾತ್ರದ ಪ್ರವೇಶ, ಮಾತು ಇಲ್ಲವೆ ಯಾವ ಸದ್ದೂ ಇಲ್ಲದೆ ಆ ಪಾತ್ರ ಅತ್ತಿತ್ತ ನೋಡುವುದು, ಹೆದರಿಕೆಯ ಹೆಜ್ಜೆಗಳನ್ನಿಡುವುದು ಓಡಿ ಹೋಗುವದುಹೀಗೆ ಎರಡು–ಮೂರು ನಿಮಿಷಗಳ ವರೆಗೆ ಯಾವ ಸದ್ದಿಲ್ಲದೆ ನಾಟಕ ನಡೆದರೂ ಪ್ರೇಕ್ಷಕರು ಬಾಯ್ದೆರೆದು ತನ್ಮಯರಾಗಿ ನೋಡಬಹುದಾಗಿದೆ; ಆದರೆ ರೆಡಿಯೊನಾಟಕದಲ್ಲಿ 'ಪ್ರೇಕ್ಷಕ'ರು ತನ್ಮಯರಾಗಬೇಕಾದರೆ ಪ್ರಾರಂಭದಿಂದಲೂ ಸದ್ದು ಬೇಕು. ಮಾತು ಬೇಕು ; ಈ ಸದ್ದು, ಈ ಮಾತು ಎಷ್ಟು ಅಕಲ್ಪಿತ ಮತ್ತು ಅನಿರೀಕ್ಷಿತವಾಗಬಹುದೊ ಅಷ್ಟು ಕುತೂಹಲದಿಂದ ಶ್ರೋತೃಗಳು ಕೇಳಲು ಮನಸ್ಸು ಮಾಡುವರು.

ರೆಡಿಯೊನಾಟಕದ ತಂತ್ರಕ್ಕೆ ಇನ್ನೊಂದು ವೈಶಿಷ್ಟ್ಯ ಅನಿವಾರ್ಯವಾಗಿದೆ. ರಂಗಭೂಮಿಯ ಮೇಲೆ ವ್ಯಕ್ತಿ-ವೇಷ-ಭೂಷಣ-ವೈಚಿತ್ರ್ಯಗಳಿಗಾಗಿ ಪ್ರತಿಯೊಂದು ಪಾತ್ರದ ಪರಿಚಯ ಪ್ರೇಕ್ಷಕನಿಗೆ ತಡವಿಲ್ಲದೆ ಮತ್ತು ಸ್ಥಿರವಾಗಿ ಆಗುವುದು. ಆದರೆ ರೆಡಿಯೊನಾಟಕದ ಶ್ರೋತೃವು ಕೇವಲ ಧ್ವನಿಯಿಂದಲೆ ಪಾತ್ರವನ್ನು ಗುರುತಿಸಬೇಕಾಗುವುದು ಇಲ್ಲವೆ ಪ್ರತಿಯೊಂದು ಪಾತ್ರವು ಮಾತನಾಡುವಾಗ ಎದುರಿಗಿದ್ದ ಪಾತ್ರಗಳನ್ನು ಹೆಸರಿನಿಂದ ಸಂಬೋಧಿಸಬೇಕಾಗುವುದು. ಈ ಕಾರಣಕ್ಕಾಗಿ ರೆಡಿಯೊನಾಟಕವು ಪರಿಣಾಮಕಾರಕವಾಗಬೇಕಾದರೆ ಅದರ ಪಾತ್ರಗಳ ಸಂಖ್ಯೆ ಶಕ್ಯವಿದ್ದಷ್ಟು ಸಣ್ಣದಿರಬೇಕಾಗುವುದು. ಕೆಲವೊಮ್ಮೆ ಕತೆಯು ಐತಿಹಾಸಿಕವಾಗಿ ಪಾತ್ರಗಳ ಸಂಖ್ಯೆ ಅನಿವಾರ್ಯವಾಗಿ ದೊಡ್ಡದಾದರೆ ಪಾತ್ರಗಳನ್ನು ಓದುವ ಕಲಾವಿದರು ಧ್ವನಿಯಲ್ಲಿ ಒಬ್ಬರಿಂದೊಬ್ಬರನ್ನು ವಿಂಗಡಿಸುವಂತಹರಾಗಿರಬೇಕು.

ಒಂದೇ ತರದ ಧ್ವನಿಗಳನ್ನು ಕೇಳುವುದು ಶ್ರೋತೃವಿಗೆ ಹೇಗೆ ಬೇಸರವನ್ನುಂಟುಮಾಡುವುದೊ ಹಾಗೆಯೆ ಒಂದೇ ಸವನೆ ಮಾತುಗಳನ್ನೆ ಕೇಳುತ್ತ ಕೂಡ್ರುವುದೂ ಬೇಸರ ತರುವಂತಹದಾಗಿದೆ. ಧ್ವನಿಗಳು ಒಂದರಿಂದೊಂದು ಬೇರೆಯಾಗಿದ್ದರೂ ಆ ಧ್ವನಿಗಳು ಒಂದರ ತರುವಾಯ ಒಂದರಂತೆ ಅರ್ಧಗಂಟೆಯ ವರೆಗೆ ಮಾತನಾಡಿದರೆ—ಆ ಮಾತುಗಳನ್ನು ಸರಸ್ವತಿಯನ್ನು ನಾಲಿಗೆಯಲ್ಲಿಟ್ಟುಕೊಂಡ ಕಾಲಿದಾಸನೇ ಬರೆದಿರಲಿ—ಶ್ರೋತೃಗಳಿಗೆ ನಿದ್ರೆಯ ತನ್ಮಯತೆ ಉಂಟಾಗಬಹುದು. ರಂಗಭೂಮಿಯಲ್ಲಿ ಮಾತುಗಳ ಜೊತೆ ಹಾವಭಾವಗಳಿರುವವು, ಬೇಸರವಾದರೆ ಬದಿಗೆ




ಬೇರೆ ಪ್ರೇಕ್ಷಕರಿರುವರು, ಕೊನೆಗೆ ಬೇರೆ ಬೇರೆ ಪ್ರವೇಶಗಳೂ ರಂಗಸಂವಿಧಾನಗಳೂ ಇರುವವು. ರೆಡಿಯೊ ನಾಟಕವನ್ನು ಕೇಳುವಾಗ ಇದೊಂದೂ ಇರುವುದಿಲ್ಲ. ಅದಕ್ಕಾಗಿ ರೆಡಿಯೊ ನಾಟಕದಲ್ಲಿ ಯಾವಾಗಲೂ ಅಲ್ಲಲ್ಲಿ ಸಹಾಯಕ ಸದ್ದು (Sound effect ) ಗಳಿರುವವು. ಈ ಸದ್ದುಗಳು ನಾಟಕಕ್ಕೆ ನಿಜವಾಗಿ ಮತ್ತು ಸಹಜವಾಗಿ ಸಹಾಯಕಗಳಾಗಿರಬೇಕು. [ ಬರಿಗಾಲಿನಿಂದ ಹೆಚ್ಚಾಗಿ—ಅದೂ ಮನೆಯಲ್ಲಿ ತಪ್ಪದೆ—ನಡೆಯುವ ನಮ್ಮ ಸಮಾಜ ಜೀವನದ ನಾಟಕಗಳಲ್ಲಿ 'ಹೆಜ್ಜೆಯ ಸಪ್ಪಳ' ಎಂದು ಬರೆಯುವುದು ಅಸಂಬದ್ಧ, ಸಹಾಯಕವಲ್ಲ].

ಇದೇ ಸಂದರ್ಭದಲ್ಲಿ ಇನ್ನೊಂದು ಮಾತನ್ನು ಹೇಳಬಹುದು. ಧ್ವನಿಗಳ ವೈವಿಧ್ಯ ರೆಡಿಯೊ ನಾಟಕದ ಪರಿಣಾಮಕ್ಕೆ ಅನುಕೂಲ ಎಂದಿದೆಯಲ್ಲವೆ ? ಈ ಕಾರಣಕ್ಕಾಗಿ ರೆಡಿಯೊನಾಟಕಗಳಲ್ಲಿ ಉದ್ದುದ್ದ ಭಾಷಣಗಳಿಗೆ ಅವಕಾಶವಿಲ್ಲ. ನೂರು ವರುಷಗಳಿಗೋ ಸಾವಿರ ವರ್ಷಗಳಿಗೋ ಒಬ್ಬ ಮಾತುಗಾರ ಹುಟ್ಟಬಹುದು, ತನ್ನೊಬ್ಬನ ಭಾಷಣದಿಂದಲೆ ಅವನು ಶ್ರೋತೃಗಳನ್ನು ಮುಗ್ಧಗೊಳಿಸಲು ಸಮರ್ಥನಾಗಬಹುದು ; ಆದರೆ ಅವನು ಕೂಡ ಪರೋಕ್ಷವಾಗಿ ಮಾತಾಡುತ್ತ ನಮ್ಮ ಮನಸ್ಸನ್ನು ಬಹುಕಾಲ ಸೆಳೆಯಲಾರ. ಆದ್ದರಿಂದ ರೆಡಿಯೊ ನಾಟಕದಲ್ಲಿ ಚುಟುಕಾದ ಸಂಭಾಷಣೆಯೆ ಇಷ್ಟವಾಗಿದೆ. ಜೊತೆಗೆ ಹಾವ-ಭಾವಗಳಿಂದ ಪುಷ್ಟವಾಗುವ ಶೈಲಿಯನ್ನು ಬಿಟ್ಟುಕೊಟ್ಟು ಧ್ವನಿಯ ಏರಿಳಿತಗಳಿಂದ ಅರ್ಥಕ್ಕೆ ಪುಷ್ಟಿಯನ್ನು ಕೊಡುವಂತಹ ಶೈಲಿ ರೆಡಿಯೊ ನಾಟಕಕ್ಕೆ ಅಗತ್ಯ.

ರೆಡಿಯೊನಾಟಕ — ನಮ್ಮಲ್ಲಲ್ಲದಿದ್ದರೂ— ತನ್ನದೆ ಒಂದು ಸ್ಥಾನವನ್ನು ಗಳಿಸಿಕೊಳ್ಳುತ್ತಲಿದೆ. ತಂತ್ರಕ್ಕಾಗಿ ರಂಗ—ನಾಟಕದಿಂದ ಅದು ವಿಶಿಷ್ಟವಾದಂತೆ ಇನ್ನೊಂದು ದೃಷ್ಟಿಯಿಂದಲೂ ವಿಶಿಷ್ಟವಾಗಿದೆ. ಅದೇದರೆ ಕತೆ ಮತ್ತು ಕತೆಯ ಬೆಳವಣಿಗೆ. ರಂಗಭೂಮಿಗೆ ಮೀರಿದ ಕತೆಗಳು ರೆಡಿಯೊನಾಟಕದ ಕಥಾವಸ್ತುಗಳಾಗಬಹುದು. ಹಾಗೆ ಆಗುವುದೆ ರೆಡಿಯೊನಾಟಕದ ಬೆಳವಣಿಗೆಯ ಲಕ್ಷಣ ಎನ್ನಬಹುದು. ಉದಾಹರಣೆಗಾಗಿ ಮನುಷ್ಯಸ್ವಭಾವದ ಅಂತರಂಗದ ಕತೆ. ಬಾಲ್ಯದ ಒಂದೆರಡು ಸ್ಮರಣೆಗಳಿಂದ ಇಂದು ತನ್ನ ನಡೆಯನ್ನು ತಿಳಿದುಕೊಳ್ಳಬಯಸುವ ಒಬ್ಬ ಮನುಷ್ಯನ ಕತೆಯನ್ನು ರೆಡಿಯೊನಾಟಕದಲ್ಲಿ ಖಂಡಿತವಾಗಿ ಪರಿಣಾಮಕಾರಕವಾಗಿ ತೋರಿಸಬಹುದಾಗಿದೆ. ಅದರಂತೆಯೆ ರಂಗಭೂಮಿಯ ಮೇಲೆ ಸ್ವಗತಭಾಷಣವು ಕೃತ್ರಿಮ ಎನ್ನಿಸಿದರೆ, ರೆಡಿಯೊ ನಾಟಕದಲ್ಲಿ ಅದನ್ನು ಸಹಜ ಮತ್ತು ಪರಿಣಾಮಕಾರಕ ಎನ್ನಿಸುವಂತೆ ತೋರಿಸಬಹುದು.

ಹೀಗೆ ವಿಚಾರ ಮಾಡಿದರೆ ಇನ್ನೂ ಅನೇಕ ವಿಷಯಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳಬಹುದಾಗಿದೆ. ಆದರೆ ಅವೆಲ್ಲವುಗಳಿಂದ ಸಮರ್ಥಿತವಾಗುವ ಮಾತು ಒಂದೇ. ರಂಗಭೂಮಿಯ ನಾಟಕವಾಗಲಿ, ರೆಡಿಯೊ ನಾಟಕವಾಗಲಿ ಎರಡರಲ್ಲೂ ಸಾಮಾನ್ಯವಾದುದು ನಾಟಕೀಯತೆ ; ಎಂದರೆ ಅಭಿನಯದ ಸಹಾಯದಿಂದ ತಾತ್ಪೂರ್ತಿಕವಾಗಿ ಕಥೆಯ ಪಾತ್ರಗಳನ್ನು ಜೀವಂತವಾಗಿ ತೋರಿಸುವುದು ; ಆದರೆ ಈ ಎರಡರಲ್ಲಿ 'ತೋರಿಸುವ' ರೀತಿ ಮಾತ್ರ ಭಿನ್ನವಾಗಿದೆ, ಒಂದೊಂದರ ರೀತಿಯೂ ಒಂದೊಂದಕ್ಕೆ ವಿಶಿಷ್ಟವಾಗಿದೆ. ರೆಡಿಯೊನಾಟಕ ಸಾಹಿತ್ಯಕ್ಕೆ ದಿನದಿನ ಹೆಚ್ಚು ಪ್ರೋತ್ಸಾಹ ದೊರೆಯಬಹುದಾದ ಇಂದಿನ ಕಾಲದಲ್ಲಿ ನಮ್ಮ ತರುಣ ಸಾಹಿತಿಗಳು ಈ ವೈಶಿಷ್ಟ್ಯವನ್ನು ಮನಗಂಡು ಬರೆದರೆ ಮಿಕ್ಕ ಸಾಹಿತ್ಯ ಪ್ರಕಾರಗಳಲ್ಲಿಯಂತೆ ರೆಡಿಯೊ ನಾಟಕಗಳಲ್ಲೂ ನಾವು ಪ್ರಗತಿಯನ್ನು ಖಂಡಿತವಾಗಿ, ಶೀಘ್ರವಾಗಿ ಸಾಧಿಸಬಲ್ಲೆವು.

---




ಬರೆದವರು: ದ. ಲ. ಕೆರೂರ

> ದೊರೆಗಳ ಮಗನಿಗೆ ಓದು ಹೇಳಲು ಹೋದ ರಾಜೇರಾಯಮಾಸ್ತರ 'ಬಂಗಾರದ ಗುಬ್ಬಿ' ಯ ಕೈಯಲ್ಲಿ ಸಿಲುಕಿ ಚಿನ್ನದ ಪಂಜರವನ್ನು ಸೇರ ಲಿದ್ದರು. ಆದರೆ ಪಂಜರ ಸಿದ್ಧ-ವಾಗುವ ಮೊದಲೇ ತಮ್ಮ ಪತ್ನಿ-ಯೊಂದಿಗೆ ಪಲಾಯನಸೂತ್ರ ಪಠಿಸಿದರು. ದೊರೆಗಳು ಈ ಸುದ್ದಿ ಕೇಳಿ ನಿಟ್ಟುಸಿರ್ಗರೆದರು.

"ಬನ್ನಿ ಮಾಸ್ತರೆ, ತಡವಾಯಿತಲ್ಲ". ಕಳ್ಳ ಹೆಜ್ಜೆಯನ್ನಿಕ್ಕುತ್ತ ಬರುತ್ತಿದ್ದ ಆ ಬಡ ಮಾಸ್ತರ ಗ್ಯಾನೆ ನಿಂತ; ಕೈಯಲ್ಲಿ ಜೀವ ಹಿಡಿದುಕೊಂಡು ಬೆಕ್ಕಿನಂತೆ ಸದ್ದಿಲ್ಲದೆ ಒಂದೊಂದೇ ಹೆಜ್ಜೆಯನ್ನಿಡುತ್ತ ಬರುತ್ತಿದ್ದ ಮಾಸ್ತರ ರಾಜೇರಾಯನಿಗೆ ಆ ಸ್ವಾಗತದ ಮಾತುಗಳು ಅಣುಬಾಂಬಿನಂತಾದವು. ಸರಿಯಾಗಿ ನಾಲ್ಕು ಗಂಟೆಗೆ ಪ್ರಿಯ ಶಿಷ್ಯ-ನಿಗೆ ಓದು ಹೇಳಲು ಹಾಜರಿರಬೇಕಾಗಿದ್ದ ಆತನು ಇಂದು ಐದು ನಿಮಿಷ ತಡಮಾಡಿ ಬಂದಿದ್ದ. ಬರುವಾಗ ದಾರಿಯಲ್ಲಿ ಚಪ್ಪಲಿಯ ಉಂಗುಟ ಕಿತ್ತಿ ಹೋದದ್ದರಿಂದ ರಿಪೇರಿ ಮಾಡಿಸಿಕೊಂಡು ಬರಲು ಆತನಿಗೆ ವಿಳಂಬವಾಗಿತ್ತು. ಹೇಳಿದರೆ ನಂಬುವಂಥ ಕಾರಣವಾಗಿರಲಿಲ್ಲ ಅದು. ಪ್ರಚಂಡ ಶಿಷ್ಯನ ಎದುರಿನಲ್ಲಿ ಆಗ ಆತನಿಗೆ ದೇಶಾವರಿ ನಗೆ ಬೀರಿ ಪಾರಾಗುವದೊಂದೇ ದಾರಿ. ಎಂದಿನಂತೆ ಆ ಅಸ್ತ್ರ ಉಪಯೋಗಿಸಿದ. ಫಲಕಾರಿಯಾಯಿತು.

"ಇನ್ನೂ ಬಾಗಿಲಲ್ಲಿಯೆ ನಿಂತಿದ್ದೀರಲ್ಲಾ? ಚಹ ಆರಿಹೋಗುತ್ತದೆ ಒಳಗೆ ಬನ್ನಿ" ಎಂದು ಶಿಷ್ಯ ರಮಾಕಾಂತನ ಆಗ್ರಹದ ಕರೆ.

ರಾಜೇರಾಯ ಕರವಸ್ತ್ರದಿಂದ ಬೆವರು ಒರೆಸಿಕೊಂಡು ಹೋಗಿ ಶಿಷ್ಯ ರಮಾಕಾಂತನ ಸನ್ನಿಧಾನದಲ್ಲಿ ಆತನ ಎದುರಿಗೆ ಕುರ್ಚಿಯಲ್ಲಿ ಮಂಡಿಸಿದ. ನಡುವಿನ ಟೇಬಲ್ಲ ಮೇಲೆ ಇಡಲಾಗಿದ್ದ ಚೂಡಾದ ಚಿಕ್ಕ ತಟ್ಟೆಗಳೆರಡನ್ನೂ ಎರಡು ಕಪ್ಪುಗಳನ್ನೂ ನೋಡಿ,

"ಚಹದ ಕಾರ್ಯಕ್ರಮ ಮುಗಿಸಿಕೊಂಡು ಬಿಡಬಹುದಾಗಿತ್ತಲ್ಲ. ಅಂದರೆ ನೇರವಾಗಿ ಅಭ್ಯಾಸಕ್ಕೆ ತೊಡಗಬಹುದಾಗಿತ್ತು" ಎಂದ.

"ಇಂದು ನಮ್ಮ ಆಚಾರಿ ಸ್ಪೆಶಲ್ ಕೊಲ್ಲಾ-ಪೂರ ಚೂಡಾ ಮಾಡಿದ್ದ. ಅಷ್ಟು ಗುರುದಕ್ಷಿಣೆ ಕೊಡೋಣವೆಂದು ಇಲ್ಲಿಗೆ ಚಹ-ಚೂಡಾ ತರಿಸಿದೆ. ಅದಕ್ಕೂ ಭಾಗ್ಯ ಬೇಕಾಗುತ್ತದೆ ನೋಡಿರಿ. ನೀವು ಅಂದಂತೆ ನಾನು ಚಹಕ್ಕಾಗಿ ಹೊರಟೇ ಇದ್ದೆ. ಅಷ್ಟರಲ್ಲಿ ನೀವು ಬರಹತ್ತಿದ್ದು ಕಿಟಕಿಯೊಳಗಿಂದ ಕಾಣಿಸಿತು. ಮತ್ತೆ ನೀವು ಬಂದು ಇಲ್ಲಿ ತೆಪ್ಪಗೆ ಕೂಡುವದೇತಕ್ಕೆ ಎಂದು ಚಹ ಇಲ್ಲಿಗೇ ತರಿಸಿದೆ. ಚೂಡಾ ಹೇಗಿವೆ?"

ಇನ್ನೊಂದು ಎರಡು ನಿಮಿಷವಾಗಿದ್ದರೂ ಒಳಿತಾಗುತ್ತಿತ್ತು. ಈ ಹಂಗಿನ ಚಹಾ ತಪ್ಪುತ್ತಿತ್ತು ಎಂದು ಮನಸ್ಸಿನಲ್ಲಿಯೆ ಭಾವಿಸಿ ರಾಜೇರಾಯ, "ನಿಮ್ಮಲ್ಲಿಯ ಚೂಡಾ. ವರ್ಣನೆ ಮಾಡಬೇಕಾಗಿಲ್ಲ. ಚೂಡಾದಲ್ಲಿ ನಮ್ಮಲ್ಲಿ ಸೇಂಗಾ ಪುಠಾಣಿ ಹುಡುಕಿ ತೆಗೆಯಬೇಕಾದರೆ ನಿಮ್ಮಲ್ಲಿ ಅವಲಕ್ಕಿ ಕಾಳು ಆರಿಸಿ ತೆಗೆಯಬೇಕು. ತಟ್ಟೆತುಂಬ ಸೇಂಗಾ ಪುಠಾಣಿ, ಕೊಬ್ಬರಿ, ದ್ರಾಕ್ಷಿ ಬದಾಮಿ ಇವೇ." ಎಂದು ವರ್ಣನೆ ಮುಗಿಸಿ ಚಹದ ಕಪ್ಪನ್ನು ಬಾಯಿಗೆ ಹಚ್ಚಿದ.

'ಹುಶ್! ಹುಶ್!' ಎಂದು ಶಿಷ್ಯನು ಕುಳಿತ ಕುರ್ಚಿಯ ಮೇಲಿಂದ ಟಣ್ಣನೆ ಕಿಟಕಿಯ ಕಡೆಗೆ ಜಿಗಿದ. ಕಿಟಕಿ ಹೊರಗೆ ಎರಡು ಪುಟ್ಟ ಗುಬ್ಬಿಗಳು 'ಹೇಗಾಯಿತು' ಎಂದು ಇವನನ್ನು ಕೊಂಕು ನೋಟದಿಂದ ನೋಡುತ್ತ ಮಂಗಳೂರು ಹಂಚುಗಳ ಮೇಲೆ ಚಲ್ಲಾಟ ನಡೆಸಿದ್ದವು. ಒಂದರೆ ನಿಮಿಷ ರಮಾಕಾಂತ ಕಿಟಕಿಯ ಸರಳುಗಳಿಗೆ ತಲೆಯಿಟ್ಟು ಆ ಗುಬ್ಬಕ್ಕಿಗಳ ಚಿನ್ನಾಟ ನೋಡುತ್ತ ನಿಂತ.

ರಾಜೇರಾಯ ಶಿಷ್ಯನ ಆ ನಾಟಕವನ್ನು ಹೇಗೋ ಸುಧಾರಿಸಿಕೊಂಡು ಚಹಾ ಮುಗಿಸಿ ಕಪ್ಪನ್ನು ಮೇಜಿನ ಮೇಲಿಟ್ಟು, ಶಿಷ್ಯನನ್ನು ಆಹ್ವಾನಿಸಿದ.

'ಬನ್ನಿ, ರಮಾಕಾಂತ, ಅವುಗಳ ಆಟ ಏನು ನೋಡುತ್ತ ನಿಂತಿದ್ದೀರಿ. ಹೊತ್ತಾಗುವದಿಲ್ಲವೆ?'

"ಮಾಸ್ತರ, ಇಲ್ಲಿ ನೋಡಬನ್ನಿ. ಈ ಗುಬ್ಬಿಗಳು ನಮ್ಮ ಮೇಜಿನ ಮೇಲೆ ಚೂಡಾದ ತಟ್ಟೆ ಬಂದಕೂಡಲೆ ಕೊಂಕುತ್ತ ಕುಣಿಯುತ್ತ ಇಲ್ಲೇ ಸುಳಿದಾಡಹತ್ತಿವೆ. ಎಷ್ಟು ಮಾಟಾಗಿವೆ. ಕಿಟಕಿಯ ವರೆಗೂ ಬಂದಿದ್ದವು."

ಬಿಸಲಿನಲ್ಲಿ ಕೆಂಪು ಹಂಚಿನ ಮೇಲೆ ಥಕಥೈ ಆಟ ನಡೆಸಿದ್ದ ಆ ಜತೆ ಗುಬ್ಬಿಗಳು ಶಿಷ್ಯನಂದಂತೆ ಬಹಳೇ ಮೋಹಕವಾಗಿದ್ದವು.

"ನೀವು ಚೂಡಾದ ನಾಲ್ಕುಕಾಳು ಎಸೆದಿದ್ದರೆ ಹೋಗಿಬಿಡುತ್ತಿದ್ದವು."

"ಒಂದು ಯುರೋಪಿಯನ್, ಒಂದು ನಿಗ್ರೋ. ನಿಗ್ರೊ ಗುಬ್ಬಿ ಹೇಗೆ ಟೊಣಪನಂತಿದೆ ಕಂಡಿರಾ. ಕೆಂಪು ಗುಬ್ಬಿಯ ಒನಪು ನೋಡಿರಿ."

"ಆ ನಿಗ್ರೊ ಗಂಡು. ಇನ್ನೊಂದು ಹೆಣ್ಣು. ಗುಬ್ಬಿಗಳನ್ನು ಚನ್ನಾಗಿ ನೋಡುತ್ತಿರುವದು ಇಂದೇ ಎಂದು ಕಾಣುತ್ತದೆ."

"ನಮ್ಮಲ್ಲಿ ಹೊರಗೆ ಪಂಜರದಲ್ಲಿ ಗಿಳಿಗಳಿವೆ. ಈ ಪುಟ್ಟ ಹಕ್ಕಿಗಳನ್ನೂ ಹಾಗೆ ಹಿಡಿದು ಸಾಕಲಿಕ್ಕೆ ಆಗುವದಿಲ್ಲವೆ?"

"ಗೊಲ್ಲರು ಮಾತ್ರ ಗುಬ್ಬಿ ಹಿಡಿದು ತಿನ್ನುವದನ್ನು ಕೇಳೇನಿ. ಯಾರೂ ಅವನ್ನು ಸಾಕಿದ್ದು ಗೊತ್ತಿಲ್ಲ. ಅವು ಜೀವಂತ ಕೈಗೆ ಸಿಗುವದೇ ಇಲ್ಲ. ಹೋಗಲಿ ಬಿಡಿರಿ. ಅವುಗಳೊಡನೆ ಏನು ಆಟ. ಇಂದು ಪಾಠ ಇಲ್ಲವೇನು?"

"ತಡೀರಿ. ನಾಳೆ ರವಿವಾರ. ಈ ಗುಬ್ಬಿ ಹಿಡಿಯೋಣ. ನೋಡಿರಿ ಹೇಗೆ ಯುಕ್ತಿ ಮಾಡುತ್ತೇನೆ" ಎಂದು ತಟ್ಟೆಯಲ್ಲಿದ್ದ ಚೂಡಾ ಮುಷ್ಟಿಯಲ್ಲಿ ಎತ್ತಿ ಹೊರಗೆ ಹಂಚಿನ ಮೇಲೆ ಗುಬ್ಬಿಗಳನ್ನು ಕಿಟಕಿಯತ್ತ ಆಕರ್ಷಿಸುವಂತೆ ಒಂದೊಂದೆ ಕಾಳನ್ನು ಎಸೆಯಹತ್ತಿದ. ಆ ಗುಬ್ಬಿಗಳು ಆಮಿಷಕ್ಕೊಳಗಾಗಿ ಕಿಟಕಿಯ ಕಡೆಗೆ ಸಾಗಿ ಬಂದರೂ ಒಂದು ಮಾರು ದೂರದಲ್ಲಿಯೆ ನಿಂತು ಅಲ್ಲಿಯೆ ಸುತ್ತಾಡಹತ್ತಿದವು.

"ರಮಾಕಾಂತ, ಈಗ ದೊರೆಗಳು ಬಂದರೆ ನನ್ನ ಫಜೀತಿ ಆದೀತು. ಎಲ್ಲಿ ಪುಸ್ತಕ ಎತ್ತಿಕೊಳ್ಳಿ. ಪರೀಕ್ಷೆಯ ತಯಾರಿ ಮಾಡುವದಿಲ್ಲವೆ?"

"ಮಾಸ್ತರ! ಪಿತಾಜಿ ಇಂದು ಮುಂಬಯಿಗೆ ಹೋದರು. ನಿಮ್ಮ ತರಲೆಯ ಪರೀಕ್ಷೆ ದೀಪಾವಳಿ ಸೂಟಿಯ ನಂತರ. ನಾಳೆ ರವಿವಾರ ಮತ್ತೆ ನಾಡದ್ದಿನಿಂದ ಮೂರು ವಾರ ರಜೆ. ಎಷ್ಟು ಓದಿಸುತ್ತೀರೋ ನೋಡೋಣ. ಎಲಾ, ಎಲಾ, ಇಲ್ಲೇ ಕೈಯಳತೆಯಲ್ಲಿಯೆ ಬರಹತ್ತಿವೆಯಲ್ಲ. ಇಂದು ಗುಬ್ಬಿ ಬೇಟೆ ಕಾರ್ಯಕ್ರಮ. ಪಾಠ ಬಂದ."

"ಹಾಗೆಂದರೆ ಹೇಗೆ? ನಾನು ಹಾಗೆ ಹಿಂತಿರುಗಬೇಕೆ?"

"ನಿಮಗೂ ಕೆಲಸ ಅದ ಬರ್ರಿ."

ಗುಬ್ಬಿಗಳು ಹಂಚುಗಳ ಮೇಲಿನ ಚೂಡಾದ ಕಾಳುಗಳನ್ನು ಹೆಕ್ಕುತ್ತ ಇನ್ನೂ ಇವರ ಕಣ್ಣಳತೆಯಲ್ಲಿ ಕೈಯಳತೆಯಲ್ಲಿ ಮಾಯೆಯನ್ನು ಬೀರುತ ಸುಳಿದಾಡುತ್ತಿದ್ದವು.

"ಈ ಟೇಬಲ ಕಿಟಕಿಗೆ ಹಚ್ಚಿ ಇಡೋಣ" ಎಂದು ಅದನ್ನು ಎಳೆಯಹತ್ತಿದ. ಭಾರವಾಗಿದ್ದ

ಆ ಸಿಸಿವೆ ಕಟ್ಟಿಗೆಯು ಕರಿ ಮೇಜು ಅಲುಗಾಡದ್ದ ರಿಂದ ರಾಜೇರಾಯನೇ ಮುಂದಾಗಿ ಶಿಷ್ಯನ ಗುಬ್ಬಿ ಬೇಟೆಗೆ ಸಹಾಯಕನಾಗಬೇಕಾಯಿತು.

" ಬಲೆ ಬೀಸಿದರೂ ಸಿಕ್ಕುವದಿಲ್ಲ ಅವು. ಏನಿದು ನಿಮ್ಮ ಉಪದ್ವ್ಯಾಪ."

" ನೋಡುತ್ತಿರಿ ಮಾಸ್ತರ. ಶಕ್ತಿಗಿಂತ ಯುಕ್ತಿ ಮೇಲು, ಮೇಜನ್ನು ಕಿಟಕಿಗೆ ಹೊಂದಿ ಅದರ ಡ್ರಾಅರ ತೆಗೆದು ಕಿಟಕಿಯಲ್ಲಿ ಒಂದಿಷ್ಟು ಡ್ರಾಅರ ನಲ್ಲಿ ಒಂದಿಷ್ಟು ಜೂಡಾಕಾಳು ಹಾಕಿ ನಾವು ಇತ್ತ ತುಸು ದೂರ ಕೂತು ಬಿಡೋಣ. ಗುಬ್ಬಿಗಳು ಬಂದು ಡ್ರಾಅರನಲ್ಲಿ ಹೊಕ್ಕೊಡನೆ ಧಡಾರಿಸಿ ಅದರ ಬಾಗಿಲು ಮುಚ್ಚಿದರಾಯಿತು. ಹೌದು ಅಲ್ಲೊ ?" ಎಂದು ತನ್ನ ಒಂದೊಂದು ಮಾತನ್ನು ಆತ ಕೃತಿಗಿಳಿಸಿ ತನ್ನ ಕುರ್ಚಿಯ ಮೇಲೆ ಬಂದು ಕುಳಿತ.

ಇಷ್ಟು ಆಸಕ್ತಿಯನ್ನು ಓದಿನಲ್ಲಿ ತೋರಿಸಿದ್ದರೆ ಉಭಯತಾಪಿ ಕಲ್ಯಾಣವಾಗುತ್ತಿತ್ತು. ಇಷ್ಟು ದಿನ ಆರು ವರ್ಷ ಹೇಗೋ ದಾಟಿದ ರಮಾಕಾಂತ ಈ ವರ್ಷ ಸಂಸ್ಕೃತ, ಬೀಜಗಣಿತಗಳ ಅಭ್ಯಾಸ ಪ್ರಾರಂಭವಾದ್ದರಿಂದ ಓದಿನಕಡೆಗೆ ಗಮನವೀಯ ಬೇಕಾದದ್ದು ಅತ್ಯಗತ್ಯ. ಪರೀಕ್ಷೆಗಳಲ್ಲಿ ಆತನಿಗೆ ಬಿದ್ದ ಗುಣಗಳ ಅಂಕಿಯನ್ನು ೧೫ ರಿಂದ ೩೫ ಕ್ಕೆ ತಿದ್ದಿ ತಿದ್ದಿ ಎಲ್ಲ ಅಧ್ಯಾಪಕರಿಗೂ ಸಾಕಾಗಿ ಹೋಗಿತ್ತು. ಯಾವ ಬೆದರಿಕೆಯೂ ಅಲ್ಲಿ ನಾಟು ವಂತಿರಲಿಲ್ಲ. ಏಕಮಾತ್ರ ಪುತ್ರ; ಮೂರು ಲಕ್ಷ ರೂಪಾಯಿಗಳ ಉತ್ಪನ್ನದಾರ. ಓದಿನ ಗಾಡಿ ಮುಂದೆ ಸಾಗಲೇಬೇಕೆಂಬ ಹಟ ಅವರ ತಾಯ್ತಂದೆಗಳಿಗೂ ಇದ್ದಂತಿರಲಿಲ್ಲವೆಂದು ರಾಜೇರಾಯನ ಅಭಿಪ್ರಾಯವಾಗಿತ್ತು. ಶಿಷ್ಯನ ವಿರುದ್ಧ ಏನಾದರೂ ತಕರಾರನ್ನು ದೊರೆಗಳ ವರೆಗೆ ಒಯ್ದರೆ ಹುಡುಗ ಇನ್ನೂ ಚಿಕ್ಕವನು, ಸುಧಾರಿಸಿಕೊಳ್ಳಿ ಎಂಬ ಉಪದೇಶಪಡೆದು ಹಿಂತಿರುಗಬೇಕಾಗುತ್ತಿತ್ತು. ಅದ್ದರಿಂದ ಇವರೂ ಅಲ್ಲಿಯ ವರೆಗೆ ಹೋಗುವದನ್ನು ಬಿಟ್ಟು ಇಲ್ಲಿಯೆ ಸಾಧ್ಯವಿದ್ದ ರೀತಿಯಲ್ಲಿ ಆತನನ್ನು ತಿದ್ದಿ ಮೂರ್ತಿಯನ್ನಾಗಿಸಲು ಹೆಣಗುತ್ತಿದ್ದರು. ಆದರೆ ಒಂದೊಂದು ದಿನ ಶಿಷ್ಯನಿಗೆ ಏನೋ ಛಲ ಬಂದು ಬಿಟ್ಟಿತೆಂದರೆ ಅಂದು ಓದಿಗೆ ರಜೆಯಾಗಿ ಬಿಡುತ್ತಿತ್ತು. ಇಂಥದೊಂದು ದಿನವಾಗಿತ್ತು ಇಂದಿನದು.

" ಏನದು, ಕಾಲಹೆಬ್ಬೆರಳಿಗೆ ಏನೋ ಕೆಂಪು ದಾರ ಕಟ್ಟಿಕೊಳ್ಳುತ್ತಿದ್ದೀರಲ್ಲ."

" ಶೂ೩೩! ಅಲ್ಲರಿ. ಆ ಗುಬ್ಬಿ ಡ್ರಾಅರದಲ್ಲಿ ಸೇರಿದ ಕೂಡಲೆ ಮೇಲಿನ ಟೇಬಲ್ ಕ್ಲಾಥ್‌ನ್ನು ಸರ್ರನೆ ಎಳೆದು ಭರ್ರನೆ ಡ್ರಾಅರನ್ನು ಮುಚ್ಚಬೇಕು. ಇಲ್ಲದೆ, ಹಾಗೇ ಡ್ರಾಅರ ಮುಚ್ಚಲಿಕ್ಕೆ ನಾನು ಓಡಿದರೆ ಗುಬ್ಬಚ್ಚಿಗಳು ಮತ್ತೆ ಹಾರಲಿಕ್ಕಿಲ್ಲವೆ ? ತಿಳಿಯಿತೆ."

ಬಲೆ ಬೀಸುವ ಕ್ರಮ ಅರಿತಿದ್ದಾನೆ ಈಗಿನಿಂದಲೆ ಎಂದು ರಾಜೇರಾಯ ಗೋಣು ಹಾಕಿದ.

" ಮಾಸ್ತರ, ಕಾಗೆ ನೋಡಿರಿ ಹೊಲೆಗಪ್ಪು ಅಂದಗೇಡಿ. ಅಂತೇ ಅವನ್ನು ಎಲ್ಲರೂ ಹೊಡೆದೋಡಿಸುತ್ತಾರಲ್ಲವೆ ? "

" ಇರಬಹುದು. ಆದರೆ ಕಾಗೆಯಿಂದ ಒಂದು ಗುಣ ಕಲಿಯಬೇಕು. ಅದಕ್ಕೆ ಒಂದು ಅಗಳು ಅನ್ನ ಸಿಕ್ಕರೂ ತನ್ನ ಬಳಗವನ್ನೆಲ್ಲ ನೆರೆಸಿ ಹಂಚಿಕೊಂಡು ತಿನ್ನುತ್ತದೆ."

ಅಷ್ಟೊತ್ತಿಗೆ ಶಿಷ್ಯನ ಪ್ರೀತಿಯ ಕುಲಂಗಿ ನಾಯಿ ಒಳಗೆ ಬಂದು ನೆಲವನ್ನೆಲ್ಲ ಮೂಸುತ್ತ ಕೋಣೆ ತುಂಬ ಅಡ್ಡಾಡಿ ತನ್ನೊಡೆಯನ ಕಾಲ ಹೆಬ್ಬೆರಳಿಗೆ ಕಟ್ಟಿದ ದಾರವನ್ನು ಮೂಸುತ್ತ ನಿಂತಿತು.

" ಟೈಗರ್, ಸುಮ್ಮನಿರೊ. ಇದೇನು ಕರೆಯ ಬಂದ ಹಾಗೆ ಬಂದು ಬಿಟ್ಟಿತಲ್ಲ."

" ಅಲ್ಲ, ನಾಯಿಯು ಸ್ವಾಮಿನಿಷ್ಠೆಗೆ ಹೆಸರಾದದ್ದು. ಮತ್ತೆ ನಿಮ್ಮ ಬೇಟೆಯ ಕಾಯಕದಲ್ಲಿ ನೆರವಾಗಲಿಕ್ಕೆ ಬಂದಂತೆ ಕಾಣುತ್ತದೆ."

" ಹೇ ! ಅದು ಹಿಡಿದರೆ ಗುಬ್ಬಿನ್ನ ನುಂಗಿಯೇ ಬಿಡುತ್ತದೆ. ನೋಡಿರಿ. ಬಂತು. ಬಂತು. ಆ ನಿಗ್ರೋ ಕಿಟಕಿ ಸರಳುಗಳ ಈಚೆಗೆ ಇದೆ. ಹಾಂ, ಈಗ ಟೇಬಲ್ ಮೇಲೆ; ಅಯ್ಯೊ ! ಡ್ರಾಅರ್ ಒಳಗೇ ಇಳಿದವಲ್ಲ." ಎಂದು ಧಡಪಡಿಸಿ ಟಣ್ಣನೆ ಟೇಬಲ್ಲಿಗಾಗಿ ಜಿಗಿಯಲು ನಾಯಿಯೂ ನೆಗೆದದ್ದರಿಂದ ರಮಾಕಾಂತನ ಹೊಕತಪ್ಪಿ ಹಸ್ತವು ಡ್ರಾವರಿನ ಒಳಗೆ ಜಿಗಿದು ಆತನ ಮುಂಗೈ ತರಿದು ನೆತ್ತರು ಕಾಣಿಸಿತು. ಮೇಜಿನ ಡ್ರಾಅರದ ಜೂಪಾದ ಏಣು ಬಲವಾಗಿ ತಾಗಿದದ್ದರಿಂದ ಹಸ್ತ ಮತ್ತು ಮುಂಗೈ ಕೆಂಪಾಗಿ ಹೋಗಿದ್ದವು. ಗುಬ್ಬಿಗಳಂತೂ ಹಾರಿಹೋಗಿಬಿಟ್ಟಿದ್ದವು. ನಾಯಿಯೂ ಒದೆತ ತಿಂದು ಹೊರಗೆ ಧಾವಿಸಿತು. ರಾಜೇರಾಯನು ಶಿಷ್ಯೋತ್ತಮನ ಸಾಹಸಾಕ್ರಂದನಕ್ಕೆ ಬೆಚ್ಚಿ ಏನು ಅಪಘಾತ ಸಂಭವಿಸಿತೊ ಎಂದು ಹಾರಿ ಬಂದು ರಮಾಕಾಂತನ ಬಲಗೈಯನ್ನು ಹಿಡಿದುಕೊಂಡು ನೋಡುತ್ತಿರುವಾಗಲೆ ಆತನ ಅಕ್ಕ ವಿಲಾಸಿನಿಯು ಧಾವಿಸುತ್ತಲೆ ಒಳಗೆ ಬಂದಳು.

ಪರಿಸ್ಥಿತಿಯನ್ನು ಹೇಗೆ ಎದುರಿಸಬೇಕು ; ತನ್ನ ತಲೆಯನ್ನು ಹೇಗೆ ಉಳಿಸಿಕೊಳ್ಳಬೇಕು ಎಂದು ರಾಜೇರಾಯನ ತಲೆಯಲ್ಲಿ ವಿಚಾರಚಕ್ರ ಭರದಿಂದ ತಿರುಗಹತ್ತಿತು.

" ಏನಿದು ಮಾಸ್ತರಜಿ. ಏನಾಯಿತು ನಮ್ಮ ಕಾಂತರಾಯರಿಗೆ ? ಟೇಬಲ್ ಅಲ್ಲಿ ಕಿಟಕಿಯ ಬಳಿಯಲ್ಲೇಕೆ ? ಹಾಗೇಕೆ ಅರಚಿಕೊಂಡ ನೀವೇನಾದರೂ ದಂಡಿಸಿದಿರೊ ? ಆತನ ಕೈಯನ್ನೇಕೆ ಹಾಗೆ ಹಿಡಿದುಕೊಂಡಿರುವಿರಿ " ಎಂದು ಬಡಪಾಯಿ ರಾಜೇರಾಯನಿಗೆ ಉತ್ತರವೀಯಲು ಆಸ್ಪದ ಕೊಡದೆ ಪ್ರಶ್ನೆಗಳ ಸುರಿಮಳೆ ಸುರಿಸಿದಳು ಆಕೆ.

" ಹಾಂ ! ಸ್ವಲ್ಪ ತಡೆಯಿರಿ ಅಕ್ಕಾಸಾಹೇಬ, ಇವರ ಪುಸ್ತಕ ಡ್ರಾಅರದಲ್ಲಿ ಇದ್ದುವಂತೆ.







ಮೊದಲು ಸ್ವಲ್ಪ ಎಳದಾಡಿ ನೋಡಿದರು. ಬರಲಿಲ್ಲ. ಏನಾಗಿದೆಯೊ, ಡ್ರಾಅರ ಹೊರಬರಲೊಲ್ಲದು, ಸ್ವಲ್ಪ ಬೆಳಕಿಗೆ ನೋಡೋಣವೆಂದರು. ಕಿಡಕಿಯ ಕಡೆಗೆ ಟೇಬಲ್ ಸಾಗಿಸಿದೆವು. ಅಲ್ಲಿಯೂ ಬೇಗ ಹೊರ ಬರದ್ದರಿಂದ ಇವರು ತುಸು ಆವೇಶದಿಂದ ಅದರ ಹಿಡಿಕೆಯನ್ನು ಹಿಡಿದು ಜಗ್ಗಲು ಡ್ರಾಅರು ಸರ್ರನೆ ಹೊರಗೆ ಸರಿದು ಇವರ ಮುಂಗೈಯನ್ನು ತರಿಯಿತು. ಮತ್ತೇನೂ ಆಗಿಲ್ಲ. ತಾವೇಕೆ ಇಷ್ಟು ಗಾಬರಿಯಾಗಿದ್ದೀರಿ. ಮೊದಲೇ ರಾಜಪಿಂಡ ಸ್ವಲ್ಪ ತರಿದದ್ದಕ್ಕೆ ಇಷ್ಟು ಕೆಂಪಗೆ ಕಾಣುತ್ತಿದೆ. ಆಯಡಿನ್ ಸವರಿಬಿಟ್ಟರೆ ಎಲ್ಲ ಸರಿಹೋಗುತ್ತದೆ'' ಎಂದು ತನ್ನ ಸಮಯ ಸೂಚಕತೆಗೆ ತನ್ನ ಬೆನ್ನನ್ನು ತಾನೇ ಚಪ್ಪರಿಸಿಕೊಂಡ.

ರಮಾಕಾಂತನ ಮುಖದ ಮೇಲೆಯೂ ಸಂತಾಪದ ಛಾಯೆಯುಳಿದು ಮುಗುಳ್ನಗೆ ಮೂಡಿತು.

"ನೋಡಿರಿ ಅಕ್ಕಾಸಾಹೇಬ! ಕೈಯೆಲ್ಲ ಹೇಗೆ ಕೆಂಪಾಗಿ ಬಿಟ್ಟಿದೆ. ಬರಿ ಅಯಡಿನ್ ಸವರಿದರಾಯಿತಂತೆ. ಈಗಿಂದೀಗ ದವಾಖಾನೆಗೆ ಹೋಗಿ ಡ್ರೆಸ್ಸಿಂಗ ಆಗಬೇಕು ಇದಕ್ಕಲ್ಲವೆ?" ಶಿಷ್ಯನ ಉಪಾಯನೆನೆದು ತಾನು ಗೆದ್ದೆನೆಂದುಕೊಂಡ. ರಮಾಕಾಂತ ಒಮ್ಮೆ ದವಾಖಾನೆಗೆ ಹೋಗಿ ಬಂದರೆ ಮುಂದೆ ಮೂರು ದಿನ ಆತನ ಓದಿಗೆ ಬಿಡುವು. ಸಲ ಇಷ್ಟಕ್ಕೆ ಮೂರುನ ಓದಿಗೆ ಚಕ್ರ ಬಂದಿರೂ ಮರುದಿನ ರವಿವಾರ ಮಾತ್ರ ರಜೆ ಖಂಡಿತ ಎಂಬದು ಸ್ಪಷ್ಟವಾಯಿತು.

"ಮೇಜಿನ ಮೇಲೆಲ್ಲ ಚೂಡಾ. ಇಂದು ಬರೀ ಇದೇ ಗೊಂದಲ ಆದಂತೆ ಕಾಣುತ್ತದೆ. ಯಾರಲ್ಲಿ? ಮೊದಲು ಹೋಗಿ ಡ್ರಾಯವ್ಹರನಿಗೆ ಕಾರು ತೆಗೆಯಲು ಹೇಳಿಬಂದು ಈ ಟೇಬಲ್ ಸ್ವಚ್ಛ ಮಾಡು'' ಎಂದು ವಿಲಾಸಿನಿ ಟೇಬಲ್‌ನ್ನು ನೋಡುತ್ತಲೇ ಅಜ್ಞೆ ಇತ್ತಳು.

ಇಷ್ಟೆಲ್ಲ ಗದ್ದಲ ಕೇಳಿ ರಮಾಕಾಂತನ ಸೇವಕ ಮಲ್ಲ ಕೈಯಲ್ಲಿಯ ಕೊರಿಚುಟ್ಟವನ್ನು ಎಲ್ಲಿಯೊ ಎಸೆದುಬಂದಿದ್ದ. ಒಡೆಯರಲ್ಲಿ ಕೆಲಸದ ಸರತಿಯಿದ್ದಾಗ ಕೆಲಸದ ಮೇಲಿರುವ ತನಕ ಮಲ್ಲ ಚುಟ್ಟವನ್ನು ಸೇದುತ್ತಿದ್ದಿಲ್ಲವಾದರೂ ರಮಾಕಾಂತನ ಹತ್ತರ ಕೆಲಸದ ಪಾಳಿ ಬಂದಾಗ ಆತನ ಕಣ್ಣು ತಪ್ಪಿಸಿ ಸೇದುತ್ತಿದ್ದ. ಒಡತಿಯ ಅಜ್ಞೆ ಆದೊಡನೆ ಆತ ಡ್ರಾಯವ್ಹರನಿಗೆ ಹೇಳಿಕಳಿಸಲು ಓಡಿಹೋಗಿ ಮರು ನಿಮಿಷದಲ್ಲಿ ಹಿಂತಿರುಗಿ ಬಂದು ಟೇಬಲ್ಲಿನ ಸ್ವಚ್ಛತೆಯನ್ನು ನೋಡಿಕೊಳ್ಳಲು ಮುಂದಾದ.

ರಮಾಕಾಂತನು ಬಟ್ಟೆಹಾಕಿಕೊಳ್ಳಲು ಹೋಗಿಬಿಟ್ಟಿದ್ದ. ವಿಲಾಸಿನಿಯೂ ಕೋಣೆಯ ಬಾಗಿಲ ಬಳಿಯಲ್ಲಿ ನಿಂತಿದ್ದ. ತನ್ನ ದಾಸಿ ಮಲ್ಲಿಯೊಡನೆ ಏಕಾಂತಕ್ಕೆ ತೊಡಗಿದಳು. ರಾಜೇರಾಯನಿಗೂ ಹೊರಟು ಹೋಗಬೇಕೆಂದರೆ ಬಾಗಿಲು ಕಟ್ಟಾಗಿತ್ತು. ವಿಲಾಸಿನಿಯು ಮಲ್ಲಿಯ ಕಿವಿಯಲ್ಲಿ ಏನನ್ನೋ ಹೇಳುತ್ತಿದ್ದಳು.

ಮಲ್ಲನು ಟೇಬಲ್‌ದ ಹತ್ತರ ಬಂದಾಗ ರಾಜೇರಾಯನು ಆತನಿಗೆ ಮೌನದಿಂದ ಕೆಲಸ ಮುಗಿಸಿಕೊಂಡು ಹೋಗಲು ಮೂಗಿನ ಮೇಲೆ ಬೆರಳಿಟ್ಟು ಸೂಚಿಸಿ ಕಣ್ಸನ್ನೆ ಮಾಡಿದ. ಮಲ್ಲನೂ ಇಂಗಿತಜ್ಞನಂತೆ ಗೋಣು ಹಾಕಿ ತನ್ನ ಕೆಲಸ ಮುಗಿಸಿ ಟೇಬಲ್ಲನ್ನು ಪುನಃ ಅದರ ಸ್ಥಾನದಲ್ಲಿ ಎಳೆದು ನಿಲ್ಲಿಸಿ, "ನಾನಿನ್ನು ಹೋಗಬಹುದೆ ಅಕ್ಕಾಸಾಹೇಬ'' ಎಂದು ಕೇಳಿಕೊಂಡ. ಕೋಣೆಯಿಂದ ಸರಿಯಾಗಿ ಜಾರಿಯೆಬಿಟ್ಟ.

ರಾಜೇರಾಯನೂ ಇದೇ ಸುಸಂಧಿಯೆಂದು ಮುಂದಾದಾಗ ವಿಲಾಸಿನಿಯು "ಮಾಸ್ತರಜಿ ಇನ್ನೂ ಐದು ಹೊಡೆದಿಲ್ಲ, ಯಾಕೆ, ಅವಸರವಿದೆಯೇನು? ಕುಳಿತುಕೊಳ್ಳಿರಿ'' ಎಂದು ಹೇಳಿದಳು.

ಶನಿವಾರ ಘಾತವಾರ. ಇದು ಎರಡನೆ ವಿಪತ್ತೇನೊ ಎಂದುಕೊಂಡ ರಾಜೇರಾಯ. ವಿಲಾಸಿನಿಯು ಆತನ ಕೈಯಲ್ಲಿಯೇ ಕಲಿತು ಮ್ಯಾಟ್ರಿಕ್ ಪಾಸಾಗಿ ಈ ವರ್ಷ ಕಾಲೇಜಕಟ್ಟೆಯನ್ನು ಹತ್ತಿದ್ದಳು; ಪ್ರಥಮಾರ್ಧವನ್ನು ಮುಗಿಸಿಕೊಂಡು ದೀಪಾವಳಿಯ ರಜೆಗಾಗಿ ಮೊನ್ನೆಯೆ ಹಿಂತಿರುಗಿದ್ದಳು. ಓದಿನಲ್ಲಿ ತಮ್ಮನಿಗಿದ್ದ ಅನಾಸಕ್ತಿ ಇವಳಿಗಿರಲಿಲ್ಲ. ಅದರಲ್ಲಿಯೂ ಇವಳದೊಂದು ಪರಿ.ಸಾಹಿತ್ಯದಲ್ಲಿ ಕಂಡು ಬರುತ್ತಿದ್ದ ಅಭಿರುಚಿ ಗಣಿತ ವಿಜ್ಞಾನಗಳಲ್ಲಿರಲಿಲ್ಲ ಈಕೆಗೆ.

'ಏನು, ಮತ್ತೆ ಕಾಲೇಜ ಸುದ್ದಿ? ಅಲ್ಲಿಯ ಹವೆಯಂತೂ ಒಗ್ಗಿದಂತಿದೆ. ಅಭ್ಯಾಸ ಹೇಗೆ ಏನು? ಹೊಸ ವಾತಾವರಣ ಅನುಕೂಲವಾಗಿದೆಯೆ?"

"ಉತ್ತಮ, ಏಕದಂ ಉತ್ತಮ. ಹಾಸ್ಟೆಲಿನಲ್ಲಿ ಸ್ವತಂತ್ರ ಜೀವನದ ರುಚಿ ಬೇರೆ. ಇಲ್ಲಿಯ ಈ ಜೇಲಖಾನೆಗಿಂತ ಅಲ್ಲಿ ಎಷ್ಟೊಂದು ವಾಸಿ. ಗೆಳತಿಯರ ಒಡನಾಟದಲ್ಲಿ ಈ ಟರ್ಮು ಕಳೆದದ್ದು ತಿಳಿಯಲಿಲ್ಲ. ಇನ್ನೂ ಮೊನ್ನೆ ಅಲ್ಲಿ ಹೋದಂತಿದೆ. ಅಷ್ಟರಲ್ಲಿಯೆ ಈ ರಜೆ ಬಂದು ಬಿಟ್ಟಿತು.''

"ಅಂತೂ ಕಾಲೇಜ ರುಚಿ ಹತ್ತಿತೆನ್ನಿರಿ. ಇದರಲ್ಲಿಯೆ ಪಾಠ ಪ್ರವಚನ ನೆನಪೂ ಸ್ವಲ್ಪ ಇಟ್ಟುಕೊಂಡಿರಬೇಕು. ಇಲ್ಲದಿದ್ದರೆ ಗೆಳತಿಯರ ಅಪಹಾಸ್ಯಕ್ಕೆ ಗುರಿಯಾಗಬೇಕಾದೀತು. ನಮ್ಮನ್ನು ಅಷ್ಟು ಅಲ್ಲಿ ಉದ್ಧಾರಮಾಡಬೇಡಿರಿ ಮತ್ತೆ''

"ಹೂಂ, ಹಾದು, ಮಾತಿನಲ್ಲಿ ನಿಮ್ಮನ್ನು ಈಗ ನಿಲ್ಲಿಸಿಕೊಂಡಿದ್ದರ ಕೆಲಸವೇ ಉಳಿದು ಹೋಯಿತು. ಮಲ್ಲಿ, ಇನ್ನೂ ಬರಲಿಲ್ಲ.''

ಅಭ್ಯಾಸದ ಮಾತು ಬಂದ ಕೂಡಲೆ ವಿಲಾಸಿನಿಯು ವಿಷಯಾಂತರ ಮಾಡಿದ್ದುದು ರಾಜೇರಾಯನಿಗೆ ತಟ್ಟನೆ ಹೊಳೆಯಿತು. ಆಗಲಿ ಅದರಿಂದ ತನಗಾಗಬಹುದಾದ ಹಾನಿಯಾವರೂ ಏನು? ಈಗಂತೂ ತನಗೆ ಈಕೆಯಿಂದ ಉಪದ್ರವವಿಲ್ಲ. ಲೋಕಾಭಿರಾಮವಾಗಿ ನಾಲ್ಕು ಮಾತು

"ಶೃಂಗಾರಶತಕ"ವನ್ನು ತನಗೆ ಕಲಿಸಿಕೊಡಬೇಕೆಂದು ವಿಲಾಸಿನಿ ರಾಜೇರಾಯಮಾಸ್ತರರನ್ನು ಕೇಳಿಕೊಂಡಳು.

ಗಳನ್ನು ರಜೆ ಕಾಲದಲ್ಲಿ ಬಂದಾಗ ಅದಿ ಸಂತೋಷದಲ್ಲಿಟ್ಟರೆ ತನ್ನ ಕರ್ತವ್ಯ ತೀರಿತು ಎಂದು ಭಾವಿಸಿದ.

" ಈಗ ಬಂದಾಳು ಮಲ್ಲಿ. ಅಂಥದೇನು ಕೆಲಸವಿತ್ತು ನನ್ನ ಕಡೆಗೆ? ಆಕೆಯೆ ಬರಬೇಕೆ '' ಎಂದು ಕೇಳಿದ.

" ಅಂದರೆ ಹೇಗೆ. ನಮ್ಮ ಸಂಸ್ಕೃತ ಪಠ್ಯಪುಸ್ತಕದಲ್ಲಿಯ ಒಂದು ಶ್ಲೋಕದ ಅರ್ಥ ಬೇಕಾಗಿತ್ತು. ಪುಸ್ತಕ ತರಲಿಕ್ಕೆ ಕಳಿಸಿದರೆ ಅತ್ತ ಕಡೆಗೇ ಹೋಗಿಬಿಟ್ಟಳಲ್ಲ. ಅಂದ ಹಾಗೆ, ಮಧು ತಿಷ್ಠತಿ ವಾಚಿಯೋಷಿತಾಂ। ಹೃದಿ ಹಾಲಾಹಲಮೇವ ಕೇವಲಮ್ ॥ ಎಂದು ಹೇಳಿದ ಕವಿ ಸ್ತ್ರೀ ಜಾತಿಗೆ ಅನ್ಯಾಯ ಮಾಡಿಲ್ಲವೆ? ''

" ಭರ್ತೃಹರಿಯ ನೀತಿಶತಕವಲ್ಲವೆ ನಿಮಗೆ ಪಠ್ಯಪುಸ್ತಕವಾಗಿರುವದು. ಅದರಲ್ಲಿ ಈ ಶ್ಲೋಕ ಎಲ್ಲಿದೆ?"

" ಅದರಲ್ಲಿಲ್ಲ ಬಿಡಿರಿ. ನನ್ನ ಮಾತು ನಿಜ ಹೌದಲ್ಲೊ. ಒಪ್ಪಿಕೊಳ್ಳಿರಿ.''

" ಅದರ ಅರ್ಥವೇ ಬೇರೆ ಇದೆ. ಇಡೀ ಶ್ಲೋಕದ ಅರ್ಥವನ್ನು ಒಟ್ಟಾರೆ ಗಮನಿಸಿದಾಗ ಅದರ ಸೊಬಗು ವ್ಯಕ್ತವಾಗುತ್ತದೆ. ಶೃಂಗಾರ ಶತಕದಲ್ಲಿಯ ಈ ಶ್ಲೋಕ ನಿಮ್ಮ ಪಠ್ಯಪುಸ್ತಕದಲ್ಲಿ ಹೇಗೆ ಬಂದಿತು? ''

" ನಾನು ಆತನ ಶತಕತ್ರಯಿಯನ್ನೇ ಕೊಂಡಿದ್ದೇನೆ. ಕಾಲೇಜಿನಲ್ಲಿ ಹೇಗಾದರೂ ನೀತಿಶತಕ ಆಗುತ್ತದೆ. ಈ ರಜೆಯಲ್ಲಿ ನಿಮ್ಮೊಂದಿಗೆ ಶೃಂಗಾರ ಶತಕ ಹೇಳಿಸಿಕೊಳ್ಳಬೇಕೆಂದಿದ್ದೇನೆ. ವೈರಾಗ್ಯ ಶತಕವಂತೂ ಈಗ ಬೇಕಿಲ್ಲ. ಮುಂದೆ ನೋಡೋಣವಂತೆ.''

ಶಿಷ್ಯೆಯು ಗುರುವಿಗೆ ಈ ರೀತಿ ತನಗೆ ಶೃಂಗಾರ ಶತಕವನ್ನು ಬೋಧಿಸಬೇಕು ಎಂದು ಕೇಳಿಕೊಳ್ಳುವ ಧಾರ್ಷ್ಟ್ಯವನ್ನು ತೋರಿಸುವದು ಕೆಲವರಿಗೆ ವಿಚಿತ್ರವೆನಿಸಿದರೂ ರಾಜೇರಾಯನಿಗಂತೂ ವಿಚಿತ್ರವೆನಿಸಲಿಲ್ಲ. ಶಿಷ್ಯನು ಕಲಿತಷ್ಟನ್ನೇ ಗುರು ಕಲಿಸಬೇಕು; ಅದು ಕೂಡ ಶಿಷ್ಯನ ಚಿತ್ತಲಹರಿಯಂತೆ ಎಂಬ ವಾತಾವರಣವಿರುವಲ್ಲಿ ಯಾವ ಗುರುವು ತನ್ನ ಪಾಂಡಿತ್ಯ ಪ್ರದರ್ಶನಕ್ಕಿಳಿದು ದೊರೆವ ನಾಲ್ಕು ತುತ್ತು ಅನ್ನಕ್ಕೆ ಎರವಾದಾನು. ಕತ್ತೆಗಿಂತಲೂ ಅಧಿಕವಾಗಿ ತಾಳ್ಮೆ ಇದ್ದವನೇ ಅಂಥಲ್ಲಿ ತಾಳಬಲ್ಲ. ಬಾಳಬಲ್ಲ. ಈ ಮಾತಿನ ಸತ್ಯಾಂಶವು ರಾಜೇರಾಯನಿಗೆ ತನ್ನ ಈ ಎರಡು ವರ್ಷಗಳ ನೌಕರಿಯಲ್ಲಿ ಮನದಟ್ಟಾಗಿತ್ತು. ಬಂದೊದಗುವ ಒಂದೊಂದು ವಿಪತ್ತನ್ನು ಉಪಾಯಾಂತರದಿಂದ ಎದುರಿಸಿ ಪಾರಾಗುತ್ತ ಬಂದಿದ್ದ. ಆದರೆ ಇಂದಿನ ಈ ವಿಪತ್ತು ಮಾತ್ರ ಆತನನ್ನು ಧರ್ಮಸಂಕಟಕ್ಕೊಡ್ಡಿತು.

" ನೀತಿಶತಕವನ್ನೇ ಅಭ್ಯಸಿಸಿದರೆ ಪರೀಕ್ಷೆಗಾದರೂ ಅನುಕೂಲವಾದೀತು. ನೀವು ಸಟೀಕ ನೀತಿಶತಕ ಕೊಳ್ಳದೆ ಶತಕತ್ರಯಿಯನ್ನು ಕೊಂಡದ್ದೇಕೆ?''

" ನಾನು ಕೇಳಿದ ಮಾತಿಗಂತೂ ಉತ್ತರ ಬರಲಿಲ್ಲ. ನಾಳಿನಿಂದಲೇ ಪಾಠ ಪ್ರಾರಂಭಿಸೋಣ?"

" ನಿಮ್ಮ ಮಾತು ನಡೆಸಿಕೊಡಲು ನನಗೆ ಸಾಧ್ಯವಿಲ್ಲ. ಬೇಕಾದರೆ ನೀತಿಶತಕವನ್ನು ಹೇಳಲು ನಾನು ಸಿದ್ಧ.'' ಎಂದು ಏನೋ ಒಂದು ಬಾಣ ಬಿಟ್ಟು ನೋಡಿದ.

" ಅದಕ್ಕಾಗಿ ಕೈತುಂಬ ಸಂಬಳ ತಿನ್ನುವ ಪ್ರೊಫೆಸರರಿದ್ದಾರೆ ಮಾಸ್ತರಜಿ. ನಾಳಿನಿಂದ ರಮಾಕಾಂತನ ಪಾಠ ಮುಗಿದನಂತರ ದಿನಾಲು ಒಂದು ಅರ್ಧಘಂಟೆಯಾದರೂ ನನಗಾಗಿ ನೀವು ಪಾಠ ಹೇಳಬೇಕು. ವಿದ್ಯೆ ಕೇಳುವವರಿಗೆ ಕೊಡುವದಿಲ್ಲವೆ. ನೀವೇ ಹೇಳಿಲ್ಲವೆ ಹೇಳಿದಷ್ಟು ವಿದ್ಯೆ ಹೆಚ್ಚುತ್ತದೆಂದು.''

" ಹಾಗಾದರೆ ನನ್ನದೊಂದು ಸೂಚನೆ. ನಿಮ್ಮ ಪಾಠವನ್ನು ನಾನು ಹೇಳುವದಿಲ್ಲ. ನಮ್ಮ ವಾಸಂತಿಯನ್ನು ಕಳಿಸುತ್ತೇನೆ. ಆಕೆ ಹೇಳಿಕೊಡುತ್ತಾಳೆ.

" ಅಂದರೆ ನಿಮ್ಮ ಮನೆಯವರೆ? ಅವರಿಗೇನು ಸಂಸ್ಕೃತ ಬರುತ್ತದೆಯೆ? ಅದೇನೂ ಆಗದು. ಏಕೆ ನೀವೇ ಹೇಳಿದರೆ ಚನ್ನಾಗಿರುತ್ತದೆ.''

ಸತ್ವಪರೀಕ್ಷೆ ಇನ್ನೂ ಮುಗಿಯಲಿಲ್ಲವೆಂದೆಂದುಕೊಂಡ ರಾಜೇರಾಯ.

" ಆಕೆಯೂ ಸಂಸ್ಕೃತ ಸಾಹಿತ್ಯ ಶಿರೋಮಣಿ ಪರೀಕ್ಷೆ ಪಾಸಾಗಿದ್ದಾಳೆ. ನಿಮಗಿಂತ ಹಿರಿಯಳೂ ಹೌದು. ನನ್ನ ಈ ಸೂಚನೆಯನ್ನು ನೀವು ಒಪ್ಪಿಕೊಳ್ಳಬೇಕು.'' ಎಂದು ಸೂಚಿಸಿದ.

" ನೋಡೋಣವಂತೆ! ನೀವಂತೂ ಒಪ್ಪಿಕೊಳ್ಳುವದಿಲ್ಲ. ನಾವೇ ಕಿರಿಯರು ಸೋಲಬೇಕಲ್ಲ'' ಎಂದು ವಿಲಾಸಿನಿ ಬಾಯಿಂದ ಹೇಳಿದರೂ ಆಕೆಯ ಮುಖದ ಮೇಲೆ ಆ ಭಾವನೆ ಮೂಡಿರಲಿಲ್ಲ. ವಿಚಾರಮಗ್ನಳಾದವಳಂತೆ ನಿಂತಿದ್ದಳು.

'' ಒಳ್ಳೇದು, ನಾನಿನ್ನು ಬರುತ್ತೇನೆ ಹಾಗಾದರೆ'' ಎಂದವನೇ ರಾಜೇರಾಯ ಅಲ್ಲಿಂದ ಕಾಲು ಕಿತ್ತಿದ.

* * *

" ಮಾಸ್ತರಸಾಹೇಬ, ಮಾಸ್ತರಸಾಹೇಬ '' ಎಂದು ಮಲ್ಲ ರಾಜೇರಾಯರ ಮನೆಯ ಬಾಗಿಲನ್ನು ಬಡೆಯಹತ್ತಿದ.

ಬೆಳಗಾಗುವದರೊಳಗೆ ಮತ್ತೇಕೆ ಬಂದನೀತ ಎಂದೆನುತ್ತ ವಾಸಂತಿ ಬಂದು ಬಾಗಿಲು ತೆರೆದಳು.

'' ಗಡಾನ ಬರಾಕ ಹೇಳ್ಯಾರ್ರಿ ಧಣೇರು ಏನೋ ತುರತ ದಗದ ಐತ್ಯಂತರಿ'' ಎಂದು ಮಲ್ಲ ತೇಕುತ್ತಲೇ ಹೇಳಿದ.

" ತೆಪ್ಪಾತರಿ, ನಿಮ್ಮನ್ನಲ್ಲರೀ ಅವ್ರಾವ್ರ. ಮಾಸ್ತರಸಾಹೇಬರ್ನ ಜಲದ ಕರದಾರು. ಹ್ಯಾಂಗ ಇದ್ದ್ಹಂಗ ಹೊರಟಬರಬೇಕಂತ್ರಿ ''

" ಸ್ನಾನಕ್ಕಿಳದಾರ. ಹಂಗೇ ಬರಬೇಕೆಂದರ ಇಳೀ ಒದ್ದೀಲೆ ಬರಬೇಕಂತೇನೂ? ಯಾಕ ಇಂದ ಪೂಜೆ ಆಚಾರಿ ಬಂದಿಲ್ಲೇನು? ''

" ಯವ್ವಾ ಕಲಿತವರ ಜೋಡಿ ಮಾತಾಡೂದ ಕಠಿಣ ಐತಿ ನೋಡಿರಿ. ಪೂಜಿಗಲ್ಲರಿ; ಮತ್ತೇನೋ ದೊಡ್ಡ ದಗದ ಐತಂತ್ರಿ. ನನಗೇನು ತಿಳೀಬೇಕು, ಅದೆಲ್ಲ ಮಂಕ ಮುಂಡೇದ್ದಕ್ಕ. ಕರಕೊಂಡು ಬಾ ಅಂದರು ಧಣೇರು. ಹೊಂಟ ಬಂದ ಬಿಟ್ಟೆ.''

"ಹಂಗರ ನಿಮ್ಮ ಮಾಸ್ತರ ಪೂಜೆ ಆಗತೇದಲು ಇಂದು ಅಲ್ಲೆ. ಅದರೂ ಆದೀತು ಬಿಡು. ಅಮರ ಕಲೀಲಿಕ್ಕೆ ಅಂತ ಹೋಗಿ ಗುಬ್ಬಿ ಬೇಟಿ ಆಡಿದರ ಪೂಜೆ ಆಗದ ಬಿಟ್ಟೇತ. ನಾ ಹೇಳತನ ಇದ್ದೆ ಇವರಿಗೆ. ಬಹಳ ಜ್ವಾಕಿ ಬೆಂಕಿ ಸಂಗತಿ ಅಂತ.',

"ಗುಬ್ಬಿ ಹಿಡಿದ ಬಿಟ್ವಾರ ಬಿಡರಿ ಮಾಸ್ತರು. ಗುಬ್ಬಿಯಂದರೆ, ಬಂಗಾರಗಿಣಿ ಅನ್ನಿರಿ. ಇನ್ನ ಬಿಡು ಹಂಗ ಏನು ಕಾಣಸೂದಿಲ್ಲರಿ. ಆದರ ಮಾಸ್ತರ ಸಾಹೇಬರೂ ಬಲಿಬಿರಿಕಿ. ಅದನ್ನ ನಿಮಗ ಆಟಕ್ಕ ಕೊಡಬೇಕು ಅಂತ ಹಂಚಿಕೆ ಹಾಕ್ಯಾರ."

"ಏನೊ ತಲಿಹರಟಿ ಮಲ್ಲಾ! ಯಾರು ಕರದಾರ ಏನು ಅಂಬೂದನ್ನ ಹೇಳೂದು ಬಿಟ್ಟು ಪಂಟು ಬಡೀತ ನಿಂತೀಯಲ್ಲ." ಎಂದು ರಾಜೇರಾಯ ಶರ್ಟು ಹಾಕಿಕೊಳ್ಳುತ್ತ ಹೊರಗೆ ಪಡಸಾಲೆಗೆ ಬಂದ.

"ನಿಮ್ಮ ನಿಮ್ಮ ದಗದ ಮಾತು ನಮಗ ಹ್ಯಾಂಗ ಗೊತ್ತಾಕ್ಕ್ಯಾವರಿ. ಅದ್ಯಾಕೊ ಸದ್ದ ಹೊರಟ ಬರಬೇಕಂತರಿ."

"ಬಂಗಾರ ಗುಬ್ಬಿ ಕರಿಸಿದ್ದೀತು. ಹೋಗಿ ಬರ್ರಿ ಅದರ ಹುಷಾರಾಗಿರ್ರಿ." ಎಂದು ವಾಸಂತಿ ನಗುತ್ತ ನುಡಿದಳು.

"ಅಲ್ಲರಿ, ಧಣೇರ ದಿವಾಣಖಾನ್ಯಾಗ ಕುಂತಾರ; ಫರ್ಮಾನ ಹೊಂಡಸ್ಯಾರ ಕರಕೊಂಡು ಬಾಅಂತ."

"ಆಗಬೇಕು. ಹೋಗಲಿಕ್ಕೆ ಅನಕಾಬೇಕಲ್ಲ. ಮತ್ತೇನಾತೊ? ದವಾಖಾನೆಯಿಂದ ಬಂದನಂತರ ನಮ್ಮ ರಮಾಕಾಂತರಾಯರ ಅನಾಂತರ?"

"ಬಲು ಖುಷ್ಯಾಗ ಇದ್ದರು ಬಿಡ್ರಿ. ನೀವು ಅವರ್ನ ಪಾರು ಮಾಡಿದಿರಂತ. ಆದರ ಅಕ್ಕಾ-ಸಾಹೇಬರ ಮಾತ್ರ ಸುಂದ ಬಡದ್ಹಂಗ ಇದ್ದರಿ."

"ಮುಂಜಾನೆ ಹಕೀಕತ ಏನು?"

"ಇಬ್ಬರದೂ ಚಹಾ ಮುಗಿದಿತ್ತರಿ. ಸ್ನಾನಕ್ಕೆ ಹೊರಟ ನಿಂತಿದ್ದರು. ಅಷ್ಟರಾಗ ಧಣೇರು ನನ್ನ ನಿಮ್ಮ ಮನಿಗೆ ಓಡಿಸಿದರಿ."

"ನಡೆ ಹಾಗಾದರ ಅಲ್ಲಿಗೆ ಹೋಗಿಯೆ ಸೋಕ್ಷ ನೋಕ್ಷ ಆಗಬೇಕು ಅಂದ್ಹಾಂಗಾತು" ಎಂದು ಮಲ್ಲನೊಡನೆ ಹೊರಟ.

* * *

ವಾಡೇದ ಮೇಲುಪ್ಪರಿಗೆಯ ಕಟಾಂಜನದಲ್ಲಿ ನಿಂತಿದ್ದ ದೊರೆಗಳಿಗೆ ನೆಲಮುಟ್ಟಿ ನಮಸ್ಕಾರ ಮಾಡಿಯೆ ರಾಜೇರಾಯ ವಾಡೆಯನ್ನು ಪ್ರವೇಶಿಸಬೇಕಾಯಿತು. ದೊರೆಗಳು ಎಲ್ಲಿ ಕಣ್ಣಿಗೆ ಬಿದ್ದರೂ ಅಲ್ಲಿಯೆ ನೆಲಮುಟ್ಟಿ ನಮಸ್ಕರಿಸಬೇಕಾದ ಪದ್ಧತಿ ರೂಢಿಯಲ್ಲಿತ್ತು. ಅನ್ನದಾತನಿಗೆ ತಲೆಬಾಗುವದು ಸ್ವಾಭಾವಿಕವಾದುದಾದರೂ ಅದನ್ನೇ ಕಡ್ಡಾಯದ ನಿಯಮವನ್ನಾಗಿಸಿದ್ದರಿಂದ ಇವರ ಕಾರು ಕಂಡೊಡನೆ ಸಂದಿ ಬಿದ್ದುಹೋಗುವ ಜನವೂ ಇತ್ತು. ಒಬ್ಬ ವ್ಯಕ್ತಿಯ ಬಗ್ಗೆ ಗೌರವಾದರಗಳು ಹೃದಯದಿಂದ ವ್ಯಕ್ತವಾಗಬೇಕಲ್ಲದೆ ಕಾಯದೆಕಾನೂನುಗಳಿಂದಲ್ಲ. ಈ ಮಾತಿನ ಅನುಭವವು ದೊರೆಗಳಿಗೆ ಇತ್ತೀಚೆಗೆ ಹೆಚ್ಚೆಚ್ಚಾಗಿ ಬರಹತ್ತಿತ್ತು.

ರಾಜೇರಾಯನು ದಿವಾಣಖಾನೆಯಲ್ಲಿ ಬಂದು ಮತ್ತೊಮ್ಮೆ ದೊರೆಗಳಿಗೆ ನಮಸ್ಕರಿಸಿ ನಿಂತುಕೊಂಡ. ಆ ಸುಂದರವಾಗಿ ಅಲಂಕೃತ ದಿವಾಣಖಾನೆಯಲ್ಲಿ ಇವರಿಬ್ಬರೆ ಎರಡು ಗೊಂಬೆಗಳಂತೆ ಕಾಣುತ್ತಿದ್ದರು.

"ಕುಳಿತುಕೊಳ್ಳಿರಿ" ಎಂದು ದೊರೆಗಳು ಅಲ್ಲಿ ಇದ್ದ ಕುರ್ಚಿಯೊಂದನ್ನು ತೋರಿಸಿ ರಾಜೇರಾಯನಿಗೆ ಹೇಳಿದರು.

"ಹಂ! ಏನು ಕೇಳಬೇಕೆಂದಿದ್ದೆ. ಸರಿ, ನೆನಪಾಯಿತು. ಊರ ಮಧ್ಯದಲ್ಲಿರುವ ಬಸ್ ಸ್ಟ್ಯಾಂಡನ್ನು ಊರ ಹೊರಗೆ ಮಾರುತಿ ದೇವಾಲಯದ ಹತ್ತರದ ಬಯಲಿಗೆ ಸ್ಥಳಾಂತರಿಸಿದರೆ ಅನುಕೂಲವಿರುವದಿಲ್ಲವೆ? ಊರಲ್ಲಿ ಗದ್ದಲವೂ ಕಡಿಮೆಯಾಗುತ್ತದೆ. ಬೀದಿಗಳಲ್ಲಿ ಓಡಾಡುವ ಚಿಕ್ಕಮಕ್ಕಳಿಗೂ ಸುರಕ್ಷಿತ. ನಿನ್ನೆಯೆ ಒಂದು ಆ್ಯಕ್ಸಿಡೆಂಟ ಆಯಿತಂತೆ ಕೇಳಿದ್ದೀರಲ್ಲ."

"ಹೌದು ದೊರೆಗಳೆ, ಆದರೆ ಅಪಘಾತದಲ್ಲಿ ಪ್ರಾಣಹಾನಿ ಏನೂ ಆಗಿಲ್ಲ. ನಿಂತಿದ್ದ ಖಾಲಿ ಚಕ್ಕಡಿಯೊಂದರ ಗಾಲಿ ಮುರಿದಿದೆ; ಬಸ್ಸಿನ ಮಡ್‌ಗಾರ್ಡ ಮಣಿದಿದೆ ಅಷ್ಟೆ. ಗಾಡಿಗಳನ್ನು ಬೀದಿಗಳಲ್ಲಿ ನಿಲ್ಲಿಸುವದು ತಪ್ಪು."

"ಬಸ್ಸಿನವರದು ತಪ್ಪಲ್ಲವೆ? ಅಪಘಾತ ಆಗುತ್ತಲೇ ಇರಲಿ ಎನ್ನುತ್ತೀರಾ? ಪಾಪ, ಬಡ ರೈತರಿಗೆ ಗಾಡಿಗಳನ್ನಿಡಲು ಗ್ಯಾರೇಜಗಳೆಲ್ಲಿಂದ ಬರಬೇಕು."

"ಹಾಗಲ್ಲ ದೊರೆಗಳೆ ನಾನು ಹೇಳಿದ್ದು.. ಬಸ್ಸಿನವರು ಊರಲ್ಲಿಯೂ ಬಹಳ ವೇಗದಿಂದ ಹೋಗುತ್ತಾರೆ. ಬಸ್ ಸ್ಟ್ಯಾಂಡನ್ನು ಸ್ಥಳಾಂತರಿಸಿದರೆ ಅನುಕೂಲವೆ ನಿಜ. ಈ ಬಯಲು ತೆರವು ಬೀಳುವದಲ್ಲ?" ಎಂದು ರಾಜೇರಾಯ ಸಮಯೋಚಿತವಾಗಿ ನುಡಿದ. ಪೋಲೀಸ ಅಧಿಕಾರಿಗಳಿಗಾಗಲಿ ಸ್ವತಃ ದಿವಾಣರನ್ನಾಗಲಿ ವಿಚಾರಿಸಿ ಇತ್ಯರ್ಥ ಮಾಡಬೇಕಾಗಿದ್ದ ವಿಷಯವನ್ನು ತನ್ನೊಂದಿಗೆ ಎತ್ತಿದ್ದೇಕೆ ಎಂದು ಇವನಿಗೆ ದಿಗಿಲು.

"ನಿಮಗೂ ಬಸ್ ಸ್ಟ್ಯಾಂಡಿನ ಸ್ಥಳಾಂತರ ಬೇಕಾಗಿಲ್ಲವೆನ್ನಿ. ಹಾಗಾದರೆ, ಏನೋ ಊರ ನಾಲ್ಕು ಜನರ ಮಾತು ನಿಮ್ಮ ಕಿವಿಯ ಮೇಲೆ ಬಿದ್ದಿರುತ್ತವೆಂದು ಕೇಳಿದೆ. ನಿಮ್ಮ ಹೇಳಿಕೆಯೆ ಊರವರ ಹೇಳಿಕೆಯೆ?"

"ಅಲ್ಲಲ್ಲ, ಅನ್ನದಾತಾ. ನನ್ನ ಮಟ್ಟಿಗೆ ನಾನು ಹೇಳಿದೆ." ಅಂಜುತ್ತ ನುಡಿದ.

"ಬಯಲು ಹಾಗೇ ತೆರವು ಬೀಳುವದೆಂದು ಚಿಂತೆಯೆ. ಅಲ್ಲೊಂದು ಸೊಗಸಾದ ಉದ್ಯಾನ ಮಾಡಿಸಿದರಾಯಿತು. ನಗರಕ್ಕೂ ಶೋಭೆ ಬರುತ್ತದೆ. ಮತ್ತೆ ಮಕ್ಕಳ ಆಟಕ್ಕೂ ಅನುಕೂಲವಾಗುತ್ತದೆ. ಹೇಗಿದೆ ವಿಚಾರ."

"ನಾನೂ ಇದೇ ಮಾತನ್ನೇ ಹೇಳಬೇಕೆಂದೇ ಪ್ರಾರಂಭಿಸಿದ್ದೆ. ಆದರೆ ಸಣ್ಣ ಬಾಯಲ್ಲಿ ದೊಡ ತುತ್ತು ಏಕೆ ಎಂದು ಹೆದರಿದೆ."

"ಹೆದರಬೇಡರಿ, ಮಾಸ್ತರ. ನೀವೂ ಒಮ್ಮೊಮ್ಮೆ ನಿಷ್ಠುರವಾಗಿ ನಿಷ್ಪಕ್ಷಪಾತತನದಿಂದ ಅಭಿಪ್ರಾಯಗಳನ್ನು ತಿಳಿಸುತ್ತೀರಿ. ಅದು ನಮಗೆ ತುಂಬ ಮೆಚ್ಚಿಗೆ. ಆದರೆ ನನ್ನೆದುರು ಮಾತ್ರ ನೀವು ಹುದುಗಿಕೊಳ್ಳುತ್ತೀರಿ. ಇದು ಶುದ್ಧ ತಪ್ಪು. ದಾರಿ ಸರಿಯಾಗಿದ್ದಾಗ ಎಲ್ಲಿ ಹೋದರೂ ನಿರ್ಭೀತಿಯಿಂದ ವರ್ತಿಸಲು ಕಲಿಯಿರಿ. ಪುಕ್ಕರಿಗೆ ಇಂದು ಉಳಿಗಾಲವಿಲ್ಲ."

ರಾಜೇರಾಯ ಸುಮ್ಮನೆ ಗೋಣುಹಾಕಿದ. ಇದೇನೊ ಹೊಸನಿಟ್ಟಿನಲ್ಲಿ ಗಾಡಿ ಹೊರಟಿದೆಂದು ಅನಿಸಿತು ಅವನಿಗೆ. ಈಗ ಮೌನವೇ ತಾರಕ ಮಂತ್ರವೆಂದು ಅದನ್ನೇ ಅವಲಂಬಿಸಿದ.

"ನಮ್ಮ ಅಕ್ಕಾಸಾಹೇಬ ನಿಮ್ಮ ವಿಷಯ ತಿಳಿಸಿದರು. ನಿಮ್ಮ ಸ್ಪಷ್ಟವಾದಿತ್ವವನ್ನು ಮೆಚ್ಚಿದ್ದೇವೆ."

"ನಾನು ತುಂಬ ಕೃತಜ್ಞ. ಅವರ ಬೇಡಿಕೆ ನನಗೇಕೊ ಸಮಂಜಸವೆನಿಸಲಿಲ್ಲ. ಅಥವಾ ಹೆದರಿದೆ ಅಂತೂ ಇಟ್ಟುಕೊಳ್ಳಿರಿ. ಆದರೆ ಅವರ ಹಟವನ್ನು ಪೂರೈಸದೆ ಇರುವಂತೆಯೂ ಇಲ್ಲ. ಹೀಗಾಗಿ ಮಧ್ಯ ಮಾರ್ಗವನ್ನು ಕಂಡುಹಿಡಿಯಬೇಕಾಯಿತು."

"ನಿಮ್ಮ ವಾಸಂತಿಬಾಯಿ ಇಷ್ಟು ಕಲಿತದ್ದನ್ನು ನೀವು ನಮಗೆ ಈ ನಡುವೆ ಎಲ್ಲಿಯೂ ತಿಳಿಸಿದ ನೆನಪಿಲ್ಲ. ಯೋಗ್ಯತಾ ಇದ್ದರೆ ಮುಚ್ಚಿಡಬಾರದು. ಹಾಗೆ ಮಾಡಿದರೆ ಆ ವ್ಯಕ್ತಿಯ ಘಾತಮಾಡಿದಂತೆ."



" ಏನೋ ಆಕೆಯ ತವರುಮನೆಯವರು ದಶ ಗ್ರಂಥಿಗಳು. ಹುಡಿಗೆಯ ಬುದ್ಧಿಯೂ ಚುರುಕು ಎಂದು ಅಲ್ಪಸ್ವಲ್ಪ ಕಲಿಸಿದ್ದಾರೆ. ತಮ್ಮಲ್ಲಿ ಈ ಮಾತನ್ನು ನಿವೇದಿಸಿಕೊಳ್ಳಬೇಕಾದ ಪ್ರಸಂಗ ಇದು ವರೆಗೆ ಬಂದಿರಲಿಲ್ಲ. ಕ್ಷಮಿಸಬೇಕು."

" ಅವರು ನಿಮ್ಮ ಮನೆ ತುಂಬಿ ಎರಡು ವರ್ಷ ಗಳಾಗಿ, ಅಷ್ಟೂ ಕಾಲ ಇಲ್ಲಿಯೆ ಇದ್ದರೂ ಅಂಥ ಪ್ರಸಂಗವೇ ಬಂದಿಲ್ಲವೆನ್ನುತ್ತೀರಿ, ವಿಚಿತ್ರ. ಈಗ ಲಾದರೂ ನಮ್ಮ ಅಕ್ಕಾಸಾಹೇಬರೇ ಅವರನ್ನು ಬೆಳಕಿಗೆ ತಂದರೆನ್ನಬೇಕು. ರಮಾಕಾಂತರಾಯರು ಏನನ್ನುತ್ತಾರೆ. ಅವರನ್ನಾದರೂ ದಡಕಾಣಿಸು ವಿರೋ? ಇಲ್ಲವೆ ನಡುನೀರಲ್ಲಿ ಕೈಬಿಟ್ಟುಬಿಡು ವಿರೊ? ಅಲ್ಲಿ ಏನೂ ಮೈಯುಳಿಸಿಕೊಳ್ಳಲು ನೆವ ಸಿಕ್ಕುವದಿಲ್ಲವಷ್ಟೆ ?"

" ನನಗೆ ಒಪ್ಪಿಸಿದಂತಾಗಿದೆಯಲ್ಲ. ಸರ್ವಶ್ರೀ ಪ್ರಯತ್ನ ಮಾಡುವೆ."

" ಏಕೆ, ಅಭ್ಯಾಸದ ಕಡೆಗೆ ಅವರ ಲಕ್ಷ್ಯವಿಲ್ಲ ವೆಂದು ತಿಳಿಸಲು ಹೆದರಬೇಡಿ. ನನಗೆ ಗೊತ್ತು ಆತನ ಸ್ವಭಾವ. ಈ ಜಹಾಗೀರಿನ ಆಡಳಿತ ತೂಗಿಸಿಕೊಂಡು ಹೋಗುವಷ್ಟು ಆತನಿಗೆ ಸರ ಸ್ವತಿ ಒಲಿದರೆ ಸಾಕು."

" ನಮ್ಮ ಬಾಯಿ ಕಟ್ಟಿಬಿಡುತ್ತೀರಿ ದೊರೆಗಳೆ. ಉಪ್ಪುಂಡ ಮನೆಯ ಉಪಕಾರ ಇಷ್ಟೂ ತೀರಿಸ ಬೇಡವೆ?"

" ಬಂದ ಎರಡೇ ವರ್ಷಗಳಲ್ಲಿ ನೀವು ನಮ್ಮಲ್ಲಿ ಇಷ್ಟೊಂದು ನಿಷ್ಠೆ ವಹಿಸಿಕೊಂಡು ಬಂದಿದ್ದು ಸಂತೋಷದ ಮಾತು. ಹಾಗಾದರೆ ಒಪ್ಪಿದಂತಾಯಿ ತಲ್ಲ. ವಾಸಂತಿಬಾಯಿ ನಮ್ಮ ಅಕ್ಕಾಸಾಹೇಬ ರಿಗೆ ಈ ಕಡೆಯಲ್ಲಿ ಸಂಸ್ಕೃತ ಹೇಳಿಕೊಡಬೇಕು. ನಿಮಗೂ ನಿಮ್ಮ ಶಿಷ್ಯನಿಗೂ ಗರಜು ಇದ್ದೇ ಇದೆ. ನೀವು ದಂಪತಿ ನಮಗೆ ಇಂದು ಸಂತೋಷ ವನ್ನುಂಟುಮಾಡಿದ್ದಕ್ಕಾಗಿ ನಾವು ಸುಪ್ರೀತರಾಗಿ ದ್ದೇವೆ. ನಾಳಿನಿಂದ ನೀವಿಬ್ಬರೂ ವಾಡೆಯಲ್ಲಿಯೆ ಬಂದಿರಬೇಕು. ಅಂದರೆ ನಿಮಗೂ ಶಿಷ್ಯನ ಮೇಲೆ ಪೂರ್ಣ ಲಕ್ಷವನ್ನಿಡಲಿಕ್ಕಾಗುತ್ತದೆ. ನಮ್ಮ ಅಕ್ಕಾ ಸಾಹೇಬರಿಗೂ ಓರ್ವ ಸಂಪನ್ನ ಗೆಳತಿ ಲಭಿಸಿ ದಂತಾಗುತ್ತದೆ. ನಾಳೆ ಬೆಳಿಗ್ಗೆ ಕಾರು ಕಳಿಸಿ ಕೊಡುತ್ತೇನೆ."

" ಎಲ್ಲಿದ್ದರೂ ನಿಮ್ಮ ಉಪ್ಪು ಉಂಡೇ ಅಲ್ಲವೆ ಬಾಳುವದು. ಈ ಬಗ್ಗೆ ವಿಚಾರ ಮಾಡಲು ಎರಡು ದಿನಗಳ ಅವಧಿ ಕೇಳಿದರೆ ತಾವು ಸಿಟ್ಟಿ ಗೇಳಲಿಕ್ಕಿಲ್ಲವೆಂದು ನಂಬಿದ್ದೇನೆ."

" ಅಂಥದೇನು ವಿಚಾರ ಮಾಡೂದು. ವಾಡೆ ಅಂದರೇನು ಜೇಲಲ್ಲ. ಅನುಗ್ರಹ ಆದೀತೋ ಇಲ್ಲವೊ ಎಂದು ಬಾಯಿತೆರೆದು ಕುಳಿತು ಕೊಂಡಿರುವವರೂ ಇರುವಾಗ, ನೀವಿನ್ನೇನು ವಿಚಾರ ಮಾಡಬೇಕಾದ್ದು.

" ತಪ್ಪು ತಿಳಿದುಕೊಳ್ಳಬೇಡಿರಿ ದೊರೆಗಳೆ. ಮನೆಗೆ ಹೋಗಿ ಒಂದು ಮಾತು ಮನೆಯಾಕೆ ಯನ್ನೂ ವಿಚಾರಿಸಬೇಕಾಗುತ್ತದೆ. ಈಗ ನನಗೆ ಹೋಗಿಬರಲು ಅಪ್ಪಣೆಯೆ ?"

" ಆಗಲಿ. ನಾಳೆ ಬೆಳಿಗ್ಗೆ ಕಾರು ಕಳಿಸುತ್ತೇನೆ" ಎಂದು ದೊರೆಗಳು ಪಕ್ಕದ ಕೋಣೆಯಲ್ಲಿ ಅದೃಶ್ಯ ರಾದರು.

ರಾಜೇರಾಯನೂ ಹಿಂತಿರುಗಿ ಹೊರಬಿದ್ದ. ಬಾಗಿಲಲ್ಲಿಯೆ ನಿಂತಿದ್ದ ಮಲ್ಲಿ ರಾಜೇರಾಯರನ್ನು ಕಂಡು ಮುಗುಳ್ನಗೆ ಬೀರಿ " ಹೊಸ ಅತಿಥಿಗಳಿಗೆ ಸ್ವಾಗತ " ಎಂದು ಬಿರಬಿರನೆ ಒನಪಿನಿಂದ ಸಾಗಿ ಹೋದಳು. ಅನಾಕ್ಕಾಗಿ ಆಕೆಯನ್ನು ನಿರೀಕ್ಷಿಸಿದ ರಾಜೇರಾಯನಿಗೆ ರಮಾಕಾಂತನ ರೂಪದ ಹೋಲಿಕೆ ವಿಶೇಷವಾಗಿ ಕಂಡುಬಂದಿತು. ಧಡ ಧಡನೆ ಪಾವಟಗೆಗಳನ್ನು ಇಳಿದು ರಾಜೇರಾಯ ತೆರಳಿದ.

* * *

ಮರುದಿನ ದೊರೆಗಳ ಕಾರು ಹತ್ತು ಗಂಟೆಯ ಸುಮಾರಕ್ಕೆ ರಾಜೇರಾಯನ ಮನೆಯ ಎದುರಿಗೆ ಬಂದುನಿಂತಾಗ ಮಲ್ಲನ ಕಣ್ಣಿಗೆ ಬಿದ್ದದ್ದು ಶೂನ್ಯ ಗೃಹ. ಹಕ್ಕಿಗಳು ಹಾರಿಹೋಗಿದ್ದವು. ನೆರೆಮನೆ ಯವರಿಗೂ ಇವರ ಯಾವ ವಿಚಾರ ತಿಳಿದಿರಲಿಲ್ಲ. ಮಲ್ಲನು ತನ್ನ ಧಣಿಗಳಿಗೆ ಈ ಸುದ್ದಿ ಮುಟ್ಟಿಸಿದ ಕೂಡಲೆ ಅವರೂ ನಿಟ್ಟುಸುರ್ಗರೆದರು.

# ಅದೇ ಚಿರಂತನಶಕ್ತಿ !



" ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಣ್ಹಾತಿ ನರೋಪರಾಣಿ
ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ
ಸಂಯಾತಿ ನವಾನಿ ದೇಹೀ ||

ಕೇಳದೋ ಸೊಲ್ಲು—
ಪೌಂಡ್ರ ದೇವದತ್ತಗಳ ಮೊಳಗು,
ಜಯಜಯದ ಘಂಟಾಘೋಷ!

ಒಂದೇ, ಎರಡೇ ?....
ಸಾವಿರದ ವಾದ್ಯಸಂದೋಹ !
" ಉತ್ತಿಷ್ಠ, ಉತ್ತಿಷ್ಠ,
ಪರಂತಪ, ಉತ್ತಿಷ್ಠ. "
' ಸಾವ ಕಂಡೆಯೊ ಮುಕ್ತಿ,
ಗೆಲವೊ ಇಳೆಯೊಳ ಕೀರ್ತಿ.
ಈ ವಿಷಾದವು ಸಾಕು, ಸಾಕಿನ್ನು ಏಳು. '
" ಜಾಗ್ರತ ! ಜಾಗ್ರತ ! "
—ಯಾರದೊ ರಕ್ಷಣೆಯ ಉಲಿವು ?
ಮತ್ತೆ ?....ದಿವ್ಯ ಬೆಳಕಿನ ಸೆಲೆಯು !

ಬಂದನೇ ಪರಮಾತ್ಮ, ನೋಡಲಿಯು ಸುತ್ತ ?
ಎದ್ದನಲ ಪಾರ್ಥ, ಹುರಿಗೊಳಿಸಿ ಚಿತ್ತ!
ಅಹಾ ! ಅಬ್ಬರದ ಗಾಂಡೀವದಾಲಾಪ !
ಕಟ್ಟು ಕೌರವನ,
ಕೆಡಹು ದುಃಶಾಸನನ........ !
ಏನು ? ಏನೆಂದೆ ?........
ಬಂಧುವೆಂದೆ?
ಎಲ್ಲಿ ಬಂದಿತೊ ರಣದಿ ಕರುಣೆ–ಬಂಧ
ಇಂಥ ಸಂಬಂಧ !
ತೊರೆ....
ತೊರೆ....
ತೊರೆ ||




ಇನ್ನು ಮೇಲೆಳದೊಲು ತಲೆಯಕೊರೆ !
ಧರ್ಮಕ್ಷೇತ್ರದ ಪೀಠದ ಮೇಲೆ,
ನಡೆಯಲೆ ಬೇಕದು ವಿಕ್ರಮಲೀಲೆ |
ಧ....ರ್ಮ....ಕ್ಷೇ....ತ್ರ....ದ....ಪೀ....ಠ....ದ....ಮೇ....ಲೆ

★ ★

ಮುನಿ ಬಾದರಾಯಣನ ಗೀತಪಾರಾಯಣದ
ತಂದ್ರಿಯಲಿ ನಡೆದಿಹುದು, ಮನವುತೇಲಿ.
ನವಿರ ಸಾಗರದೊಳಗೆ ನೆನಹನರಸುತ ಹೊರಟು
ವಿಗಡಗೊಂಡಿತ್ತೆನ್ನ ಬುದ್ಧಿ ಕೇಳಿ !
ಏನೊ ಯಾವುದೊ ಯುಗದ ಕಥೆಯ ಹಂದರ ಕಣಾ |
ಇಲ್ಲಿ ಮರುಕಳಿಸಿತಲಾ !—ಎನ್ನಲಾರೆ.
ಇದುವು ಧರ್ಮದ ಯುದ್ಧ, ಗೆದ್ದವನೆ ಬದುಕಿದ್ದ.
ಶಕ್ತಿಹೀನನಿಗಲ್ಲ, ಇಂಥ ಹೋರೆ |
ಅಗೋ....
ಅತ್ತ ಎತ್ತಿತು ಪರದೆ, ಕಣ್ಣು ಕೋರೆ
ಏನು ? ಯಾವುದು ಭಂಗಿ ? ಎಂಥ ವೇಷ ?
ನವ್ಯ ವಿನ್ಯಾಸ !
ಅವತಾರವಿಲಾಸ, ಶಾಂತಿಯ ಮಂದಹಾಸ !
ಬುದ್ಧ
ಬುದ್ಧ
ಬುದ್ಧ—
ಅವನೊಬ್ಬ ಸಿದ್ಧ !
ಕೆನೆವಾಲ ಕಡೆದ ನವನೀತದಂತೆ ಇದ್ದ !
' ದಾನಂ ಚ, ಧಮ್ಮಚರಿಯಾ ಚ,
ಞಾತಿಕಾನಂ ಚ ಸಂಗಹೋ,
ಅನವಜ್ಜಾನಿ ಕಮ್ಮಾನಿ,
ಏತಂ ಮಂಗಲಂ ಉತ್ತಮಂ || '
ಬುದ್ಧ........ಬುದ್ಧ........ಬುದ್ಧ........



ಭಗವಾನ ಬುದ್ಧ



ಹಾಂ. ಇಲ್ಲಿ ಕೇಳದಿರೇನು ನಮ್ಮಣ್ಣನೊಬ್ಬ
ಕನ್ನಡದಿ ಕರೆದಿದ್ದ ಕಲ್ಯಾಣ-ಹಬ್ಬ !
“ ದಯವಿಲ್ಲದ ಧರ್ಮವಾವುದಯ್ಯ,
ದಯವಿರಬೇಕು ಸಕಲ ಪ್ರಾಣಿಗಳಲ್ಲಿ.... ”
ಇರಬೇಕು, ಇರಬೇಕು, ಇರಲೆ ಬೇಕು....
ಜಾಳಿಗಳ ಸುರಿಮಳೆಯ ಬಹುಪರಾಕು !

 

ಹಾಂ. ಅಂಜುಗುಳಿ,
ದಿಕ್ಕೆಟ್ಟ ವಾಚಾಳಿ,
ಹಾಡದಿರು ಹೀಗೆ.
ಮನಮುಚ್ಚಿ
ಕಣ್ಮುಚ್ಚಿ
ಮತ್ತೆ ಎಚ್ಚರುದಪ್ಪಿ,
ಹಾಂ. ಅಂಜುಗುಳಿ,
ಹಾಡದಿರು ಹೀಗೆ !
ಬರಿ ಗಳಹುಗಾರ ಈ ಜಗದಿ ದೀನ
ಅವನಿಗಿಲ್ಲವೊ ಎಳ್ಳಕಾಳಷ್ಟು ಮಾನ-
‘ ಇದ್ದರು ಒಂದೆ ಇರದಿದ್ದರು ಒಂದೇ ’
ಅದಕಾಗಿ ಏಳು,
ವೀರನಾಗೆಲೊ ಮೊದಲು ; ಬಳಿಕ ತಿಳಿಹೇಳು.
ಅದೋ ಬಂತು—
ಪರ್ವಕಾಲ.
ಸರ್ವರ ಕಾಲ,
ಸರ್ವರ ಸಮನ್ವಯದ ಕಾಲ
ಅಹಿಂಸೆಯ ಕಾಲ |

ಈ ಅಹಿಂಸೆಯೆ ಇಂದು ವಜ್ರಾಯುಧ.
ಅದನು ಧರಿಸಲು ಬೇಕು ಧರ್ಮಯೋಧ.
ಇದೇ ಮೋಹನದ ತಂತ್ರ
ಮೋಹನನ ಮಂತ್ರ !
ಪಂಚಶೀಲಗಳ ಪಂಚಾಂಗವನು ತಿಳಿದು,
ಸಹಜೀವನದ ಅಷ್ಟಾಂಗವರಿತು,
ನಾಟ್ಯ ನಡೆಸುವುದೆ ಹೊಸ ವಿನೋದ !
ಅದುವೆ ಬಾಳಿಗೆ ತುಷ್ಟಿ, ಇಳೆಗೆ ಆಮೋದ !
ಹೊಸ ರೂಪು,
ಹೊಸ ಬದುಕು,
ಹೊಸ ಬೆಳಕಿನೊಳಗೆ,
ಅದೆ ಚಿರಂತನ ಶಕ್ತಿ ಮಿಂಚಿತೊಳಹೊರಗೆ |

ನಾವು ಉಗ್ಗಡಿಸಿದೆವು ಹರಿಕಾರ ಮೊಳಗೆ—
“ ಕಟ್ಟುವೆವು ನಾವು ಹೊಸ ನಾಡೊಂದನು,
ಜಗದ ಬೀಡೊಂದನು. ”
“ ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಪರಾಣಿ
ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ
ಸಂಯಾತಿ ನವಾನಿ ದೇಹಿ ‖ ”

—ಚಿದಂಬರ ದೀಕ್ಷಿತ

# ಇಂದಿನ ಕಾವ್ಯಮಾರ್ಗ

ಲೇಖಕರು : ಡಾ|| ಡಿ. ಎಸ್. ಕರ್ಕಿ, ಪ್ರಿನ್ಸಿಪಾಲ್, ಕಾಡಸಿದ್ಧೇಶ್ವರ ಕಾಲೇಜ, ಹುಬ್ಬಳ್ಳಿ

ಇಂಗ್ಲೀಷ್ ಭಾವಗೀತಗಳ ಅನುಕರಣದಿಂದ ಪ್ರಾರಂಭವಾದ ಇಂದಿನ ಕಾವ್ಯಮಾರ್ಗದಲ್ಲಿ ಸಹ ವಿಷಯವಿಸ್ತಾರವನ್ನೂ ವೈವಿಧ್ಯವನ್ನೂ ಕಾಣಬಹುದಾಗಿರುವದು. ಅದನ್ನೇ ಲೇಖಕರು ಇಲ್ಲಿ ಸೋದಾಹರಣವಾಗಿ ವಿವೇಚಿಸಿರುವರು.

ಕಳೆದ ಐವತ್ತು ವರುಷಗಳಲ್ಲಿ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಹೊಸ ರೀತಿಯ ಕೃಷಿ ಬಿಟ್ಟೂಬಿಡದೆ ನಡೆದಿದೆ. ಅದರ ಪರಿಣಾಮವಾಗಿ ಬಲ್ಲವರು ನೋಡಿ ನಲಿಯುವಷ್ಟು ಹುಲಸು ಬೆಳೆ ಬಂದಿದೆ ಎನ್ನಬಹುದು. ಇಂದಿನ ಕಾವ್ಯ ಹಿಡಿದ ದಾರಿ ವಿಕಾಸದ ದಾರಿ. ಒಂದು ಬಗೆಯಿಂದ ಹೊಸ ದಾರಿಯೂ ಅಹುದು. ಆ ದಾರಿಯಲ್ಲಿ ನಮ್ಮ ಆಧುನಿಕ ಕಾವ್ಯ ಸುಳಿದುಬಂದ ಬಗೆಯನ್ನು ಸುಳುವುಗಾಣಿಸುವುದೇ ಈ ಬರಹದ ಗುರಿ. ಆ ಆ ಯುಗದ ಪರಿಸರವು ಆ ಆ ಯುಗದಲ್ಲಿ ಸೃಷ್ಟಿಯಾಗುವ ಸಾಹಿತ್ಯದ ಒಲವು-ನಿಲವುಗಳನ್ನು ನಿರ್ಧರಿಸಲು ತಕ್ಕಮಟ್ಟಿಗಾದರೂ ಕಾರಣವಾಗುವುದರಿಂದ ಈ ಯುಗದ ಕಾವ್ಯಮಾರ್ಗವನ್ನು ಸಮೀಕ್ಷಿಸುವ ಮುನ್ನ ಅದರ ಹಿನ್ನೆಲೆಯನ್ನು ಅರಿತುಕೊಳ್ಳುವುದು ಒಳಿತು.

ಇಂದಿನ ಕಾವ್ಯಮಾರ್ಗ ಪ್ರಾರಂಭವಾಗುವಾಗ ನಮ್ಮ ದೇಶದ ಪರಿಸರದಲ್ಲಿ ಎರಡು ಪ್ರಭಾವಗಳು ಪ್ರಾಮುಖ್ಯವಾಗಿ ಪ್ರವಹಿಸುತ್ತಿದ್ದುವು. ಒಂದು ರಾಷ್ಟ್ರೀಯ ಭಾವನೆ ; ಇನ್ನೊಂದು ಆಂಗ್ಲ ಸಾಹಿತ್ಯದ ಪ್ರೇರಣೆ. ಭಾರತೀಯರಲ್ಲಿ ಮೈಗೂಡಿದ ರಾಷ್ಟ್ರೀಯ ಭಾವನೆಗೆ ಕ್ರಿ. ಶ. ೧೯೦೫ರ ಸುಮಾರಿನಲ್ಲಿ ಒಂದು ಮೊನೆಯುಂಟಾಗತೊಡಗಿದ್ದಿತು. ಬಂಗಾಲದ ಜನ ಈ ದಿಶೆಯಲ್ಲಿ ಮೊದಲು ಹೆಜ್ಜೆ ಚೆಲ್ಲಿದರು. ಒಂದು ದಿಕ್ಕಿನಲ್ಲಿ ಮೂಡಿದ ಬೆಳಕು ನಾಲ್ದೆಸೆಗೂ ಹರಡಿತು. ಭಾರತದ ಪ್ರಾಂತಪ್ರಾಂತಗಳಲ್ಲಿ ಆ ಆ ನಾಡು ನುಡಿಗಳ ಅಭಿಮಾನ ಅರಳಿತು. ಎಲ್ಲ ನಾಡಿನವರಂತೆ ಕನ್ನಡಿಗರಲ್ಲಿ ಸ್ವಾಭಿಮಾನ ಸಂಚರಿಸಿತು. ಗತವೈಭವದ ಸ್ಮರಣೆ ಆ ಅಭಿಮಾನಕ್ಕೆ ಹೆಚ್ಚಿನ ಮೆರುಗು ಕೊಟ್ಟಿತು; ತಮ್ಮ ಹಿರಿಯ ಸಂಸ್ಕೃತಿಯನ್ನು ಮರೆತ ಜನ ಹೀಗೆ ಒಮ್ಮೆ ಮರವೆಯಿಂದ ಎಚ್ಚತ್ತಾಗ ಅಲ್ಲಿಯವರೆಗೆ ವಿಸ್ಮೃತಿಯಲ್ಲಿ ಮುಳುಗಿಹೋದ ಘನವಾದ ಸಂಸ್ಕೃತಿಯ ಕುರುಹುಗಳು ಕಣ್ಣಮುಂದೆ ಬಂದು ನಿಂತು ಅವರ ಕೌತುಕವನ್ನು ಕೆರಳಿಸಿದುವು. ಕಳೆದ ವೈಭವವನ್ನು ಚಿತ್ರಕ್ಕೆ ಮರಳಿಸಿದುವು. ಕನ್ನಡ ನಾಡಿನ ಪ್ರಕೃತಿಸೌಂದರ್ಯ, ಶಿಲ್ಪಸಂಪತ್ತು, ವೈಭವಪೂರ್ಣವಾದ ರಾಜ್ಯಚರಿತ್ರೆ, ಸಂಪದ್ಯುಕ್ತವಾದ ಸಾಹಿತ್ಯ ಚರಿತ್ರೆ— ಇವು ಕನ್ನಡಿಗರ ಹೆಮ್ಮೆಗೆ ಗರಿ ಮೂಡಿಸಿದುವು.

ಈ ಭಾವಸಂಚಾರದ ಪರಿಣಾಮವಾಗಿ ಈ ಶತಮಾನದ ಎರಡನೆಯ ದಶಕದಲ್ಲಿ ಕರ್ನಾಟಕ ಸಂಘ ಸಂಸ್ಥೆಗಳು ಉದಯವಾದುವು. ದಕ್ಷಿಣ ಕರ್ನಾಟಕದ ಕನ್ನಡ ಸಾಹಿತ್ಯ ಪರಿಷತ್ತನ್ನೂ ಉತ್ತರ ಕರ್ನಾಟಕದ ವಿದ್ಯಾವರ್ಧಕ ಸಂಘವನ್ನೂ ಈ ಸಂದರ್ಭದಲ್ಲಿ ಹೆಸರಿಸಬಹುದು. ಹಾಗೆಯೇ ಕೆ. ಎಲ್. ಈ. ಸೊಸಾಯಿಟಿಯಂಥ ಶಿಕ್ಷಣ ಸಂಸ್ಥೆಗಳೂ ಮೈದಾಳಿದುವು. ಹೆಚ್ಚು ಕಡಿಮೆ ಅದೇ ಗಡುವಿನಲ್ಲಿ ನವಕರ್ನಾಟಕದ ಆಶೋತ್ತರಗಳನ್ನೂ ಕನ್ನಡ ಸಾಹಿತ್ಯಸಂಸ್ಕೃತಿಗಳ ಸೊಗಸನ್ನೂ ಮನದಿಂದ ಮನಕ್ಕೆ ಮುಟ್ಟಿಸುವ ಕನ್ನಡ ಮಾಸಿಕ, ತ್ರೈಮಾಸಿಕ ಪತ್ರಿಕೆಗಳು ಪ್ರಕಟವಾಗತೊಡಗಿದುವು. ಪ್ರಬುದ್ಧ ಕರ್ನಾಟಕ ಹಾಗು ಜಯಕರ್ನಾಟಕ ಪತ್ರಿಕೆಗಳು ಕನ್ನಡ ನಾಡಿನ ಸಾಹಿತ್ಯ ಸಂಸ್ಕೃತಿಗಳ ಪ್ರಸಾರದ ದಿಶೆಯಲ್ಲಿ ಮಾಡಿದ ಕಾರ್ಯ ಮಹತ್ವದ್ದು. ಅಂತೂ ೧೯೨೦ ರ ಸುಮಾರಿನಲ್ಲಿ ಕನ್ನಡ ನಾಡಿನ ಜನತೆಗೆ ನಾಡುನುಡಿಗಳ ಸಂದೇಶ ಮುಟ್ಟುವಂತೆ ರಂಗ ಸಿದ್ಧತೆಯಾಗಿತ್ತೆನ್ನಬಹುದು. ಜೊತೆಗೆ ಸಾಹಿತ್ಯವನ್ನೂ ಅದರಲ್ಲಿಯೂ ಹೊಸಗನ್ನಡ ಕಾವ್ಯವನ್ನೂ ಪ್ರಕಟಿಸಲು ಹೊರಟ ಗೆಳೆಯರ ಗುಂಪು ಮೊದಲಾದ ಚಿಕ್ಕ ಬಳಗಗಳು ಕಾರ್ಯಪ್ರವೃತ್ತವಾದವು. ನಾಡಿನಲ್ಲಿ ಜೀವನಾಡಿ ನುಡಿಯಿತು. ಹೊಸ ಹುಮ್ಮಸ್ಸು ತೀಡಿಬಂತು, ಹೊಸಹಾಡು ಉಕ್ಕಿ ಬಂತು. ಸರಿಯಾದ ಸಾಧನೆಯೇ ಸಿದ್ಧಿಗೆ ಸಾಧನ. ಕಾವ್ಯಕ್ಷೇತ್ರದಲ್ಲಿ ನಡೆದ ಸಾಧನೆಯ ವಿವರಗಳನ್ನು ಈಗ ವಿವರಿಸಬೇಕು.

## ಭಾವಗೀತದ ಮಾರ್ಗ

ಇಂದಿನ ಕಾವ್ಯಮಾರ್ಗ ಪ್ರಾಮುಖ್ಯವಾಗಿ ಭಾವಗೀತದ ಮಾರ್ಗ. ಇಂಗ್ಲಿಷ್ ಭಾವಗೀತಗಳ ಸಂಪರ್ಕವು ನಮ್ಮ ಪ್ರಾರಂಭದ ಕೃಷಿಗೆ ಪ್ರಧಾನಪ್ರೇರಣೆಯಾಗಿ ಪರಿಣಮಿಸಿತು. ಇಂಗ್ಲಿಷ ಭಾವಗೀತಗಳನ್ನು ಕನ್ನಡದಲ್ಲಿ ಭಾಷಾಂತರಿಸಲು ತೊಡಗಿದವರಲ್ಲಿ ದಿ. ಎಸ್. ಜಿ. ನರಸಿಂಹಾಚಾರ್ಯರು (ಸು. ೧೮೯೪) ಮೊದಲಿಗರೆಂದು ಕಾಣುತ್ತದೆ. ನಡುಗನ್ನಡದ ಕಾಲಕ್ಕೆ ಬಳಕೆಯಲ್ಲಿದ್ದ ಷಟ್ಪದಿ ಚೌಪದಿಗಳನ್ನು ಅವರು ಹೊಸ ಭಾವ ಹೊಸ ಭಾಷೆಗಳಿಗೆ ಹೊಂದಿಸಿಕೊಂಡರು.

ಇಂಗ್ಲೀಷ ಪದ್ಯಗಳ ಪ್ರಾಸವಿನ್ಯಾಸವು ಕನ್ನಡ ಪದ್ಯಗಳಲ್ಲಿ ನೈದೋರತೊಡಗಿತು. ಆಗ ಆದಿಪ್ರಾಸ ಬಳಕೆ ದಪ್ಪದಿದ್ದರೂ ಇಂಗ್ಲಿಷ್ ರೀತಿಯ ಅಂತ್ಯಪ್ರಾಸ ಬಳಕೆಗೊಳ್ಳತೊಡಗಿತು. 'ಆದಿಪ್ರಾಸವನ್ನು ಬೇಕಾದರೆ ಇಟ್ಟು ಬೇಡವಾದರೆ ಬಿಟ್ಟು', ಪದ್ಯವನ್ನು ರಚಿಸುವ ರೀತಿ ಇದರ ಮುಂದಿನ ಹೆಜ್ಜೆ. ಕ್ರಿ. ಶ. ೧೯೦೩ ರಿಂದ ೧೯೧೧ ರ ವರೆಗೆ ಶ್ರೀ ಗೋವಿಂದ ಪೈಗಳು ಈ ದಿಶೆಯಲ್ಲಿ ಪ್ರಯೋಗ ಮಾಡಿದರು. ಈ ಗಡುವಿನಲ್ಲಿ ಅನುವಾದದ ಜೊತೆಗೆ ಸ್ವತಂತ್ರ ರಚನೆ ನಡೆಯಿತು.

ದಿ. ಬಿ. ಎಂ. ಶ್ರೀಕಂಠಯ್ಯನವರು 'ಇಂಗ್ಲಿಷ್ ಗೀತ'ಗಳನ್ನು ಅನುವಾದಿಸಲು ಆರಂಭ ಮಾಡಿದಾಗ ಕನ್ನಡ ಛಂದಸ್ಸು ಈ ರೂಪಕ್ಕೆ ತಿರುಗಿತ್ತು. 'ಇಂಗ್ಲಿಷ್ ಗೀತ'ಗಳ ರಚನೆಯ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಿಲ್ಲವಾದರೂ ಅವುಗಳಲ್ಲಿಯ ಅನೇಕ ಗೀತಗಳು ನಮ್ಮ ಶತಮಾನದ ಎರಡನೆಯ ದಶಕದಲ್ಲಿ ರಚಿತವಾಗಿರಬೇಕೆಂಬುದರಲ್ಲಿ ಸಂದೇಹವಿಲ್ಲ. 'ಇಂಗ್ಲಿಷ್ ಗೀತ'ಗಳು ಒಂದು ಸರಿಯಾದ ಸಂಪುಟದ ರೀತಿಯಲ್ಲಿ ಪ್ರಕಟವಾದುದು ೧೯೨೬ ರಲ್ಲಿ. ಹೊಸ ಛಂದಸ್ಸಿನ ವಿಕಾಸದ ದಾರಿಯಲ್ಲಿ 'ಇಂಗ್ಲಿಷ್ ಗೀತ'ಗಳು ಎರಡನೆಯ ಘಟ್ಟವನ್ನು ಎತ್ತಿ ತೋರುತ್ತವೆ. ಇದು ಮಹತ್ವದ ಘಟ್ಟ. ಕನ್ನಡ ಕಾವ್ಯಮಾರ್ಗದಲ್ಲಿ ಮುಂದೆ ಸಾಗಿದ ಕವಿಗಳಿಗೆ 'ಶ್ರೀ' ಅವರ ಇಂಗ್ಲಿಷ್ ಗೀತಗಳು ದಾರಿದೀಪವಾದುವೆಂಬುದನ್ನು ಇಲ್ಲಿ ನೆನೆಯಬೇಕು. ಕನ್ನಡದ ಮುಖ್ಯ ಲಯಗಳನ್ನೇ 'ಶ್ರೀ' ಅವರು ಅನುಸರಿಸಿದರೂ ಪದ್ಯದ ಚರಣಗಳ ಸಂಖ್ಯೆಯನ್ನು ಹೆಚ್ಚಿಸಿ ಹೊಸ ರೀತಿಯ ಪ್ರಾಸದಿಂದ ಕೂಡಿದ ವಿವಿಧ ಛಂದೋಬಂಧಗಳನ್ನು ಅವರು ಕನ್ನಡಕ್ಕೆ ಒದಗಿಸಿದರು. ಇದು ನಿಜವಾಗಿಯೂ ಕನ್ನಡಕ್ಕೆ ಅವರು ನೀಡಿದ ಒಂದು ಗಣ್ಯ ಕಾಣಿಕೆ. ಆ ಪೂರ್ವದ ಪದ್ಯ ಸಾಮಾನ್ಯವಾಗಿ ನಾಲ್ಕೇ ಚರಣಗಳ ಪದ್ಯರಚನೆಯಾಗಿರುತ್ತಿದ್ದಿತು. ಆದರೆ ಇಂಗ್ಲಿಷ್ ಗೀತಗಳ ಪುಟಗಳನ್ನು ತಿರುವಿಹಾಕಿದರೆ ಅಲ್ಲಿ ಅನೇಕ ಗೀತಗಳು ನಾಲ್ಕಕ್ಕಿಂತ ಹೆಚ್ಚು ಚರಣಗಳ ಪದ್ಯಗಳನ್ನು ಒಳಗೊಂಡುದು ಕಂಡುಬರುತ್ತದೆ. ಐದು ಚರಣಗಳ ಪದ್ಯಗಳು, ಏಳು ಚರಣಗಳ ಪದ್ಯಗಳು, ಒಂಭತ್ತು ಚರಣಗಳ ಪದ್ಯಗಳು ಕೂಡ ಅಲ್ಲಿ ಕಣ್ಣಿಗೆ ಬೀಳುತ್ತವೆ. ಇಂಗ್ಲಿಷ್ ಕವಿತೆಗಳನ್ನು ಕನ್ನಡದಲ್ಲಿ ಅನುವಾದಿಸುವಾಗ ಇದು ಆವಶ್ಯಕವಾಯಿತೆಂದು ಕಾಣುತ್ತದೆ. ಹೀಗಾದುದು ಒಳ್ಳೆಯದೇ ಆಯಿತು. ಕನ್ನಡದ ಮೂಲ ಲಯಗಳಲ್ಲಿ ಹೊಸ ಹೊಸ ಮಟ್ಟುಗಳನ್ನು ರೂಪಿಸಿಕೊಳ್ಳುವುದು ಸಾಧ್ಯವೆಂಬುದು ಇದರಿಂದ ಸಿದ್ಧವಾಯಿತು. ಅಂದಿನ ಉದಯೋನ್ಮುಖ ಕವಿಗಳಿಗೆ ಹೊಸ ದಾರಿ ತೆರೆಯಿತು. ಸರಿ, ಕನ್ನಡ ಛಂದಸ್ಸಿನ ಹಂದರದ ಮೇಲೆ ಅನೇಕ ಸುಂದರ ಛಂದೋಬಂಧಗಳು ಹಬ್ಬಿ ಹರಡುವಂತಾಯಿತು.

## ವಸಂತಸಮಯ

೧೯೨೬ ರಿಂದ ೧೯೪೫ ರ ವರೆಗಿನ ಅವಧಿಯು

ಹೊಸ ಕವಿತಾಕುಸುಮಗಳನ್ನು ಅರಳಿಸಿದ ವಸಂತ ಸಮಯವೆಂದು ಹೇಳಬಹುದು. ೧೯೩೦-೩೪ ರ ನವೋತ್ಸಾಹದ ಸಮಯದಲ್ಲಿ ಅಂಬಿಕಾತನಯ- ದತ್ತರ 'ಗರಿ', ಕುವೆಂಪು ಅವರ 'ಕೊಳಲು' 'ನವಿಲು' ಶಂಕರ ಭಟ್ಟರ 'ನಲ್ಮೆ' ರಾಜರತ್ನಂ ಅವರ 'ರತ್ನನ ಪದಗಳು', ಡಿ. ವ್ಹಿ. ಜಿ. ಅವರ 'ಉಮರನ ಒಸಗೆ' ವಿ. ಸೀ. ಅವರ 'ದೀಪ ಗಳು' .. .. .. .. ಇವೇ ಮೊದಲಾದ ಗಣ್ಯ ಕವನಸಂಗ್ರಹಗಳು ಪ್ರಕಟವಾದುವು. ಕಾವ್ಯಾಭಿರುಚಿಯನ್ನು ಪೋಷಿಸಿದುವು. ನೂತನ ಛಂದೋವಿಲಾಸವನ್ನು ಬೀರಿದುವು. ಮೊದಲು ಅನುಭವಪದಗಳಿಗಾಗಿಯೋ 'ಯಕ್ಷಗಾನ' ಕ್ಕಾಗಿಯೋ ಬಳಕೆಗೊಳ್ಳುತ್ತಿದ್ದ ಕೆಲವೊಂದು ಸೊಗಸಾದ ಮಟ್ಟುಗಳನ್ನೂ ಲಾವಣಿಗೆ ಹವ- ಣಾದ ಕೆಲವೊಂದು ಗತಿಗತ್ತುಗಳನ್ನೂ 'ಅಂಬಿಕಾ ತನಯದತ್ತ' ಹಾಗು 'ಮಧುರಚೆನ್ನ' ಮೊದ ಲಾದ ಕವಿಗಳು ಪುನರುಜ್ಜೀವನಗೊಳಿಸಿದರು.

ಬರಬರುತ್ತ ನಮ್ಮ ಕವಿಗಳು ಇಂಗ್ಲಿಷಿನ ಒಂದೆ- ರಡು ಛಂದೋರೂಪಗಳನ್ನು ಕನ್ನಡಕ್ಕೆ ನೇರ- ವಾಗಿ ಬರಮಾಡಿಕೊಂಡರು . . . . ಅಷ್ಟಷಟ್ಪದಿ ಹಾಗು ಗೀತರೂಪಕಗಳನ್ನು ಈ ಸಂದರ್ಭದಲ್ಲಿ ಹೆಸರಿಸಬಹುದು. ಅಷ್ಟಷಟ್ಪದಿ ಶಿಲ್ಪದಂತೆ ಪ್ರಾಸ ವಿನ್ಯಾಸದಲ್ಲಿ ಕಟ್ಟುವಡೆದ ಹದಿನಾಲ್ಕು ಚರಣಗಳ ಛಂದೋರೂಪ ರಚನೆ. 'ಮಲಾರ', 'ಕೃತ್ತಿಕೆ' ಮೊದಲಾದ ಕೆಲವು ಕವನ ಸಂಗ್ರಹಗಳು ಅಷ್ಟ ಷಟ್ಪದಿಗಾಗಿಯೇ ಮೀಸಲಾದ ಸಂಗ್ರಹಗಳು. ಗೀತರೂಪಕವು ಒಂದು ಹೊಸ ಕಾವ್ಯ ರೂಪ. ಕನ್ನಡದಲ್ಲಿ ಅದಕ್ಕೆ ಮೂಲವಿಲ್ಲದೆ ಇಲ್ಲ. ಯಕ್ಷ ಗಾನದಲ್ಲಿ ಅದರ ತಳಹದಿಯನ್ನು ಕಾಣಬಹುದು. ಆದರೂ ಇಂಗ್ಲಿಷಿನ 'Opera' (ಓಪೇರಾ)ದ ಸಂಪರ್ಕದಿಂದ ಹೊಸಗನ್ನಡದಲ್ಲಿ ಗೀತರೂಪಕಕ್ಕೆ ಒಂದು ಹೆಚ್ಚಿನ ಸ್ವಾರಸ್ಯವುಂಟಾಗಿದೆ. ಪು. ತಿ. ನ. ಅವರ 'ಶಬರಿ', 'ಗೋಕುಲ ನಿರ್ಗಮನ' ಮುಂತಾದುವುಗಳು ಗೀತರೂಪಕದ ಉದಾ ಹರಣೆಗಳು.

ಹರಿಹರ ಕವಿ 'ಬಸವರಾಜದೇವ ರಗಳೆ' ಮೊದಲಾದ 'ರಗಳೆ'ಗಳಿಗಾಗಿ ಲಲಿತ ರಗಳೆ ಯನ್ನು ಬಳಸಿದ್ದಾನಷ್ಟೆ! ಈ ಲಲಿತ ರಗಳೆಯ ಆದಿ ಮತ್ತು ಅಂತ್ಯ ಪ್ರಾಸಗಳನ್ನು ತೊರೆದು ಆಧುನಿಕ ಕವಿಗಳು 'ಸರಳ ರಗಳೆ'ಯನ್ನು ಬಳ ಸಿದ್ದಾರೆ. 'ನಾಗರಿಕ', 'ರಕ್ತಾಕ್ಷಿ' ಮೊದ ಲಾದ ನಾಟಕಗಳಲ್ಲಿ ಸರಳ ರಗಳೆಯ ಸ್ವರೂಪ ವನ್ನು ಕಾಣಬಹುದು. ಈ ಲಲಿತ ಸರಳ ರಗಳೆ ಯಲ್ಲಿಯೇ ಕುವೆಂಪು ಮಹಾಛಂದಸ್ಸನ್ನು ನಿರ್ಮಿಸಿ ಕೊಂಡು 'ರಾಮಾಯಣ ದರ್ಶನಂ' ಎಂಬ ಮಹಾಕೃತಿಗಾಗಿ ಬಳಸಿದ್ದಾರೆ.

## ಮುಕ್ತಛಂದ

ಇಲ್ಲಿಯವರೆಗೆ ಹೊಸ ಕವಿತೆಯ ವಿವಿಧ ಚರಣ ವಿನ್ಯಾಸ, ಪ್ರಾಸವಿಲಾಸಗಳನ್ನು ಕುರಿತು ವಿವೇಚಿಸಿ ಯಾಯಿತು. ಇತ್ತೀಚೆಗೆ ವಿರಳವಾಗಿ ಪ್ರಯೋಗ ವಾಗುತ್ತಿರುವ ಮುಕ್ತಛಂದದ ಬಗೆಗೆ ಈಗ ಎರಡು ಮಾತು ಸಾಕು. ಮುಕ್ತಛಂದವು ಮೊದ ಲನೆಯದಾಗಿ ನಿಯತವಾದ ಲಯವನ್ನು ಮೀರಿದ ಛಂದ. ರಚನೆಯಲ್ಲಿ ಅದು ಗದ್ಯದ ಹತ್ತಿರ ಹತ್ತಿರ ಬರುತ್ತದೆ. ಎರಡನೆಯದಾಗಿ ಪ್ರಾಸ ದಿಂದಲೂ ಮುಕ್ತಛಂದವು ಮುಕ್ತವಾಗಿರುತ್ತದೆ. ಮೂರನೆಯದಾಗಿ ಚರಣಸಂಖ್ಯಾಪರಿಮಿತಿಯೂ ಅದಕ್ಕಿಲ್ಲ. ಆದರೂ ಸಹಜಭಾವ ಪ್ರೇರಿತವಾದ ಮುಕ್ತಛಂದ ಪದ್ಯದಷ್ಟೇ ಸುಂದರವಾಗಿರಬಲ್ಲು ದೆಂಬುದನ್ನು 'ಕರುಳಿನ ವಚನ'ಗಳನ್ನು 'ಸಮುದ್ರ ಗೀತ'ಗಳನ್ನು, ಪೂಜಾಸಂಗ್ರಹದಲ್ಲಿರುವ ವಚನ ಗೀತಗಳನ್ನು ಪರಿಶೀಲಿಸಿ ಅರಿತುಕೊಳ್ಳಬಹುದು.

ಇಂದಿನ ಕಾವ್ಯದ ವಿಷಯಗಳನ್ನು ಕುರಿತು ಆಲೋಚಿಸೋಣ. ಒಂದು ಮಾತಿನಲ್ಲಿ ಹೇಳುವು ದಾದರೆ 'ಮೂಗಿ'ನಿಂದ 'ಮನ್ವಂತರ'ದ ವರೆಗೆ 'ಕ್ಲೋರೋಫಾರ್ಮಿ'ನಿಂದ 'ಶೂನ್ಯ'ದ ವರೆಗೆ ವಿವಿಧ ವಿಷಯಗಳನ್ನು ಆಧುನಿಕ ಕವಿತೆ ಅಪ್ಪಿಕೊಳ್ಳಬಹುದು. ಆದರೂ ಸ್ಥೂಲದೃಷ್ಟಿ ಯಿಂದ ದೇಶಭಕ್ತಿ, ಪ್ರಕೃತಿಪ್ರೇಮ, ದೇವಭಕ್ತಿ, ದಾಂಪತ್ಯ ಜೀವನ, ವಾತ್ಸಲ್ಯ, ಲೋಕಾನುಭವ, ಸಮಾಜನೀತಿ, ವೈಜ್ಞಾನಿಕ ಪ್ರಗತಿ—ಹೀಗೆ ಆಧು ನಿಕ ಕವಿತೆಗಳು ಒಳಗೊಂಡ ವಿಷಯಗಳನ್ನು ವರ್ಗೀಕರಿಸಬಹುದು. ಮೊದಮೊದಲು ನಾಡು, ನುಡಿ, ಸಂಸ್ಕೃತಿ— ಇವು ಕವಿತೆಯ ವಿಷಯ ಗಳಾದುವು. ನಾಡಿನ ಬಗೆಗೆ ಹೊಸ ದೃಷ್ಟಿ ಮೂಡಿದಾಗ ಹೀಗಾಗುವುದು ಸ್ವಾಭಾವಿಕ.

ಕನ್ನಡ ನಾಡಿನಲ್ಲಿ ಪ್ರಕೃತಿಸೌಂದರ್ಯಕ್ಕೆ ಕೊರತೆಯಿಲ್ಲ. ಕನ್ನಡಿಗರು ಪ್ರಕೃತಿಸೌಂದರ್ಯ ಪ್ರೇಮಿಗಳು. ಮೇಲಾಗಿ ಆಂಗ್ಲ ಕವಿಗಳ ಭಾವ ಗೀತಗಳ ಸಂಪರ್ಕವು ಪ್ರಕೃತಿಯ ಬಗೆಗೆ ನಮ್ಮ ಕವಿಗಳ ಅಂತರಂಗವನ್ನು ತರಂಗಗೊಳಿಸಿತು. ಆಧುನಿಕ ಕವಿತೆಗಳಲ್ಲಿ ಪ್ರಕೃತಿ ಪ್ರೇರಿಸಿದ ಕವಿತೆ ಗಳು ಹೆಚ್ಚು. ಪ್ರಕೃತಿಯ ಹಾಸ ವಿಲಾಸ, ಶಾಂತಿ ಕಾಂತಿಗಳು ಮಾನವಜೀವನದಲ್ಲಿ ಅಳವಡ- ಬೇಕೆಂಬ ಹಂಬಲವು ಅನೇಕ ಕವಿತೆಗಳಲ್ಲಿ ಒಡ ಮೂಡಿದೆ. ಶಿಲ್ಪಸೌಂದರ್ಯ, ಆದರಲ್ಲಿಯೂ ವಾಸ್ತುಶಿಲ್ಪಸೌಂದರ್ಯ ನಾಡಿನ ಎಲ್ಲೆಡೆಗಳಲ್ಲಿ

ಕಣ್ಣಿಗೆ ಬೀಳುತ್ತದೆ. ಅದನ್ನು ಕಂಡು 'ಕನ್ನಡದ ಇಂದ್ರಜಾಲಕ್ಕೆ ಕಲ್ಲು ಕರಿಸುರಿತು' ಎಂದೂ 'ಶಿಲೆಯುಲ್ಲವೀ ಗುಡಿಯು ಕಲೆಯು ಬಲೆಯು' ಎಂದೂ ಕವಿಗಳು ಹಾಡಿದ್ದಾರೆ. ಪ್ರಕೃತಿ ಮತ್ತು ಕಲೆ ನಮ್ಮ ಕವಿಗಳ ಕಲ್ಪನೆಯನ್ನು ಹೀಗೆ ಎತ್ತರಕ್ಕೆ ಏರಿಸಿವೆ. ಪ್ರಣಯ ಹಾಗು ದಾಂಪತ್ಯಜೀವನದ ಸ್ವಾರಸ್ಯ ಇಂದಿನ ಕವಿಗಳ ಕವನಗಳಲ್ಲಿ ಅಲ್ಲಲ್ಲಿ ತೆರೆಗೊಂಡಿದೆ. 'ಪ್ರೇಮ ಕಾಶ್ಮೀರ' 'ಮೈಸೂರ ಮಲ್ಲಿಗೆ' 'ಮಧು ಚಂದ್ರ' ಮೊದಲಾದ ಕವನ ಸಂಗ್ರಹಗಳಲ್ಲಿ ದಾಂಪತ್ಯ ಜೀವನದ ಸೊಗಸು ಮಂದಾರವಾಗಿ ಅರಳಿದೆ. ಈ ಯುಗದ ಹಿರಿಯ ಕವಿಗಳು ಅನುಭವವನ್ನೂ ಅನುಭಾವವನ್ನೂ ತಮ್ಮ ಕವಿತೆಗಳಲ್ಲಿ ತೇಲಿಸಿದ್ದಾರೆ. ಲೋಕಾನುಭವದ ಸೌರಭವನ್ನು ಮನದಿಂದ ಮನಕ್ಕೆ ಸೂಸುವ ಇಂದಿನ ಕಾವ್ಯಗಳಲ್ಲಿ ಡಿ.ವ್ಹಿ.ಜಿ. ಅವರ "ಮಂಕುತಿಮ್ಮನ ಕಗ್ಗ" ಮೇಲ್ಮೆಯನ್ನು ಪಡೆದಿದೆ. ಮಗುವಾಗಿ, ಮದುವಣಿಗನಾಗಿ, ತಂದೆಯಾಗಿ, ಕನ್ನಡಿಗನಾಗಿ, ಭಾರತೀಯನಾಗಿ, ತ್ಯಾಗಿಯಾಗಿ, ದಾನಿಯಾಗಿ, ಸಮತಾವಾದಿಯಾಗಿ, ಸನಾತನಿಯಾಗಿ, ವಿನೂತನಿಯಾಗಿ, ವಿಜ್ಞಾನಿಯಾಗಿ, ಕಲೋಪಾಸಕನಾಗಿ ಕವಿ 'ಬಾಳದೇಗುಲ' ದಲ್ಲಿ ತಾನು ಪಡೆದ ಅನುಭವವನ್ನು ಕವಿತಾರೂಪದಲ್ಲಿ ಎಡೆಮಾಡಿಕೊಟ್ಟುದೂ ಉಂಟು.

## ಕಾವ್ಯಕ್ಷೇತ್ರದ ವಿಸ್ತಾರ–ವೈವಿಧ್ಯ

'ಒಲುಮೆ' ಮೊದಲಾದ ಪ್ರಣಯಗೀತ ಸಂಗ್ರಹಗಳು 'ಬಿನ್ನಹ' 'ನಿವೇದನೆ' ಮೊದಲಾದ ಪ್ರಾರ್ಥನಾಗೀತಗಳು, 'ಪಕ್ಷಿಕಾಶಿ' ಮೊದಲಾದ ಪ್ರಕೃತಿಗೀತಸಂಗ್ರಹಗಳು 'ಚಂದಿಮದ್ದಳೆ' ಮೊದಲಾದ ನವ್ಯಕವಿತಾ ಸಂಗ್ರಹಗಳು, 'ತುತ್ತೂರಿ', 'ಬಣ್ಣದ ಚೆಂಡು', 'ಗುಲಾಬಿ ಗೊಂಚಲು' ಮೊದಲಾದ ಶಿಶುಗೀತ ಸಂಗ್ರಹಗಳು 'ಅರಣ್ಯರೋದನ'. 'ಕಾವ್ಯವೇದನೆ' ಮೊದಲಾದ ವಿಡಂಬನ ಕವನಸಂಗ್ರಹಗಳು ಇಂದಿನ ಕಾವ್ಯಕ್ಷೇತ್ರದ ವಿಸ್ತಾರವನ್ನೂ ಕಾವ್ಯಮಾರ್ಗದ ವಿವಿಧತೆಯನ್ನೂ ಸೂಚಿಸುತ್ತವೆ.

ಇನ್ನು ಶೈಲಿಯಲ್ಲಿಯೂ ವಿವಿಧತೆ ಇಲ್ಲದಿಲ್ಲ. ಇಂದಿನ ಕವಿಗಳ ಕಾವ್ಯಶೈಲಿ ವ್ಯಕ್ತಿವ್ಯಕ್ತಿಗೂ ವಿಶಿಷ್ಟವಾಗಿದ್ದರೂ ಒಟ್ಟಿನಲ್ಲಿ ವಿಕಾಸದ ದಾರಿಯಲ್ಲಿ ಸುಳಿದುಬಂದು ಒಂದಾಗಿ ರೂಪುಗೊಂಡಿದೆ. 'ಇಂಗ್ಲಿಷ್ ಗೀತ'ಗಳ ಹಾಗೆ ಅದು ತಿರುಳ-ಗನ್ನಡದ ಸೊಬಗನ್ನು ತಾಳಿರಬಹುದು; 'ಕೊಳಲಿ'ನ ಹಾಗೆ ಸರಳ ಸುಂದರವಾಗಿರಬಹುದು; ಗರಿಯ ದೇಸಿಯ ಚೆಲುವನ್ನು ಮೆರೆ-ದಿರಬಹುದು; 'ನನ್ನ ನಲ್ಲ'ದ ಹಾಗೆ ನುಣ್ಪು-ವೆತ್ತಿರಬಹುದು, ಪಾಂಚಜನ್ಯದ ಹಾಗೆ ಕೆಚ್ಚಿನಿಂದ ಕೂಡಿರಬಹುದು. 'ಮೈಸೂರು ಮಲ್ಲಿಗೆ'ಯ ಹಾಗೆ ನಯವಾಗಿರಬಹುದು; ಭಾವಜೀವಿಯ ಹಾಗೆ ಸಹಜಮನೋಹರವಾಗಿರಬಹುದು; ಆದರೂ ನಮ್ಮ ನಾಡಿನ ನಾಲ್ದೆಸೆಯ ಕವಿಗಳ ಕವನಸರಣಿ ನಡುಗನ್ನಡಕ್ಕೆ ಸಮೀಪವಾದ ಹೊಸಗನ್ನಡದ ಹದವನ್ನು ಪಡೆದಿದೆ. ಈ ಐವತ್ತು ವರುಷಗಳ ಅವಧಿಯಲ್ಲಿ ದಿಕ್ಕು ದಿಕ್ಕಿನ ಕನ್ನಡಿಗರ ಮನವನ್ನು ಮೆಲ್ಲನೆ ಒಂದು ಶ್ರುತಿಗೆ ಮೇಳ-ಗೂಡಿಸುವಲ್ಲಿ ಆಧುನಿಕ ಕಾವ್ಯವು ಸೂಕ್ಷ್ಮವೂ ಪರಿಣಾಮಕಾರಕವೂ ಆದ ಪಾತ್ರವನ್ನು ವಹಿಸಿದೆ ಎಂದು ಹೇಳಲು ಅಭ್ಯಂತರವಿರದು. 'ಸ್ನೇಹಸೌರಭ' 'ಮಧುಚಂದ್ರ' 'ಸಾಮಗಾನ' 'ಮಾಯಾಮಂದಿರ' ಇವೇ ಮೊದಲಾದ ಕವನ ಸಂಗ್ರಹಗಳನ್ನು ಕನ್ನಡಿಗರ ಕೈಗೆ ನೀಡಿದ ತರುಣ ಕವಿಗಳು ಈ ಯುಗದ ಸರಸ ಶೈಲಿಗೆ ತಮ್ಮ ಕಾಣಿಕೆಯನ್ನಿತ್ತು ಮುನ್ನಡಿಯಿಡುತ್ತಿದ್ದಾರೆ.

ಇತ್ತೀಚಿನ ಜೀವನ ಹಿಂದೆಂದೂ ಆಗದಷ್ಟು ಸಂಕೀರ್ಣವಾಗುತ್ತಿದೆ. ಈ ಸಂಕೀರ್ಣತೆ ಸಾಮಾನ್ಯವಾಗಿ ಇಂದಿನ ಸಾಹಿತ್ಯದಲ್ಲಿ, ಪ್ರಾಮುಖ್ಯವಾಗಿ ಇಂದಿನ ನವ್ಯಕವಿತೆಯಲ್ಲಿ ಪಡಿಮೂಡುತ್ತಿದೆ. ಹಿರಿಯ ಕವಿಗಳಿಗಿಂತ ತರುಣ ಕವಿಗಳು ಈ ದಾರಿಯಲ್ಲಿ ಮುಂದಡಿ ಇಟ್ಟಿದ್ದಾರೆ. ವಿಜ್ಞಾನಪ್ರಪಂಚ ನವ್ಯಕಾವ್ಯದಲ್ಲಿ ತನ್ನ ಛಾಯೆಯನ್ನು ಚೆಲ್ಲುತ್ತಿದೆ. ಜೀವನದ ವಿವಿಧ ಅಂಗಗಳಿಗೆ ಸಂಬಂಧಿಸಿದ ಪ್ರತಿಮೆಗಳು ಉಪಮೆಗಳಾಗಿ ರೂಪಕಗಳಾಗಿ ಒಂದೇ ಕವಿತೆಯಲ್ಲಿ ನಿಬಿಡವಾಗಿ ಹೆಣೆದುಕೊಳ್ಳುವ ಪ್ರವೃತ್ತಿ ನವ್ಯಕಾವ್ಯದಲ್ಲಿ ಎದ್ದು ಕಾಣುತ್ತದೆ. ಹೆಣೆದುಕೊಂಡರೆ ಕೊಳ್ಳಲಿ ಆದರೆ ಭಾವಗೀತದ ಭಾವಶ್ರೀಯನ್ನು ಅವು ಮುಸುಕುಗೊಳಿಸಬಾರದು; ಅಷ್ಟೆ. ನವ್ಯಕಾವ್ಯ ಛಂದಸ್ಸು, ಭಾಷೆ, ಪ್ರಾಸ, ಉದ್ಧರಣ— ಇವೆಲ್ಲವುಗಳಲ್ಲಿ ವೈಶಿಷ್ಟ್ಯವನ್ನು ಪ್ರದರ್ಶಿಸುವ ಒಂದು ವಿಶಿಷ್ಟ ತಂತ್ರವನ್ನು ನಿರ್ಮಿಸಿಕೊಳ್ಳುತ್ತಿದೆ. ಆದರ ತಂತ್ರದಲ್ಲಿ ಮಂತ್ರ ಮುಳುಗಿ ಹೋಗದಿದ್ದರೆ ಸಾಕು! ನವ್ಯ ಕವಿತೆಗಳಲ್ಲಿ ಕೆಲವಾದರೂ ಭಾವಗೀತದ ಏಕಸೂತ್ರತೆಯನ್ನು ಉಳಿಸಿಕೊಂಡಿರುವುದು ಸಮಾಧಾನಕರವಾದ ಸಂಗತಿ. ನವ್ಯಕಾವ್ಯದಲ್ಲಿ ಧ್ವನಿ ಮತ್ತೆ ತುಂಬುತ್ತಿದೆ. ಇಲ್ಲಿದೆ ಇಂದಿನ ಕಾವ್ಯದ ಆಶಾಕಿರಣ.

---

"ಇಷ್ಟಾರ್ಥಗಳನ್ನೊಳಗೊಂಡ ಪದಸಮೂಹ ಕಾವ್ಯ" "ದೋಷ ರಹಿತ, ಗುಣಸಹಿತ ಅಲಂಕೃತ ಶಬ್ದಾರ್ಥಗಳು ಕಾವ್ಯ" "ರಸಾತ್ಮಕ ವಾಕ್ಯ ಕಾವ್ಯ" "ಧ್ವನಿಯೆ ಕಾವ್ಯ" "ಸುಂದರಾರ್ಥವೀವ ಶಬ್ದವೆ ಕಾವ್ಯ"

"ಕಾವ್ಯ ಕೀರ್ತಿಗಾಗಿ, ಕಾವ್ಯ ಸಂಪತ್ತಿಗಾಗಿ, ಕಾವ್ಯ ವ್ಯವಹಾರ ಜ್ಞಾನಕ್ಕಾಗಿ, ಕಾವ್ಯ ಅಮಂಗಲ ನಿವಾರಣೆಗಾಗಿ, ಕಾವ್ಯ ಆನಂದಕ್ಕಾಗಿ, ಕಾವ್ಯ ಪ್ರಿಯೋಪದೇಶಕ್ಕಾಗಿ" ಎಂದು ಹಿಂದಿನ ಕಾವ್ಯಮಾರ್ಗದರ್ಶಕರು ಹೇಳಿರುವರು.



# ಕನ್ನಡದಲ್ಲಿ ಕೈಹೊತ್ತಿಗೆಗಳು

ಲೇಖಕರು : ಪ್ರೊ. ಬಾಬು ಬೆಂಡಿಗೇರಿ, ಎಂ. ಎ., ಎಲೆಲ್. ಬಿ., ಹುಬ್ಬಳ್ಳಿ

ಕನ್ನಡ ಸಾಹಿತ್ಯದಲ್ಲಿ ಕೈಹೊತ್ತಿಗೆಗಳ ಪ್ರವೇಶ ಅನೇಕ ರೀತಿಯಲ್ಲಿ ಪರಿಣಾಮ ಮಾಡಿದೆ. ಓದುಗರ ಅಭಿರುಚಿಗೆ ಒಂದು ಮಿತಿಯನ್ನು ಹಾಕಿದ್ದು ಮುಖ್ಯವಾದ ಪರಿಣಾಮ. ಜೊತೆಗೆ ಸಾಹಿತಿ ಪೇಟೆಯ ದೃಷ್ಟಿಯಿಂದ ಪುಸ್ತಕ ಬರೆಯುವಂತೆ ಪ್ರೇರೇಪಿಸಲಾಯಿತು. ಅವು ಜನಪ್ರಿಯವಾಗಿವೆಯೇನೊ ನಿಜ. ಯಾವ ದೃಷ್ಟಿಯಿಂದ? ಅದನ್ನೇ ಇಲ್ಲಿ ಲೇಖಕರು ವಿವರಿಸಿದ್ದಾರೆ.

ಕನ್ನಡ ಸಾಹಿತ್ಯಾಕಾಶದಲ್ಲಿ ೧೯೫೪ನೆಯ ವರ್ಷ, ಅಭೂತಪೂರ್ವವಾದ ಘಟನೆಯೊಂದು ನಡೆಯಿತು. ಬೆಂಗಳೂರಿನ ವಾಹಿನಿ ಪ್ರಕಾಶನ ಸಂಸ್ಥೆಯವರು ಸುಲಭ ಬೆಲೆಯ ಕೈಹೊತ್ತಿಗೆಯೊಂದನ್ನು ಪ್ರಕಟಿಸಿ, ಅನುಕರಣಶೀಲತೆಯಲ್ಲಿ ಎತ್ತಿದ ಕೈಯಾದ ನಮ್ಮ ಪ್ರಕಾಶಕರಿಗೆ ಹೊಸ ಮಾರ್ಗವೊಂದನ್ನು ತೋರಿಸಿಕೊಟ್ಟರು. ಅಂದಿನಿಂದ ಇಂದಿನವರೆಗೆ ಸಾವಿರಾರು ಕೈಹೊತ್ತಿಗೆಗಳು ಬಂದಿವೆ. ಅವುಗಳ ವಿಪುಲತೆಯನ್ನು ನೋಡಿದ ಯಾವ ಕನ್ನಡಿಗ ಅಭಿಮಾನಪಡದೇ ಇರಲಾರ? ಕನ್ನಡ ವಾಚಕ ವೃಂದದ ಅಭಿರುಚಿಯು ಈ ಪ್ರಮಾಣದಲ್ಲಿ ಬೆಳೆದುದಕ್ಕೆ ಯಾರಿಗೆ ಸಂತೋಷವಾಗಲಿಕ್ಕಿಲ್ಲ? ಆದರೆ ಹೂವಿನೊಂದಿಗೆ ದಾರವೂ ಸ್ವರ್ಗಕ್ಕೆ ಎನ್ನುವ ರೀತಿಯಲ್ಲಿ ಈ ಕೈಹೊತ್ತಿಗೆಗಳು, ಒಳ್ಳೆಯದನ್ನು ಸಾಧಿಸಿದುದಕ್ಕಿಂತ ಹೆಚ್ಚಾಗಿ ಅನಿಷ್ಟವಾದುದಕ್ಕೆ ಜನ್ಮ ನೀಡಿವೆ.

ಕೈಹೊತ್ತಿಗೆಗಳು ಬಂದಂದಿನಿಂದ ಅವುಗಳ ಮಾರಾಟವೊಂದೇ ನಮ್ಮ ಕಣ್ಣೆದುರು ಪ್ರತ್ಯಕ್ಷವಾಗಿ ಕಾಣುತ್ತಿದೆ. ಆದರೆ ಅಪ್ರತ್ಯಕ್ಷವಾಗಿ ಅವು ವಾಚಕರ ಮೇಲೆ, ಲೇಖಕರ ಮೇಲೆ ಮಾಡಿದ ಪರಿಣಾಮವು ಮಾತ್ರ ಕಂಡುಬರುತ್ತಿಲ್ಲ.

ಅನೇಕ ಶತಮಾನಗಳಿಂದ ನಾವು 'ಒಳ್ಳೆಯ ಪುಸ್ತಕ', 'ಸಾಹಿತ್ಯ ಲಕ್ಷಣಗಳಿಂದ ಕೂಡಿದ ಪುಸ್ತಕ' ಎಂಬ ಶಬ್ದಗಳನ್ನು ಬಳಸುತ್ತ ಬಂದಿದ್ದೇವೆ. ಆದರೆ 'ಪೇಟೆಯಲ್ಲಿ ಮಾರಾಟವಾಗುತ್ತಿರುವಂಥ ಪುಸ್ತಕ' 'ಸಾಹಿತ್ಯ ಲಕ್ಷಣಗಳಿರದಿದ್ದರೂ ಜನಪ್ರಿಯವಾದಂಥ ಪುಸ್ತಕ' ಮುಂತಾದ ಶಬ್ದಗಳು ಈಗಿನ ಕೈಹೊತ್ತಿಗೆ 'ಯುಗ' ದಿಂದ ಬಳಕೆಗೆ ಬಂದಿವೆ.

ಇಂದು ಒಂದು ಪುಸ್ತಕವು ಅದರಲ್ಲಿ ಯಾವ ಸಾಹಿತ್ಯದ ಅಂಶವು ಇರದಿದ್ದರೂ ಪೇಟೆಯಲ್ಲಿ 'ಮಾರಾಟ' ವನ್ನು ಪಡೆಯಬಹುದು. ಎಲ್ಲ ವಿಮರ್ಶಕರು ಅದನ್ನು ಟೀಕಿಸಿದರೂ ಅದು 'ಜನಪ್ರಿಯ' ಕೃತಿಯಾಗಿ ನಿಲ್ಲಬಹುದು. ಹಿಂದೆ ಒಂದು ಕೃತಿಯನ್ನು ಸಾಹಿತ್ಯದ ಲಕ್ಷಣಗಳಿಂದ ತೂಗುತ್ತಿದ್ದರೆ, ಇಂದು ಜನತೆಯ 'ಬೇಡಿಕೆ' ಯಿಂದ ಅದನ್ನು ತೂಗಬೇಕಾಗಿ ಬಂದಿದೆ. ಹಾಗಾದರೆ 'ಮಾರಾಟ' 'ಜನಪ್ರಿಯತೆ'ಗಳಿಗೂ ಸಾಹಿತ್ಯದ ಕಟ್ಟುನಿಟ್ಟಿನ ಲಕ್ಷಣಗಳಿಗೂ ಹೊಂದಾಣಿಕೆಯಾಗಲು ಸಾಧ್ಯವಿಲ್ಲವೆ?

## ಬೇರೆ ರಂಗಗಳಲ್ಲಿ

'ಪೇಟೆ' ಹಾಗೂ 'ಜನಪ್ರಿಯ' ಎಂಬ ಶಬ್ದಗಳು ಸಾಮಾನ್ಯ ಶಬ್ದಗಳಾದುದರಿಂದ ಅವುಗಳನ್ನು ಬೇರೆ ರಂಗಗಳಲ್ಲಿ ಹೇಗೆ ಬಳಸಲಾಗುತ್ತಿದೆಯೆಂಬುದರಿಂದ ಸಾಹಿತ್ಯರಂಗದಲ್ಲೂ ಅವನ್ನು ಹೇಗೆ ಬಳಸಲು ಸಾಧ್ಯವೆಂಬುದನ್ನು ಕಂಡುಕೊಳ್ಳಬಹುದಾಗಿದೆ. ಮೊದಲು ಚಲಚ್ಚಿತ್ರ ರಂಗವನ್ನೇ ಉದಾಹರಣೆಗೆ ತೆಗೆದುಕೊಳ್ಳಬಹುದು. ಒಂದು ಚಿತ್ರ 'ಪೇಟೆ' ಯಲ್ಲಿ ಯಶಸ್ವಿಯಾಗಿದೆಯೆಂದೂ "ಜನಪ್ರಿಯ" ವಾಗಿದೆಯೆಂದೂ ನಾವು ಹೇಳಿದರೆ ಆ ಚಿತ್ರದಲ್ಲಿ ಒಳ್ಳೆಯ ಗುಣಗಳು ಅತಿ ಕಡಿಮೆಯಾಗಿವೆ ಎಂದು ಹೇಳಿದಂತಾಗುತ್ತದೆ. ಯಾಕೆಂದರೆ ಮನುಷ್ಯನ ಅನಿಷ್ಟ ಭಾವನೆಗಳನ್ನು ಕೆರಳಿಸುವ ಪ್ರಯತ್ನಗಳು ಇಂಥ ಚಿತ್ರಗಳಲ್ಲಿ ನಡೆಯುತ್ತಿವೆಯೆಂಬುದನ್ನು ಎಲ್ಲರೂ ಅನುಭವದಿಂದ ಹೇಳಬಲ್ಲರು. ಹಾಗಾದರೆ ಒಳ್ಳೆಯ ಚಿತ್ರಕ್ಕೆ ಎಂದೂ "ಪೇಟೆ" ದೊರೆಯುವುದಿಲ್ಲವೇ? ಅದು ಎಂದೂ ಜನಪ್ರಿಯವಾಗಲು ಸಾಧ್ಯವಿಲ್ಲವೇ? ಒಳ್ಳೆಯ ಚಿತ್ರಕ್ಕೆ ಪೇಟೆ ದೊರೆಯಬಹುದು. ಜನಪ್ರಿಯತೆಯೂ ದೊರೆಯಬಹುದು. ಆದರೆ ಇದು ನೂರಕ್ಕೆ ಒಂದು ಪ್ರಸಂಗದಲ್ಲಿ ಮಾತ್ರ ಸತ್ಯ.

ಇದೇ ಮಾತನ್ನು ಸಂಗೀತದ ಬಗ್ಗೆಯೂ ಹೇಳಬಹುದಲ್ಲವೆ? ಅತಿ ಜನಪ್ರಿಯವಾದ, 'ಪೇಟೆ' ಯಲ್ಲಿರುವಂಥ ಸಂಗೀತದಲ್ಲಿ ಅದೆಂಥ ಶಾಸ್ತ್ರೀಯತೆ ಇರುತ್ತದೆ? ಚಿತ್ರಕಲೆಯ ನಿದರ್ಶನವನ್ನೂ ತೆಗೆದುಕೊಳ್ಳಬಹುದು. 'ಪೇಟೆ' ಯಲ್ಲಿರುವಂಥ ಜನಪ್ರಿಯವಾದಂಥ ಕಾಮಕಲೆಯ ಚಿತ್ರಗಳು ಮಾರಾಟವಾದಷ್ಟು ಜೆಮಿನಿ ರಾಯ್‌ರ ಚಿತ್ರಗಳು ಮಾರಾಟವಾಗುವವೇ! ಹಾಗಾದರೆ 'ಪೇಟೆ' ಮತ್ತು 'ಜನಪ್ರಿಯತೆ' ಈ ಶಬ್ದಗಳು ಸಾಮಾನ್ಯ ಶಬ್ದಗಳಾದರೂ ವಿಶಿಷ್ಟ ಅರ್ಥವನ್ನು ಪಡೆದಂತಾಗಲಿಲ್ಲವೆ?

ಇಂದು 'ಪೇಟೆ' ಯನ್ನು ಪಡೆವ 'ಜನಪ್ರಿಯತೆ' ಯನ್ನು ಗಳಿಸುವ ಕೈಹೊತ್ತಿಗೆಗಳು ಯಾವ ದೃಷ್ಟಿಯಲ್ಲಿ 'ಪೇಟೆಯಲ್ಲಿರುವಂಥ' 'ಜನಪ್ರಿಯವಾದಂಥ' ಚಲಚ್ಚಿತ್ರಕ್ಕೂ ಸಂಗೀತಕ್ಕೂ ಚಿತ್ರಗಳಿಂದಲೂ ಭಿನ್ನವಾಗಿವೆ. ಏನನ್ನೋ ಮಾಡಿ 'ಪೇಟೆ' ಯನ್ನು ಪಡೆಯಲು ಅಲ್ಲಿ ಪ್ರಯತ್ನಿಸಿದಂತೆ ಇಲ್ಲಿಯೂ ಪ್ರಯತ್ನಿಸಲಾಗಿಲ್ಲವೆಂದು ಯಾರು ಹೇಳಬಲ್ಲರು?

## ಪೇಟೆ ಮತ್ತು ಜನಪ್ರಿಯತೆ

'ಪೇಟೆಯಲ್ಲಿರುವ' ಹಾಗೂ 'ಜನಪ್ರಿಯ' ದಂಥ ಶಬ್ದಗಳು ಸಾಹಿತ್ಯಲೋಕದಲ್ಲಿ ಬರಲೇ ಬಾರದು. ಆದರೆ ಇಂದು ಬಂದಿವೆ. ಹಿಂದೆ ಲೇಖಕನಿಗೆ ಪೇಟೆಯ ಸಂಬಂಧವೇ ಬರುತ್ತಿರಲಿಲ್ಲ. ತನ್ನ ಆತ್ಮತೃಪ್ತಿಗಾಗಿ (ವಾಚಕರ ತೃಪ್ತಿ ಎರಡನೆಯ ಸ್ಥಾನವನ್ನು ಪಡೆಯುತ್ತಿತ್ತು) ಆತನು ಒಂದು ಕೃತಿಯನ್ನು ಬರೆದು ವಾಚಕರ ಮುಂದೆ ಇಡುತ್ತಿದ್ದ. ಅವರಿಗೆ ಅದು ಸ್ವೀಕೃತವಾದರೆ ತಾನು ಧನ್ಯನೆಂದು ಆತನು ಬಗೆಯುತ್ತಿದ್ದ. ಆದರೆ ಈಗ ಲೇಖಕನು ಪೇಟೆಗಾಗಿ ಬರೆಯುತ್ತಿದ್ದಾನೆ. ಆತನು ಬರೆದ ಪುಸ್ತಕ ಪೇಟೆಗೆ ಹೋಗ

ದಿದ್ದರೆ, ಆತನ ಆತನಕ್ಕೇ ಕೊರತೆ ಬರುತ್ತದೆ. ಆದುದರಿಂದ ಆತನು ವಾಚಕರ ತೃಪ್ತಿಗಾಗಿ (ಹಿಂದೆ ತನ್ನ ತೃಪ್ತಿಗಾಗಿ ಬರೆಯುತ್ತಿದ್ದ ಆತನು ಈಗ ತನ್ನ ತೃಪ್ತಿಗೆ ಎರಡನೆಯ ಸ್ಥಾನವನ್ನು ಕೊಡಬೇಕಾಗುತ್ತದೆ ) ಬರೆಯಬೇಕಾಗುತ್ತದೆ. ಹಾಗೆ ಮಾಡುವುದು ತಂತಿಯ ಮೇಲೆ ನಡೆದಂತೆ. ಕೊಂಚ ಜೋಲಿ ಹೋದರೆ ಮುಗಿಯಿತು ಆತನ ಅವಸ್ಥೆ!

ಕೈಹೊತ್ತಿಗೆಗಳು ಸಂತೆಗೆಂದು ಹೊಸೆಯಲ್ಪಟ್ಟ ಕೃತಿಗಳೆಂಬುದಕ್ಕೆ ಕೈಹೊತ್ತಿಗೆಗಳಲ್ಲಿ ಬರಿ ಕಾದಂಬರಿಗಳಿರುವುದೇ ಪ್ರಧಾನ ಸಾಕ್ಷಿಯಾಗಿದೆ. ಕೈಹೊತ್ತಿಗೆಯ ಪ್ರಕಟನಕಾರರಿಗೆ ತಮ್ಮ ಜೇಬನ್ನು ತುಂಬಿಸಿಕೊಳ್ಳಬೇಕೆಂಬ ಒಂದೇ ವಿಚಾರವಿದ್ದಿರದಿದ್ದರೆ, ಅವರು ತಮ್ಮ ಕೈಹೊತ್ತಿಗೆಗಳಲ್ಲಿ ಅತ್ಯುತ್ತಮವಾದ ಬೇರೆ ವಿಷಯದ ಗ್ರಂಥಗಳನ್ನೂ ಪ್ರಕಟಿಸುತ್ತಿದ್ದರು.

ಇಂದು ಕೈಹೊತ್ತಿಗೆಗಳಲ್ಲಿ ದೀಪ ಹಚ್ಚಿ ಹುಡಿಕಿದರೂ ವೈಚಾರಿಕ ಗ್ರಂಥಗಳು ದೊರೆಯುವುದು ಸಾಧ್ಯವಿಲ್ಲ.

ಇಂಗ್ಲಂಡ್, ಅಮೇರಿಕೆಗಳಲ್ಲಿ ಒಂದು ಪುಸ್ತಕ ಅತಿ ಯಶಸ್ವಿಯಾಯಿತೆಂದರೆ ಜನಪ್ರಿಯವಾದ ಕೈಹೊತ್ತಿಗೆಯ ಸ್ವರೂಪದಲ್ಲಿ ಅದು ಸಹಸ್ರಾವಧಿ ಜನರ ಕೈಯನ್ನು ಸೇರುತ್ತದೆ. ನಮ್ಮಲ್ಲಿ ಅಂಥ ಉಪಕ್ರಮವಿನ್ನೂ ಆರಂಭವಾಗಿಲ್ಲ. 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' 'ಮರಳಿ ಮಣ್ಣಿಗೆ' 'ನಟ ಸಾರ್ವಭೌಮ' ಮುಂತಾದ ಬೃಹತ್ ಕಾದಂಬರಿಗಳು ಕೈಹೊತ್ತಿಗೆಗಳಲ್ಲಿ ಏಕೆ ಪುನರ್ಮುದ್ರಣಗೊಳ್ಳಬಾರದು?

### ಎಂಥವನ್ನು ಪ್ರಕಟಿಸಬಹುದು?

ಆರ್ಥಿಕ ಮುಗ್ಗಟ್ಟಿನ ಇಂದಿನ ದಿನಗಳಲ್ಲಿ ಅನೇಕ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳನ್ನು ಕೊಳ್ಳುವುದು ದುಸ್ತರವಾಗುತ್ತದೆ. ಅವುಗಳನ್ನು ಕೈಹೊತ್ತಿಗೆಗಳಲ್ಲಿ ಸುಲಭ ಬೆಲೆಗೆ ಏಕೆ ಪ್ರಕಟಿಸಬಾರದು? ಆದರೆ ವಾಸ್ತವ ಸ್ಥಿತಿಯೆಂದರೆ ನಮ್ಮ ಕರ್ನಾಟಕದಲ್ಲಿ ಒಂದು ಕೈಹೊತ್ತಿಗೆಯು ಅಕಸ್ಮಾತ್ ಪಠ್ಯಪುಸ್ತಕವಾಯಿತೆಂದರೆ ಅದು ತನ್ನ ಬೆಲೆಯನ್ನು ಒಮ್ಮೆಲೇ ಹೆಚ್ಚಿಸಿಕೊಳ್ಳುತ್ತದೆ!

ನಮ್ಮ ಕೈಹೊತ್ತಿಗೆಗಳಲ್ಲಿ ಪ್ರಸಿದ್ಧ ಕಾದಂಬರಿಗಳ ಪುನಃ ಪ್ರಕಾಶನವಾಗುವಂತಿಲ್ಲ; ವೈಚಾರಿಕ ವಿಷಯಗಳು ಪ್ರಕಟವಾಗುವಂತಿಲ್ಲ; ಪಠ್ಯಪುಸ್ತಕಗಳು ಪ್ರಕಟವಾಗುವಂತಿಲ್ಲ. ಹಾಗಾದರೆ ಕೈಹೊತ್ತಿಗೆಗಳಿಂದ ಆಗುತ್ತಿರುವ ಪುರುಷಾರ್ಥವಾದರೂ ಏನು?

ಇಂಗ್ಲಂಡ್, ಅಮೇರಿಕೆ ದೇಶಗಳ ಪೆಂಗ್ವಿನ್, ಪೆಲಿಕನ್, ಪಾಕೆಟ್ ಬುಕ್ ಗ್ರಂಥಮಾಲೆಗಳ ಕೈಹೊತ್ತಿಗೆಗಳನ್ನು ಯಾರೂ ಕಣ್ಣುಮುಚ್ಚಿ ಕೊಳ್ಳಬಹುದಾಗಿದೆ. ಆದರೆ ನಮ್ಮಲ್ಲಿ ಕೈಹೊತ್ತಿಗೆಗಳನ್ನು ಕೊಳ್ಳಬೇಕಾದರೆ ಒಬ್ಬ ವ್ಯಕ್ತಿ ಅದೆಷ್ಟು ರೀತಿಯಿಂದ ಯೋಚನೆ ಮಾಡಬೇಕಾಗುವದು. ಅನೇಕ ಸಲ, ಆತನು ದೃಢ ಮನಸ್ಸಿನಿಂದ ಈ ಕೈಹೊತ್ತಿಗೆಗಳನ್ನು ಕೊಂಡು ಓದಿದರೆ ಆತನಿಗೆ ತನ್ನ ಹಣಕ್ಕೆ ಪ್ರತಿಯಾಗಿ ನಿರಾಶೆಯು ವಿನಾ ಬೇರೇನೂ ದೊರೆಯುವುದಿಲ್ಲ.

ಕೈಹೊತ್ತಿಗೆಗಳ ಪೇಟೆ ನಿರ್ಮಾಣವಾದಂದಿನಿಂದ ನಮ್ಮಲ್ಲಿ ಅನೇಕ ಲೇಖಕರು, ವಿಶೇಷವಾಗಿ ಕಾದಂಬರಿ ಲೇಖಕರು ಬೆಳಕಿಗೆ ಬಂದಿದ್ದಾರೆ. ಅವರ ಕೃತಿಗಳು ಎಳಸಾದರೂ ಅವುಗಳನ್ನು ಪ್ರಕಟಿಸದೆ ಪ್ರಕಾಶಕನಿಗೆ ಬೇರೆ ವಿಧಿ ಇಲ್ಲ. ಯಾಕಂದರೆ ಆತನೂ ಪೇಟೆಯಲ್ಲಿ ಉಳಿಯಬೇಕು.

ಹೊಸ ಹೊಸ ಲೇಖಕರು ಬೆಳಕಿಗೆ ಬರುವುದು ಯಾವಾಗಲೂ ಒಳ್ಳೆಯದೆ. ಆದರೆ ಅವರಲ್ಲಿ ಎಷ್ಟು ಜನ ತಮ್ಮ ಸಾಧನ ಸಾಮುಗ್ರಿಗಳ ಪರಿಚಯವನ್ನು ಮಾಡಿಕೊಂಡಿದ್ದಾರೆ. ಈ ಕೈಹೊತ್ತಿಗೆಗಳ ಗಾಳಿ ಬೀಸಿರದಿದ್ದರೆ ನಮ್ಮ ಅನೇಕ ಕಾದಂಬರಿಕಾರರು ಕತೆಗಾರರಾಗಿಯೋ, ನಾಟಕಕಾರರಾಗಿಯೋ, ಪ್ರಬಂಧಕಾರರಾಗಿಯೋ ಉಳಿಯುತ್ತಿದ್ದರು. ಆದರೆ ಈಗ ಕಾದಂಬರಿಯ ಪೇಟೆಯಲ್ಲಿ ಬಂದಿರುವುದರಿಂದ ಅವರು ತಮ್ಮ ಮೂಲರಂಗಕ್ಕೆ ಹಿಂತಿರುಗಿ ಹೋಗುವಂತಿಲ್ಲ. ಇಂಥ ಪರಿಸ್ಥಿತಿಯಿಂದ ಎರಡು ವಿಧದ ಹಾನಿ ಸಾಹಿತ್ಯ ಲೋಕಕ್ಕುಂಟಾಗುತ್ತದೆ. ಒಂದೆಂದರೆ ಒಂದು ವ್ಯಕ್ತಿ ಕತೆಗಾರನಾಗಿಯೋ, ನಾಟಕಕಾರನಾಗಿಯೋ ಉಳಿದಿದ್ದರೆ ಆತನ ಪಕ್ವಕಲೆಯಿಂದ ಹೊರಬರಬಹುದಾಗಿದ್ದ ಅನೇಕ ಕೃತಿಗಳು ಹೊರಬರುವುದಿಲ್ಲ. ಎರಡನೆಯದೆಂದರೆ ಕಸುವಾಗಿರದ ಭೂಮಿಯಲ್ಲಿ ಒಬ್ಬನು ಎಷ್ಟು ಗೈಮೆ ಮಾಡಿದರೇನು ಫಲ? ತನ್ನದಾಗಿರದ ಸಾಹಿತ್ಯಪ್ರಕಾರದಲ್ಲಿ ಆತನು, ಕತ್ತಲೆಯ ಕೋಣೆಯಲ್ಲಿ ಕರಿಯ ಬೆಕ್ಕನ್ನು ಹುಡುಕಿದಂತೆ ಯಶಸ್ಸಿಗಾಗಿ ತಡವರಿಸಬೇಕಾಗುತ್ತದೆ. ಯಾವುದು ಆತನ ದೈವದ ಬಾಗಿಲನ್ನು ತೆರೆಯಬೇಕಾಗಿತ್ತೋ ಅದೇ ಆತನ ದೈವದ ಬಾಗಿಲಿಗೆ ಕೀಲಿಯನ್ನು ಹಾಕುತ್ತದೆ.

ನಮಗೆ ಸುಲಭ ಬೆಲೆಯ ಕೈಹೊತ್ತಿಗೆಗಳು ಬೇಕು. ಆದರೆ ಅವು ಬೆಲೆಯಲ್ಲಿಯೂ ಕಡಿಮೆ, ದರ್ಜೆಯಲ್ಲಿಯೂ ಕಡಿಮೆಯಾಗಿರಬಾರದು.



# ಒಂದೆ ಕ್ಷಣ



ಒಂದೆ ಕ್ಷಣ ಒಂದೆ ಕ್ಷಣ ನಿನ್ನ ನವಿಲನ್ನಿಳಿದು
ಮಂದಹಾಸವ ಸೂಸಿ ನನ್ನ ಬಳಿ ಸಾರು
ಒಂದೆ ಕ್ಷಣ ಒಂದೆ ಕ್ಷಣ ಓ ತಾಯೆ ಸರಸತಿಯೆ
ಬಂದೆನ್ನ ನಾಲಗೆಯ ಗದ್ದುಗೆಯನೇರು ‖ ೧ ‖

ನಿನ್ನ ಬೀಣೆಯ ತೆಗೆದು ಬದಿಗಿಟ್ಟು ತುಸು ಹೊತ್ತು
ನನ್ನ ಹೃದಯವ ನಿನ್ನ ಕೈಗೆತ್ತಿಕೊಂಡು
ನಿನ್ನ ಬೆರಳಿಂದದರ ತಂತುಗಳ ಮಿಡಿಮಿಡಿದು
ಚೆನ್ನೆಸೆವ ಗಾನಮಂ ನುಡಿಸು ಬಗೆಗೊಂಡು ‖ ೨ ‖

ನಿನ್ನ ನಚ್ಚಿನ ನವಿಲಗರಿಯಿಂದ ಬರೆಯಮ್ಮ
ನನ್ನ ಮಾನಸಪುಸ್ತಕದ ಪುಟದ ಮೇಲೆ
ಇನ್ನಾರು ನೀಮೊದಲು ಪೇಳದಿಹ ಹೃದ್ರಸದ
ಚಿನ್ನಾದಮಯಮಾದ ಭವ್ಯಕೃತಿಮಾಲೆ ‖ ೩ ‖

ಕಲೆಕಾವ್ಯಗಳ ರಸದ ಪರಿಪುಷ್ಟಿಗೊಡುವ ತವ
ಮೊಲೆಯುಣಿಸಿ ಸಲೆ ತಣಿಸಿ ಕರುಳಿಸಿಂ ನೋಡು
ಹಲವು ವರ್ಣವಿಲಾಸದಿಂದೆಸೆವ ಕಲ್ಪನೆಯ
ಬೆಳಗಿನಲಿ ಕೃತಿನೇಳ್ವ ಪ್ರತಿಭೆಯನು ನೀಡು ‖ ೪ ‖

ಇಂತನಂತಾನಂತ ಭಾವದಿಂ ಪ್ರಾರ್ಥಿಸಲು
ಸಂತಸದಿ ಕವಿಗೆ ಸರಸತಿ ನುಡಿದಳಿಂತು—
ಚಿಂತೆ ಚಂಚಲತೆಗಳ ತೊರೆದಾತ್ಮವಿಶ್ವಾಸ-
ಮಂ ತಳೆದು ನಿತ್ಯಸಾಧನೆವಿಡಿಸಮಂತು ‖ ೫ ‖

ವಿವಿಧಾನುಭವದೊಡಲ ಕಡಲತಳದಿಂದಾಯ್ದ
ನವನವೌಕ್ತಿಕಂಗಳನು ಸರಗೊಳಿಸುತಿರುವ
ಕವಿಗಹುದು ಬ್ರಹ್ಮಕಲೆ ನಿಜಕರತಲಾಮಲಕ
ಅವಿರತ ತಪಸ್ಸಿನೊಳೆ ನೀಂ ಪಡೆವೆ ವರವ ‖ ೬ ‖

—ಗಂಗಪ್ಪ ವಾಲಿ

# ನೀ ಬಂದೆ ನನ್ನ ಮನೆಗೆ

ನೀ ಬಂದೆ ನನ್ನ ಮನೆಗೆ
ನೀ ಬಂದು ನನ್ನ ಮನೆ
ನಿನ್ನದೆಂದು ನೀ
ನಿಂದೆ ಇಲ್ಲಿ ಕೊನೆಗೆ
ನೀ ಬಂದೆ ನನ್ನ ಮನೆಗೆ.
ಕವಿಯ ದರುಶನದ ಚಲುವು
ಚಲುವೆಯೆಂದೆನಿಸಿ ಬಂದ ಹಾಗೆ
ಪೂರ್ವಜನುಮಗಳ ಪುಣ್ಯ
ಮೈದಾಳಿ ನಡೆದು ತಂದ ಹಾಗೆ
ದೇವ ಕರುಣೆಯೇ ಕಾಂತೆಯಾಗಿ
ಐತಂದು ನಿಂದ ಹಾಗೆ
ನೀ ಬಂದೆ ನನ್ನ ಮನೆಗೆ
ಆವ ಜನುಮದಾನಂಟು
ನನಗು ನಿನಗುಂಟು
ಬಲ್ಲರಾರು ?
ವಿಧಿಯು ತೊಡರಿಸಿದ ಗಂಟು
ಅದ ಬಿಚ್ಚಲುಂಟು
ಯಾರ್ಗೆ ನೀರು ?
ನೀ ಬರಲು ಮನೆಗೆ
ಬೆಳಗಿದವು ದೀಪ
ಹಬ್ಬಿದವು ನಗೆಯ ಬಳ್ಳಿ
ಕಟ್ಟಿದವು ಮಾವತೋರಣವು
ಎಲ್ಲೆಡೆಗೆ ಚೆಲ್ವ ರಂಗವಲ್ಲಿ
ಹಬ್ಬ ಹುಣ್ಣಿಮೆಯ ಸಾಲು
ಹಿಡಿದಿತ್ತು ಮನೆಯ ಅಂಗಳಲ್ಲಿ
ಚಲುವು ಕಂದನ ಅಳುವು ಕೇಳಿತ್ತು
ತೂಗುತೊಟ್ಟಿಲಲ್ಲಿ
ನಿನ್ನ ನುಡಿಯ ಸಂಗೀತಸವಿಗೆ
ಬಳೆಸದ್ದು ತಾಳವಾಗಿ
ಕಿಂಕಿಣಿಸುತಿರಲು
ಕುಲುಕುಲನೆ ನಗಲು
ನೀ ಉಷಃಕಾಲದಲ್ಲಿ
ಕನಸಿನಿಂದಿಳಿದು ಕಣ್ಣು ತೆರೆದಿರಲು
ಅದುವೆ ಆಗ ನಾನು
ನಿನ್ನ ಮೊಗದಲ್ಲಿ ಕಂಡೆ ಯುಗ
ಯುಗಾಂತರದಭೀಪ್ಸೆಯನು.
ಎಷ್ಟೊ ರಾತ್ರಿಗಳ ಹಿಂದೆ ಬಿಟ್ಟು
ಬಂದಿರುವ ಉಷೆಯು ನೀನು
ಎನ್ನ ಮನೆಯಲ್ಲಿ ಬೆಳಕು ಬೀರಿ
ನಿಂದಿರುವ ಕಾಮಧೇನು

—ಚಿದಂಬರಾನಂದ

# ಅತಿ ಸರ್ವತ್ರ ವರ್ಜಯೇತ್

(ಒಂದು ಹರಟೆ)

ಲೇಖಕರು: ಎ. ಎಸ್. ರಾಮಕೃಷ್ಣ, ಮಂಗಳೂರು

ಜೀವನದಲ್ಲಿ ಯಾವುದೂ ಅತಿಯೆನಿಸಬಾರದು. ಅದರಿಂದ ಆಗುವ ಲಾಭಕ್ಕಿಂತ ಹಾನಿಯೇ ಹೆಚ್ಚು. ಮಾತಿನಲ್ಲಿಯಾಗಲಿ, ವಿಚಾರದಲ್ಲಿಯಾಗಲಿ, ಕೃತಿಯಲ್ಲಿಯಾಗಲಿ ಈ ಅತಿಯೆಂಬುದು ಸಲ್ಲದು. ಯಾವದರಲ್ಲಿಯೂ ಈ 'ಅತಿ' ಪ್ರವೇಶಿಸಕೂಡದು. ಅಂತೆಯೇ ಹಿರಿಯರು 'ಅತಿ ಸರ್ವತ್ರ ವರ್ಜಯೇತ್' ಎನ್ನುವದು ಸ್ವಾಭಾವಿಕವಾಗಿದೆ.

ತುಂಬಿದ ಮನೆ. ಹತ್ತಾರು ಮಂದಿ ಕುಳಿತು ಹರಟುತ್ತಿರುವಾಗ ಏಕೋ ದೀಪಾವಳಿಯ ಪ್ರಸ್ತಾಪ ಬಂತು. ದೀಪಾವಳಿಗೆ ಆಗ ಇನ್ನೂ ಎರಡು ತಿಂಗಳಿತ್ತು. ಮೊದಲಿನ ಎರಡು ವರ್ಷಗಳಲ್ಲಿಯೂ ಬಾಣ ಬಿರುಸುಗಳಿಂದ ಮಕ್ಕಳು ಗಾಯಗೊಂಡಿದ್ದನ್ನು ನೆನೆಸಿಕೊಂಡು, ತಂದೆ ಈ ವರ್ಷ ಅವುಗಳನ್ನು ಮನೆಯ ಹತ್ತಿರ ಬರಗೊಡಿಸುವುದಿಲ್ಲ ಎಂದರು. ಆಗ ಚಿಕ್ಕಪ್ಪ ಮಕ್ಕಳ ಪ್ರತಿನಿಧಿಯಾಗಿ ಪಟಾಕಿ ಇತ್ಯಾದಿ ಹೇರಳವಾಗಿ ಕೊಂಡುಕೊಳ್ಳದೆ ಹಬ್ಬವೇ ಇಲ್ಲವೆಂದ. ಅವುಗಳಿಂದ ಚಿಕ್ಕಪುಟ್ಟ ಅವಘಡಗಳೇನಾದರೂ ಸಂಭವಿಸಿದರೆ ಅವು ಕೂಡ 'part of the fun' ಎಂದು ವಾದಿಸಿದ. ಪಟಾಕಿ ಬೇಕು ಬೇಡ ಎಂದು ಅಣ್ಣತಮ್ಮ ವಾದಿಸುತ್ತಿರುವಾಗ ಹಜಾರದ ಮೂಲೆಯಿಂದ ಒಂದು ಮಾತು ಕೇಳಿಸಿತು :

"ಅತಿ ಸರ್ವತ್ರ ವರ್ಜಯೇತ್"

ಅದನ್ನಾಡಿದವರು ತಾತ.

ಬಿರುಸು ಬಾಣಗಳನ್ನು ಸಿಕ್ಕಾಬಟ್ಟೆ ಕೊಂಡುಕೊಂಡು ಉರಿಸದಿದ್ದರೆ ಹಬ್ಬವೇ ನಡೆಯದೆಂಬುದೂ ಒಂದು ಅತಿ. ಅವುಗಳನ್ನು ಹತ್ತಿರ ಬರಗೊಡಿಸೆನೆಂಬುದೂ ಒಂದು ಅತಿ. ಪಟಾಕಿ ಮತಾಪು ಇದ್ದರೇನೇ ಮಕ್ಕಳಿಗೆ ಸಂತೋಷ. ಅವುಗಳ ಸಂತೋಷವೇ ನಮಗೆ ಹಬ್ಬ. ಆದರೆ ಅನಾಹುತಗಳಿಗೆ ಕಾರಣವಾಗುವಷ್ಟು ಬಿರುಸು ಬಾಣದ ಗೀಳು ಕೂಡದು. ತಾತನ ಈ ಸುವರ್ಣ ಮಾಧ್ಯಮಕ್ಕೆ ಎದುರಾಡಲುಂಟೆ ?

ಬಿರುಸು ಬಾಣಗಳ ವಿಷಯ ಬಿಟ್ಟು, ಮಾತು ಕತೆ ಜೀವನದತ್ತ ಹರಿಯಿತು. ಈ ಅತಿ ಎಂಬುದು ನೆಮ್ಮದಿಗೆ ಮಾರಕ ಎಂಬುದನ್ನು ಎಲ್ಲರೂ ಒಪ್ಪಿದೆವು.

ಬದುಕಿನಲ್ಲಿ ಒಂದು ಮಧ್ಯಮ ಸ್ಥಿತಿ ಯಾವಾಗಲೂ ಹೆಚ್ಚಿನ ಸುಖವನ್ನು ಕೊಡುವಂತಹದೆಂದು ಕಾಣುತ್ತದೆ. ಕಡು ಬಡತನವೂ ಒಂದು ಅತಿ. ವಿಪುಲೈಶ್ವರ್ಯವೂ ಒಂದು ಅತಿ. ಈ ಎರಡು ಸ್ಥಿತಿಗಳಲ್ಲಿ ಮನಸ್ಸಿನ ಸಮತೋಲವನ್ನು ಕಾಪಾಡಿಕೊಂಡು ನೆಮ್ಮದಿಯಿಂದಿರುವುದು ಕೆಲವೇ ಮಂದಿ ಮಹಾಪುರುಷರಿಗೆ ಮಾತ್ರ ಸಾಧ್ಯ. ನಮ್ಮಂಥ ಸಾಮಾನ್ಯರಿಗೆ ನಿಜವಾದ ಸುಖ ದೊರೆಯುವುದು ಮಧ್ಯಮಸ್ಥಿತಿಯಲ್ಲಿರುವಾಗ ಮಾತ್ರ.

ಚೀನ ದೇಶದ ಕವಿಯೊಬ್ಬನು ಜೀವನದ ಪ್ರತಿಯೊಂದು ವಿಷಯದಲ್ಲಿಯೂ ಈ 'ನಡು ನೆಲೆ' ಯೇ ಅತ್ಯಂತ ಸುಖದಾಯಿಯಾದುದೆಂದು ವಿವರಿಸುತ್ತಾ ಒಂದು ಹಾಡು ಕಟ್ಟಿದ್ದಾನೆ. ಇತ್ತ ಪೊಗ್ಗಾಗಿರದೆ ಅತ್ತ ಪೂರ್ತಿ ಅರಳಿಯೂ ಇರದೆ ಅರ್ಧ ಬಿರಿದ ಹೂವೇ ಅತಿ ಚೆಲುವಾದುದು ; ತನ್ನ ಹಾಯಿಯನ್ನು ಅರ್ಧ ಮಾತ್ರ ಬಿಡಿಸಿಕೊಂಡ ನಾವೆಯ ನಡೆ ತೀರ ಹದವಾದುದು, ಹಾಗೆಯೇ ಸಿಹಿ-ಕಹಿಗಳ ಮಿಶ್ರಣವಿರುವ ಈ ಬದುಕಿನಲ್ಲಿ ಪ್ರತಿಯೊಂದನ್ನೂ ಅರ್ಧ ಎಂದರೆ ಅರ್ಧ ಮಾತ್ರ (ಅರ್ಥಾತ್-ಹದವರಿತು) ಯಾವನು ಸವಿಯುತ್ತಾನೋ ಅತನೇ ಜಾಣ ಎಂಬ ತೀರ್ಮಾನಕ್ಕೆ ಬಂದಿದ್ದಾನೆ ಆ ಕವಿ. ಈ 'ನಡು ನೆಲೆಯ' ತತ್ತ್ವವನ್ನು ಅತ ಹಲವಾರು ವಿಷಯಗಳಿಗೆ ಅನ್ವಯಿಸಿ ಹೇಳುತ್ತಾನೆ. ನಡು ಹರೆಯು ಜೀವನದ ಅತ್ಯುತ್ತಮ ಕಾಲ; ಅತ್ತ ಹಳ್ಳಿಯೂ ಅಲ್ಲದೆ ಇತ್ತ ಪಟ್ಟಣವೂ ಅಲ್ಲದೆ, ಬೆಟ್ಟಗಳಿಗೂ ತೊರೆಗಳಿಗೂ ಸಮದೂರವಾಗಿರತಕ್ಕದ್ದೇ ಪ್ರಶಸ್ತ ಸ್ಥಳ; ಸ್ವಲ್ಪಮಟ್ಟಿಗೆ ಪಾಂಡಿತ್ಯ, ಸ್ವಲ್ಪಮಟ್ಟಿಗೆ ವ್ಯಾವಹಾರಿಕತನ; ಅರ್ಧ ಶ್ರೀಮಂತಿಕೆ, ಅರ್ಧ ಜನಸಾಮಾನ್ಯದಲ್ಲಿ ಹೊಕ್ಕುಬಳಕೆ; ವಾಸದ ಮನೆ ಸ್ವಲ್ಪಮಟ್ಟಿಗೆ ಮೇಲಂತಸ್ತಿನವರ ರೀತಿಯಲ್ಲಿ, ಸ್ವಲ್ಪಮಟ್ಟಿಗೆ ಸಾದಾ ಸರಳ; ಮನೆಯನ್ನಲಂಕರಿಸುವ ಪೀಠೋಪಕರಣಗಳಲ್ಲಿಯೂ ಧರಿಸುವ ಉಡುಗೆ ತೊಡಿಗೆಗಳಲ್ಲಿಯೂ ಅಹಾರ ವಿಹಾರಗಳಲ್ಲಿಯೂ ಸ್ವಲ್ಪಮಟ್ಟಿಗೆ ಭೋಗಪ್ರಿಯತೆಗೂ ಸ್ವಲ್ಪಮಟ್ಟಿಗೆ ಸರಳತೆಗೂ ಎಡೆಕೊಡುವುದು.... ಇವೆಲ್ಲ ಮಿತದಿಂದ ಹಿತಪಡೆಯುವ ಮಾರ್ಗಗಳು. ಮಾತ್ರವಲ್ಲದೆ ಕೆಲಸದಾಳು ಕೂಡ ಅತಿ ದಡ್ಡನೂ ಆಗಿರಬಾರದು ತೀರ ಬುದ್ಧಿವಂತನೂ ಆಗಿರಬಾರದು ಎನ್ನುತ್ತಾನೆ ಆ ಕವಿ. ಅಷ್ಟೇಕೆ, ಹೆಂಡತಿ ಕೂಡ ಕೇವಲ ಪೆದ್ದು ಪೆದ್ದಾಗಿರಲೂ ಬಾರದು, ಅಥವಾ ಅತಿ ಚಲಾಕಿನವಳಿರಲೂ ಬಾರದು ಎಂದು ವಿಧಿಸಿದ್ದಾನೆ ಅತ! ಇನ್ನು ಕುಡುಕರಲ್ಲಿಯೂ ಅರ್ಧ ಕುಡಿದವನೇ ಸುಖಿಯಂತೆ!

'ಅರ್ಧಮರ್ಧ ಗೀತ' ಎನ್ನಬಹುದಾದ ಆ ಹಾಡನ್ನು ತನ್ನ ಗ್ರಂಥದಲ್ಲಿ ಉದ್ಧರಿಸಿದ ಚೀನದ ಅಧುನಿಕ ತತ್ತ್ವಜ್ಞಾನಿ ಲಿನ್ ಯುಟಾಂಗ್ ಕೂಡ ಈ ಮಿತತತ್ತ್ವವು ಜೀವನಸುಖಕ್ಕೆ ಎಷ್ಟೊಂದು ಆವಶ್ಯಕವೆಂಬುದನ್ನು ವಿವರಿಸುತ್ತಾ ಆ ನಡುನೆಲೆಯನ್ನು ತೋರಿಸಿಕೊಡಲು ಯತ್ನಿಸಿದ್ದಾನೆ. ನಿರಂತರವಾದ ಚಟುವಟಿಕೆಗಳುಳ್ಳವನೂ ಸುಖಿಯಲ್ಲ; ಏನನ್ನೂ ಮಾಡದೆ ಹೊತ್ತು ಕಳೆಯುವವನೂ ಸುಖಿಯಲ್ಲ. ಮನೆ ಬಾಡಿಗೆ ತೆರಲಾಗದಷ್ಟು ಬಡತನವಿರುವವನೂ ಸುಖಿಯಲ್ಲ ; ಕೆಲಸ ಮಾಡುವ ಅಗತ್ಯವೇ ಇಲ್ಲದಿರುವಷ್ಟರಮಟ್ಟಿನ ಶ್ರೀಮಂತನೂ ಸುಖಿಯಲ್ಲ. ಸಂಗೀತ ಸಾಹಿತ್ಯಗಳ ವಿಷಯದಲ್ಲಿಯೂ ಹಾಗೆಯೇ. ನಾಲ್ಕು ಮಂದಿ ಇಷ್ಟಮಿತ್ರರೆದುರಿಗೆ ಪಿಯಾನೋ ಬಾರಿಸುವಷ್ಟು ಮಾತ್ರ ಸಂಗೀತ ತಿಳಿದಿದ್ದರೆ ಅಥವಾ ಅದೇ ಮಟ್ಟದ ಸಾಹಿತಿಯಾಗಿದ್ದರೆ ಮಾತ್ರ ಸುಖವಂತೆ !

ಈ ಎಲ್ಲ ಮಾತುಗಳನ್ನು 'ಅತಿ ಸರ್ವತ್ರ ವರಯೇತ್' ಎಂಬ ನಮ್ಮ ನುಡಿ ಸುಲಭವಾಗಿ ಹೇಳಿಬಿಟ್ಟಿದೆ. ಭಗವಾನ್ ಶ್ರೀಕೃಷ್ಣನು ಗೀತೋಪದೇಶದ ಕಾಲದಲ್ಲಿ ಅರ್ಜುನನಿಗೆ ಯೋಗಾಭ್ಯಾಸಕ್ಕೆ ಅರ್ಹರಾರೆಂಬುದನ್ನು ವಿವರಿಸುತ್ತಾ, ಅತಿಯಾಗಿ ತಿನ್ನುವದಾಗಲಿ ಅತಿಯಾಗಿ ಉಪವಾಸಮಾಡುವದಾಗಲಿ ಯೋಗಸಾಧನೆಯಲ್ಲ ಎಂದು ಅಪ್ಪಣೆ ಕೊಡಿಸಿದ್ದಾನೆ. ಹಾಗೆಯೇ ಬಹುವಾಗಿ ನಿದ್ರಿಸುವದೂ ನಿದ್ರಿಸದೆ ಜಾಗರದಿಂದಿರುವದೂ ಯೋಗಾಭ್ಯಾಸಿಗೆ ಕೂಡದೆಂದಿದ್ದಾನೆ. ನಿದ್ರಾಹಾರ ವಿಹಾರಗಳಲ್ಲಿಯೂ ಪ್ರತಿಯೊಂದು ಚಟುವಟಿಕೆಯಲ್ಲಿಯೂ ಹಾಳತವಿದ್ದರೆ ಅಂಥವನೇ ಯೋಗಾಭ್ಯಾಸಕ್ಕೆ ಅರ್ಹನೆಂಬುದಾಗಿ ಉಪದೇಶಿಸಿದ್ದಾನೆ ಯೋಗೀಶ್ವರ.

ಉಪನಿಷತ್ತುಗಳು ಕೂಡ ಹಾಗೆಯೇ. ನಾವು ಅತಿಯ ಕಡೆಗೆ ಒಲಿಯದಂತೆ ಮಾರ್ಗದರ್ಶನ ನೀಡಿವೆ. ಬಯಸಬೇಕಾದ್ದನ್ನು ಬಯಸಬೇಕು, ಆದರೆ ಮಿತವಾಗಿ ಬಯಸಬೇಕು; ಬಳಸಬೇಕಾದ್ದನ್ನು ಬಳಸಬೇಕು, ಆದರೆ ಮಿತವಾಗಿ ಬಳಸಬೇಕು: ಎಂಬ ಧ್ವನಿ ಅವುಗಳಲ್ಲಿ ಸ್ಪಷ್ಟವಾಗಿ ಮೂಡಿದೆ. 'ಭದ್ರಂ ಕರ್ಣೇಭಿಃ', 'ಸಹನಾವವತು ಸಹ ನೌ ಭುನಕ್ತು', 'ಆಪ್ಯಾಯಂತು ಮಮಾಂಗಾನಿ' ಮೊದಲಾದ ಮಂತ್ರಗಳು ಅಭಾವವೆಂಬ ಅತಿಯಿಂದ ನಮ್ಮನ್ನು ಪಾರುಗೊಳಿಸಲು ಮಾಡುವ ಪ್ರಾರ್ಥನೆಗಳಾದರೆ, 'ಈಶಾವಾಸ್ಯಂ ಇದಂ ಸರ್ವಂ..... ತೇನ ತ್ಯಕ್ತೇನ ಭುಂಜೀಥಾಃ' ಮುಂತಾದ ಸಿರಿನುಡಿಗಳು ಮಿತಿ ಮೀರಿದ ಬಯಕೆ, ಮಿತಿಮೀರಿದ ಭೋಗಲಾಲಸೆಗಳೆಂಬ ಅತಿಯ ಕಡೆಗೆ ಸರಿಯದಂತೆ ನಮ್ಮನ್ನು ಎಚ್ಚರಿಸುತ್ತವೆ.

ಒಂದೆಡೆ ತೀವ್ರವಾದ ಅಭಾವ ಇನ್ನೊಂದೆಡೆ ಅತಿಯಾದ ಸಂಗ್ರಹ ಹೀಗಾಗುವುದರಿಂದ ಸಮಾಜದ ಸುಸ್ಥಿತಿ ಕೆಡುತ್ತದೆ. ವಿತರಣೆ ಸಾಧ್ಯವಾದಷ್ಟು ಸಮರ್ಪಕವಾಗಿ ನಡೆಯುವಂತೆ 'ಮಿತ ತತ್ತ್ವ' ಆಚರಣೆಗೆ ಬಂದಿದ್ದಾದರೆ ಈ ಅಪಾಯವಿರುವುದಿಲ್ಲ. ಆಗ ವರ್ಗಕಲಹಗಳೇ ಮೊದಲಾದ ಕಂಟಕಗಳು ತಪ್ಪುತ್ತವೆ. ಹಾಗೆ ನೋಡಿದರೆ ಇಂದಿನ ಜಗತ್ತಿನಲ್ಲಿರುವ ಎಷ್ಟೋ ಕಷ್ಟಕಾರ್ಪಣ್ಯಗಳಿಗೆ ವ್ಯಕ್ತಿಜೀವನದಲ್ಲಿ ಹಾಳತದ ನಡೆವಳಿಕೆಯಿಲ್ಲದಿರುವುದೇ ಕಾರಣವಿರಬಹುದು. ಅತಿಯಾದ ಇಷ್ಟಾನಿಷ್ಟಗಳು, ಅತಿಯಾದ ನಂಬಿಕೆ ಹೀಗೆ ಪ್ರತಿಯೊಂವರಲ್ಲಿಯೂ ಕೆಟ್ಟ ಛಲವೆಂಬಂತೆ ಒಂದು ಅತಿ ಕಂಡುಬರುವುದರಿಂದ ಕ್ಷೋಭೆ ಹೆಚ್ಚಿದೆ. ವಿವಿಧ ರಾಷ್ಟ್ರಗಳ ರಾಜಕೀಯ ತತ್ತ್ವಪ್ರತಿಪಾದನೆಯೂ ಚಟುವಟಿಕೆಗಳೂ ಪರಸ್ಪರ ವಿರುದ್ಧ ದಿಸೆಯಲ್ಲಿ ಅತಿಯಾಗಿ ಮುಂದುವರಿದಿರುವುದರಿಂದ ಮಹಾ ಗಂಡಾಂತರವೊಂದರ ಮುನ್ಸೂಚನೆಯೋ ಎಂಬಂತೆ ಅಲ್ಲಲ್ಲಿ ಘರ್ಷಣೆಗಳುಂಟಾಗುತ್ತಲೇ ಇವೆ. ಕಾರಣ ತತ್ತ್ವನಿಷ್ಠೆಗೂ ಒಂದು ಮಿತಿಯಿದೆಯೆಂಬುದನ್ನು ಬಹುತೇಕ ರಾಜಕಾರಣಿಗಳು ಮನಗಾಣದಿರುವುದು.

ಕಾಫಿಯನ್ನು ಮೆಚ್ಚುವವರೂ ಟೀಯನ್ನು ಮೆಚ್ಚುವವರೂ ತಮತಮಗೆ ಹಿತವಾದುದನ್ನು ತೆಪ್ಪಗೆ ಹೀರಿಕೊಂಡಿರುವವರೆಗೆ ಸರಿ. ಆದರೆ ಕಾಫಿಭಕ್ತರ ಶ್ರದ್ಧೆಯೂ ಟೀಭಕ್ತರ ಶ್ರದ್ಧೆಯೂ ಅತಿಯಾಗಿ ಬೆಳೆದರೆ ಬಿಕ್ಕಟ್ಟು ಅನಿವಾರ್ಯ! ಹಾಗೆಯೇ ಡೆಮಾಕ್ರಸಿಯ ಭಕ್ತರೂ ಕಮ್ಯುನಿಸಂನ ಭಕ್ತರೂ ತಂತಮ್ಮ ರಾಜಕೀಯ ತತ್ತ್ವನಿಷ್ಠೆಯನ್ನು ವಿಪರೀತವಾಗಿ ಬೆಳೆಸಿದ್ದಾದರೆ, ಜಗತ್ತೆಲ್ಲ ತಮ್ಮ ತತ್ತ್ವಕ್ಕೆ ಮಾತ್ರ ತಲೆಬಾಗಬೇಕು, ಎದುರಾಳಿಗಳು ನಿರ್ನಾಮ ಹೊಂದಬೇಕು ಎಂಬ ಅತಿ ಛಲವನ್ನು ಹಿಡಿದಿದ್ದಾದರೆ ಲೋಕಶಾಂತಿ ಹೇಗೆ ಉಳಿಯಬೇಕು? ಇಂಥ ಅಪಾಯವನ್ನು ತಡೆಯುವುದಕ್ಕಾಗಿಯೇ ಭಾರತವೇ ಮೊದಲಾದ ರಾಷ್ಟ್ರಗಳು 'ಸಹಜೀವನ' ಅಥವಾ Co-existence ಎಂಬ ತತ್ತ್ವವನ್ನು ಪ್ರತಿಪಾದಿಸತೊಡಗಿದವು. ಆದರೆ ಈ ತತ್ತ್ವ ಅನುಷ್ಠಾನಕ್ಕೆ ಬರಬೇಕಾದರೂ 'ಅತಿ ಸರ್ವತ್ರ ವರ್ಜಯೇತ್' ಎಂಬ ಮಾತಿಗೆ ಮೊದಲು ಮನ್ನಣೆ ದೊರೆಯಬೇಕು.

ರಾಷ್ಟ್ರ ರಾಷ್ಟ್ರಗಳ ವಿಷಯ ದೊಡ್ಡ ಮಾತಾಯಿತು. ಅದು ಹಾಗಿರಲಿ. ವ್ಯಕ್ತಿಯು ಯಾವುದೇ ಒಂದು ಆದರ್ಶಕ್ಕೇ ಕಟ್ಟುಬೀಳುವುದಕ್ಕೆ ಕೂಡ ಒಂದು ಮಿತಿಯಿರಬೇಡವೆ ಎಂಬುದು ವಿಚಾರಿಸತಕ್ಕ ವಿಷಯ. ಅದು ರಾಷ್ಟ್ರಾಭಿಮಾನದಂಥ ಒಳ್ಳೆಯ ಆದರ್ಶವೇ ಎಂದಿಟ್ಟುಕೊಳ್ಳೋಣ.

ನನಗೆ ತಿಳಿದವರೊಬ್ಬರಿದ್ದರು. ಮುದಿತಾಯಿಯ ಒಬ್ಬನೇ ಮಗ. ದುಡಿಯುವ ವಯಸ್ಸು ಬಂದಿತೆನ್ನುವಾಗ ಹೇಳದೆ ಕೇಳದೆ ಮನೆಬಿಟ್ಟು ಹೊರಟುಹೋದರು. ರಾಜಕೀಯ ಚಳವಳಿಗೆ ಅವರು ಮನಸೋತಿದ್ದರು. ಉತ್ತರದಲ್ಲಿದ್ದು ಒಂದೆರಡು ಬಾರಿ ಜೈಲು ಕಂಡು ನಾಲ್ಕಾರು ವರ್ಷಗಳ ಅನಂತರ ಊರಿಗೆ ಹಿಂದಿರುಗಿದರು. ಅವರಿವರ ಮನೆಯಲ್ಲಿ ಊಳಿಗ ಮಾಡಿ ಗಳಿಸಿದ ಪುಡಿಕಾಸನ್ನು ಕೂಡಿಸಿ ತಾಯಿ ಮದುವೆ ಮಾಡಿಸುತ್ತೇನೆಂದಾಗ ಅದಕ್ಕೂ ಒಪ್ಪಿದರು. ಆದರೆ ಆತನ ಆಸಕ್ತಿಯೆಲ್ಲ ರಾಜಕೀಯದಲ್ಲಿ. ಸಂಸಾರದ ಯಾವ ಜವಾಬ್ದಾರಿಯನ್ನೂ ಆತ ವಹಿಸಲಿಲ್ಲ. ಮೂರೋ ನಾಲ್ಕೋ ಮಕ್ಕಳೂ ಆದವು. ಹೋಟಲಿಂದ ಎರಡು ಇಡಲಿ ತರಿಸಿ ತುಂಡು ಮಾಡಿ ಮಕ್ಕಳಿಗೆ ಹಂಚಿ ಅವನ್ನು ಸ್ಕೂಲಿಗೆ ಕಳುಹಿಸುತ್ತಿದ್ದರಂತೆ ಆ ತಾಯಿ. ಕೊನೆಗೊಮ್ಮೆ ಗರ್ಭಿಣಿಯಾದಾಗ ಸರಿಯಾದ ಪೋಷಣೆಯಿಲ್ಲದೆ ಆ ಪುಣ್ಯಾತ್ಮಗಿತ್ತಿ ತೀರಿಕೊಂಡರು. ಆದರೆ ಮುದಿತಾಯಿ ಇನ್ನೂ ಉಳಿದಿದ್ದರು. ಈತ ಸರಿಯಾಗಿ ಲಕ್ಷ್ಯಕೊಡದೆ ತನ್ನ ಆರೋಗ್ಯವನ್ನೂ ಕೆಡಿಸಿಕೊಂಡನು. ಸ್ವಾತಂತ್ರ್ಯ ಬಂತು. ರಾಜಕೀಯ ಸಂತ್ರಸ್ತರಿಗೆ ದೊರೆಯುವ ಯಾವ ಸೌಲಭ್ಯವೂ ಇವರಿಗೆ ದೊರೆಯಲಿಲ್ಲ. ದೊರೆಯಲಿಲ್ಲವೆಂದು ಇವರು ಗೊಣಗಲೂ ಇಲ್ಲ. ಕೊನೆಗೊಮ್ಮೆ ಇವರು ಏನೋ ಕಾಯಿಲೆ ಬಂದು ನಡುವಯಸ್ಸಿನಲ್ಲಿ ಕಣ್ಣು ಮುಚ್ಚಿದರು. ಮುದಿತಾಯಿಯ, ಆ ತಬ್ಬಲಿ ಮಕ್ಕಳ ಪಾಡೇನೆಂದು ಕೇಳಬೇಡಿ. ದಿವಂಗತರು ತಮ್ಮ ಕುಟುಂಬದ ಕಡೆಗೆ ಕೊಂಚ ಹೆಚ್ಚು ಗಮನ ಕೊಟ್ಟಿದ್ದರೆ ರಾಷ್ಟ್ರಕ್ಕೆ ದೊಡ್ಡ ನಷ್ಟವೇನು ಆಗುತ್ತಿರಲಿಲ್ಲವೆನಿಸುವುದಿಲ್ಲವೆ?

ರಾಜಕೀಯಕ್ಕಿಳಿದವರು ಅದರಿಂದಲೇ ಮುಕ್ತಿ ಎಂಬಂತೆ ಅತಿ ಶ್ರದ್ಧೆಯನ್ನು ವಹಿಸುತ್ತಾರೆ. ವೈಜ್ಞಾನಿಕ ಸಂಶೋಧನೆಯಲ್ಲಿ ತೊಡಗಿದವರು ವಿಜ್ಞಾನವೇ ಜಗತ್ತಿನ ಸರ್ವಸ್ವವೆಂಬಂತೆ ವರ್ತಿಸುತ್ತಾರೆ. ಇನ್ನು ಸ್ವಮತಾಭಿಮಾನಿಗಳ ಮಾತಂತೂ ಹೇಳುವುದಕ್ಕಿಲ್ಲ. ರಾಜಕೀಯಕ್ಕಿಳಿದವರು ಇತರ ವಿಷಯಗಳಲ್ಲಿಯೂ ಸಾಕಷ್ಟು ಪ್ರಬುದ್ಧರಾಗಿದ್ದರೆ, ವೈಜ್ಞಾನಿಕರು ಜಗತ್ತಿನ ಇತರ ಸಮಸ್ಯೆಗಳನ್ನೂ ಕೊಂಚ ಗಮನದಲ್ಲಿಟ್ಟುಕೊಂಡಿದ್ದರೆ, ಹಾಗೆಯೇ ಮತಾಭಿಮಾನಿಗಳು ಇತರ ಮತಗಳ ತತ್ತ್ವಗಳನ್ನು ಪ್ರಾಮಾಣಿಕವಾಗಿ ತಿಳಿದುಕೊಳ್ಳಲು ಯತ್ನಿಸಿದರೆ ಜಗತ್ತಿನಲ್ಲಿ ಎಷ್ಟೋ ಅವಾಂತರಗಳು ಇರುತ್ತಿರಲೇ ಇಲ್ಲ. ಹಾಗೆ ಹಾಳತವರಿತು ನಡೆಯುವವರು ಇಲ್ಲವೇ ಇಲ್ಲವೆಂದಲ್ಲ. ಆದರೆ ಅಂಥವರು ತೀರ-ತೀರ ವಿರಳ. ಪ್ರಪಂಚದ ಕ್ಷೇಮಕ್ಕೆ ಆ ಸಂಖ್ಯೆ ಸಾಲದು. ಸಮಾಜದಲ್ಲಿಯೂ ಒಂದು ನಡುನೆಲೆಯನ್ನು ಕಂಡುಕೊಂಡು ಆ ಪ್ರಕಾರ ನಡೆದುಕೊಳ್ಳುವವರು ಇಲ್ಲವೆಂದಲ್ಲ. ಆದರೆ ಅಂಥವರು ಬಹಳ ಸ್ವಲ್ಪ ಜನ. ಸಮಾಜದ ನೆಮ್ಮದಿಗೆ ಅಷ್ಟಿದ್ದರೆ ಸಾಲದು.

ವಿಪರೀತ ಮಹತ್ವಾಕಾಂಕ್ಷೆಯುಳ್ಳವರಿಗೆ ಪ್ರಾರಂಭದಲ್ಲಿ ಹೇಳಿದ ಚೀನೀ ಕವಿಯ 'ಅರ್ಧಮರ್ಧ ಗೀತ'ದ ತತ್ತ್ವ ಹಿಡಿಸಲಾರದೋ ಏನೋ? ಆದರೆ ಆ ತತ್ತ್ವಕ್ಕೆ ಮಾನ್ಯತೆದೊರೆಯದೆ-ಎಂದರೆ ಬಯಸಬೇಕಾದ್ದನ್ನು ಬಯಸುವುದು; ಯಾವುದನ್ನೂ ಅತಿಯಾಗಿ ಬಯಸದಿರುವುದು ಎಂಬ ನಡೆವಳಿಕೆ ರೂಢಿಯಾಗದೆ, ಸಮಾಜದಲ್ಲಿ, ರಾಷ್ಟ್ರದಲ್ಲಿ, ಒಟ್ಟು ಜಗತ್ತಿನಲ್ಲಿ ನೆಮ್ಮದಿಯುಂಟಾಗಲಾರದು. ದೀಪಾವಳಿಯ ದಿನ ಪಟಾಕಿ ಮತಾಪುಗಳನ್ನು ಬಹಿಷ್ಕರಿಸಿದರೂ ಸುಖವಿಲ್ಲ; ಅವನ್ನು ಕಂಡಾಪಟ್ಟೆ ಕೊಂಡುತಂದರೂ ಸುಖವಿಲ್ಲ! 'ಅತಿ ಸರ್ವತ್ರ ವರ್ಜಯೇತ್!' ಆ ನರೆತ ತಲೆಯಿಂದ ಸಾವಧಾನವಾಗಿ ಹೊರಟ ಆ ಮಾತು ಇನ್ನೂ ಕಿವಿಯಲ್ಲಿ ಮೊರೆಯುತ್ತಿದೆ.

# ಪ್ರಾಚೀನ ಭಾರತೀಯ ಕರಾಕರಣ ಪದ್ಧತಿ

## ಅದರ ಸಾಮಾನ್ಯ ತತ್ವಗಳು

ಲೇಖಕರು : ಶ್ರೀ ನಾಯಕ ವೆಂಕಟರಾಯರು
ಎಂ. ಎ., ಎಲ್‌ಎಲ್. ಬಿ.

ಅರಸನು ತನ್ನ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸದಿದ್ದರೆ ಪ್ರಜೆಗಳಿಗೆ ಕರ ಕೊಡದಿರುವ ಅಧಿಕಾರವೂ ಇತ್ತೆಂದಬಳಿಕ ಹಿಂದಿನ ಕರಾಕರಣೆ ಪದ್ಧತಿ ಎಷ್ಟೊಂದು ಪ್ರಜಾಸತ್ತಾತ್ಮಕವಾಗಿತ್ತೆಂಬುದು ವ್ಯಕ್ತವಾಗುವದು. ಈ ಪದ್ಧತಿಯ ವೈಶಿಷ್ಟ್ಯಗಳನ್ನು ಇಲ್ಲಿ ನೋಡಬಹುದು.

ಪ್ರಾಚೀನ ಭಾರತೀಯ ರಾಜ್ಯಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ಹಾಗು ಧರ್ಮಶಾಸ್ತ್ರ ಗ್ರಂಥಗಳಲ್ಲಿ ಮಾನವನ ವೈಯಕ್ತಿಕ ಮತ್ತು ಸಾಮೂಹಿಕ ಜೀವನದ ಧ್ಯೇಯಗಳ ನಿರ್ದೇಶವು ಸಾಕಷ್ಟು ಸ್ಪಷ್ಟವಾಗಿದ್ದುದು ಸರ್ವವಿದಿತವೇ ಆಗಿದೆ. 'ಧನಂ ಹಿ ಧರ್ಮೈಕಫಲಂ' ಎಂದು ಧನಾರ್ಜನೆಯ ಮುಖ್ಯ ಗುರಿಯು ಧರ್ಮವೆಂಬುದಾಗಿ ಹೇಳಲ್ಪಟ್ಟಿದೆ. ಹಾಗೆಯೆ ರಾಜನು ರಾಜ್ಯ ಪರಿಪಾಲನೆಯನ್ನು ಧರ್ಮಸಂಸ್ಥಾಪನೆಗಾಗಿಯೆ ಮಾಡಬೇಕೆಂದೂ ದುಷ್ಟನಿಗ್ರಹ ಶಿಷ್ಟ ಪರಿಪಾಲನೆಗಳೇ ಆತನ ಮುಖ್ಯ ಕರ್ತವ್ಯಗಳೆಂದೂ ಪ್ರಾಚೀನ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಹೀಗಿರುವಾಗ ರಾಜ್ಯದ ಕೋಶವೃದ್ಧಿಯನ್ನು ಮಾಡಿಕೊಳ್ಳುವಾಗಲೂ ಪ್ರಭುತ್ವದ ಮನೋವೃತ್ತಿಯು ಧರ್ಮಪ್ರಧಾನವಾಗಿಯೇ ಇರಬೇಕೆಂದು ಹಿಂದಿನ ಗ್ರಂಥಗಳಲ್ಲಿ ಹೇಳಿದ್ದುದು ಸೋಜಿಗದ ಸಂಗತಿಯಲ್ಲ. ಆಧುನಿಕ ಅರ್ಥಶಾಸ್ತ್ರಜ್ಞರು ಸಾರ್ವಜನಿಕ ಹಣಕಾಸಿನ ವಿಷಯವೆಂದು ಕರೆಯುವ ವಿಭಾಗದಲ್ಲಿ ರಾಜನೀತಿ, ಸಾಮಾನ್ಯನೀತಿ ಮತ್ತು ಅರ್ಥಶಾಸ್ತ್ರ ಇವುಗಳ ಸಮ್ಮಿಲನವು ಕಂಡುಬರುವದು ಸ್ವಾಭಾವಿಕವೇ ಆಗಿದೆ. ಹೀಗಾಗಲು ಪ್ರಭುತ್ವದ ಧ್ಯೇಯವು ಪ್ರಜೆಗಳ ಯೋಗಕ್ಷೇಮ ಪರಿಪಾಲನೆಯಾದುದೇ ಕಾರಣವೆಂದರೆ ತಪ್ಪಾಗದು. ಹಣವನ್ನು ಹಣಕ್ಕಾಗಿಯೆ ಗಳಿಸಬೇಕೆಂಬ ವಿಚಾರವಿದ್ದರೆ ಅದರ ಮಾತೇ ಬೇರೆಯಾಗುತ್ತಿತ್ತು. ಹಣದ ಗಳಿಕೆಯು ರಾಜನಿಂದಲೇ ಆಗಲಿ ಸಾಮಾನ್ಯ ವ್ಯಕ್ತಿಯಿಂದಲೇ ಆಗಲಿ ಯಾತಕ್ಕೋಸುಗವೆಂಬ ವಿಚಾರವನ್ನು ಆಳವಾಗಿ ಹಿಂದಿನವರು ಮಾಡಿದ್ದರು. ಆದುದರಿಂದಲೇ ಅವರು ನೀತಿಗೆ ಮುಖ್ಯವಾದ ಸ್ಥಾನವನ್ನು ಅದರಲ್ಲಿ ಕೊಟ್ಟಿದ್ದರು. ವಸ್ತುತಃ ಅರಸನ ಅಸ್ತಿತ್ವದ ಅವಶ್ಯಕತೆಯು ಅವರಿಗೆ ಅನಿಸಿದ್ದುದಾದರೂ ಈ ನೀತಿಯ ಅಥವಾ ಧರ್ಮದ ರಕ್ಷಣೆಗಾಗಿಯೆಂಬುದನ್ನು ಬಲ್ಲವರಿಗೆ ಅದನ್ನು ಒಡೆದು ಬೇರೆ ಹೇಳಬೇಕಾಗಿಲ್ಲ. ಶುಕ್ರನೀತಿಯಲ್ಲಿ-

> ಸ್ವಭಾಗಭೃತ್ಯಾ ದಾಸ್ಯತ್ವೇ ಪ್ರಜಾನಾಂ
> ಚ ನೃಪಃ ಕೃತಃ
> ಬ್ರಹ್ಮಣಾ ಸ್ವಾಮಿರೂಪಸ್ತು ಪಾಲನಾರ್ಥಂ
> ಹಿ ಸರ್ವದಾ ॥

ಎಂದು ಸ್ಪಷ್ಟವಾಗಿ ಹೇಳಿದೆ. ಇದರಲ್ಲಿ ಅಡಗಿದ ವಿಚಾರಗಳನ್ನು ಬಿಡಿಸಿ ನೋಡಿದರೆ ಪ್ರಭುತ್ವ ಮತ್ತು ಪ್ರಜೆಗಳಲ್ಲಿ ಒಂದು ಬಗೆಯ ಸಾಮಾಜಿಕ ಕೊಡುಕೊಳ್ಳುವ ವ್ಯವಹಾರ ನೀತಿಯೇರ್ಪಟ್ಟಿತ್ತೆಂದು ವ್ಯಕ್ತವಾಗದಿರದು. ಪ್ರಜೆಗಳು ಕರತೆರಿಗೆಗಳನ್ನು ರಾಜನಿಗೆ ಕೊಡಬೇಕು; ರಾಜನು ಅವರನ್ನು ಚೆನ್ನಾಗಿ ರಕ್ಷಿಸಬೇಕು ಎಂಬುದೇ ಆ ಕೊಡುಕೊಳ್ಳುವ ವ್ಯವಹಾರ. ಈ ಪರಸ್ಪರ ವ್ಯವಹಾರವಾದರೂ ಒಂದು ವಿಶಿಷ್ಟ ಕ್ರಮವನ್ನು ಅನುಸರಿಸಿದ್ದಿತಲ್ಲದೆ ಮನಬಂದಂತೆ ಬದಲಾಗುತ್ತಿದ್ದಿಲ್ಲ. ಕರಗಳನ್ನು ಪ್ರಭುತ್ವಕ್ಕೆ ಸಲ್ಲಿಸುವದು ಪ್ರಜೆಗಳ ಸ್ವಯಂಪ್ರೇರಿತ ಕರ್ತವ್ಯವಾಗಿದ್ದಂತೆ ಪ್ರಭುತ್ವಕ್ಕೆ ಒಪ್ಪಿಸಿದ ಕರ್ತವ್ಯಪರಿಪಾಲನೆಯನ್ನು ತೃಪ್ತಿಕರವಾಗಿ ನಿರ್ವಹಿಸುವದನ್ನೇ ಆ ಕರಾಕರಣೆಯನ್ನು ಮಾಡುವ ರಾಜನ ಹಕ್ಕು ಅವಲಂಬಿಸಿತ್ತೆಂಬುದನ್ನು ಮರೆಯಲಾಗದು.

### ಕರತೆರಿಗೆ-ಪ್ರಜೆಗಳ ಅಧಿಕಾರ

ಪ್ರಜೆಗಳು ಕೊಟ್ಟ ಶುಲ್ಕಗಳೇ ಮೊದಲಾದವುಗಳ ವಿನಿಯೋಗವು ಅವರ ಹಿತಕ್ಕಾಗಿಯೇ ಆಗಬೇಕೆಂಬ ಬಗೆಗೆ ರಾಜರಿಗೆ ಕೊಡಲಾದ ಆದೇಶಗಳನ್ನು ನೋಡಿದರೆ ಪ್ರಜಾಪೀಡಕರಾದ ನಿರಂಕುಶ ಪ್ರಭುಗಳಿಗೆ ಕರಗಳನ್ನು ಕೊಡದಿರುವ ಅಧಿಕಾರವು ಪ್ರಜೆಗಳಿಗಿದ್ದಿತೆಂಬ ಮಾತು ಅಪ್ರತ್ಯಕ್ಷವಾಗಿ ಗೊತ್ತಾಗಬಲ್ಲದು. "ಧರ್ಮ್ಯಂ ಶುಲ್ಕಂ ಅವಹಾರಯೇತ್" ಮತ್ತು "ಕಾಲೇ ಚಾಸ್ಯ ವ್ಯಯಂ ಕುರ್ಯಾತ್ ತ್ರಿವರ್ಗಪ್ರತಿಪತ್ತಯೇ" ಎಂಬ ನಿರ್ದೇಶಗಳಿಂದ ಈ ಮಾತು ನಿಚ್ಚಳವಾಗುತ್ತದೆ. ಅಲ್ಲದೆ ಅರಸನಿಗೆ ಕೊಡುತ್ತಿದ್ದ ಈ ಶುಲ್ಕವು ಪ್ರಜೆಗಳನ್ನು ಪರಿಪಾಲಿಸುವ ಆತನ ಸೇವೆಗಾಗಿ ಕೊಡಲಾಗುತ್ತಿದ್ದ ವೇತನವೆಂದು ಮಹಾಭಾರತದಲ್ಲಿ ಹೇಳಿದ್ದುದರಿಂದ ಪ್ರಜೆಗಳಿಂದ ಕರತೆರಿಗೆಗಳನ್ನು ಪಡೆಯಬೇಕಾದರೆ ಅರಸನು ತನ್ನ ಕರ್ತವ್ಯವನ್ನು ಸರಿಯಾಗಿ ಮಾಡಬೇಕಾಗುತ್ತಿದ್ದಿತೆಂಬ ಅಂಶವು ವ್ಯಕ್ತವಾಗದಿರದು. ಪ್ರಜಾರಕ್ಷಣೆಯೆಂಬ ಶಬ್ದಸಮೂಹದ ಇಂಗಿತವು ಬಹಳ ವ್ಯಾಪಕವಾಗಿತ್ತೆಂಬ ವಿಷಯವೂ ಅನೇಕ ಸಂದರ್ಭಗಳಲ್ಲಿ ಕಂಡುಬಂದಿದೆ. ಅಂತರಿಕ ಸುರಕ್ಷಿತತೆ ಮತ್ತು ಜೀವನನಿರ್ವಾಹಕ್ಕೆ ಅಗತ್ಯವಾದ ಉದ್ಯೋಗಾದಿಗಳ ವ್ಯವಸ್ಥೆ ಹಾಗು ದಾರಿದ್ರ್ಯ ನಿವಾರಣೆ ಮೊದಲಾದವುಗಳನ್ನು ಕುರಿತು ರಾಜನು ಯೋಗ್ಯ ಉಪಾಯಗಳನ್ನು ಕಲ್ಪಿಸಬೇಕಾಗುತ್ತಿತ್ತು. ಅವು ಯಶಸ್ವಿಯಾದರೆ ಮಾತ್ರ ಪ್ರಜಾಪಾಲನೆಯಲ್ಲಿ ಅರಸನು ದಕ್ಷನಾಗಿರುವನೆಂದು ಆತನ ವಿಷಯದಲ್ಲಿ ಪ್ರೀತ್ಯಾದರಗಳು ಹೆಚ್ಚುತ್ತಿದ್ದವು. ಈ ಕರ್ತವ್ಯದಿಂದ ರಾಜನು ಚ್ಯುತನಾದರೆ ಆತನನ್ನು ಬಿಟ್ಟು ಬೇರೆ ಕಡೆಗೆ ಪ್ರಜೆಗಳು ಹೊರಟು ಹೋದರೂ ತಪ್ಪಲ್ಲೆಂದು ಶಾಂತಿಪರ್ವದಲ್ಲಿ ಹೇಳಿದೆ.

> ಷಡೇತಾನ್ ಪುರುಷೋ ಜಹ್ಯಾತ್ ಭಿನ್ನಾಂ
> ನಾವಮಿವಾರ್ಣವೇ
> ಅಪ್ರವಕ್ತಾರಂ ಆಚಾರ್ಯಂ
> ಅನಧೀಯಾನಮೃತ್ವಿಜಂ ॥
> ಅರಕ್ಷಿತಾರಂ ರಾಜಾನಂ
> ಭಾರ್ಯಾಂ ಚಾಪ್ರಿಯವಾದಿನೀಂ
> ಗ್ರಾಮಕಾಮಂ ಚ ಗೋಪಾಲಂ
> ವನಕಾಮಂ ಚ ನಾಪಿತಂ ॥

ಹಾಗೆಯೆ ಕೌಟಿಲ್ಯನು ಅರ್ಥಶಾಸ್ತ್ರದಲ್ಲಿ

> ದುರ್ಭಿಕ್ಷಸ್ತೇನಾಟವ್ಯುಪಘಾತೇಷು ಚ
> ಪೌರ-ಜಾನಪದಾನ್ ಉತ್ಸಾಹಯಂತಃ
> ಸತ್ತ್ರಿಣೋ ಬ್ರೂಯುಃ
> "ರಾಜಾನಮನುಗ್ರಹಂ ಯಾಚಾಮಹೇ ನಿರನುಗ್ರಹಾ ಪರತ್ರ ಗಚ್ಛಾಮಃ" ಇತಿ.

ಅಂದರೆ ಬರಗಾಲ, ಕಳ್ಳಕಾಕರ ಭಯ, ಅಡವಿಗಳ ನಾಶ ಮೊದಲಾದ ಸಂದರ್ಭಗಳಲ್ಲಿ ರಾಜನನ್ನು ಅನುಗ್ರಹಕ್ಕಾಗಿ ಬೇಡಿಕೊಳ್ಳಬೇಕು; ರಾಜನು ಅನುಗ್ರಹಿಸದಿದ್ದರೆ ಬೇರೆಡೆಗೆ ಹೊರಟು ಹೋಗುವಾ" ಎಂದು ಹೇಳಿದೆ. ಇದರಿಂದ ರಾಜನ ಮೇಲೆ ಪ್ರಜಾರಕ್ಷಣೆಯ ಹೊಣೆಯು ಎಷ್ಟಿತ್ತೆಂಬ ಸಂಗತಿಯು ಸುಸ್ಪಷ್ಟವಾಗುತ್ತದೆ.

ನಮ್ಮ ಪ್ರಾಚೀನ ಆರ್ಥಿಕ ಪುರೋಭಿವೃದ್ಧಿಯ ತತ್ವಗಳಲ್ಲಿ ಕೋಶಸಮೃದ್ಧಿಯ ಮಹತ್ವವನ್ನು ಚೆನ್ನಾಗಿ ವಿವರಿಸಲಾಗಿದೆ. ರಾಜ್ಯದ ಸಪ್ತಾಂಗ

ಗಳಲ್ಲಿ ಕೋಶವು ಒಂದಾಗಿದ್ದಿತು. ಅಂತೆಯೆ ಕೌಟಿಲ್ಯನು "ಕೋಶಪೂರ್ವಾಃ ಸರ್ವಾರಂಭಾಃ ತಸ್ಮಾತ್ ಕೋಶಂ ಪೂರ್ವಮವೇಕ್ಷೇತ" ಎಂದು ಉಪದೇಶಿಸಿದ್ದಾನೆ. ಹಾಗೆಯೆ ಆತನು ಕೋಶಹರಣದಲ್ಲಿ ನಾಲ್ವತ್ತು ಬಗೆಗಳುಂಟೆಂದು ಹೇಳಿದ್ದುದೂ ಗಮನಾರ್ಹವಾಗಿದೆಯಲ್ಲದೆ ಪ್ರಭುತ್ವದ ಹಣಕಾಸಿನ ಪರಿಸ್ಥಿತಿಯ ವಿಷಯವಾಗಿ ಆತನು ಎಷ್ಟು ದಕ್ಷನಾಗಿದ್ದನೆಂಬ ಅಂಶವು ಚೆನ್ನಾಗಿ ಹೊರಹೊಮ್ಮುತ್ತದೆ.

## ನೆಲಗಂದಾಯ

ರಾಜಕೋಶದ ವಿಚಾರವನ್ನು ಮಾಡುವಾಗ ನೆಲಗಂದಾಯದ ವಿಷಯವು ಅದರ ವೃದ್ಧಿಯ ಮುಖ್ಯಸಾಧನಗಳೆಂಬ ಅಂಶವನ್ನು ಪ್ರಾಚೀನ ಅರ್ಥಶಾಸ್ತ್ರಕೋವಿದರು ಚೆನ್ನಾಗಿ ಗಮನಿಸಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಕೃಷಿಯೋಗ್ಯವಾದ ಭೂಮಿ-ಸೀಮೆ, ತೋಟಪಟ್ಟಿ, ಜನಸಂಖ್ಯೆ, ಧನಸಂಖ್ಯೆ, ಮೊದಲಾದವುಗಳನ್ನು ಯೋಗ್ಯ ವಿವರಣೆಗಳೊಡನೆ ಇಟ್ಟುಕೊಳ್ಳುವದು ಸಮಾಹರ್ತನ ಕರ್ತವ್ಯವಾಗಿತ್ತು. ಇವುಗಳ ಆಧಾರದಿಂದ ರಾಜ್ಯದ ಕೋಶವನ್ನು ತುಂಬಲು ಬೇಕಾಗುವ ಕಂದಾಯಗಳನ್ನು ಸಂಗ್ರಹಿಸಲಾಗುತ್ತಿದ್ದಿತೆಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ.

ನೆಲಗಂದಾಯುವಲ್ಲದೆ ಕೋಶವೃದ್ಧಿಯ ಬೇರೆ ಸಾಧನಗಳೂ ಪ್ರಾಚೀನ ಅರ್ಥಶಾಸ್ತ್ರ ಗ್ರಂಥಗಳಲ್ಲಿ ಹೇಳಲ್ಪಟ್ಟವೆ. ಕೌಟಿಲ್ಯನು ಏಳು ಬಗೆಯ ಕಂದಾಯಗಳನ್ನು ಉಲ್ಲೇಖಿಸಿರುವನು. "ಸಮಾಹರ್ತಾ ದುರ್ಗಂ ರಾಷ್ಟ್ರಂ ಖನಿಂ ಸೇತುಂ ವನಂ ವ್ರಜಂ ವಣಿಕ್ಪಥಂ ಚಾವೇಕ್ಷೇತ" ಎಂದು ಹೇಳಿ "ಸೀತಾ ಭಾಗೋ ಬಲಿಃ ಕರೋ ವಣಿಕ್ ನದೀಪಾಲಸ್ತರೋನಾವಃ ಪಟ್ಟನಂ ವಿವೀತಂ ವರ್ತನೀ ರಜ್ಜುಶ್ಚೋರರಜ್ಜುಶ್ಚ ರಾಷ್ಟ್ರಂ" ರಾಜನಿಗೆ ನೇರವಾಗಿ ಭೂಮಿಯಿಂದ ಸೇರತಕ್ಕ ಕರಾದಾಯಗಳ ವರ್ಣನೆಯನ್ನು ಕೊಟ್ಟಿರುವನು. ಹಾಗೆಯೆ ಅರಣ್ಯ, ಖನಿ, ಆನೆ, ಸಿಂಹ ಮೃಗ ಮೊದಲಾದವುಗಳಿಂದ ಬರತಕ್ಕ ಆದಾಯ ಇವೇ ಮೊದಲಾದವುಗಳಲ್ಲದೆ ಇನ್ನೂ ಅನೇಕ ಕರಾದಾಯುಗಳನ್ನು ಪ್ರಾಚೀನ ಶಾಸ್ತ್ರಕಾರರು ವಿವರಿಸಿರುವರು. ಪರದೇಶಗಳಿಂದ ಆಯಾತವಾಗುತ್ತಿದ್ದ ಸರಕುಗಳ ಮೇಲೆ ೧೦ಕ್ಕೆ ೧೦ರಷ್ಟು ಕರವನ್ನು ಹೇರಬೇಕೆಂದು ಕೌಟಿಲ್ಯನು ವಿಧಿಸಿದ್ದನು. ಕಾಳುಕಡಿ, ದನಕರು ಮತ್ತು ಕಬ್ಬಿಣ ಮೊದಲಾದ ಲೋಹವಲ್ಲದೆ ಶಸ್ತ್ರಾಸ್ತ್ರ, ಕವಚ, ಮತ್ತು ಸೈನಿಕ ವಾಹನಗಳನ್ನು ಆಯಾತ ಶುಲ್ಕದಿಂದ ಕೌಟಿಲ್ಯನು ವಿಮುಕ್ತಗೊಳಿಸಿದ್ದನೆಂಬ ಅಂಶವು ಲಕ್ಷಿಸತಕ್ಕುದಾಗಿದೆ. ಹಾಗೆಯೆ ಅವನು ಈ ಸರಕುಗಳನ್ನು ನಿರ್ಯಾತಮಾಡಕೂಡದೆಂದು ವಿಧಿಸಿದ ವಿಷಯವೂ ಗಮನಿಸತಕ್ಕ ಅಂಶವಾಗಿದೆ.

ಪ್ರಾಚೀನ ಕರಾಕರಣ ಪದ್ಧತಿಯ ಯೋಜನೆಗಳನ್ನು ಕೂಲಂಕಷವಾಗಿ ವಿಮರ್ಶಿಸಿದರೆ ಅವುಗಳಲ್ಲಡಗಿದ ಸಾಮಾನ್ಯ ತತ್ವಗಳ ಸ್ವರೂಪವು ಕೆಲಮಟ್ಟಿಗೆ ಗೊತ್ತಾಗಬಲ್ಲದು. ಪ್ರಜೆಗಳಿಂದ ಕರತೆರಿಗೆಗಳನ್ನು ಹೇಗೆ ತೆಗೆದುಕೊಳ್ಳಬೇಕೆಂಬುದನ್ನು ಸರಸವಾದ ಉಪಮೆಗಳನ್ನು ಕೊಟ್ಟು ಹೇಳುವದು ಪ್ರಾಚೀನರ ಒಂದು ಸಂಪ್ರದಾಯವಾಗಿದೆ. ಅವುಗಳಲ್ಲಿ ಕೌಟಿಲ್ಯನು-

ಪಕ್ವಂ ಪಕ್ವಮಿವಾರಾಮಾತ್
ಫಲಂ ರಾಜ್ಯಾದವಾಪ್ನುಯಾತ್
ಆತ್ಮಚ್ಛೇದ ಭಯಾದಾಮಂ
ವರ್ಜಯೇತ್ ಕೋಪಕಾರಕಮ್ ॥

ಎಂದು ಹೇಳಿದ್ದಾನೆ.

## ಕರ ಹೇರುವ ವಿಧಾನ

ಕರಗಳನ್ನು ಹೇರುವದಕ್ಕಿಂತ ಮುಂಚೆ ಪ್ರಜೆಗಳ ಆದಾಯ ಸಾಧನಸಂಪತ್ತು ಬೆಳೆಯುವಂತೆ ಅರಸನು ನೋಡಿಕೊಳ್ಳತಕ್ಕದ್ದೆಂದು ವಿಧಿಸಲಾಗಿದ್ದಿತು. ದೇಶಕಾಲಗಳನ್ನು ಪರಾಮರ್ಶಿಸಿ ಕರತೆರಿಗೆಗಳನ್ನು ತೆಗೆದುಕೊಳ್ಳಬೇಕೆಂದು ಆದೇಶವಿದ್ದಿತು.

ನ ಚಾಸ್ಥಾನೇ ನ ಚಾಕಾಲೇ
ಕರಾಂಸ್ತೇಭ್ಯೋ ನಿಪಾತಯೇತ್
ಅನುಪೂರ್ವೇಣ ಸಾಂತ್ವೇನ
ಯಥಾಕಾಲಂ ಯಥಾವಿಧಿ ॥

ಎಂದು ಮಹಾಭಾರತದಲ್ಲಿ ಹೇಳಿದೆ. ಅಲ್ಲದೆ ಕರವನ್ನು ಕೊಡತಕ್ಕವನಿಗೆ ಕರದ ಪ್ರಮಾಣ, ಸ್ಪಷ್ಟವಾಗಿ ಕೊಡತಕ್ಕ ಹಣ, ಕೊಡಬೇಕಾದ ವಿಧಾನ ಮೊದಲಾದವುಗಳು ಚೆನ್ನಾಗಿ ತಿಳಿಯುವಂತಿರಬೇಕೆಂದು ಹೇಳಲಾಗಿದೆ. ಹಾಗೆ ಕರತೆರಿಗೆಗಳನ್ನು ಸಂಗ್ರಹಿಸುವಲ್ಲಿಯೂ ಮಿತವ್ಯಯದ ಬಗೆಗೆ ದಕ್ಷತೆಯನ್ನು ವಹಿಸಬೇಕೆಂದು ವಿಧಿಸಲಾಗಿದೆ. ಅದರಂತೆಯೆ ವ್ಯಕ್ತಿಯ ಶಕ್ತಿಯನ್ನು ಅಂದರೆ ಕರ ಕೊಡುವ ಶಕ್ತಿಯನ್ನು ಲಕ್ಷಿಸಿ ಕರವನ್ನು ತೆಗೆದುಕೊಳ್ಳಬೇಕೆಂದು ಹೇಳಿದ ಮಾತು ಮಹತ್ವದ್ದಾಗಿದೆ. ಮನುಸ್ಮೃತಿಯಲ್ಲಿ ಹೇಳಿದಂತೆ ಕರಕೊಡುವವನ ಯೋಗಕ್ಷೇಮವನ್ನು ಚೆನ್ನಾಗಿ ಲಕ್ಷಿಸಬೇಕೆಂಬುದು ಮುಖ್ಯ. ಒಂದೇ ವಸ್ತುವಿನ ಮೇಲೆ ಎರಡೆರಡು ಸಲ ಕರಭಾರವು ಬೀಳದಂತೆ ನೋಡಿಕೊಳ್ಳತಕ್ಕದ್ದೆಂದು,

ಪಸ್ತುಜಾತಸ್ಯ ಏಕವಾರಂ
ಶುಲ್ಕಂ ಗ್ರಾಹ್ಯಂ ಪ್ರಯತ್ನತಃ ।
ಕಚ್ಚಿನ್ನೈವಾಸಕೃತ್ ಶುಲ್ಕಂ
ಗ್ರಾಹ್ಯಂ ನೃಪೈಶ್ಚಲಾತ್ ॥

ವಿದೇಶ ವ್ಯಾಪಾರಕ್ಕೆ ಉತ್ತೇಜನವು ದೊರೆಯುದಂತಾಗುತ್ತಿದ್ದರೆ ವಿದೇಶದಿಂದ ಬಂದ ವ್ಯಾಪಾರಿಯಿಂದ ಪಡೆದ ಶುಲ್ಕದಲ್ಲಿ ಕೆಲಮಟ್ಟಿಗೆ ಸವಲತ್ತನ್ನು ಕೊಡಲು ಅಡ್ಡಿಯಿಲ್ಲೆಂದು ಪ್ರಾಚೀನ ಅರ್ಥಶಾಸ್ತ್ರಜ್ಞರು ಸೂಚಿಸಿದ್ದುದನ್ನು ಮರೆಯುವಂತಿಲ್ಲ. ಕೊನೆಯದಾಗಿ ದುಡಿಯಲು ಯೋಗ್ಯನಾದ ಪ್ರತಿಯೊಬ್ಬ ಪ್ರಜೆಯಿಂದಲೂ ಬೇರೆ ಬೇರೆ ರೀತಿಯಿಂದ ರಾಜಸೇವೆಯನ್ನು ಮಾಡಿಸಿಕೊಂಡು ಅವನಿಂದ ಒಂದು ಬಗೆಯ ಶುಲ್ಕವನ್ನು ಪ್ರಭುತ್ವದ ಕೋಶಕ್ಕೆ ತುಂಬಿಕೊಳ್ಳಬಹುದೆಂದು ಪ್ರಾಚೀನರ ಮತವಾಗಿದ್ದಿತು. ಇದನ್ನು ನೋಡಿದರೆ ಇಂದಿನಂತೆ ಕರವನ್ನು ಕೊಡತಕ್ಕ ಯೋಗ್ಯತೆಯು ಕೇವಲ ಧನವನ್ನಾಗಲಿ ಆದಾಯವನ್ನಾಗಲಿ ಅವಲಂಬಿಸಿರದೆ ಆತನಲ್ಲಿದ್ದ ಸುಪ್ತ ಯೋಗ್ಯತೆಯನ್ನೂ ಅವಲಂಬಿಸಿದ್ದಿತೆಂಬ ಮಾತ್ರ ಚೆನ್ನಾಗಿ ಗೊತ್ತಾಗುತ್ತದೆ. ಆದುದರಿಂದಲೇ ಅಂತಹರಿಂದ ಬಿಟ್ಟಿಬೇಗಾರಿಗಳನ್ನು ಮಾಡಿಸಿಕೊಂಡು ಅಪ್ರತ್ಯಕ್ಷವಾಗಿ ಕೋಶಕ್ಕೆ ಅವರ ಉಪಯೋಗವನ್ನು ಪಡೆಯುತ್ತಿದ್ದರೆಂದು ಹೇಳಿದರೆ ತಪ್ಪಾಗಲಾರದು.

# ಕರ್ನಾಟಕದ ಜನಪದಕಲೆ

ಲೇಖಕರು : ಡಾ|| ಬಿ. ಎಸ್. ಗದ್ದಗಿಮಠ ಎಂ. ಎ. ಪಿಎಚ್. ಡಿ.
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ



ಬೇಲೂರ ಶಿಲಾಬಾಲಿಕೆ

ಕರ್ನಾಟಕದ ಜನಪದಕಲೆಗಳು ಬಹು ವಿಶಿಷ್ಟವಾದದ್ದವೂ ಉಜ್ವಲ ಪರಂಪರೆಯುಳ್ಳವೂ ಆಗಿರುವವೆಂಬುದು ಸರ್ವಶ್ರುತವಿದೆ. ಈ ಲೇಖನದಲ್ಲಿ ಅವುಗಳ ವಿವಿಧ ಮುಖಗಳನ್ನು ಲೇಖಕರು ಸೋದಾಹರಣವಾಗಿ ನಿರೂಪಿಸಿರುವದನ್ನು ಕಾಣಬಹುದು.

## ಪ್ರಾಚೀನ ಕರ್ನಾಟಕದಲ್ಲಿ

ಜಗತ್ತುತ್ಪತ್ತಿಯಾದಂದಿನಿಂದಲೂ ಬಯಲು (ಆಕಾಶ) ನಾದಭೂತವಾದುದು (The Music of Spheres). ನಾದದ ಕೇಂದ್ರ ಜೀವ ಹೃದಯಮಂಡಲ. ಆದುದರಿಂದ ನಾದವು ರಸ ಪ್ರಪಂಚದ ಕಲಾಜೀವಾಳ. ಅತಿ ಪ್ರಾಚೀನ ಕಾಲದಿಂದಲೂ ಜನಾಂಗದಲ್ಲಿ ಕಲೆಯು ಮಾನವನ ನಿನಾದ. ಈ ನಾದವು ಅವನ ಎಲ್ಲ ಹಾವ-ಭಾವ ಭಂಗಿಗಳ ನೆಲೆ, ಕಾಲಮಾನದಲ್ಲಿ ಮಾನವನ ಪ್ರಗತಿಯಂತೆ ಈ ಹಾವ-ಭಾವ-ಭಂಗಿಗಳು ವಿವಿಧವಾಗಿ ಕಲೆಯಲ್ಲಿ ಮುದ್ರಿತವಾಗಿವೆ. ಅಂತೆಯೇ ವಿವಿಧ ಕಲೆಗಳು ಮಾನವ ಜೀವನ ಸಂಸ್ಕೃತಿಯ ಕಡಿನೆಳಲಾಗಿ ನಿಂತಿವೆ. ಜನಾಂಗ, ನಾಗರಿಕತೆ, ಸಂಸ್ಕೃತಿ ಇವು ಮೂರು ಒಂದನ್ನೊಂದು ಕೂಡಿಕೊಂಡು ಹೋಗುವಂತಹವು. ಇವೆಲ್ಲವುಗಳ ಕಾರಣಪುರುಷನು-ಮಾನವನು. ಮಾನವ ನಿಪುಣತೆಯು ಕೃತಿಯೊಡನೆ ಅವನ ಕಲಾದರ್ಶನವು. ಈ ಕಲೆಯೇ ಅವನ ಸಂಸ್ಕೃತಿದರ್ಶನವು. ವಿವಿಧ ಜನಾಂಗಗಳಲ್ಲಿ ಕಲೋತ್ಪತ್ತಿಯು ಭಿನ್ನಭಿನ್ನವಾಗಿದೆ ಎಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಭರತಖಂಡದಲ್ಲಿ ಭಕ್ತಿಯು ದೇವಭಾವದೊಂದಿಗೆ ಕಲೋತ್ಪತ್ತಿಯಾಯಿತೆಂದು ಭರತಖಂಡದಲ್ಲಿಯ ವಿವಿಧ ಕಲೆಗಳಿಂದ ವಿದಿತವಾಗುವುದು.

ಶಿಲಾಯುಗ (Stone Age) ದಿಂದ ವಿಜ್ಞಾನಯುಗ (Age of Science) ದ ವರೆಗೆ ಕನ್ನಡ ಜನಪದದಲ್ಲಿ ಜನಜೀವನ ಸಂಸ್ಕೃತಿಯನ್ನು ಹೇಳುವ ಕಲಾಭಿರಾಶಿಯು ಶಿಲಾಯುಗದಿಂದ ಪ್ರಾರಂಭವಾಗಿ ಮಾನವಪ್ರಗತಿಯೊಡನೆ ಯುಗಯುಗದಲ್ಲಿ ಮಾರ್ಪಾಟಾಗಿ ಇಂದಿನ ಲಲಿತ ಕಲಾಭಿರಾಶಿಯಾಗಿ ನಿಂತಿದೆ. ಶಿಲಾಯುಗದ ಮಾನವನ ಮೂಲ ಬೇಡಿಕೆಗಳೆಂದರೆ—ಹೊಟ್ಟೆ, ಬಟ್ಟೆ, ಚಾಟು (Shelter). ಅವನು ಹೊಟ್ಟೆಗಾಗಿ ಬೇಟೆಯಾಡುತ್ತಿದ್ದ; ಬಟ್ಟೆಗಾಗಿ ಎಲೆ ತೊಗಟೆ ತೊಗಲುಗಳನ್ನು ಬೇಕೆನಿಸಿದಾಗ ಹೊದ್ದುಕೊಳ್ಳುತ್ತಿದ್ದ; ಚಾಟಗಾಗಿ ಗಿಡ-ಪಡಿ-ಹೊದರುಗಳನ್ನು ಸೇರುತ್ತಿದ್ದ. ಅವನ ಅಂದಿನ ಕಲೆಗಳು ಅವನ ಮೂರು ಮೂಲ ಬೇಡಿಕೆಗಳಿಗೆ ಸಂಬಂಧಿಸಿದುವುಗಳಾಗಿದ್ದುವು. ಬೇಟೆಯ ಹತೋಟಿಗಾಗಿ, ಬಟ್ಟೆಯ ಹೊದಿಕೆಗಾಗಿ, ಚಾಟನಲ್ಲಿರುವುದಕ್ಕಾಗಿ ವಿಚಾರವಿನಮಯ ನಡೆದು ಭಾವ ಮಾಡಲು ಅವನು ಹಲಕೆಲವು ಉಪಕರಣಗಳನ್ನು ಅನುಕೂಲ ಮಾಡಿಕೊಂಡ. ಈ ಉಪಕರಣಗಳು—ಕೈಕೊಡಲಿ ಕೊಡಗತ್ತಿ (ಚೂರಿ), ಕೋತ, ಸಲಕಿ ಮೊದಲಾದವು—ಕೇವಲ ಅವನ ಶಸ್ತ್ರಾಸ್ತ್ರಗಳಾಗಿದ್ದು ಅವನು ಅವುಗಳನ್ನು ಬಿರಸು ಬೆಣಚುಗಲ್ಲಿನಲ್ಲಿ ಒಡೆದು, ತಿಕ್ಕಿ ಮಸೆದು ತನಗೆ ಬೇಕಾದಂತೆ ಮಾಡಿಕೊಂಡಿದ್ದಾನೆ. ಕರ್ನಾಟಕದಲ್ಲಿ ಇಂತಹ ಉಪಕರಣಗಳು ಬಾದಾಮಿ ತಾಲೂಕಿನಲ್ಲಿ ಮಲಪ್ರಭಾ ನದಿಯ ತೀರದಲ್ಲಿಯ ಖ್ಯಾಡ, ಥಾಣಕ-ಶಿರೂರ ಹಾಗೂ ಘಟಪ್ರಭಾ ತೀರದ ಬಾಗಲಕೋಟೆಯಲ್ಲಿಯೂ ಸಂಶೋಧಕರ ನಿದರ್ಶನಕ್ಕೆ ಬಂದಿವೆ. ಭರತ ಖಂಡದ ಕೆಲವು ಭಾಗಗಳಲ್ಲಿ ದೊರೆತ ಶಿಲಾಯುಗದ ಉಪಕರಣಗಳ ಹೋಲಿಕೆಯು ಇವುಗಳಲ್ಲಿಯೂ ಇರುವುದರಿಂದ ಇವು ಸುಮಾರು ಎರಡು ಲಕ್ಷ ವರುಷದುವು ಇರಬಹುದೆಂದು ಸಂಶೋಧಕರು ಒಮ್ಮತದಿಂದ ತರ್ಕಿಸಿ ಒಪ್ಪಿಕೊಂಡಿದ್ದಾರೆ. ಈ ಉಪಕರಣಗಳಲ್ಲಿ ನಾವು ಶಿಲಾಯುಗದ ಮಾನವನ ಕಲಾಪ್ರದರ್ಶನವನ್ನು ಸೂಕ್ಷ್ಮವಾಗಿ ಕಾಣಬಹುದಾಗಿದೆ. ಅಪರಿಪಕ್ವ ಕಲಾನೈಪುಣ್ಯದ ಈ ಉಪಕರಣಗಳು ಅಂದಗೇಡಿಯಾಗಿದ್ದರೂ ಇಂದಿನ ಇಂತಹ ಹಸ್ತಾಯುಧ ಉಪಕರಣಗಳ ಆದಿರೂಪವೆಂದೇ ಒಪ್ಪಬೇಕಾಗುವುದು. ಇಂತಹ ಆಯುಧಗಳನ್ನು ಅವನು ತನ್ನ ನಿತ್ಯಜೀವನದಲ್ಲಿ ಬಳಸಿಕೊಂಡಿರಬೇಕು. ಅವು ಅವನ ಕಲಾಜೀವನವನ್ನು ಸಂಶೋಧಕರಿಗೆ ತಿಳಿಸದಿರವು. ಉತ್ತರ ಕರ್ನಾಟಕದಲ್ಲಿ ದೊರೆತ ಇಂತಹ ಅನೇಕ ಉಪಕರಣಗಳು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶಿಸಲ್ಪಟ್ಟಿವೆ.

ಮಾನವಜೀವನಪ್ರಗತಿಯು ಅವ್ಯಾಹತವಾಗಿ ಸಾಗಲು ಶಿಲಾಯುಗವು ಕಣ್ಮರೆಯಾಗಿ ಲೋಹಯುಗ (Iron Age)ವು ತಲೆದೋರುವ ಮುನ್ನ ಮಾನವನಿಗೆ ಆಗಲೇ ಅನೇಕ ಲೋಹಗಳ ಪರಿಚಯವಾಗಿ ನಿತ್ಯದ ವ್ಯವಹಾರದಲ್ಲಿ ಅವುಗಳ ಬಳಕೆ ಹಾಗೂ ಉಪಯೋಗವನ್ನು ಅವನು ಮಾಡುತ್ತ ಬಂದಿದ್ದಾನೆ. ಶಿಲಾಯುಧಗಳ ಬದಲು ಲೋಹಾಯುಧಗಳು ಬಂದುವು. ಅವನ ನಾಗರಿಕತೆಯು ಬೆಳೆಯುವುದರಲ್ಲಿಯೇ ಶಿಲ್ಪಕಲೆಯು ಆಗಲೇ ಅಂಕುರಿಸಿತ್ತು. ಇದನ್ನು ಕರ್ನಾಟಕದಲ್ಲಿ ದೊರೆತ ಲೋಹಯುಗದ ಹಲಕೆಲವು ಮೂರ್ತಿಶಿಲ್ಪಗಳಲ್ಲಿ ಕಾಣಬಹುದಾಗಿದೆ. ಬಾಗಲಕೋಟೆಯ ಸಮೀಪದಲ್ಲಿರುವ ಹೆರಕಲ್ಲಿನಲ್ಲಿ ದೊರೆತ ಗಡಿಗೆ ಮಡಿಕೆಗಳ ತುಂಡುಗಳಿಂದಲೂ ಇಟ್ಟಿಗೆಯಂತೆ ಸುಟ್ಟ ಗಜಸಿಂಹಗಳ ಒಡಕ ಮೂರ್ತಿಗಳ ತುಣುಕುಗಳಿಂದಲೂ ಲೋಹಯುಗದ ಮಾನವನ ಕಲೆಗಳನ್ನು ಗುರುತಿಸಬಹುದು. ಇವುಗಳ ಕಾಲವು ಕ್ರಿ. ಪೂ. ೧೦೦೦ ವರುಷವೆಂದು ಸಂಶೋಧಕರು ಒಪ್ಪಿಕೊಂಡಿದ್ದಾರೆ. ಉತ್ತರ ಕರ್ನಾಟಕದಲ್ಲಿ ದೊರೆತ ಲೋಹಯುಗದ ಇಂತಹ ಅನೇಕ ತುಣುಕು-ತುಂಡುಗಳು ಕಲಾದೃಷ್ಟಿಯಿಂದ ಮಹತ್ವದುವೆಂದು ಕಂಡುಬಂದುದರಿಂದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ವಸ್ತು-ಸಂಗ್ರಹಾಲಯದಲ್ಲಿ ಪ್ರದರ್ಶಿಸಲ್ಪಟ್ಟಿವೆ.

## ಶಿಲ್ಪಕಲೆ

ಜನಪದಕಲೆಯಲ್ಲಿ ಶಿಲ್ಪಕಲೆಯು ಒಂದು ಅತಿ ದಿವ್ಯ ಕಲೆ. ಅದು ವಾಸ್ತುಶಿಲ್ಪ ಮೂರ್ತಿಶಿಲ್ಪಗಳೆರಡನ್ನು ಒಳಗೊಂಡಿದೆ. ಲೋಹಯುಗವು ಮುಗಿಯುವ ಮುನ್ನ ವಿಜ್ಞಾನ ಯುಗವು ಆಗಲೇ ಕಾಲಿಡುವಾಗ ಕರ್ನಾಟಕದಲ್ಲಿ ಶಿಲ್ಪಕಲೆಯು ದಿವ್ಯಸ್ವರೂಪ ತಾಳಿತ್ತೆಂಬುದು ಈಗ ಕರ್ನಾಟಕದಲ್ಲಿ ಉಪಲಬ್ಧವಿರುವ ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳಿಂದ ತಿಳಿದುಬರುವುದು. ಭರತಖಂಡದಲ್ಲಿ ಶಿಲ್ಪಕಲೆಯು ಮಾನವನ ದೇವಧರ್ಮಭಾವದಿಂದ ಉದಯವಾದರೂ ಆ ದೇವದೇವಾದಿಗಳನ್ನು ಅವನು ಧರ್ಮಬದ್ಧವಾಗಿ ತನ್ನತನದಲ್ಲಿ ಶಿಲೆಯಲ್ಲಿ ನಿಲ್ಲಿಸಿ ತನ್ನ ಕಲಾಭಿವೃದ್ಧಿಯನ್ನು ಪಡೆದಿದ್ದಾನೆ. ಅದುದರಿಂದ ಇಂದಿನವರೆಗೂ ಶಿಲ್ಪಕಲೆಯು ಮಾನವನಜೀವನಚಿತ್ರಪೂರಕವಾಗಿ ನಿಂತಿದೆ. ಅದರಲ್ಲಿ ಅವನ ಧರ್ಮವನ್ನು ಓದ

ಬಹುದು; ಸಂಸ್ಕೃತಿಯನ್ನು ಅರಿಯಬಹುದು; ಪ್ರಪಂಚದ ನಿತ್ಯದ ವ್ಯವಹಾರವನ್ನು ಸೂಕ್ಷ್ಮವಾಗಿ ತುಂಬ ಕಾಣಬಹುದು. ಈ ಕಲೆಯು ಕಾಲಕಾಲದಲ್ಲಿ ರಾಜಾಶ್ರಯ ಹೊಂದಿ ತನ್ನ ಉನ್ನತ ಶಿಖರವೇರಿದುದು ಇತಿಹಾಸದಿಂದಲೂ ಅಳಿದುಳಿದ ಶಿಲ್ಪಕಲಾವಶೇಷಗಳಿಂದಲೂ ವಿದಿತವಾಗುವುದು.

ಕರ್ನಾಟಕದಲ್ಲಿ ಚಾಲುಕ್ಯ-ಕದಂಬ-ರಾಷ್ಟ್ರಕೂಟ-ಕಲಚೂರ್ಯ-ಹೊಯ್ಸಳ-ವಿಜಯನಗರಾದಿ ಅರಸರ ನೆರವಿನಲ್ಲಿ ಈ ಕಲೆಯು ಸಮೃದ್ಧವಾಗಿ ಅತ್ಯುನ್ನತ ಶಿಖರವನ್ನೇರಿತು; ಅಲ್ಲದೆ ಭರತಖಂಡದ ಶಿಲ್ಪಕಲೆಯಲ್ಲಿ ತನ್ನದೊಂದು ವೈಶಿಷ್ಟ್ಯಪೂರಕ ಸ್ಥಾನವನ್ನು ಪಡೆದುಕೊಂಡಿದೆ. ಪಡಿಗಿಡಗಳ ಹೊದರು ಗುಡಿಸಲಾದುದು, ಗುಡಿಸಲವು ಮನೆಯಾಗಿ ಮಂದಿರಕಿಳಿದುದು, ವಾಸ್ತುಶಿಲ್ಪದಲ್ಲಿ ಮಾನವನು ಗಳಿಸಿದ ಒಂದು ಕಲಾಚಾತುರ್ಯವಾದರೆ ಮಠ ದೇಗುಲಗಳ ಶಿಲ್ಪಕಲೆಯು ಧರ್ಮ-ಪುರಾಣ-ಶಾಸ್ತ್ರಾದಿಗಳ ಸಾರಸಂಗ್ರಹದ ಪೂಜ್ಯ ಕಲಾರಾಶಿಯಾಗಿದೆ. ಕರ್ನಾಟಕದಲ್ಲಿ ಈ ಕಲೆಗೆ ಚಾಲುಕ್ಯರ ಕಾಲವೇ ಸುವರ್ಣಯುಗವೆಂದು ಹೇಳಬಹುದು. ಈ ಕಲೆಯ ಅಭಿವೃದ್ಧಿಯನ್ನು ನಾವು ಚಾಲುಕ್ಯರ ಪ್ರಾಚೀನ ಕಾಲದ ರಾಜಧಾನಿಗಳಾದ ಐಹೊಳೆ ಬಾದಾಮಿ ಹಾಗೂ ಪಟ್ಟದಕಲ್ಲಿನಲ್ಲಿ ಕಾಣಬಹುದಾಗಿದೆ. ಐಹೊಳೆಯು ಭರತಖಂಡದಲ್ಲಿ ಪ್ರಾಚೀನ ಶಿಲ್ಪಕಲಾಶಾಸ್ತ್ರದ ಒಂದು ಮಹಾಕೇಂದ್ರವಲ್ಲದೆ ದಕ್ಷಿಣ ಭರತಖಂಡದ ಶಿಲ್ಪಕಲಾಜನ್ಮಭೂಮಿಯೆಂದು ಒಪ್ಪಿಕೊಂಡಿದ್ದಾರೆ.

ಐಹೊಳೆಯ ಎಪ್ಪತ್ತು ಭವ್ಯ ಶಿಲಾಶಿಲ್ಪಕೃತಿಗಳಲ್ಲಿ ಲಾಡಖಾನ ದೇಗುಲವು ಕ್ರಿ. ಶ. ಐದನೆಯ ಶತಮಾನದ ಮಧ್ಯಕಾಲ (೪೫) ದ್ದು ಎಂದೂ ಜೈನರ 'ಮೇಗುಟಿ' ದೇಗುಲದಲ್ಲಿಯ ಶಿಲಾಶಾಸನದ ಮೇಲಿಂದ (ಕ್ರಿ. ಶ ೬೩೪) ಅದು ಐಹೊಳೆಯ ಗುಂಪಿನಲ್ಲಿಯ ಕೊನೆಯ ದೇಗುಲವೆಂದೂ ಅವುಗಳಲ್ಲಿಯ ಲಿಪಿ-ಶಿಲ್ಪಕಲಾದಿಗಳ ಮೇಲಿಂದ ಸ್ಪಷ್ಟವಾಗುವುದು. ಲಾಡಖಾನದೇಗುಲದಲ್ಲಿ ಪ್ರಾರಂಭವಾದ ಶಿಲ್ಪಕಲೆಯು ಕಟ್ಟಡಕಟ್ಟು, ತೊಲೆ ಕಂಬಬೋದಿಗೆ ಮೊದಲಾದವುಗಳಲ್ಲಿಯ ಕುಸುರಿನ ಹಸ್ತಕೌಶಲ್ಯದ ಸೂಕ್ಷ್ಮ ಲಲಿತ ಲಾಲಿತ್ಯದೊಡನೆ ಪ್ರಗತಿಪರವಾಗಿ ಸಾಗಿದುದನ್ನು ಹುಚ್ಚಮಲ್ಲಿ ಹಾಗೂ ಮೇಗುಟಿ ದೇಗುಲಗಳಲ್ಲಿ ಕಾಣಬಹುದು. ಲಾಡಖಾನ, ಹುಚ್ಚಮಲ್ಲಿ ಹಾಗೂ ಮೇಗುಟಿ ಹೆಸರುಗಳು ಆ ದೇಗುಲಗಳ ದೇವದೇವತೆಗಳ ಹೆಸರುಗಳಲ್ಲ. ಲಾಡಖಾನ ಹಾಗೂ ಹುಚ್ಚಮಲ್ಲಿ ಈ ಹೆಸರುಗಳು ವೈಯಕ್ತಿಕವಾಗಿದ್ದು ಈ ದೇಗುಲಗಳಿಗೆ ಅವುಗಳ ಸಂಬಂಧವು ಆ ಭಾಗದ ಸ್ಥಾನಿಕ ಕಥೆಗಳಿಂದ ವಿದಿತವಾಗುವುದು. 'ಮೇಗುಟಿ' ಯು 'ಮ್ಯಾಗಿನ ಗಡಿ', ಅಥವಾ 'ಮ್ಯಾಗುಡಿ' ಯಾಗಿದೆ.

ಚಾಲುಕ್ಯರು ಐಹೊಳೆಯನ್ನು ಬಿಟ್ಟು ಬಾದಾಮಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ಮೇಲೆ ಶಿಲ್ಪಕಲಾ ನಿರೂಪವು ಬೇರೊಂದು ರೂಪ ತಾಳಿದುದು ಬಾದಾಮಿಯ ಕಲ್ಮನೆ (Caves) ಗಳಿಂದ ವಿದಿತವಾಗುವದು. ದೇಗುಲ ರಚನೆಯು ಬಿಡಿಕೋಲುಗಲ್ಲುಗಳ ಕೆತ್ತನೆಯ ಕುಸುರಿನಿಂದ ಈಡುಗಲ್ಲಿನ ಕಲ್ಮನೆಗಳಲ್ಲಿ ಅರಳಿ ತನ್ನ ಪ್ರಭಾವವನ್ನು ತೋರಿದೆ ಇಲ್ಲಿ! ಬಾದಾಮಿಯ ಹೊಂಡದ ದಕ್ಷಿಣಕ್ಕಿರುವ ರಣಮಂಡಲ ಕೋಟೆಯ ಭವ್ಯ ಕಳಗಲ್ಲುಗಳಲ್ಲಿ ಕೊರೆದ ನಾಲ್ಕು ಕಲ್ಮನೆಗಳಲ್ಲಿ ಬೌದ್ಧರ ವಿಹಾರಗಳನ್ನು ಕಲ್ಲಲ್ಲಿ ಕೊರೆಯುವ (Rock-cut Architecture) ಅನುಕರಣ ಕಂಡುಬಂದರೂ ಅವುಗಳಲ್ಲಿಯ ಶಿಲಾಶಿಲ್ಪವು ಕನ್ನಡಿಗರ ಹಸ್ತಕಲಾ ಕೌಶಲ್ಯವಾಗಿದೆ. ಮೇಣದಲ್ಲಿ ಸುಲಭವಾಗಿ 'ಸುಳುಹೊಳು'ವುಗಳನ್ನು ಕುಸುರಿಟ್ಟು ಕೆತ್ತುವಂತೆ ಈಡುಗಲ್ಲುಗಳಲ್ಲಿ ಕೊರೆದಿರುವುದರಿಂದ ಅವು ಕರ್ನಾಟಕದಲ್ಲಿ 'ಮೇಣಬಸ್ತಿ' ಗಳೆಂದು ಹೆಸರಾಂತವಾಗಿವೆ. ಒಂದನೆಯ ಹಾಗೂ ಮೂರನೆಯ ಕಲ್ಮನೆಗಳ ಛತ್ತಿನಲ್ಲಿಯೂ ಗೋಡೆಗಳಲ್ಲಿಯೂ ವಿವಿಧ ಬಣ್ಣಗಳನ್ನು ಉಪಯೋಗಿಸಿ ಚಿತ್ರಗಳನ್ನು ಬರೆದಿದ್ದಾರೆ.

ಬಾದಾಮಿಯ ಸಮೀಪದಲ್ಲಿರುವ ಮಹಾಕೂಟ ಕ್ಷೇತ್ರದ ದೇಗುಲಗಳು ದ್ರಾವಿಡ ದೇಗುಲ ರಚನೆಯ ಮೂಲ ಆಗರವಾಗಿವೆ. ಇವುಗಳ ಕಾಲಮಾನವು ಕ್ರಿ. ಶ. ೬ನೆಯ ಶತಮಾನಕ್ಕಿಂತ ಮೊದಲು ಎಂಬುದು ಅಲ್ಲಿ ದೊರೆಯುವ ಶಿಲಾಶಾಸನಗಳಲ್ಲಿ ಬರುವುದು. (Indian Antiquary XIX P. 16). ಈ ದೇಗುಲಗಳ ತಳಕಟ್ಟು, ಛತ್ತ-ಚೌಕಟ್ಟು, ಶಿಖರಾದಿಗಳ ಮೇಲಿಂದ ಇವು ದ್ರಾವಿಡ ದೇಗುಲ ರಚನಾ ಪದ್ಧತಿಬದ್ಧವಾಗಿವೆ ಎಂದು ವಿದಿತವಾಗುವುದು. ಬಾದಾಮಿಯ ಉತ್ತರಕ್ಕಿರುವ 'ಬಾವನ್ನಭಂಡಿ' ಕೋಟೆಯ ಮೇಲಿರುವ ಸ್ವಲ್ಪ ಬದಲಾದ ಇದೇ ಪಾಯಕಟ್ಟಿನ 'ಮಾಳಗಿತ್ತಿ ಶಿವಾಲಯ'ವು ಕಲ್ಮನೆಗಳ ಅಂತರ್ಗತ ಶಿಲ್ಪಕಲಾ ಸೌಂದರ್ಯವನ್ನು ಬಹಿರ್ಗತ ಮಾಡಲು ಮೊದಲು ಮಾಡಿದಂತೆ ಅದರಲ್ಲಿಯ ಶಿಲಾಕೃತಿಯಿಂದ ಸ್ಪಷ್ಟವಾಗುವುದು.

ಚಾಲುಕ್ಯರು ಬಾದಾಮಿಯ ಪೂರ್ವಕ್ಕೆ ೧೦ ಮೈಲಿನ ಮೇಲಿರುವ ಪಟ್ಟದಕಲ್ಲಿಗೆ ತಮ್ಮ ರಾಜಧಾನಿಯನ್ನು ಸ್ಥಳಾಂತರಿಸಲು ಚಾಲುಕ್ಯರ ಶಿಲಾಶಿಲ್ಪಕಲಾ ವೈಭವವು ಪಟ್ಟದಕಲ್ಲಿನಲ್ಲಿ ಅತ್ಯುನ್ನತ ಶಿಖರವನ್ನೇರಿತು. ಉತ್ತರ-ದಕ್ಷಿಣ (ಆರ್ಯ-ದ್ರಾವಿಡ) ಶಿಲ್ಪಕಲಾ ವೈವಿಧ್ಯವನ್ನು ಇಲ್ಲಿಯ ದೇಗುಲಗಳಲ್ಲಿ ಕಾಣಬಹುದಾಗಿದೆ. ಈ ದೇಗುಲಗಳಲ್ಲಿ ಪಾಪನಾಥ ಹಾಗೂ ವಿರುಪಾಕ್ಷ ದೇಗುಲಗಳು ಮುಖ್ಯವಾದುವುಗಳು. ಪಾಪನಾಥ ದೇಗುಲದಲ್ಲಿ ಉತ್ತರ (Indo Aryan) ಶಿಲ್ಪಕಲೆಯು ಬೆಳೆಸಲ್ಪಟ್ಟದೆ.



ಬೇಲೂರು ಚೆನ್ನಕೇಶವ ದೇವಾಲಯ

ವಿರುಪಾಕ್ಷ ದೇಗುಲವು ಈ ಎಲ್ಲ ದೇಗುಲಗಳ ಶಿಲಾಶಿಲ್ಪಕಲಾನಿಧಿಯು. ದಕ್ಷಿಣ (Dravidian Style) ಶಿಲ್ಪಕಲೆಯ ಪ್ರಕಾರ ಅದನ್ನು ಕಟ್ಟಿದ್ದಾರೆ. ಅದರಲ್ಲಿಯ ಎರಡು ಶಿಲಾಶಾಸನಗಳಲ್ಲಿ ಚಾಲುಕ್ಯ ಚಕ್ರವರ್ತಿಯಾದ ಎರಡನೆಯ ವಿಕ್ರಮಾದಿತ್ಯನ ಹೆಂಡತಿಯ ಸಲುವಾಗಿ ಕಟ್ಟಿಸಿದ ಉಲ್ಲೇಖ ಬರುವುದು. ಈ ದೇಗುಲದ ತುಂಬಿದ ಶಿಲ್ಪಕಲಾ ಸೌಂದರ್ಯವು ಅತಿ ಪ್ರೇಕ್ಷಣೀಯವಾಗಿದೆ. ಅಲಂಕಾರಭರಿತವಾದ ಮೂರ್ತಿಶಿಲ್ಪವು ಅತಿ ಶ್ರೇಷ್ಠವಾಗಿದೆ. ಕೆತ್ತನೆಯ ಕುಸುರು ಕಲೌಘವಾಗಿ ಈ ಶಿಲ್ಪಕಲೆಯಲ್ಲಿ ಅಚ್ಚುಕಟ್ಟಾಗಿ ಸೂಸಾಡುತಿದೆ. ಈ ಕಲಾ ರಾಶಿಯನ್ನು ಕಂಡು ತೃಪ್ತಿಯಾದ ಪರದೇಶಪ್ರವಾಸಿಗರು ತಮ್ಮ ಉಲ್ಲೇಖಗಳಲ್ಲಿ ಉದ್ಗಾರ ತೆಗೆದಿದ್ದಾರೆ. ಹೀಗೆ ಬೆಳೆದುಬಂದ ಈ ಚಾಲುಕ್ಯ ಶಿಲ್ಪಕಲೆಯು ಮುಂದೆ ಕರ್ನಾಟಕದ ತುಂಬೆಲ್ಲ ಹಬ್ಬಿ ಕುಕ್ಕನೂರು, ಲಕ್ಕುಂಡಿ, ಗದಗ, ಡಂಬಳ ಮೊದಲಾದ ಸ್ಥಳಗಳಲ್ಲಿಯ ದೇಗುಲಗಳಿಗೆ ಮೂಲಾಧಾರವಾದಂತೆ ಕಾಣುತ್ತದೆ. ಈ ಎಲ್ಲ ದೇಗುಲಗಳಲ್ಲಿ ಕಟ್ಟಡಕಟ್ಟು, ಶಿಲ್ಪಕಲೆ ಮೊದಲಾದ ಕಲೆಗಳ ಅಭಿವೃದ್ಧಿಯನ್ನು ಶಾಸ್ತ್ರೋಕ್ತವಾಗಿ ಕಾಣಬಹುದು. ಈ ಕಲೆಯು ಆರ್ಯ ದ್ರಾವಿಡ ಶಿಲ್ಪಕಲಾ ಸಂಗಮವಾಗಿ ಹೊಯ್ಸಳ ಹಾಗೂ ವಿಜಯನಗರ ರಾಜ್ಯಗಳಲ್ಲಿ ಮೈದೋರಿದೆ. ಇಂತು ಅಭಿವೃದ್ಧಿಯಾದ ಈ ಕಲಾ ರಾಶಿಯು ಕನ್ನಡಶಿಲ್ಪಕಲೆಯ ದ್ಯೋತಕವಾಗಿ ನಿಂತಿದೆ.

## ಜನತೆಯಿಂದ ಗುಣಗಾನ

ಈ ಎಲ್ಲ ಶಿಲ್ಪಕಲಾ ರಾಶಿಯನ್ನು ಕಣ್ಣಾರೆಕಂಡು ಚಕಿತರಾದ ಹಳ್ಳಿಗರು ಇವುಗಳನ್ನು ಕೊರೆದು, ಕೆತ್ತಿ ತಗೆದ ಶಿಲಾಶಿಲ್ಪಿಗೆ ತಮ್ಮ ಹಾಡುಗಳಲ್ಲಿ ಕೃತಜ್ಞತೆಗಳನ್ನು ಅರ್ಪಿಸಿದ್ದಾರೆ. ಈ ಶಿಲ್ಪಿಯೇ ವಡ್ಡಯ್ಯನೆಂದೂ ವಿಶ್ವಕರ್ಮ (ಬ್ರಹ್ಮ)ನ ಹಿರಿಯ ಮಗನೆಂದೂ ಅವನ ಶಿಲಾಶಿಲ್ಪಕಲಾ ರಾಶಿಯನ್ನು ಗುಣಗಾನ ಮಾಡಿದ್ದಾರೆ.

ಕೋಲು ಕೋಲನ್ನಿರೆ ।
ವಡ್ಡಯ್ನ ಕೈಗಲ್ಲ ಕಲೆಯನ್ನಿರೆ ॥ ಪ ॥
ಬನ್ಮ ತನ್ನ ಹಿರಿಮಗ ವಡ್ಡಯ್ಗೆ
ಕಲ್ಕೆಲಸ ಕಲಿಸಿ ಭೂಮಿಗೆ ಕಳುಹಿದ ॥ ಕೋ ॥
ಲಿಂಗವ ೦ಟಿಪ ವೆಂಕಯನೇದು
ಪಾದಗಟ್ಟೆ ಬಸವನ ಕೊರೆದ ॥ ಕೋ ॥
ಹಾವಿನ್ಹಾಸಿಗೆಹರಿಯನು ಕೊರೆದ
ನಾಭಿಕಮಲದ ಬ್ರಹ್ಮನ ಕೆತ್ತಿದ ॥ ಕೋ ॥

ಎಂಬ ಹಾಡು ಜನಪದದಲ್ಲಿ ಕೇಳಬರುವುದು.

ವಡ್ಡಯ್ಯನಂತೆ ಬಡಿಗ, ಅಕ್ಕಸಾಲಿಗ, ಕಂಬಾರ, ಕುಂಬಾರ, ಜಿನಗಾರ ಮೊದಲಾದವರು ಕಲಾವಂತರಿರುವರು, ಶಿಲ್ಪಿಯಂತೆ ಅವರೂ ತಮ್ಮ ಕಲೆಗಳನ್ನು ಮನೆಮಂದಿರ, ಮಠದೇಗುಲಗಳಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಪ್ರದರ್ಶಿಸುತ್ತ ಬಂದಿದ್ದಾರೆ. ಬಡಿಗ ಕಂಬಾರರ ಕೈವಾ

ವಿಜಾಪುರ
ಇಬ್ರಾಹಿಮು ರೋಜಾದ
ನೋಟ

ನಮ್ಮ ವೈಭವ ತಾರೆ
ಮಿನುಮಿನುಗಿ ಮಸವಾರೆ,
ಮಾಯವಾಯಿತು ಕೊನೆಗೆ
ಮೋಡದಲ್ಲಿ.

— ದಿನಕರ ದೇಸಾಯಿ



ಚಿತ್ರ: ಡಿ. ಎನ್. ಕೊನೇರಿ




DESIGN AND TRADE MARK REGISTERED

ಪಿ.
ವಿ.
ಎಸ್.

ಬೀಡಿಗಳು

೧೯೦೬ರ



ಪ್ರಾರಂಭ
ದಿಂದಲೂ
ಶ್ರೇಷ್ಠ ತರಗತಿಯ
ಉಚ್ಚ
ಪರಂಪರೆಯನ್ನು
ಕಾಯ್ದುಕೊಂಡು
ಬಂದಿವೆ



ದೀಪಾವಳಿಯು
ನಿಮ್ಮೆಲ್ಲರಿಗೂ
ಸುಖಪ್ರದವಾಗಲಿ

*Manufacturers:*

# P. V. S. BEEDIES (Private) LTD.,

## MANGALORE - 3

*Grams:* PUTHUBIDIS

*Phone:* 83, 83A
Residence: 593

*P. O. Box No.* 7
Kodialbail

ದವು ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪಗಳಲ್ಲಿ ಮಹತ್ವವಾದುದು. ಶಿಲಾಶಿಲ್ಪಿಯು ಅಲಂಕಾರ ಭರಿತವಾದ ಶಿಲಾಸ್ತಂಭದಂತೆ ಕುಸುರು ಗಗ್ಗರಿ ಕೋದುನೆ ಕೊಂಬೆಗಳುಳ್ಳ ಮುಂಡಿಗೆಯ ಕಂಬತೊಲೆಗಳು ಹಲಕೆಲವು ದೇಗುಲಗಳಲ್ಲಿಯೂ ಮಂದಿರ ಮಹಾಲುಗಳಲ್ಲಿಯೂ ನಿದರ್ಶನಕ್ಕೆ ಬೀಳುವವು. ಕಟ್ಟಿಗೆಯ ತೊಲೆ ಕಂಬಗಳ ಉಪಯೋಗವು ಕರ್ನಾಟಕದಲ್ಲಿ ಅತಿ ಪ್ರಾಚೀನ ಕಾಲದಿಂದ ಬಂದಿದ್ದರೂ ಅವುಗಳ ಅವಶೇಷಗಳು ಹೆಚ್ಚಾಗಿ ದೊರೆಯುವುದಿಲ್ಲ. ಬಹುತರವಾಗಿ ಈ ವಿಧಾನವು ಕರ್ನಾಟಕದೊಳಗೆ ಹೊಯ್ಸಳರ ಕಾಲದಲ್ಲಿ ಪ್ರಚುರವಾಗಿ ಆದಿಲಶಾಹಿ, ವಿಜಯನಗರ ಹಾಗೂ ಕೆಳದಿ ಅರಸರ ಕಾಲದಲ್ಲಿ ಅಲ್ಲಲ್ಲಿ ಬಳಸಲ್ಪಟ್ಟಿದುದನ್ನು ಹಲಕೆಲವು ಹಾಳ ಅವಶೇಷಗಳಿಂದ ಅರಿಯಬಹುದಾಗಿದೆ. ಜನಪರಂಪರೆಯಿಂದ ತಿಳಿದುಬರುವ ಕೆಳದಿಯ ಅರಸರು ಕಟ್ಟಿಸಿದ ಉಳಿವಿಯ ವಿರಕ್ತ ಮಠದ ಕಟ್ಟಿಗೆಯ ಕಂಬಗಳಲ್ಲಿಯೂ (ಈಗ ಚೆನ್ನಬಸವೇಶ್ವರ ದೇಗುಲದಲ್ಲಿ ಉಪಯೋಗಿಸಿಕೊಂಡಿದ್ದಾರೆ.) ಅಮ್ಮಿನಭಾವಿಯ ಕಲ್ಮೇಶ್ವರ ದೇಗುಲದಲ್ಲಿಯ ಕಟ್ಟಿಗೆಯ ಕಂಬಗಳಲ್ಲಿಯೂ ಬಡಿಗನ ಕಲಾಚಾತುರ್ಯವನ್ನು ಕಾಣಬಹುದಾಗಿದೆ. ವಿಜಾಪುರ ಆದಿಲಶಾಹಿಗಳ ಆಸಾರ ಮಹಾಲು ಮೊದಲಾದ ಮಂದಿರಗಳಲ್ಲಿ ಕಟ್ಟಿಗೆಯ ಕಂಬ ಚೌಕಟ್ಟು ಮೊದಲಾದವುಗಳು ಹೇರಳವಾಗಿ ಬಳಸಲ್ಪಟ್ಟಿವೆ. ಅನೇಕ ದೇವಸ್ಥಾನಗಳ ಉತ್ಸವಗಳ ರಥಗಳು ಬಡಿಗನ ಕಲಾಕೃತಿಗಳಾಗಿವೆ. ಅವುಗಳಲ್ಲಿ ಹಂಪಿ, ಸಂಗಮ, ಬಾದಾಮಿ ಬನಶಂಕರಿ ಮೊದಲಾದ ತೇರುಗಳು ಕಲಾಸೌಂದರ್ಯಭರಿತವಾಗಿವೆ. ಅಲ್ಲದೆ ಹಲಕೆಲವು ಗ್ರಾಮ ದೇವತೆಗಳ ವಿಗ್ರಹಗಳನ್ನು ಪರೀಕ್ಷಿಸಿದಾಗ ಅವು ಹನ್ನೊಂದನೆಯ ಶತಮಾನದವು ಇರಬಹುದೆಂದು ಶಂಕಿಸಲಾಗಿದೆ. ಹನ್ನೆರಡನೆಯ ಶತಮಾನದ ಆರಂಭದಲ್ಲಿ ಆಗಿಹೋದ ಬ್ರಹ್ಮಶಿವ ಕವಿಯು 'ಸಮಯ ಪರೀಕ್ಷೆ' ಎಂಬ ಕಾವ್ಯದಲ್ಲಿ ಹೇಳಿದ ಮಾರಿ, ಮಸಣಿ, ಚಾಮುಂಡಿ, ಮಾಳಚಿ, ಬೀರ, ಮೈಲಾರ ಹಾಗೂ ವಚನಕಾರರು ಹೇಳಿದ ಮಾಯಿ, ಹುಲಗವ್ವ, ದುರಗವ್ವ, ದ್ಯಾಮವ್ವ ಮೊದಲಾದ ಗ್ರಾಮದೇವತೆಗಳೂ ಜನಪದದಲ್ಲಿ ಕಂಡುಬರುವ ರಾವುತರಾಯ ಮೊದಲಾದ ವಿಗ್ರಹಗಳೂ ಕಟ್ಟಿಗೆಯವು ಆಗಿವೆ. ಇವುಗಳ ಪ್ರಭಾವವು ಇಂದಿಗೂ ಜನಪದದಲ್ಲಿರುವುದು. ಈ ವಿಗ್ರಹಗಳ ಪೂಜೆಯು ಅನೇಕ ಶತಮಾನಗಳಿಂದ ಕರ್ನಾಟಕದಲ್ಲಿ ಬಂದುದರಿಂದ ಅನೇಕ ಗ್ರಾಮದೇವತೆಗಳ ವಿಗ್ರಹಗಳು ನಾಲ್ಕೈದು ನೂರು ವರುಷದವು ಇರುವುವೆಂಬುದು ಆಯಾ ದೇಗುಲಗಳ ಇತಿಹಾಸದಿಂದಲೂ ಪರಂಪರೆಯಿಂದಲೂ ತಿಳಿದುಬರುವದು. ಅನೇಕ ದುರುಗ ಮುರಗಿಯರಲ್ಲಿ ಪರಂಪರೆಯಿಂದ ಬಂದ ನಾಲ್ಕೈದು ನೂರು ವರುಷಗಳ ವಿಗ್ರಹಗಳನ್ನು ಪ್ರತ್ಯಕ್ಷ ಪರೀಕ್ಷಿಸಿ ಮನಗಾಣಬಹುದು. ಇಂತಹ ವಿಗ್ರಹಗಳನ್ನು ಕೆತ್ತಿ ಜನತೆಯ ಪ್ರೀತಿಗೆ ಪಾತ್ರವಾದ ಬಡಿಗನನ್ನು ಜನಪದವು ಹೇಗೆ ಮರೆಯ ಬೇಕು? ಅಂತೆಯೇ ಅವನ ಗುಣಗಾನ ಮಾಡಿ ಕೋಲೆತ್ತಿ ಕಣ್ಣ ಕೆಣಿಸಿ ಕುಣಿದಿದೆ.

ಕೋಲನಾಡ ಮನನಿ ಕೋಲನಾಡ ॥ ಪ ॥

ಹರ್ಮ್ಯಾಗೇಳುತಲಿದ್ದನ ಬಡಿಗ್ಯಾ
ಹಾಲು ಬಾನಗಳುಂಡಾನ ಬಡಿಗ್ಯಾ ॥ ಕೋ ॥ ೧ ॥

ಅತ್ತಿ ಮರವೊಂದ್ದು ಡಿಕ್ಯಾನ ಬಡಿಗ್ಯಾ
ಬಡ್ಡಿ ಕೊರೆದು ಬಸವಣ್ಣನ ಮಾಡಿದ ॥ ಕೋ ॥ ೨ ॥

ಬಡ್ಡಿ ಕೊರೆದು ಬಸವಣ್ಣನ ಮಾಡಿದ
ನಡವ ಕೊಯ್ದು ನಾಗಮ್ಮನ ಮಾಡಿದ ॥ ಕೋ ॥ ೩ ॥

ಬೇರು ಕೊಯ್ದು ಜರಿ ಮುಲ್ಲನ ಮಾಡಿದ
ಕೊಂಬಿ ಕೊಯ್ದು ಮೂರು ಜಂತ್ರವ ಮಾಡಿದ ॥ ಕೋ ॥ ೪ ॥

ಎಂಬ ಕೋಲುಪದವನ್ನು ತುಂಬಿದ ಬೆಳದಿಂಗಳದಲ್ಲಿ ಜನ ಹಾಡಿ ನಲಿಯುತ್ತಿರುವುದು.

## ಚಿತ್ರಕಲೆ

ಅಂದವಾಗಿ ಕೆತ್ತಿದ ಈ ವಿಗ್ರಹಗಳನ್ನು ನಾನಾ ತರದ ಬಣ್ಣಗಳಿಂದ ಚೆಂದ ಮಾಡಿದ್ದಾನೆ ಚಿತ್ರಗಾರ! ಈ ಚಿತ್ರಗಾರನ ಚಿತ್ರಕಲೆಯು ಕರ್ನಾಟಕ ಅರಸರ ಅರಮನೆಗಳಲ್ಲಿಯೂ ಮಠದೇಗುಲಗಳಲ್ಲಿಯೂ ಅತಿ ಪ್ರಾಚೀನ ಕಾಲದಿಂದಲೂ ಪ್ರದರ್ಶಿಸಲ್ಪಟ್ಟಿದೆ. ಕರ್ನಾಟಕ ಪ್ರಾಕ್ತನ ಮಾನವನ ಚಿತ್ರಕಲೆಯನ್ನು ನಾವು ಜಮಖಂಡಿಯ ಸಮೀಪದ 'ಗೊಂಬಿಯಗುಡ್ಡ'ದಲ್ಲಿಯೂ ಯಲ್ಲಟ್ಟಿಯ 'ನೂರಾಳ್ ಪಡಿ'ಯಲ್ಲಿಯೂ ಬಾದಾಮಿಯ 'ಸಿಡ್ಲಪಡಿ' ಯಲ್ಲಿಯೂ ಕಾಣಬಹುದಾಗಿದೆ. ಅವುಗಳಲ್ಲಿ ನಾವು ಅಭಿನವ ಚಿತ್ರಕಲಾ



ಹಂಪೆಯಲ್ಲಿ ಗಜಶಾಲೆ

ದರ್ಶನವನ್ನು ಕಾಣುವುದು ಪರಿಕಷ್ಟ! ಈ ಚಿತ್ರಕಲೆಯು ಪರಿಪಕ್ವ ಲಲಿತಕಲೆಯಾಗಿ ಕರ್ನಾಟಕದಲ್ಲಿ ಮೊದಲು ಪ್ರದರ್ಶಿಸಲ್ಪಟ್ಟಿದುದು ಬಾದಾಮಿಯ ಚಾಲುಕ್ಯರ ಒಂದನೆಯ ಹಾಗೂ ಮೂರನೆಯ ಕಲ್ಮನೆಗಳಲ್ಲಿ. ಇವುಗಳಲ್ಲಿ ಚಿತ್ರಗಾರನು ವಿವಿಧ ಬಣ್ಣಗಳನ್ನು ಸುಂದರವಾಗಿ ಬಳಸಿಕೊಂಡು ಅನೇಕ ಪೌರಾಣಿಕ ಮೊದಲಾದ ಸನ್ನಿವೇಶಗಳನ್ನು ಮನೋಮೋಹಕವಾಗಿ ಚಿತ್ರಿಸಿದ್ದಾನೆ. ಮೂರನೆಯ ಕಲ್ಮನೆಯು ಕೇವಲ ವೈಷ್ಣವ ದೇಗುಲವಿದ್ದರೂ ಅದರಲ್ಲಿ ಹರಿಹರನ ಮೂರ್ತಿಯಿದೆ. ಗರ್ಭದೇಗುಲದ ಸಭಾಮಂಟಪದ ಭಿತ್ತಿಗಳಲ್ಲಿಯೂ ಛತ್ತಿನಲ್ಲಿಯೂ ಅನೇಕ ಬಣ್ಣಬಣ್ಣದ ಚಿತ್ರಗಳಿವೆ. ಅದರಲ್ಲಿ 'ಶಿವ ಪಾರ್ವತಿ ಪರಿಣಯ'ದ ಚಿತ್ರವು ಅತಿ ಮಹತ್ವದ್ದಾಗಿದೆ. ಚಿತ್ರದ ಗೊಂಬೆಗಳ ವೇಷ ಭೂಷಣಗಳು ಚಾಲುಕ್ಯರ ಕಾಲದ ಕರ್ನಾಟಕದ ವೇಷಭೂಷಣಗಳನ್ನು ಸೂಚಿಸದಿರಲಾರವು.

ವಿಜಾಪುರ ಆದಿಲಶಾಹಿಗಳು ಕಲಾಪ್ರೇಮಿಗಳು ಅವರ ಆಶ್ರಯದಲ್ಲಿ ಸಂಗೀತ, ಚಿತ್ರಕಲೆ, ಕಾವ್ಯ ಮೊದಲಾದ ಲಲಿತಕಲೆಗಳು ಒಂದು ವಿಶಿಷ್ಟ ಸ್ಥಾನವನ್ನು ಪಡೆದುವು.

ಎರಡನೆಯ ಇಬ್ರಾಹಿಮ ಆದಿಲಶಹ (೧೫೮೦-೧೬೨೭) ನ ಕಾಲದಲ್ಲಿ ಈ ಚಿತ್ರಕಲೆಯು ಉನ್ನತ ಶಿಖರವನ್ನೇರಿತು. ಇವನ ಕಾಲದಲ್ಲಿ 'ಮುಲ್ಲಾ

ಫರುಕ್ ಹಸನ್ ಶಿರಾಝಿ' ಎಂಬ ಸುಪ್ರಸಿದ್ಧ ಚಿತ್ರಗಾರನು ಆಗಿಹೋದನು. ಇವನು ಚಿತ್ರಿಸಿದ ಅನೇಕ ಚಿತ್ರಗಳು ಹೈದರಾಬಾದ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶಿಸಲ್ಪಟ್ಟಿವೆ. ಇವನು ಒಂದು ಚಿತ್ರದಲ್ಲಿ ಕಲಾಪ್ರೇಮಿಯಾದ, ಪರಿವಾರದೊಂದಿಗೆ ಹೂದೋಟದಲ್ಲಿ ವಿರಾಜಮಾನನಾದ ಸುಲ್ತಾನ ಇಬ್ರಾಹಿಮ ಆದಿಲಶಹನನ್ನು ಚಿತ್ರಿಸಿದ್ದಾನೆ. ಇವನ ರಾಗಮಹಾಲಿನ ಚಿತ್ರಗಳು ಅತಿ ಸುಂದರ ಕಲಾಭರಿತವಾದವುಗಳು. ಅವುಗಳನ್ನು 'ಬಿಶಾಪ್ ಲ್ಯಾಂಡ' ನೆಂಬ ಪಾಶ್ಚಾತ್ಯನು ಸಂಗ್ರಹಿಸಿಕೊಂಡು 'ಬಾಡಲೀನ' ವಾಚನಾಲಯದಲ್ಲಿ ಇಟ್ಟಿರುವನೆಂದು ತಿಳಿದುಬರುವದು.

ಆದಿಲಶಾಹಿಗಳ ಪ್ರಾರಂಭದ ಚಿತ್ರಕಲೆಯಲ್ಲಿ ಪರ್ಶಿಯಾ ದೇಶದ ಚಿತ್ರಕಲಾ ಪ್ರಭಾವವಿದ್ದರೂ ಹಿಂದೂ ಧರ್ಮದ ದೇವದೇವತೆಗಳು ಅಲಂಕಾರ ಪೂರಕವಾಗಿ ಚಿತ್ರಿಸಲ್ಪಟ್ಟಿವೆ. ಹದಿನೇಳನೆಯ ಶತಮಾನದ ಪ್ರಾರಂಭದಲ್ಲಿ ಮೊಗಲ ಚಿತ್ರಕಲಾ ಪ್ರಭಾವವು ಹೆಚ್ಚಾಗಿ ಆದದ್ದು ಆದಿಲಶಾಹಿಗಳ ಕುಮ್ಮಟಗಿಯ ಕೆರೆಯೊಳಗಿನ ಜಲಕ್ರೀಡಾ ಮಂಟಪಗಳಲ್ಲಿಯ ಚಿತ್ರಗಳಲ್ಲಿ ನೋಡಬಹುದಾಗಿದೆ. ಮಹಮ್ಮದ ಆದಿಲಶಹನು ಆಸಾರ ಮಹಾಲದಲ್ಲಿ ಬರೆಸಿದ ಚಿತ್ರಗಳನ್ನು ಇಟಾಲಿಯ ಚಿತ್ರಗಾರನು ಬರೆದನೆಂದು ವಿಜಾಪುರ ಇತಿಹಾಸದಿಂದ ತಿಳಿದುಬರುವುದು. ಈ ಚಿತ್ರಗಳಲ್ಲಿ ಪರಿಣಯಗಳೂ ರಾಜಪರಿವಾರಗಳೂ ಯೋಧರ ಸವಾರಿಗಳೂ ಕಾಮೋಲ್ಲಾಸ ಮೊದಲಾದ ಕ್ರೀಡೆಗಳೂ ಚಿತ್ರಿತವಾಗಿವೆ.

ವಿಜಯನಗರದ ಅರಸರೂ ಚಿತ್ರಕಲಾಪ್ರೇಮಿಗಳಾಗಿದ್ದರೆಂಬುದಕ್ಕೆ ಹಂಪೆಯ ವಿರುಪಾಕ್ಷಲಿಂಗನ ದೇಗುಲದಲ್ಲಿಯ ಚಿತ್ರಕಲೆಯೇ ಬಲವಾದ ಸಾಕ್ಷಿ. ಅಲ್ಲದೆ ಕಿತ್ತೂರ ಅರಸರೂ ಸಿರಸಂಗಿ ದೇಸಾಯರೂ ಈ ಕಲೆಯನ್ನು ಪ್ರೋತ್ಸಾಹಿಸುತ್ತ ಬಂದುದು ಅಲ್ಲಲ್ಲಿ ಹರಕುಮುರುಕಾಗಿ ಉಳಿದ ಮಠ-ದೇಗುಲಗಳ ಭಿತ್ತಿ ಫಳಕುಗಳ ಚಿತ್ರಗಳಿಂದ ವಿದಿತವಾಗುವುದು. ಧಾರವಾಡ ಜಿಲ್ಲೆಯ ಉಪ್ಪಿನ ಬೆಟಗೇರಿಯ ಯಲ್ಲಮ್ಮನ ಗುಡಿಯಲ್ಲಿ ಕಿತ್ತೂರ ಅರಸರು ಬರೆಸಿದ ಕೆಲವು ಚಿತ್ರಗಳ ಅವಶೇಷಗಳನ್ನು ಕಾಣಬಹುದಾಗಿದೆ. ಸಿರಸಂಗಿ ದೇಸಾಯರು ತಮ್ಮ ಗುರುಮಠವಾದ ಅಮ್ಮಿನಭಾವಿ ಪಂಚಗ್ರಹಹಿರೇಮಠದಲ್ಲಿ ಬರೆಸಿದ ಅನೇಕ ಐತಿಹಾಸಿಕ ಹಾಗೂ ಪೌರಾಣಿಕ ಚಿತ್ರಗಳು ಈಗಲೂ ನೋಡಲಿಕ್ಕೆ ಸಿಗುತ್ತವೆ.



ಹಳೇಬೀಡು ದೇವಾಲಯ

## ಚಿತ್ರಗಾರರ ಗುಣಪ್ರಶಂಸೆ

ಹೀಗೆ ಚಿತ್ರಕಲೆಯು ಕರ್ನಾಟಕದಲ್ಲಿ ಅನೇಕ ಕುಲಜಾತಿಗಳ ಹಸ್ತಗತವಾಗಿದೆ. ಅವರೊಳಗೆ ಪಂಚಾಳರೂ ಜಿನಗಾರರೂ ಜನಪದದಲ್ಲಿ ಈ ಕಲಾಪ್ರದರ್ಶನವನ್ನು ಮಾಡುತ್ತ ಬಂದಿದ್ದಾರೆ. ಹೀಗೆ ಸೇವೆ ಸಲ್ಲಿಸಿದ ಈ ಚಿತ್ರಗಾರರನ್ನು ಜನತೆಯು ಅವರ ಕಲಾಸೌಂದರ್ಯಕ್ಕೆ ಬೆರಗಾಗಿ ಗುಣಗಾನ ಮಾಡಿ ತಮ್ಮ ಕೃತಜ್ಞತೆಗಳನ್ನು ಅರ್ಪಿಸಿದೆ.

ಚಿತ್ರಗಾರಣ್ಣಾ ।
ತುಂಬಿಸೂಸಲಿ ಚಿತ್ರದ ಪಟವ ॥ ಪ ॥
ಪಂಚಾಳರ ನಿಂಗೋಜಿ ಜಿನಗಾರ ನಾಗೋಜಿ
ಚಿತ್ರಬರೆದಾರ ಶಿವಲಿಂಗ ನಂದಿ । ಶಿವಹರನೆ ಬಲ್ಲ
ಚಿತ್ರಗಾರಣ್ಣಾ ।
ತುಂಬಿಸೂಸಲಿ ಚಿತ್ರದ ಪಟವ ॥ ೧ ॥

ಭಿತ್ತಿಭಿತ್ತಿಯ ಬಳಿದು ಸುತ್ತ ಶಿವಲೋಕ ಬರೆದ
ಉತ್ತಮರ ಮದುವಿಗೆ ಶಿವಬಂದ । ಶಿವಹರನೆಬಲ್ಲ
ಚಿತ್ರಗಾರಣ್ಣಾ ।
ತುಂಬಿಸೂಸಲಿ ಚಿತ್ರದ ಪಟವ ॥ ೨ ॥

ಕೈಲಾಸಮನಿಯಾಗ ಗಿರಿಜ್ಯಾನ ಮದುವ್ಯಾಗ
ಬಣಕಿ-ಬಳಕಲ್ಲ ಬಣ್ಣಬರೆದ । ಶಿವಹರನೆ ಬಲ್ಲ
ಚಿತ್ರಗಾರಣ್ಣಾ ।
ತುಂಬಿಸೂಸಲಿ ಚಿತ್ರದ ಪಟವ ॥ ೩ ॥

ಮ್ಯಾಣಬಸ್ಯಾಗ ಬರೆದ ಮೂನೆಗೌರಿಯ ಮದುವಿ
ಮಾನೋಜಿ ಕುಂಚ ಬಲುಚೆಂದ । ಶಿವಹರನೆ ಬಲ್ಲ
ಚಿತ್ರಗಾರಣ್ಣಾ ।
ತುಂಬಿಸೂಸಲಿ ಚಿತ್ರದ ಪಟವ ॥ ೪ ॥

ಹಂಪೀಯ ಗುಡಿಯಾಗ ಕೆಂಪೇಳು ಬಣ್ಣ ಬಳಿದು
ಸಂಪ ಮಾಮರಕ ಗಿಣಿ ಬರೆದ । ಶಿವಹರನೆ ಬಲ್ಲ
ಚಿತ್ರಗಾರಣ್ಣಾ ।
ತುಂಬಿ ಸೂಸಲಿ ಚಿತ್ರದ ಪಟವ ॥ ೫ ॥

ಸಿರಸಂಗಿ ಗುಡಿಯಾಗ ಇರಸೇಕ ಬಣ್ಣ ಬಳಿದು
ಕನಕೋಜಿ ಬರೆದ ಪಂಚಲಿಂಗ । ಶಿವಹರನೆಬಲ್ಲ
ಚಿತ್ರಗಾರಣ್ಣಾ ।
ತುಂಬಿ ಸೂಸಲಿ ಚಿತ್ರದ ಪಟವ ॥ ೬ ॥

ಹರಿಯ ಹಾವಿನ ಬರೆದ ಗಿರಿಯಲಿಂಗನ ಬರೆದ
ಓಂಕಾರ ಬರೆದ ಗುಡಿಗುಡಿಗೆ । ಶಿವಹರನೆ ಬಲ್ಲ
ಚಿತ್ರಗಾರಣ್ಣಾ ।
ತುಂಬಿ ಸೂಸಲಿ ಚಿತ್ರದ ಪಟವ ॥ ೭ ॥

ಎಂದು ಹಳ್ಳಿಗರು ಪೂರ್ವಕಾಲದ ಸುಪ್ರಸಿದ್ಧ ಚಿತ್ರಕಾರರಾದ ಪಂಚಾಳ ಲಿಂಗೋಜನನ್ನೂ ಜಿನಗಾರ ನಾಗೋಜನನ್ನೂ ಬಾದಾಮಿಯ ಕಲ್ಮನೆಯಲ್ಲಿ ಚಿತ್ರ ಬರೆದ ಮಾನೋಜನನ್ನೂ (ಅವನ 'ಕುಂಚ ಬಲು ಚೆಂದ' ವೆಂದು ಹೇಳಿದ್ದಾರೆ) ಸಿರಸಂಗಿಯ ಕನಕೋಜನನ್ನೂ ಹಾಡಿ ಅವರ ಹೆಸರುಗಳನ್ನು ಉಳಿಸಿ ಕನ್ನಡ ಜನಾಂಗಕ್ಕೆ ಮಹದುಪಕಾರಮಾಡಿದ್ದಾರೆ.

ಇದೇ ವರ್ಗಕ್ಕೆ ಸೇರಿದ ಬೋಗಾರ, ತಾಂಬಟಗಾರ, ಕಾಸಾರ, ಕಂಚುಗಾರ, ಅಕ್ಕಸಾಲಿಗ, ಗುಡಿಗಾರ, ಮೇದಾರ, ಉಪ್ಪಾರ, ಸಿಂಪಿಗ, ಬಳೆಗಾರ, ಕಾಜುಗಾರ ಮೊದಲಾದವರ ಕಲೆಯು ಅದಕ್ಕಾಗಿದೆ. ಪೂರ್ವಕಾಲದಲ್ಲಿ ಸಿರಸಂಗಿ, ಬೆಳಗಾವಿ ಮೊದಲಾದ ಸ್ಥಳಗಳಲ್ಲಿ ಹಿತ್ತಾಳಿ ಹಾಗೂ ಕಂಚಿನ ಎರಕದ ಮೂರ್ತಿಗಳೂ ಪಾತ್ರೆಗಳೂ ಪ್ರಸಿದ್ಧವಾಗಿದ್ದುವು. ಗೋಕಾವಿಯ ಕಟ್ಟಿಗೆಯ ಬಣ್ಣದ ಸಾಮಾನುಗಳು ಈಗಲೂ ಪ್ರಸಿದ್ಧವಾಗಿವೆ. ಗುಡಿಗಾರರ ಹಾಗೂ ಮಾಲಿಯವರ ಲಗ್ನಮಂಗಲ ಮಹೋತ್ಸವಕ್ಕೆ ಬೇಕಾಗುವ ಬಾಸಿಂಗ ದಂಡೆ ಮೊದಲಾದ ಕಲಾವಸ್ತುಗಳು ಶಿಲ್ಪಕಲೆಯ ಅಂಗವಾಗಿವೆ.

'ಮನೆಯಿಲ್ಲದವಗೆ ಮಾನವಿಲ್ಲ' ವೆಂಬ ಕನ್ನಡ ಗಾಣ್ಣುಡಿಯು ಕನ್ನಡಿಗರ ಜಗತನ ಹಾಗೂ ದಾಂಪತ್ಯದ ಮಹತ್ವವನ್ನುಸಾರುವುದಲ್ಲದೆ ಬೆಚ್ಚಗೆ ಮಾನವನು ನೆಮ್ಮದಿಯಾಗಿ ಒಂದೆಡೆ ಕೂಡಿಕೊಂಡು ಇರಲು ಅವಶ್ಯ ಬೇಕಾಗುವ ಚಾಟಿನ ಮಹತಿಯನ್ನು ಹೇಳದಿರದು. ಅವನು ಮನೆಯ ಮಾನವನ್ನು ಸಂಪಾದಿಸುವ ಮುನ್ನ ತನ್ನ ಮೈಯ ಮಾನವನ್ನು ಬಟ್ಟೆಯಿಂದ ಮುಚ್ಚಿಕೊಂಡಿದ್ದಾನೆ. ಅವನಿಗೆ ಬಟ್ಟೆ ದೊರೆತುದು ನೇಕಾರನಿಂದ. ನೇಕಾರನು ಇಂದು ಕರ್ನಾಟಕದಲ್ಲಿ ಒಬ್ಬ ಕಸಬುಗಾರ. ಆ ನೇಯುವ ಕಸಬಿನಿಂದಲೇ ಅವನು ತನ್ನ ಉಪಜೀವನವನ್ನು ಸಾಗಿಸುತ್ತ ಬಂದಿದ್ದಾನೆ. ಜೇಡರ ದಾಸಿಮಯ್ಯ, ನೇಗಿಯ ಆಮುಗಯ್ಯ ಮೊದಲಾದ ಶಿವಶರಣರ ಚರಿತ್ರೆಗಳು ಕನ್ನಡ ಜನಾಂಗಕ್ಕೆ ಪರಮಪೂಜ್ಯವಾಗಿವೆ. ಈ ಪರಮಪೂಜ್ಯರ ಪಾವನ ಜೀವನವನ್ನು ಹಳ್ಳಿಗರು ಹಾಡಿ, ಪಾವನವಾಗಲು ಮಾರ್ಗ ತೋರಿಸಿದ್ದಾರೆ.

ದಾಸಯ್ಯ ನೇದ ದೇವಂಗದ್ವಸ್ತರವ ॥ ಪ ॥
ಜಗದೀಶ ಸಂಗಯ್ಯ ತಾ ಬೇಡಿ ಬಂದ
ದಾಸಯ್ಯ ನೇದ ದೇವಂಗದ್ವಸ್ತರವ ॥ ಅ. ಪ ॥

ಹರಬ್ರಹ್ಮ ಕೃಷ್ಣಯ್ಯ ಪುಂಕೀಯ ಹೂಡಿ
ಹದಿನಾರು ಗಾವುದ ಎಳೆಗಳ ಕಟ್ಟಿ
ಲಾಕೇಶನೆಂಬು ಲಾಳೀಯ ತಿರುವಿ
ಭೂಮಿ ತೂಕದೊಂದ್ವಸ್ತರ ನೇದ ॥ ೧ ॥

ಅಡ್ಡಣಗಿ ಹರಿವಾಣ ಗಿಡ್ಡ ಮುಜ್ಜುರಿ ಸರ
ಏಕಂತ್ರ ಪಂಚಾರುತಿ ಕಡ್ಡೀಯ ಬತ್ತಿ
ಸಾಕ್ಷೀತ ನುಡಿವ ಶರಣರ ನೇದ
ಮಂದಿರಕ ಬರುವಂತ ಮಂದೀಯನೇದ ॥ ೨ ॥

ಎಂದು ಹಾಡಿ ಅವರಿಗೆ ತಮ್ಮ ಪೂಜ್ಯಭಕ್ತಿಯನ್ನು ಅರ್ಪಿಸಿದ್ದಾರೆ.

## ಸಂಗೀತ–ನಾಟಕ–ನೃತ್ಯ-ವಾದ್ಯಾದಿಗಳು

ಇಂದಿನ ಲಲಿತ ಕಲೆಗಳಲ್ಲಿ ಸಂಗೀತ, ನಾಟಕ, ನೃತ್ಯ, ವಾದ್ಯಾದಿಗಳಿಗೆ ಒಂದು ವಿಶಿಷ್ಟಸ್ಥಾನವಿದೆ. ಸಂಗೀತ, ನಾಟಕ, ನೃತ್ಯಾದಿಗಳಲ್ಲಿ ವಾದ್ಯವು ಸಂಗಜೋಡಣೆ (Orchestra) ಯಾಗಿ ಅತಿ ಪ್ರಾಚೀನ ಕಾಲದಿಂದಲೂ ಬಂದಿದೆ. ಹೊಟ್ಟೆ-ಬಟ್ಟೆ-ಚಾಟುಗಳ ಪ್ರಶ್ನೆ ಬಗೆದು ಸಂಪೂರ್ಣ ಸಮೃದ್ಧಿಯಾಗಿ ಗುಂಟಿಸೊಡನೆ ಮಾನವನು ಇರಹತ್ತಿದ ಮೇಲೆ ಅವನು ಮನೋರಂಜನ ಕಲೆಗಳಲ್ಲಿ ತೊಡಗಿರಬಹುದು. ಬಂತಿಲ್ಲದೆ ಹೊಟ್ಟೆತುಂಬಿ

ಆನಂದಭರಿತನಾದಾಗ ಗುಸುಗುಸು ಹಾಡಿ ಹೌಸು ಹುಮ್ಮಸ ತೋರಿಸಿರಬಹುದು; ಹಿಗ್ಗಿ ಕುಣಿದಾಗ ಹಸನ್ಮುಖಿಯಾಗಿ ಕುಣಿದಿರಬಹುದು; ಆವೇಶಭರಿತನಾದಾಗ ಪುಳಕಿತನಾಗಿ ಜನಾಂಗದ ಕಥಾಸಾರದೊಡನೆ ಅಭಿನಯಿಸಿ ಜನಾಂಗಕ್ಕೆ ಮಾರ್ಗದರ್ಶನ ಮಾಡಿರಬಹುದು. ಈ ಮೂರೂ ಸಂದರ್ಭಗಳಲ್ಲಿ ಅವನು ಸಮಯಕ್ಕೆ ಸರಿಯಾಗಿ ವಾದ್ಯಗಳನ್ನು ಬಾರಿಸಿ,ನುಡಿಸಿ, ಕಣಕಣಿಸಿ, ಊದಿ ಭಾವಭಂಗಿಗಳ ಬೆಡಗನ್ನು ಸಂಗೀತ, ನಾಟಕ, ನೃತ್ಯಾದಿಗಳಲ್ಲಿ ನೀಡಿ ಜನಾಂಗವನ್ನು ಬೆರಗುಗೊಳಿಸಿದ್ದಾನೆ.

ವಾದ್ಯದ ಕಲ್ಪನೆಯನ್ನು ಮೊಟ್ಟಮೊದಲು ಮಾನವನು ಕಲ್ಲಲ್ಲಿ ಕಂಡುಹಿಡಿದಂತೆ ವಿದಿತವಾಗುತ್ತಿದೆ. ಕರ್ನಾಟಕದಲ್ಲಿ ಗವಿಗಂಹರ (ಗಹ್ವರ) ಗುಡಿಗೋಪುರಗಳಲ್ಲಿ ಇಂತಹ ಅನೇಕ ಕಲ್ಲುಗಳು ದೃಷ್ಟಿಗೆ ಬೀಳುವುವು. ಈ ಕಲ್ಲುಗಳಿಗೆ ಜನಪದದಲ್ಲಿ 'ನಾದಗಲ್ಲು'ಗಳೆಂದು ಕರೆಯುತ್ತಾರೆ. ಪೆಟ್ಟಿನಿಂದ ನುಡಿಸಲು ನಾದಗಲ್ಲಿನಿಂದ ಸುಸ್ವರ ಹೊರಡುವುದು ಅದರ ಗುಣಧರ್ಮವಿದೆ. ಅದರಲ್ಲಿ ಏಕಸ್ವರ ಕಂಪನವಾಗಲು 'ಗಂಟೆಗಲ್ಲು' ಎಂದೂ ಏಕಸ್ವರದಿಂದ ಕಂಪನವು 'ದರು' ಹಿಡಿಯಲು 'ನಗಾರಿಗಲ್ಲು' ಎಂದೂ ಅಪಸ್ವರದಿಂದ ಸುಸ್ವರದ ಸಪ್ತಸ್ವರಗಳು ಹೊರಡಲು 'ಸ್ವರಗಲ್ಲು' ಎಂದೂ ಜನಪದವು ಕರೆಯುತ್ತ ಬಂದಿದೆ. ಉಳವಿಯ 'ರುದ್ರಾಕ್ಷಿ ಮಂಟಪ'ದ ಒಳಗವಿಯಲ್ಲಿ ಇಂತಹ ಒಂದೆರಡು ಕಲ್ಲುಗಳನ್ನು ನುಡಿಸಿ ಅನುಭವಿಸಬಹುದು. ಹಾನಗಲ್ಲಿನ ತಾರಕೇಶ್ವರ ದೇಗುಲದ ಒಳ ಆವಾರದ ಬಾಗಿಲದಲ್ಲಿ ನೆಡಿಸಿದ ಕಲ್ಲು ಸ್ವರಗಲ್ಲು ಇರುವುದು. ಬೇಲೂರ ಚೆನ್ನಕೇಶ್ವರ ದೇವಾಲಯದಲ್ಲಿಯ 'ಸಪ್ತಸ್ವರಸ್ತಂಭ'ವು ಬಹು ಪ್ರಸಿದ್ಧವಾಗಿದೆ. ವಿಜಯನಗರದ ವಿಠ್ಠಲನ ಗುಡಿಯಲ್ಲಿಯ ಸಭಾಮಂಟಪದ ಸಪ್ತಸ್ತಂಭಗಳೊಂದೊಂದರಿಂದ ಸಪ್ತಸ್ವರಗಳಲ್ಲೊಂದೊಂದು ಸ್ವರವು ಹೊರಡುವುದು. ವಿಜಾಪುರ ಸುಲ್ತಾನನಾದ ಎರಡನೆಯ ಇಬ್ರಾಹಿಮ ಆದಿಲಶಾಹಿಯು ಕಟ್ಟಿಸಿದ ರಾಗಮಹಾಲಿನಲ್ಲಿ ಇಂತಹದೊಂದು ಸಪ್ತಸ್ವರದ 'ಸ್ವರಗಲ್ಲು' ಇತ್ತೆಂದೂ ಇಂಗ್ಲೀಷರ ಆಳಿಕೆಯಲ್ಲಿ ಅದನ್ನು ಸ್ಥಳಾಂತರಿಸಲಾಯಿತೆಂದೂ ಜನತೆಯಿಂದ ತಿಳಿದು ಬರುವುದು. ಸಂಗೀತ ಹಾಗೂ ಚಿತ್ರಕಲಾಪ್ರೇಮಿಯಾದ ಇಬ್ರಾಹಿಮ ಆದಿಲಶಹನು ಅನೇಕ ಸಂಗೀತಮೇಳಗಳನ್ನೂ ವಾದ್ಯಗಳ ಮೇಳಗಳನ್ನೂ ಈ ರಾಗಮಹಾಲದಲ್ಲಿ ವಿವಿಧ ಬಣ್ಣಗಳಿಂದ ಬರೆಸಿದ್ದನೆಂಬುದು ಅಲ್ಲಿಯ ಹಾಳು ಅವಶೇಷಗಳಿಂದ ತಿಳಿದುಬರುವುದು.

ಐಹೊಳೆಯ ಲಾಡಖಾನನ ದೇಗುಲದಿಂದ ವಿಜಯನಗರದ ಕೃಷ್ಣದೇವರಾಯ (ಕ್ರಿ. ಶ. ೧೫೧೩)ನ ಹಜಾರರಾಮನ ದೇಗುಲದ ವರೆಗೆ ಮೂರ್ತಿಶಿಲ್ಪದ ನಾನಾಭಂಗಿಗಳನ್ನು ಅಭ್ಯಸಿಸಿದಾಗ 'ಡಮರುಗ' ಹಿಡಿದು 'ಮೃದಂಗ'ದ ವರೆಗೆ ತೊಗಲಿನ ವಾದ್ಯಗಳೂ 'ಕಂಸಾಳಿ'ಯಿಂದ 'ತಾಳಚೆಳ್ಳಂಕ'ಗಳ ವರೆಗೆ ಲೋಹವಾದ್ಯಗಳೂ 'ಏಕತಾರಿ'ಯ ಹಿಡಿದು 'ವೀಣಾವಾದ್ಯ'ದ ವರೆಗೆ ತಂತಿಯ ವಾದ್ಯಗಳೂ 'ಶಂಖ' ಹಿಡಿದು 'ಕೊಂಬುಕಹಳೆ'ಯ ವರೆಗೆ ಊದುವ ವಾದ್ಯಗಳೂ ನೃತ್ಯಭಂಗಿಗೆ ಸಂಗಜೋಡಣೆಯಾಗಿ ಶಿಲಾಶಿಲ್ಪದಲ್ಲಿ ಕೆತ್ತಲ್ಪಟ್ಟಿವೆ. ಇವುಗಳ ವೈಖರಿಯ ಉನ್ನತಿಯನ್ನು ಡಂಬಳದ ದೊಡ್ಡ ಬಸವನ ದೇಗುಲದಲ್ಲಿಯೂ ಗದಗಿನ ತ್ರಿಕುಟೇಶ್ವರನ ದೇಗುಲದಲ್ಲಿಯೂ ಕಾಣಬಹುದಾಗಿದೆ. ಭರತನಾಟ್ಯದ ನಾನಾವಿಧ ಭಂಗಿಗಳನ್ನು ವಾದ್ಯಸಮೇತವಾಗಿ ಕೆತ್ತಿದ್ದಾನೆ ಶಿಲ್ಪಿ ಡಂಬಳದ ದೊಡ್ಡ ಬಸವನ ದೇಗುಲದಲ್ಲಿ! ಗದಗಿನ ತ್ರಿಕುಟೇಶ್ವರನ ದೇಗುಲದಲ್ಲಿ ರಾವಣನು 'ತಧ್ಧಿತ್ತೋನಮ್' ಅಭಿನಯಗೂಡಿ ರೌದ್ರಭಂಗಿಯಲ್ಲಿ ನಿಂತಿದ್ದಾನೆ! ಜಡದೇಹಿಯಾದ ಗಣಪತಿಯು ವೇಷಭೂಷಣದಲ್ಲಿ 'ತಕ್ಕಿಟತಕ ದಧ್ಧಿಗಿಣ್ಣತೋಮ್' ಎಂಬ ಅಭಿನಯ ಗೂಡಿ ಭಾವಭಂಗಿಯಲ್ಲಿ ಮಗ್ನನಾಗಿದ್ದಾನೆ!

### ಆಟ ಕುಣಿತಗಳು

ಪ್ರಾಚೀನ ಕರ್ನಾಟಕದ ಆಟ ಕುಣಿತಗಳ ಲಾಲಿತ್ಯ ರೂಪವನ್ನು ಇಂದು ಜನತೆಯಲ್ಲಿ ಪ್ರಚಾರ



ವಿಜಾಪುರ ಗೋಳಗುಮ್ಮಟ

ವಿರುವ ಮೂಡಲಪಾಯ-ಯಕ್ಷಗಾನಾದಿ ಬಯಲಾಟಗಳ ವೈವಿಧ್ಯದಲ್ಲಿ ಕಾಣಬಹುದು. ಮೂಡಲಪಾಯದಲ್ಲಿ ಮಣಿಪುರ ಭರತನಾಟ್ಯಗಳೂ ಯಕ್ಷಗಾನದಲ್ಲಿ ಕಥಕ್ಕಳಿಯೂ ಬಳಕೆಯಲ್ಲಿವೆ. ಈ ಎರಡೂ ಬಯಲಾಟಗಳಲ್ಲಿ ಲೋಹವಾದ್ಯ, 'ತಾಳ'ದ ಪ್ರಾಧಾನ್ಯವು ಚರ್ಮವಾದ್ಯ, 'ಮದ್ದಲೆ'ಯಕಿಂತಲೂ ಹೆಚ್ಚು. ರಾಗನೃತ್ಯಾದಿಗಳು ಪಾತ್ರಗಳ ಅಭಿನಯದೊಡನೆ ಈ ವಾದ್ಯಗಳನ್ನು ಅವಲಂಬಿಸಿವೆ. ಚರ್ಮವಾದ್ಯ ಪ್ರಾಧಾನ್ಯವುಳ್ಳ ಆಟಗಳು ದಪ್ಪಿನಾಟಗಳೂ ದಿಮ್ಮಿದಾಟಗಳೂ ಆಗಿವೆ. ದಪ್ಪಿನಾಟವು ಕಾದರೊಳ್ಳಿ ಧರತಿ ಹಾಗೂ ಹೊಸಧರತಿಗಳೆಂಬ ಎರಡು ಭೇದಗಳನ್ನೊಳಗೊಂಡು ಹಳ್ಳಿಗರ ಸೊತ್ತಾಗಿದೆ. ದಿಮ್ಮಿದಾಟಗಳಲ್ಲಿ ಜಾತಿಗರ ಮೃದಂಗದಾಟಗಳೂ ಡಂಬರ ಕಿಳ್ಳಿಕೇತರ ಡೋಲಿನಾಟಗಳೂ ಕಲಾವಂತರ ದಶಾವತಾರದ ದಮ್ಮಡಿ ಆಟವೂ ಸಂಬಾಳದೊಡನೆ ಗೊಂದಲಿಗರ ಗೊಂದಲವೂ ಸಂಬಾಳದಯ್ಯಗಳ ನಂದಿಕೋಲಾಟ ಮೊದಲಾದುವುಗಳು ಅಲೆದಾಡಿ ತಮ್ಮ ಕಲೆಯನ್ನು ಜನತೆಗೆ ಪ್ರದರ್ಶಿಸಿ ಹೊಟ್ಟೆಹೊರಕೊಳ್ಳುವ ಹಲಕೆಲವು ಹಿಂದುಳಿದ ಜನರ ಜೀವನಸಾಧನಗಳಾಗಿವೆ. ಈ ಆಟಗಳನ್ನು ಅವರು ಬಲು ಬುನಾದಿಯಿಂದ ಪರಂಪರೆಯಾಗಿ ಪ್ರದರ್ಶಿಸುತ್ತ ಬಂದಿರುವುದು ಆ ಜನರ ಇತಿಹಾಸದಿಂದ ವಿದಿತವಾಗುವುದು. ಮದ್ದಲಿಯು ಡಮರುಗದ ಬೃಹದ್ರೂಪವು. ಮೃದಂಗವು ಮದ್ದಲಿಯ ಇನ್ನೊಂದು ರೂಪವಿದ್ದು ಬಗಲಿಗೆ ಹಾಕಿಕೊಂಡು ಮೇಳಗಳಲ್ಲಿ ಕುಣಿದಾಡಿ ಬಾರಿಸಲು ಅನುಕೂಲ

ವಿರುವುದು. ಕರಡಿ, ದಿಮ್ಮು, ಚೌಗಡ, ನಗಾರಿ, ಡೊಳ್ಳು ಮೊದಲಾದುವು ಡಮರುಗದ ಬೇರೆ ರೂಪಗಳಾಗಿವೆ. ಅವುಗಳ ನುಡಿತವು ಮೋಜು ಮಜಲುಗಳಲ್ಲಿ. ಡಮರುಗದ ಅಲ್ಪರೂಪವೆಂದರೆ ಬುಡಬುಡಕೆಯ 'ಕಿಡಬುಡಿ' ಯು. ಈ ಎಲ್ಲ ವಾದ್ಯಗಳಲ್ಲಿಯೂ ಸಪ್ತ ರಾಗ-ಪಂಚಜಾತಿಗಳಲ್ಲಿ ರಾಗರಾಗಿಣಿಗಳನ್ನು ನುಡಿಸಬಹುದು. ಕನ್ನಡ ರಾಜಕವಿ ನೃಪತುಂಗನು ತನ್ನ ಕವಿರಾಜಮಾರ್ಗದಲ್ಲಿ ಕನ್ನಡಿಗರ 'ಕರಡಿ' ವಾದ್ಯವನ್ನು ಉಲ್ಲೇಖಿಸಿದ್ದಾನೆ.

ಪೆರಸಿರೆಕನ್ನಡದೊಳ್ಪಂ-
ಘುರ ಮಾಗದು ಕಾವ್ಯರಚನೆ ಪೇಳ್ದೊಡೆ ಪೀನಂ।
ಪರುಷತರ ಮುಕ್ಕುಮೋದುಂ
ಕರಡೆಯ ಮದ್ದಳೆಯ ಜರ್ಜ್ಝರ ಧ್ವನಿಗಳ
ವೋಲ್ ॥೫೦॥

(ಕವಿರಾಜ ಮಾರ್ಗ ಪ್ರಥಮ ಅಶ್ವಾಸ)

ಹೀಗೆ ಈ ವಾದ್ಯಗಳು ಕನ್ನಡ ಜನಾಂಗದಲ್ಲಿ ಬೆಳೆದು ಉಳಿದು ಬಂದಿವೆ.

ಹೋಳಿಯ ಕುಣಿತ, ಸುಗ್ಗಿಯ ಕುಣಿತ, ಬೆಳದಿಂಗಳ ಕುಣಿತ ಮೊದಲಾದವುಗಳು ಇಂದು ಕನ್ನಡ ಜನಪದ ಕುಣಿತಗಳಾಗಿವೆ. ಇವುಗಳಲ್ಲಿ ತಾಳಲಯದ ಹುಸಿಪೆಟ್ಟಿನ ಹೆಜ್ಜೆಗಳೂ ಗತ್ತಿನೊಡನೆ ರಾಗರಾಗಿಣಿಗಳ ಕೋಜೂ ಕುಣಿಯುವಾಗ ವಾದ್ಯಗಳ ಸಂಗಜೋಡಣೆಗೂಡಿ ಕೇಳಬರುವದು. ಹೋಳಿಯ ಕುಣಿತಗಳಲ್ಲಿ ವಿವಿಧ ವಾದ್ಯಗಳ ಪ್ರದರ್ಶನವು ಮುಖ್ಯವಾದುದು. ಈ ವಾದ್ಯಗಳ ಪ್ರತಿಯೊಂದು 'ಗತ್ತೂ' ತಾಳಬದ್ಧವಾದುದು. ಅಂತೆಯೇ ಅದರೊಡನೆ ಕುಣಿತದ ಹೆಜ್ಜೆ ಹಾಕಿ ಸರಾಗವಾಗಿ ಹಾಡುವದು ಹೋಳಿಯಲ್ಲಿ ಉತ್ತರ ಕರ್ನಾಟಕದ ತುಂಬೆಲ್ಲ ಕೇಳಬರುವದು.

ಸುಗ್ಗಿಯ ಕುಣಿತಗಳಲ್ಲಿ ದಮ್ಮಡಿಯಾಗಲಿ ದಪ್ಪಾಗಲಿ ಇರುವುದು ಹೆಚ್ಚು. ಒಮ್ಮೊಮ್ಮೆ 'ತುಣಿ ತುಣಿ'ಯೂ 'ಏಕತಾರಿ'ಯೂ ಇದ್ದರೂ ಇರಬಹುದು. ನಾವು ದೊಡ್ಡ ರಾಶಿಗಳಲ್ಲಿ ಮಾತ್ರ ಸುಗ್ಗಿಯ ಕುಣಿತಗಳನ್ನು ಕಾಣಬಹುದು. ಹೋಳಿಯ ಕುಣಿತಗಳಂತೆ, ಕುಣಿಯುವಾಗ ಈ ಕುಣಿತಗಳಲ್ಲಿ ನಾಡ ಬಂಟರ ಹಾಡುಗಳನ್ನಾಗಲಿ, ಶಿವಶರಣರ ಹಾಡುಗಳನ್ನಾಗಲಿ ಹಾಡುವುದನ್ನು ಕೇಳಬಹುದು.

ಶರಣು ಶರಣು ಸ್ವಾಮಿ ಶರಣು ಶಂಕರಗ
ಶರಣನ್ನೀರಿ ಸ್ವಾಮಿ ಶರಣನ್ನಿರೆ ॥ ಪ ॥

ಆ ಕೋಲು ಪಿಡಿದಾಗ ಈ ಕೋಲು ಪಿಡಿಯಲು
ಸಖಕ ನಮ ಕೋಲು ಲಗ್ಗೆತ್ತಿ । ಶ । ಬರುವಾಗ
ಶರಣಯ್ಯ ಪುರದ ಕಲ್ಲೇಶ ॥ ಶ ॥ ೧ ॥

ಚಿಣಿಕೋಲಕೈಯತ್ತಿ ಕೋಲ ಹೆಜ್ಜಿ ಹಾಕಿ
ಮಣಿ ಮಣಿದು ಹಾಡಿ ಕೋಲಾಡಿ । ಶ ।
ಸಿರಿಯಾಳ
ಚಿಲ್ಲಾಳ ಚೆಂಗಳ ಕತೆಯಾಡಿ ॥ ಶ ॥ ೨ ॥

ಎಂದು ಶಿವಶರಣರಿಗೆ ಸೆರಗೊಡ್ಡಿ ಹುಲಸನ್ನು ಬೇಡುತ್ತ ಕುಣಿಯುತ್ತಾರೆ.

ಬೆಳದಿಂಗಳ ಕುಣಿತಗಳು ಸಂಪ್ರದಾಯ ಹಾಡುಗಳ ಹಾಗೂ ಗೌರಿಸೀಗೆಯ ಕೋಲು ಪದಗಳ ಕುಣಿತಗಳಾಗಿವೆ. ಚಿಗಿಯುವ ಚಳಿಯ ಬೆಳದಿಂಗಳದಲ್ಲಿ ಹಳ್ಳಿಯ ಹೆಣ್ಣುಮಕ್ಕಳು ಕೋಲು ಚಿಣಿಯೆತ್ತಿ ಕಣಕಣಿಸಿ ಹಾಡುತ್ತ ಕುಣಿಯುವರು. ಮಂಗಳಾರುತಿ ಬೆಳಗಿ ಅರಳೆಲೆ ಬಸವಗೆ ಕೋಟೆಯ ಕಟ್ಟಿ ಕೋಲು ಹಾಕುವರು. ಕನ್ನಡ ಸಂಪ್ರದಾಯಗಳ ಸಿರಿ-ಸಂಪತ್ತನ್ನು ಹಾಡಿ ಕೋಲು ಹಾಕುವಾಗ ಅದನ್ನು ಸಂದರ್ಶಿಸಿ ಸಂತೋಷಪಡಬೇಕು. ಈ ದೆಸೆಯಲ್ಲಿ ಬನ್ನಿಹಬ್ಬದ ಕೋಲುಪದವು ಕನ್ನಡ ಜನಾಂಗದ ಸಂಸ್ಕೃತಿಯ ದಿವ್ಯ ಸಂದೇಶದ ಹೊಸ ಪರಿಮಳವೆಂದೇ ಒಪ್ಪಬೇಕಾಗುವುದು.

ಬನ್ನಿ ಮುಡಿಯುನ ಬಾರ ಕೋಲು ಕೋಲ ।
ಚಿನ್ನ ತರುವುನ ಬಾರ ಕೋಲುಕೋಲ ॥ ಪ ॥
ಊರಸೀಮೆಯ ದಾಟಿ ಕಾಡಗಡಿಯನು ಸೇರಿ ।
ಕಾಡಸಂಪತ್ತ ತರಬನ್ನಿ ಕೋಲು ಕೋಲ ॥
ಬೆಳದ ಬೆಳಸಿಗೆ ಬನ್ನಿ ಭೂಮಿತಾಯಿಗೆ ಬನ್ನಿ ।
ನಾಡಸಂಪತ್ತು ಬೆರಿ ಬನ್ನಿ ಕೋಲು ಕೋಲ ॥
ಇಂದ ಮುಡಿಯುವ ಬನ್ನಿ
ಮುಂದೆಮಗ ಹೊನ್ನಾಗಿ
ಕುಂದಣದಾರೂತಿ ಬೆಳಗುದಕ ॥
ಕೋಲು ಕೋಲ ॥

## ಹಳ್ಳಿಗರ ಕಾವ್ಯಾಭಿರುಚಿ

ಹೀಗೆ ಬರುವ ಹಾಡುಗುಣಿತಗಳಲ್ಲಿ ಹಳ್ಳಿಗರ ರಸಿಕತೆಯ ಕಾವ್ಯಾಭಿರುಚಿಯನ್ನು ಮಾರ್ಮಿಕವಾಗಿ ಕಾಣಬಹುದು. ಅವರ ಹಾಡುಗಳಲ್ಲಿ ಒಡೆದುಕಂಡುಬರುವುದು ಅವರ ಜೀವನ ಸಂಗೀತ! ಬಿಡಿಪದ್ಯ ಹಿಡಿದು ನೂರುದ್ದ ಹಾಡುಗಬ್ಬಗಳು ರಾಗಭರಿತವಾಗಿ ಸಂಗೀತಮಯವಾಗಿವೆ. ಅವರು 'ಸರಿಗಮ' ಸಪ್ತಸ್ವರಗಳ ಶಾಸ್ತ್ರೋಕ್ತ ಸಂಗೀತವನ್ನರಿಯದಿದ್ದರೂ ಹುಸಿಪೆಟ್ಟಿನ ಗತ್ತಿನಲ್ಲಿ ಲಯದೊಡನೆ ತಮ್ಮ ಹಾಡುಗಳನ್ನು ಹಾಡಿರುವುದರಿಂದ ಸಂಗೀತಶಾಸ್ತ್ರಕಾರರು ಅವುಗಳನ್ನು ಸಂಗೀತ ಶಾಸ್ತ್ರದ ಹಿನ್ನೆಲೆಯಾಗಿಟ್ಟುಕೊಂಡು ಸಂಗೀತ ಶಾಸ್ತ್ರವನ್ನು ರಚಿಸಿದರೆಂಬುದು ಎಲ್ಲರೂ ಒಪ್ಪಬೇಕಾದ ಮಾತು. ಕ್ರಿ. ಶ. ೧೫ನೆಯ ಶತಮಾನದ ಸಂಗೀತಕಲಾ ತೇಜ, ನಿಜಗುಣ ಶಿವಯೋಗಿಗಳಿಂದ ಕ್ರಿ. ಶ. ೨೦ನೆಯ ಶತಮಾನದ ಶಿಸುನಾಳ ಶರೀಫಸಾಹೇಬರವರೆಗೆ ಅನೇಕ ಶಿವಶರಣರು, ದಾಸರು, ಸಾಧು-ಸತ್ಪುರುಷರು ಸಂಗೀತಬದ್ಧವಾಗಿ ಹಾಡುಗಳನ್ನು ರಚಿಸಿ ಕನ್ನಡ ಜನಪದಕ್ಕೆ ಹಾಡುತ್ತ ಬಂದಿದ್ದಾರೆ. ನಿಜಗುಣ ಶಿವಯೋಗಿ, ಪುರಂದರದಾಸ, ಶಿಸುನಾಳ ಶರೀಫರ ಹಾಡುಗಳನ್ನು ಹಾಡದ ಕನ್ನಡ ಹಳ್ಳಿಯೇ ವಿರಳ.

ಹೀಗೆ ಹಳ್ಳಿಗರಲ್ಲಿ ಬೆಳೆದುಬಂದ ಸಂಗೀತ ಕಲೆಗೆ ಕರ್ನಾಟಕದಲ್ಲಿ ಮೊಟ್ಟಮೊದಲು ರಾಜಾಶ್ರಯದಲ್ಲಿ ವಿಶೇಷ ಪ್ರಾಶಸ್ತ್ಯ ದೊರೆತುದುದು ವಿಜಾಪುರ ಸುಲ್ತಾನರ ಆಳಿಕೆಯಲ್ಲಿ. ಅಲ್ಲಿಆದಿಲಶಾಹಿಗಳಲ್ಲಿ ಅನೇಕರು ಕಲಾಪ್ರೇಮಿಗಳಿದ್ದರು. ಅವರು ಸಂಗೀತಕ್ಕೆ ವಿಶೇಷ ಆಶ್ರಯ ಕೊಟ್ಟದ್ದರಿಂದ ಉತ್ತರಹಿಂದುಸ್ಥಾನದಿಂದ ಅನೇಕ ಸಂಗೀತ ಮೇಳಗಳು ವಿಜಾಪುರ ಸುಲ್ತಾನರ ದರ್ಬಾರಕ್ಕೆ ಬಂದು ತಮ್ಮ ಸಂಗೀತಕಲೆಯನ್ನು ಪ್ರದರ್ಶಿಸಿದ್ದು ಇತಿಹಾಸಪ್ರಸಿದ್ಧವಾದುದು. ಎರಡನೆಯ ಇಬ್ರಾಹಿಮ ಆದಿಲಶಹನು ಸುಪ್ರಸಿದ್ಧ ಸಂಗೀತ ಶಾಸ್ತ್ರಜ್ಞನಿದ್ದನು. ಅವನ 'ಕಿತಾಬ್-ಈ-ನವರಸ್' ಎಂಬ ಸಂಗೀತ ಮಹಾಪ್ರಬಂಧವು ಸಂಗೀತ ಶಾಸ್ತ್ರದ ಮೇಲೆ ಅತಿ ಅಪರೂಪವಾದ ಗ್ರಂಥ. ಮುಸಲ್ಮಾನ ಕನ್ನಡ ಅರಸನು ಬರೆದ ಈ ಮಹಾ ಗ್ರಂಥವು ಕನ್ನಡಿಗರಿಗೆ ಇಲ್ಲಿಯ ವರೆಗೂ ದೊರೆಯದಿರುವುದು ಕನ್ನಡಿಗರ ದುರ್ಭಾಗ್ಯ! ಈ ಕಲಾಪ್ರೇಮಿಯು ತನ್ನ ಸಂಗೀತ ಕಲಾಸ್ಮಾರಕವಾಗಿ 'ರಾಗಮಹಾಲ್'ನ್ನು ಕಟ್ಟಿಸಿದುದು ಇತಿಹಾಸಪ್ರಸಿದ್ಧವಾದುದು. ವಿಜಯನಗರ, ಕೆಳದಿ, ಮೈಸೂರು, ಕಿತ್ತೂರು ಮೊದಲಾದ ಅರಸರಲ್ಲದೆ ಕರ್ನಾಟಕದಲ್ಲಿ ಅನೇಕ ವತನದಾರರು ಈ ಕಲಾವಿದರಿಗೆ ಆಶ್ರಯವನ್ನು ನೀಡಿದ್ದಾರೆ. ಬರಬರುತ್ತ ಈ ಕಲಾವಿದರಲ್ಲಿ ನೈತಿಕ ಬಲವು ಪತನವಾಗುತ್ತ ಬಂದುದರಿಂದ ಈ ಕಲೆಗಳಿಗೆ ಕಲಕ ಚಾಳಿಯು ಅಂಟಿ ಅದು ಸಮಾಜದಲ್ಲಿ ತನ್ನ ಮೊದಲಿನ ಉನ್ನತ ಸ್ಥಿತಿಯನ್ನು ಕಳೆದುಕೊಂಡಿದೆ ಎಂದು ಬರೆಯಲು ವಿಷಾದವೆನಿಸುವುದು. ಇತ್ತೀಚೆಗೆ ಉತ್ತಮರು ಈ ಕಲೆಗಳಿಗೆ ಒಲಿದು ಮೆಚ್ಚುತ್ತಿರುವುದು ಈ ಕಲೆಗಳ ಭಾಗ್ಯೋದಯವೆಂದೇ ತಿಳಿಯಬೇಕು.

ಇಂತು ಖ್ಯಾತಿವೆತ್ತ ಕನ್ನಡ ಜನಪದ ಕಲಾರಾಶಿಯು ಪರತಂತ್ರ ದಾಸ್ಯದಲ್ಲಿ ರಾಜ್ಯಾಶ್ರಯವಿಲ್ಲದೆ ಕುಂದಿ, ಕಮರಿ ವ್ಯಕ್ತಿಗತವಾಗಿ ಹಲಕೆಲವರ ಮನೆ ಸೇರಿ ಅಲ್ಲಲ್ಲಿ ಶೃಂಗಾರಿಕೆಯಾಗಿಯೂ ಕಸಬಾಗಿಯೂ ಜೀವನ ಸಾಧನವಾಗಿ ಇಂದು ಮಿಣುಕುತ್ತಿರುವುದು. ಅನೇಕ ಕಲೆಗಳ ತವರು ಮನೆಯಾದ ಕರ್ನಾಟಕವು ಕಲೆಗಳಲ್ಲಿ ತನ ಔಚಿತ್ಯ ವೈಶಿಷ್ಟ್ಯಗಳನ್ನು ಭರತಖಂಡದಲ್ಲಿ ಬೆಳಸಿ ಉಳಿಸಬೇಕಾದರೆ ಈ ಎಲ್ಲ ಕಲೆಗಳಿಗೂ ಪ್ರೋತ್ಸಾಹ ನೀಡಲಿ; ಕನ್ನಡ ಸಂಸ್ಕೃತಿಯು ಪ್ರತಿಫಲಿಸಲಿ, ಎಂಬುದೇ ಕನ್ನಡಿಗರ ಹಾರೈಕೆ.

ಉದಾತ್ತವಾದ ಆತ್ಮವು ಸುಂದರವಾದ ರೂಪದೊಂದಿಗೆ ಸಮರಸ ಹೊಂದಿದರೆ ಮತ್ತು ಎರಡನ್ನೂ ಒಂದೇ ಪಡಿಯಚ್ಚಿನಲ್ಲಿ ಎರಕ ಹೊಯ್ದುದಾದರೆ ವಿಶಾಲದೃಷ್ಟಿಕೋನವುಳ್ಳವನಿಗೆ ಇಂತಹ ಸುಂದರ ನೋಟವೇ ಬೇರೊಂದು ಸಿಗಲಾರದು.

—ಪ್ಲೇಟೊ

# ಚಂದ್ರಲೋಕಯಾನ

ಲೇಖಕರು : ಶ್ರೀ. ಆರ್. ಎಲ್. ನರಸಿಂಹಯ್ಯ, ಬೆಂಗಳೂರು

ವಿಜ್ಞಾನದಲ್ಲಿ ಅನೇಕ ಅದ್ಭುತ ಶೋಧಗಳಾಗುತ್ತಿವೆ. ಜಗತ್ತು ಅವುಗಳ ಪ್ರಯೋಜನವನ್ನು ಪಡೆದುಕೊಳ್ಳತೊಡಗಿದೆ. ಮಾನವ ಇಷ್ಟಕ್ಕೆ ಸಮಾಧಾನ ಹೊಂದಿಲ್ಲ. ಭೂಮಿಯಿಂದ ಹೊರಗಿನ ಲೋಕಕ್ಕೂ ಹೋಗಬೇಕೆಂದು ಬಯಸುತ್ತಿರುತ್ತಾನೆ. ಅದೇ ಬಯಕೆಯೇ ಚಂದ್ರಲೋಕಯಾನ ಪ್ರಯತ್ನಕ್ಕೆ ಕಾರಣ. ಈ ಪ್ರಯತ್ನಗಳ ಹಿನ್ನೆಲೆ ಮೊದಲಾಗಿ ವಿವರಗಳನ್ನು ಲೇಖಕರು ಇಲ್ಲಿ ನಿರೂಪಿಸಿರುವರು. ಅಮೇರಿಕನ್ನರು ಅಕ್ಟೋಬರ ೧೧ ರಲ್ಲಿ ಚಂದ್ರಶೋಧಕ ರಾಕೆಟ್ಟನ್ನು ಹಾರಿಸುವ ದ್ವಿತೀಯ ಪ್ರಯತ್ನ ಮಾಡುವುದಕ್ಕೆ ಮುಂಚೆ ಲೇಖನ ಮುದ್ರಿತವಾಗಿತ್ತು ಎಂಬುದನ್ನು ವಾಚಕರು ಗಮನಿಸಬೇಕು.

ಸುಮಾರು ಮೂರು ತಿಂಗಳ ಹಿಂದೆ ಈ ವರ್ಷದ ಜುಲೈ ೧೭ ನೆಯ ತಾರೀಖಿನಲ್ಲಿ ಅಮೇರಿಕನ್ನರು ಚಂದ್ರಲೋಕಕ್ಕೆ ಒಂದು ರಾಕೆಟ್ಟನ್ನು ಕಳುಹಿಸಲು ಪ್ರಯತ್ನಿಸಿ ವಿಫಲರಾದರೆಂಬುದು ನಮಗೆಲ್ಲ ತಿಳಿದಿರುವ ಸಂಗತಿ. ಇದನ್ನು ಕೇಳಿದ ಮೇಲೆ ಚಂದ್ರಲೋಕ ಪ್ರಯಾಣದ ಸಾಧ್ಯಾಸಾಧ್ಯತೆಗಳೇನೆಂದು ವಿಚಾರ ಮಾಡುವ ಪ್ರವೃತ್ತಿ ಮಾನವಸಹಜವಾದದ್ದು. ಅಂಥ ವಿಚಾರ ನಡೆಸುವುದೇ ಈ ಲೇಖನದ ಉದ್ದೇಶ.

ಚಂದ್ರಲೋಕವನ್ನು ಸಮೀಪಿಸಲು ಮಾಡಿದ ಮಾನವನ ಪ್ರಥಮ ಪ್ರಯತ್ನ ಹಣ್ಣಾಗದೆ ಇದ್ದದ್ದಕ್ಕೆ ನಾವು ಆಶ್ಚರ್ಯ ಪಡಬೇಕಾಗಿಲ್ಲ, ನಿರಾಶರಾಗಬೇಕಾಗಿಯೂ ಇಲ್ಲ. ಆ ಸಾಹಸಕ್ಕಾಗಿ ದುಡಿದಿದ್ದ ಅಮೇರಿಕದ ವಿಜ್ಞಾನಿಗಳಿಗೆಲ್ಲ ತಮ್ಮ ಪ್ರಯತ್ನ ಸಫಲವಾಗುವ ಸಂಭವ ನೂರರಲ್ಲಿ ಹತ್ತು ಮಾತ್ರ ಎಂದು ತಿಳಿದಿತ್ತು. ಇನ್ನೂ ಇಂಥ ಮೂರು ನಾಲ್ಕು ಪ್ರಯತ್ನಗಳು ವಿಫಲವಾದರೂ ಐದು ಆರನೆಯವಾದರೂ ಜಯವನ್ನು ಸಾಧಿಸುತ್ತವೆ ಎಂಬ ನಂಬುಗೆಯೂ ಅವರಿಗಿದೆ.

ಈಗ ಭೂಮಿಯಿಂದ ಚಂದ್ರನ ಕಡೆಗೆ ನಾವು ಹಾರಿಸಬಹುದಾದ ರಾಕೆಟ್ಟಿನ ರಚನೆ ಹೇಗಿರಬೇಕೆಂಬ ವಿಚಾರ ನಡೆಸೋಣ. ರಾಕೆಟ್ಟಿನ ತತ್ತ್ವ ದೀಪಾವಳಿ ಹಬ್ಬದಲ್ಲಿ ನಮ್ಮ ಹುಡುಗರಿಗೆಲ್ಲ ಅಚ್ಚುಮೆಚ್ಚಾದ ಭೂಚಕ್ರದ ತತ್ತ್ವವನ್ನು ಹೋಲುತ್ತದೆ. ಸಿಂಬೆಯಂತಿರುವ ಈ ಭೂಚಕ್ರದೊಳಗಿರುವ ಸಿಡಿಮದ್ದನ್ನು ಹೊತ್ತಿಸಿದಾಗ ಉರಿಯುತ್ತಿರುವ ಆ ಮದ್ದು ಸಿಂಬೆಯ ಪೃಷ್ಠದಿಂದ ಸಿಡಿದು ರಭಸದಿಂದ ಹೊರನುಗ್ಗುತ್ತದೆ. ಇದಕ್ಕೆ ಪ್ರತಿಕ್ರಿಯೆಯಾಗಿ ಭೂಚಕ್ರ ಅದಕ್ಕೆದುರು ದಿಕ್ಕಿನಲ್ಲಿ ಗಿರ್ರನೆ ತಿರುಗುತ್ತದೆ. ರಾಕೆಟ್ಟೂ ಇಂಥ ಒಂದು ಪ್ರತಿಕ್ರಿಯಾಚಲನಯಂತ್ರ.

ಭೂಚಕ್ರಕ್ಕೂ ರಾಕೆಟ್ಟಿಗೂ ಒಂದು ಮುಖ್ಯ ವ್ಯತ್ಯಾಸವೇನೋ ಇದೆ. ಭೂಚಕ್ರದಲ್ಲಿರುವ ಮದ್ದು ಉರಿಯುವುದಕ್ಕೆ ಗಾಳಿ ಅತ್ಯಗತ್ಯ ಎಂದು ಹೇಳಬೇಕಾಗಿಲ್ಲ, ಆ ಗಾಳಿಗೆ ಯಾವ ಕೊರತೆಯೂ ಇಲ್ಲ ಎಂಬುದೂ ಸ್ವಯಂವೇದ್ಯ. ಆದರೆ ಚಂದ್ರನನ್ನು ಸೇರಬೇಕಾಗಿರುವ ರಾಕೆಟ್ಟು ನೆಲವನ್ನು ಬಿಟ್ಟ ಒಂದೆರಡು ನಿಮಿಷಗಳೊಳಗಾಗಿಯೆ ಭೂಮಿಯ ವಾಯುಮಂಡಲವನ್ನು ದಾಟಿರುತ್ತದೆ. ಆದ್ದರಿಂದ ಅದರಲ್ಲಿರುವ ಮದ್ದು ಉರಿಯಬೇಕಾದರೆ, ಉರಿಗೆ ಬೇಕಾದ ಗಾಳಿಗೇ ಅಭಾವ ಬಂದಿರುತ್ತದೆ. ಈ ಕಾರಣದಿಂದ ರಾಕೆಟ್ ತನ್ನೊಳಗೇ ಸಂಪೂರ್ಣ ಇಂಧನ ಸಾಮಗ್ರಿಗಳನ್ನು, ಅಂದರೆ ಉರಿಯುವ ಸೌದೆಯನ್ನೇ ಅಲ್ಲದೆ ಯಾವುದರಲ್ಲಿ ಉರಿಯಬೇಕೋ ಆ ಗಾಳಿಯನ್ನೂ ಅಡಕಮಾಡಿಕೊಂಡಿರಬೇಕಾಗುತ್ತದೆ.

ರಾಕೆಟ್ಟಿನ ಅಲ್ಯೂಮಿನಿಯಂ ಮಿಶ್ರಣ ಲೋಹ ಕವಚ ಸಾಮಾನ್ಯವಾಗಿ ದೊಡ್ಡ ಸಿಗಾರ್ ಆಕಾರದಲ್ಲಿರುತ್ತದೆ. ಕವಚದೊಳಗೆ ಪೆಟ್ರೋಲ್ ಅಥವಾ ಆಲ್ಕೊಹಾಲ್‌ನ ಒಂದು ತೊಟ್ಟಿ, ಕಡುಶೈತ್ಯದಿಂದ ದ್ರವರೂಪಕ್ಕೆ ಇಳಿಸಿರುವ ಆಮ್ಲಜನಕದ (ಲಿಕ್ವಿಡ್ ಆಕ್ಸಿಜನ್‌ನ) ಮತ್ತೊಂದು ತೊಟ್ಟಿ ಇರುತ್ತವೆ. ರಾಕೆಟ್ಟಿನ ಹೊರಗಡೆ ಇರುವ ಒಂದು ಹಿಡಿಯನ್ನು ಒತ್ತಿದರೆ ಈ ತೊಟ್ಟಿಗಳಿಂದ ಎರಡು ದ್ರವಗಳೂ ಕೊಳವೆಗಳ ಮೂಲಕ ಹರಿದುಬಂದು ಇನ್ನೊಂದು ಪಾತ್ರೆಯಲ್ಲಿ ತುಂತುರು ತುಂತುರುಗಳಾಗಿ ಕಲೆತು ಬೆರೆಯುವ ಏರ್ಪಾಟಿರುತ್ತದೆ. ಪಾತ್ರೆಯ ಕಂಠ ಕಿರಿದು, ಹಾಗೂ ಅದು ಕೆಳಮುಖವಾಗಿರುತ್ತದೆ. ಕಂಠದಿಂದ ತೆರೆದ ಬಾಯಿಯೇ ರಾಕೆಟ್ಟಿನ ಪೃಷ್ಠದ್ವಾರ.

## ರಾಕೆಟ್ ಹಾರಿಸುವ ಬಗೆ

ಭದ್ರವಾದ ತಳಹದಿಯ ಮೇಲೆ ನೇರವಾಗಿ ನೆಟ್ಟಿರುವ ಬಲವಾದ ಉಕ್ಕಿನ ಕಂಬಿಗಳ ಮಧ್ಯೇ ಈ ರಾಕೆಟ್ಟನ್ನು ನಿಲ್ಲಿಸುತ್ತಾರೆ—ಯೂಪಸ್ತಂಭಗಳಿಗೆ ಕಟ್ಟಿದ ಪಶುವಿನಂತೆ. ರಾಕೆಟ್ಟಿನ ಕೆಳಭಾಗಕ್ಕೆ ನಾಲ್ಕು ಪುಕ್ಕಗಳನ್ನು ಬಿಗಿಸಿರುತ್ತಾರೆ. ರಾಕೆಟ್ಟು ಹಾರುತ್ತಿರುವಾಗ ಅದು ಹೊಯ್ದಾಡದಂತೆ ಸ್ಥಿರವಾಗಿ ಓಡುವುದಕ್ಕೆ ಈ ಪುಕ್ಕಗಳು ಸಹಕಾರಿಯಾಗುತ್ತವೆ.

ಈಗ ಹಿಡಿಯನ್ನು ಒತ್ತಿದರೆ ಪಾತ್ರೆಯಲ್ಲಿ ಮಿಳನಗೊಳ್ಳುತ್ತಿರುವ ಪೆಟ್ರೋಲ್ ಮತ್ತು ಆಮ್ಲಜನಕಗಳ ತುಂತುರು ಹನಿಗಳನ್ನು ವಿದ್ಯುತ್ತಿನ ಒಂದು ಕಿಡಿ ಹೊತ್ತಿಸುತ್ತದೆ. ತತ್‌ಕ್ಷಣವೆ ಆ ದ್ರವಗಳು ಅತಿ ಶೀಘ್ರವಾಗಿ ಉರಿದು ಅನಿಲ ರೂಪಕ್ಕೆ ಉಬ್ಬುತ್ತವೆ. ಹೀಗೆ ಒಂದಕ್ಕೆ ಹಲವು ಸಾವಿರಗಳಂತೆ ಉಬ್ಬುತ್ತಿರುವ ಅನಿಲರಾಶಿಗೆ ಆ ಚಿಕ್ಕ ಪಾತ್ರೆಯ ಸ್ಥಳಾವಕಾಶ ಹೇಗೆ ಸಾಕಾದೀತು! ಆದ್ದರಿಂದ ಕೆಂಪಗೆ ಉರಿಯುತ್ತಿರುವ ಈ ಅನಿಲಜ್ವಾಲೆಗಳು ಪಾತ್ರೆಯ ಕಂಠದ ಮೂಲಕ ನುಗ್ಗಿ ಪ್ರಚಂಡ ವೇಗದಲ್ಲಿ ಅದರ ಬಾಯಿಂದ ಹೊರಬೀಳುತ್ತವೆ. ಆದರೆ ಈ ರೀತಿ ಕೆಳಕ್ಕೆ ನುಗ್ಗುತ್ತಿರುವ ಅನಿಲಜ್ವಾಲೆ ತಾನು ಮೇಲಕ್ಕೆ ಹೋಗದಂತೆ ಅಡಚಣೆ ಒಡ್ಡಿರುವುದನ್ನು ಕಂಡು ಅದರ ರೋಷ ಉಕ್ಕಿ, ರಾಕೆಟ್ಟನ್ನು ಮೇಲಕ್ಕೆ ಒದೆದು ತಾನು ಕೆಳಗೆ ಧುಮುಕುತ್ತದೆ. ಈ ಪ್ರತಿಕ್ರಿಯೆಯ ಒದೆತದ ಪರಿಣಾಮವಾಗಿ ರಾಕೆಟ್ ಮೇಲಕ್ಕೆ ಹಾರುತ್ತದೆ. ಪೆಟ್ರೋಲ್, ದ್ರವಾಮ್ಲಜನಕಗಳಂಥ ಇಂಧನಗಳ ದಹನ ಕ್ರಿಯಾವೇಗ ಅದ್ಭುತವಾದದ್ದರಿಂದ ಒಂದೆರಡು ನಿಮಿಷಗಳಲ್ಲಿ ಎರಡು ತೊಟ್ಟಿಗಳೂ ಬರಿದಾಗುತ್ತವೆ. ಅಷ್ಟರೊಳಗೇ ರಾಕೆಟ್ ನೂರಾರು ಮೈಲು ಎತ್ತರಕ್ಕೆ ಹಾರಿರುತ್ತದೆ.

ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಒಂದೆರಡು ನಿಮಿಷಗಳಲ್ಲಿ ಇಂಧನದ್ರವಗಳು ಉರಿದು ಮುಗಿದುಹೋದರೆ, ಅಷ್ಟರೊಳಗೇ ರಾಕೆಟ್ ನೂರಾರು ಮೈಲಿಗಳ ಎತ್ತರಕ್ಕೆಹಾರಿದ್ದರೂ ಆ ಮೇಲಾದರೂ ಕೆಳಕ್ಕೆ ಭೂಮಿಗೇ ಬೀಳಬೇಕಲ್ಲವೆ? ಭೂಮಿಯ ಗುರುತ್ವಾಕರ್ಷಣ ಬಲಕ್ಕೆ ಮಿತಿಯೇ ಇಲ್ಲದಿದ್ದರೆ ಹೀಗಾಗುತ್ತಿತ್ತು ನಿಜ; ಆದರೆ ಆ ಬಲಕ್ಕೊಂದು ಮಿತಿ ಇದೆ. ಆದ್ದರಿಂದ ನಾವು ಒಂದು ಪದಾರ್ಥವನ್ನು ಸೆಕಂಡೊಂದಕ್ಕೆ ಏಳು ಮೈಲಿಗಳಿಗಿಂತ—ಘಂಟೆಗೆ ೨೫,೦೦೦ ಮೈಲಿಗಳಿಗಿಂತ—ಅಧಿಕ ವೇಗದಲ್ಲಿ ಭೂಮಿಯಿಂದ ಮೇಲಕ್ಕೆ ಎಸೆದರೆ ಅದಕ್ಕೆ ಭೂ-ಬಂಧನ ತಪ್ಪಿಹೋಗಿ ಅದು ತಿರುಗಿ ಭೂಮಿಗೆ ಬೀಳುವುದಿಲ್ಲ. ಆದರೆ ನಾವು ಪೆಟ್ರೋಲ್, ದ್ರವಾಮ್ಲಜನಕ ಅಥವಾ ನಮಗೆ ಇದುವರೆಗೆ ತಿಳಿದಿರುವ ಇತರ ಯಾವ ಇಂಧನಸಾಮಗ್ರಿಗಳನ್ನು ಬಳಸಿದರೂ ರಾಕೆಟ್ಟಿನ ವೇಗ ಸೆಕಂಡೊಂದಕ್ಕೆ ಎರಡು ಮೂರು ಮೈಲಿಗಳನ್ನು ಮೀರುವುದಿಲ್ಲ. ಅಂದಮೇಲೆ ಭೂ-ಬಂಧನದಿಂದ ಬಿಡಿಸಿ ಚಂದ್ರಲೋಕಕ್ಕೆ ರಾಕೆಟ್ಟನ್ನು ಕಳುಹಿಸುವುದು ಹೇಗೆ? ಅಲ್ಲದೆ ಒಂದೇ ಸಲ ಸೆಕೆಂಡೊಂದಕ್ಕೆ ಏಳು ಮೈಲಿಗಳ ವೇಗವನ್ನು ಹುಟ್ಟಿಸಬಲ್ಲ ಇಂಧನಸಾಮಗ್ರಿಗಳನ್ನು ನಾಳೆ ನಾವು ಕಂಡು

ಹಿಡಿದರೂ ಅಷ್ಟು ಉಪಯೋಗವಾಗುವುದಿಲ್ಲ. ಏಕೆಂದರೆ ಭೂಮಿಯನ್ನು ಕವಿದಿರುವ ವಾಯುಮಂಡಲವನ್ನು ಯಾವ ಪದಾರ್ಥವಾಗಲಿ ಈ ಪ್ರಚಂಡ ವೇಗದಲ್ಲಿ ತೂರಿಕೊಂಡು ಹೋದರೆ, ಆ ಪದಾರ್ಥ ವಾಯು ಘರ್ಷಣೆಯ-ಗಾಳಿಯ ತಿಕ್ಕಾಟದ-ಪರಿಣಾಮವಾಗಿ ಉರಿದು ಬೂದಿಯಾಗಿ ಹೋಗುತ್ತದೆ.

ಈ ಸಮಸ್ಯೆಯ ಪರಿಹಾರಕ್ಕೆ ರಾಕೆಟ್ ತಜ್ಞರು ಒಂದು ಉಪಾಯ ಕಂಡುಹಿಡಿದಿದ್ದಾರೆ. ಒಂದು ರಾಕೆಟ್ಟಿನ ಮೇಲೆ ಇನ್ನೊಂದು ರಾಕೆಟ್ಟನ್ನು ಕೂಡಿಸುವುದು, ಅದರ ಮೇಲೆ ಮತ್ತೊಂದನ್ನು, ಹೀಗೆ ಮೂರು ನಾಲ್ಕು ಹಂತಗಳ ರಾಕೆಟ್ಟನ್ನು ಕಟ್ಟಿ ಅವುಗಳು ಒಂದಾದ ಮೇಲೊಂದು ಸಿಡಿಯುವಂತೆ ಮಾಡುವುದೇ ಈ ಉಪಾಯ. ಆಗ ಕೊನೆಯ ರಾಕೆಟ್ಟಿನ ವೇಗ ಹಿಂದಿನೆಲ್ಲ ರಾಕೆಟ್ಟುಗಳ ವೇಗಗಳ ಮೊತ್ತವಾಗುತ್ತದೆ. ಹೀಗೆ ಮಾಡಿದರೆ ಎರಡನೆಯ, ಮೂರನೆಯ ಮತ್ತು ಅದರಾಚೆಯ ಹಂತಗಳು ವಾಯುಮಂಡಲದ ದಟ್ಟವಾದ ಭಾಗವನ್ನು ದಾಟಿರುತ್ತವಾದ್ದರಿಂದ ಪ್ರಚಂಡ ವೇಗದಿಂದ ಚಲಿಸುತ್ತಿದ್ದರೂ ವಾಯುಘರ್ಷಣೆಯ ಅಪಾಯದಿಂದ ಪಾರಾಗುತ್ತವೆ.

## ಚಂದ್ರಶೋಧಕ ರಾಕೆಟ್ಟಿನ ರಚನೆ

ಇದಕ್ಕುದಾಹರಣೆಯಾಗಿ ಆಗಸ್ಟ್ ೧೭ ರಂದು ಅಮೇರಿಕನ್ನರು ಉಪಯೋಗಿಸಿದ ಚಂದ್ರಶೋಧಕ ರಾಕೆಟ್ಟಿನ ರಚನೆಯನ್ನು ಪರಿಶೀಲಿಸೋಣ. ಇದು ಅಮೇರಿಕದ ವಾಯುದಳದವರ ಮೂರು ಹಂತದ ರಾಕೆಟ್, ಇದರ ಹೆಸರು ಥಾರ್-ಏಬಲ್. ' ಥಾರ್ 'ಗುಡುಗು ಮಿಂಚುಗಳ ಅಧಿದೇವತೆಯ ಹೆಸರು, ನಮ್ಮ ' ಇಂದ್ರ 'ನನ್ನು ಹೋಲುತ್ತಾನೆ. ಆದ್ದರಿಂದ 'ಥಾರ್ ಏಬಲ್' ಅಂದರೆ ' ಇಂದ್ರದಕ್ಷ' ಎಂದು ಹೇಳಬಹುದು. ಥಾರ್-ಏಬಲ್‌ನ ತೂಕ ೫೩ ಟನ್‌ಗಳು, ಉದ್ದ ೮೮ ಅಡಿಗಳಿಗಿಂತ ಸ್ವಲ್ಪ ಹೆಚ್ಚು, ಅಗಲ ಅಂದರೆ ವ್ಯಾಸ ೧೦೦ ಅಂಗುಲಗಳು. ಇದರ ಮೊದಲನೆಯ ಹಂತ ' ಥಾರ್ ' ಎಂಬ ವರ್ಗನಾಮದ ೪೯ ಟನ್‌ಗಳ ರಾಕೆಟ್. ಥಾರ್‌ನಲ್ಲಿ ಬಳಸುವ ಇಂಧನಗಳು ಸೀಮೆಯೆಣ್ಣೆ (ಕೆರೊಸೀನ್) ಮತ್ತು ದ್ರವಾಮ್ಲಜನಕಗಳು.

ಎರಡನೆಯ ಹಂತ ನೌಕಾಶಾಖೆಯವರ ವಾನ್‌ಗಾರ್ಡ್ (ಮುಂದಾಳು) ಎಂಬ ರಾಕೆಟ್ಟಿನ ಮಾರ್ಪಾಟಾದ ರೂಪ. ಇದೂ ದ್ರವೇಂಧನಗಳನ್ನೇ ಬಳಸುತ್ತದೆ. ಈ ವಾನ್‌ಗಾರ್ಡ್‌ದಲ್ಲಿ ಪ್ರಧಾನ ರಾಕೆಟ್ಟಿನ ಸುತ್ತ ಎಂಟು ಸೂಕ್ಷ್ಮ ರಾಕೆಟ್ಟುಗಳನ್ನು ಇಟ್ಟಿರುತ್ತಾರೆ. ಇವು ವಾನ್‌ಗಾರ್ಡನ್ನು ಬುಗುರಿಯಂತೆ ಗಿರ್ರನೆ ತಿರುಗಿಸಬಲ್ಲವು. ಈ ಭ್ರಮಣ ರಾಕೆಟ್‌ಗೆ ಪಥಸ್ಥೈರ್ಯ ಕೊಡುತ್ತದೆ.

ಮೂರನೆಯ ಹಂತ ಘನೇಂಧನದ ರಾಕೆಟ್, ಅಂದರೆ ಈ ಹಂತದಲ್ಲಿ ಘನಸ್ಥಿತಿಯ ಥಯೊಕೋಲನ್ನು ಸೌದೆಯಾಗಿ ಉಪಯೋಗಿಸುತ್ತಾರೆ. ಥಯೊಕೋಲ್ ರಬ್ಬರ್ ಜಾತಿಯ ಒಂದು ಪ್ಲಾಸ್ಟಿಕ್ ಪದಾರ್ಥ. ಇದರಲ್ಲಿ ಗಂಧಕ, ಇಂಗಾಲ, ಜಲಜನಕ (ಹೈಡ್ರೊಜನ್) ಇರುತ್ತವೆ. ಘನೇಂಧನಗಳ ರಾಕೆಟ್‌ಗಳ ರಚನೆ ಬಹು ಸರಳ, ವೇಗ, ವೇಗೋತ್ಕರ್ಷಗಳು ಅಧಿಕ. ಆದರೆ ಅವುಗಳನ್ನು ಹತೋಟಿಯಲ್ಲಿಡುವುದು ಕಷ್ಟ.

ಈ ಮೂರನೆಯ ರಾಕೆಟ್ಟಿನ ಮೇಲೆ ೮೫ ಪೌಂಡು ಭಾರದ ನೀಳವಾದ ಸ್ತಂಭವನ್ನು ಸೇರಿಸಿರುತ್ತಾರೆ. (ಚಿತ್ರ ೧-ಎ ನೋಡಿ). ಇದೇ ರಾಕೆಟ್ಟಿನ 'ಜೀತದ ಹೊರೆ' ಅಥವಾ 'ಪೇ ಲೋಡ್', ಅಂದರೆ ಕೊನೆಯ ವರೆಗೂ ಉಳಿದುಕೊಂಡು ಚಂದ್ರನನ್ನು ಸೇರಬೇಕಾಗಿರುವ ವಸ್ತು. ೫೩ ಟನ್‌ಗಳ ರಾಕೆಟ್ಟಿನ ಸಾರ್ಥಕ್ಯ ಈ ಹೊರೆಯನ್ನು ಚಂದ್ರನಿಗೆ ತಲಪಿಸುವುದರಲ್ಲಿಯೆ; ಇದರ ೮೫ ಪೌಂಡುಗಳಲ್ಲಿ ೨೫ ಪೌಂಡುಗಳು ಸ್ತಂಭದಲ್ಲಿ ಅಡಕವಾಗಿರುವ ಉಪಕರಣಗಳ ಭಾರ. ಈ ಉಪಕರಣಗಳೆಂಥವೆಂಬುದನ್ನು ಮುಂದೆ ತಿಳಿಸುತ್ತೇವೆ.

ವಾಯುದಳದವರು ಈ ಚಂದ್ರಶೋಧಕ ರಾಕೆಟ್ಟನ್ನು ಹಾರಿಸುವುದಕ್ಕೆ ೧೯೫೮ ರ ಜುಲೈ ೧೭ ರ ಪ್ರಾತಃಕಾಲ ೭ ಘಂಟೆ ೧೪ ನಿಮಿಷ ಸರಿಯಾದ ಮುಹೂರ್ತವೆಂದು ಹಲವು ವಾರಗಳು ಮುಂಚೆಯೆ ನಿರ್ಧರಿಸಿದ್ದರು. ರಾಕೆಟ್ಟನ್ನು ಹಾರಿಸಿದ್ದು ಫ್ಲಾರಿಡಾ ಸಂಸ್ಥಾನದ ಕೆನವೆರಾಲ್ ಭೂಶಿರದ ಕ್ಷಿಪಣಿ ಪರೀಕ್ಷಾಕೇಂದ್ರದಿಂದ, ಜುಲೈ ೧೭ರ ಪ್ರಾತಃಕಾಲ ಸರಿಯಾಗಿ ೭ ಘಂಟೆ ೧೮ ನಿಮಿಷಕ್ಕೆ. (ಪೂರ್ವ ಅಮೇರಿಕದ ಕಾಲ) ಕೇವಲ ನಾಲ್ಕೇ ನಿಮಿಷಗಳು ತಡವಾಗಿ ಮುಹೂರ್ತ ಸಾಧನೆಯಾದದ್ದು ಬಹಳ ಪ್ರಶಂಸಾರ್ಹವಾದದ್ದೇ.

ಹಂಚಿಕೆಗೆ ಸರಿಯಾಗಿಯೇ ಯಾವ ಸಂಶಯಕ್ಕೂ ಆಸ್ಪದ ಕೊಡದೆಯೆ ರಾಕೆಟ್ ಯೂಪ-ಸ್ತಂಭಗಳಿಂದ ಸರಿದು ಮೇಲಕ್ಕೆ ಹಾರಿತು, (ಚಿತ್ರ ೩) ನಿಖರವಾಗಿ ೭೭ ಸೆಕೆಂಡುಗಳ ನಂತರ ಈ ' ಇಂದ್ರ-ದಕ್ಷ ' ಅನಿರೀಕ್ಷಿತವಾಗಿ ಸಿಡಿದು ಚೂರುಚೂರಾಯಿತು. ಈ ಹೊತ್ತಿನಲ್ಲಿ ಅದು ೫೦,೦೦೦ ಅಡಿ ಎತ್ತರಕ್ಕೇರಿತ್ತು, ಹತ್ತು ಮೈಲು ದೂರ ಸಾಗರವನ್ನು ದಾಟಿತ್ತು. ಸಿಡಿದುಹೋಗಿದ್ದ ತೊಟ್ಟಿಗಳ ಚೂರುಗಳ ಪರೀಕ್ಷೆಯಿಂದ ದ್ರವಾಮ್ಲಜನಕ ಅಥವಾ ಸೀಮೆಯೆಣ್ಣೆ ಹರಿಯುವ ಕೊಳವೆಗಳು ಕೈಕೊಟ್ಟವೆಂದು ಪತ್ತೆಯಾಯಿತು.

ನಮಗೆ ಸಾಮಾನ್ಯವಾಗಿ ಅಸಾಧ್ಯವೆಂದು ತೋರುವ ಅಂತರಿಕ್ಷಯಾನ, ಇತರ ಲೋಕಯಾನಗಳು ರಾಕೆಟ್ಟಿನಿಂದ ತಾನೆ ಹೇಗೆ ಸಾಧ್ಯ ಎಂದನ್ನಿಸುವುದು ಸಹಜ. ಈ ಕುತೂಹಲ ಶಮನಾರ್ಥವಾಗಿ ರಾಕೆಟ್ಟಿನ ರಚನೆಯ ವಿವರಗಳಲ್ಲಿ ಅನಿವಾರ್ಯವಾಗಿ ಎಷ್ಟನ್ನು ತಿಳಿದುಕೊಂಡರೆ ಸಾಕೋ ಅಷ್ಟನ್ನು ಮಾತ್ರ ಇಲ್ಲಿ ತಿಳಿಸುವ ಪ್ರಯತ್ನ ಮಾಡಿದೆ. ಆದರೆ ವಾಸ್ತವವಾಗಿ ಅದರ ರಚನೆ ಬಹಳ ತೊಡಕಾದದ್ದು, ಅದರಲ್ಲಿ ಮೂರು ಲಕ್ಷಕ್ಕಿಂತ ಹೆಚ್ಚಿನ ಸಂಖ್ಯೆಯ ಪ್ರತ್ಯೇಕ ಅಂಗಗಳಿವೆ. ಇವೆಲ್ಲ ಅನ್ಯೋನ್ಯವಾಗಿ ಕೆಲಸ

ಚಿತ್ರ ೧
ಎ. ಮೂರು ಹಂತಗಳ ಥಾರ ಏಬಲ್ ರಾಕೆಟ್—ಜೀತದ ಹೊರೆಯ ಸಮೇತ
ಬಿ. ರಾಕೆಟ್ಟಿನ ಚಂದ್ರಶೋಧಕ ಸ್ತಂಭ ಮಾತ್ರ

ಮಾಡಿದರೆ ಮಾತ್ರ ಫಲಸಾಧನೆಯಾಗುತ್ತದೆ. ಯಾವ ಒಂದು ಅಂಗವೂ ಅಪ್ರಧಾನವಲ್ಲ. ಅಮೆರಿಕನ್‌ರ 'ಥಾರ್-ಏಬ್‌ಲ್' ನಿರರ್ಥಕವಾದದ್ದೊಂದೇ ಇದಕ್ಕೆ ನಿದರ್ಶನವಲ್ಲ. ರಷ್ಯನರು ಕೂಡ ಚಂದ್ರನಿಗೆ ಗುಂಡು ಹಾರಿಸಲು ಕಳೆದ ವರ್ಷ ಅಕ್ಟೋಬರ್‌ನಲ್ಲಿ ಒಂದು ಸಲ, ಈ ವರ್ಷ ಜನವರಿಯ ಆದಿಭಾಗದಲ್ಲಿ ಒಂದು ಸಲ, ಮಾರ್ಚಿ ಮೇ, ಮತ್ತು ಜುಲೈ ತಿಂಗಳುಗಳಲ್ಲೊಂದೊಂದು ಸಲ ಹೀಗೆ ಐದು ಸಲವಾದರೂ ಪ್ರಯತ್ನಿಸಿ ವಿಫಲರಾಗಿದ್ದಾರೆಂದು ವರದಿಯಾಗಿದೆ.

### ಅಮೇರಿಕೆಯ ಪ್ರಯತ್ನ ಯಶಸ್ವಿಯಾಗಿದ್ದರೆ....

ಇದೆಲ್ಲ ಹೇಗಾದರೂ ಇರಲಿ, ಅಮೆರಿಕನರ ಆಗಸ್ಟ್ ೧೭ ರ ಪ್ರಯತ್ನ ನಿರೀಕ್ಷಣೆಯಂತೆಯೇ ನಡೆದಿದ್ದರೆ ಏನಾಗುತ್ತಿತ್ತೆಂಬುದನ್ನು ಈಗ ವಿಚಾರ ಮಾಡುವುದು ಉಚಿತ. ಪ್ರಥಮ ಹಂತದ ಥಾರ್ ನೆಲ ಬಿಟ್ಟ ಕ್ಷಣದಿಂದ ೧೫೭ ಸೆಕೆಂಡುಗಳ ಕಾಲ ಅದರೊಳಗಿನ ಇಂಧನಗಳು ಉರಿಯಬೇಕಾಗಿತ್ತು. ಅಷ್ಟು ಹೊತ್ತಿಗೆ ರಾಕೆಟ್ ಸುಮಾರು ೩೦ ಮೈಲಿ ಎತ್ತರಕ್ಕೆ ಹಾರಿರುತ್ತಿತ್ತು. ಇಂಧನದ್ರವವೆಲ್ಲ ಮುಗಿದ ಮೇಲೆ ಪ್ರಥಮ ಹಂತದ ರಾಕೆಟ್ ನಿರರ್ಥಕವಾದ ಹೆಣಭಾರವಾಗುತ್ತದೆ. ಆದ್ದರಿಂದ ಕೂಡಲೆ ಥಾರ್ ರಾಕೆಟ್ ಕಳಚಿಕೊಂಡು ಬಿದ್ದು ಹೋಗುವ ಏರ್ಪಾಟಿರುತ್ತದೆ. ತತ್‌ಕ್ಷಣವೆ ಎರಡನೆಯ ಹಂತದ ವಾನ್‌ಗಾರ್ಡ್‌ನ ಇಂಧನಗಳು ಹೊತ್ತಿಕೊಂಡು ರಾಕೆಟ್ಟಿನ ವೇಗವನ್ನು ಸೆಕೆಂಡಿಗೆ ಸುಮಾರು ಐದು ಮೈಲಿಗಳ ವರೆಗೂ ಏರಿಸುತ್ತವೆ. ಜೊತೆಯಲ್ಲಿಯೆ ಪ್ರಧಾನ ರಾಕೆಟ್ಟಿನ ಸುತ್ತ ಇರುವ ಎಂಟು ಭ್ರಮಣ ರಾಕೆಟ್ಟುಗಳೂ ಹೊತ್ತಿಕೊಂಡು ಮೇಲಕ್ಕೇರುತ್ತಿರುವ ರಾಕೆಟ್ಟಿಗೆ ಬುಗುರಿಯಂತೆ ತಿರುಗುವ ಚಲನೆಯನ್ನೂ ಕೊಡುತ್ತವೆ.

ವಾನ್‌ಗಾರ್ಡ್‌ನ ಇಂಧನಗಳು ಉರಿದು ಬರಿದಾದ ಕೂಡಲೆ ಅದೂ ಕಳಚಿಕೊಂಡು ಬೀಳುತ್ತದೆ. ಅನಂತರ ಮೂರನೆಯ ಹಂತಕ್ಕೂ ಚೀತದ ಹೊರೆಗೂ ಹೊದಿಕೆಯಾಗಿರುವ ಶಂಕುವಿನ ಆಕಾರದ ಮೂಗನ್ನು (ರಕ್ಷಾಕವಚವನ್ನು) ಕೊಡವಿ ಬಿಡುತ್ತಾರೆ. ಈಗ ಮೂರನೆಯ ಹಂತದ ರಾಕೆಟ್ ಹೊತ್ತಿಕೊಂಡು ಸುಮಾರು ಆರು ಸೆಕೆಂಡುಗಳ ಕಾಲ ಉರಿಯುತ್ತದೆ. ರಾಕೆಟ್ಟಿನ ವೇಗ ಈಗ ಸೆಕೆಂಡೊಂದಕ್ಕೆ ಏಳು ಮೈಲಿಗಳನ್ನು ಮೀರಿರುತ್ತದೆ, ಅಂದರೆ ಘಂಟೆ ಒಂದಕ್ಕೆ ಇಪ್ಪತ್ತೈದು ಇಪ್ಪತ್ತಾರು ಸಾವಿರ ಮೈಲಿಗಳ ಸುಮಾರಿನಲ್ಲಿರುತ್ತದೆ. ಇದಾದ ಮೇಲೆ ಐದಾರು ನಿಮಿಷಗಳ ಕಾಲ ರಾಕೆಟ್ ಅಂತರಿಕ್ಷದಲ್ಲಿ ಚಾರುತ್ತಿರುತ್ತದೆ, ಅಂದರೆ ಯಾವ ಇಂಧನಶಕ್ತಿಯನ್ನೂ ಬಳಸಿಕೊಳ್ಳದೆ ಆರಾಮವಾಗಿ ಹಾರುತ್ತಿರುತ್ತದೆ. ಈ ಅವಧಿಯಲ್ಲಿ ಅದರ ವೇಗ, ದಿಕ್ಕುಗಳನ್ನು ಭೂಮಿಯ ಮೇಲಿನ ವೀಕ್ಷಕರು ಅಳೆಯುತ್ತಿರುತ್ತಾರೆ. ಈ ವೇಗ ದಿಕ್ಕುಗಳಿಗೂ ಅವರು ಗುಣಿಸಿ ನಿರ್ಣಯಿಸಿದ್ದ ವೇಗ ದಿಕ್ಕುಗಳಿಗೂ ವ್ಯತ್ಯಾಸ ಕಂಡುಬಂದಲ್ಲಿ ಅವುಗಳನ್ನು ಸರಿಪಡಿಸುವುದಕ್ಕೋಸ್ಕರ ನೆಲದಿಂದಲೇ ರೇಡಿಯೊ ಸಂಕೇತಗಳನ್ನು ಕಳಿಸಿ ಮೂರನೆಯ ಹಂತದಲ್ಲಿ ಇದಕ್ಕಾಗಿಯೆ ಇಟ್ಟಿದ್ದ ಕೆಲವು ಜೊತೆ ಸೂಕ್ಷ್ಮ ರಾಕೆಟ್‌ಗಳನ್ನು ಹೊತ್ತಿಸಿ ರಾಕೆಟ್‌ನ್ನು ಗೊತ್ತಾದ ದಿಕ್ಕಿಗೆ ತಿರುಗಿಸುತ್ತಾರೆ. ಆ ಮೇಲೆ ಮೂರನೆಯ ಹಂತವೂ ಕಳಚಿಕೊಳ್ಳುತ್ತದೆ.

ಈಗ ಚಂದ್ರಶೋಧಕ ಸ್ತಂಭ ಮಾತ್ರ ಚಂದ್ರನ ದಿಕ್ಕಿನಲ್ಲಿ ಸುಮಾರು ಎರಡು ಲಕ್ಷ ಮೈಲಿಗಳ ದೂರ, ಎರಡೂವರೆ ದಿನಗಳ ಕಾಲ ಅಂತರಿಕ್ಷದಲ್ಲಿ ಯಾರ ಹಂಗೂ ಇಲ್ಲದೆ ತಾನಾಗಿಯೆ ಜಾರಿ ಹೋಗುತ್ತಿರುತ್ತದೆ. ಈ ಅವಧಿಯಲ್ಲಿ ಅದರ ವೇಗ ಕ್ರಮಪಾಗಿ ಇಳಿಯುತ್ತ ಬರುತ್ತದೆ. ಚಂದ್ರನಿಂದ ಸ್ತಂಭ ಸುಮಾರು ೨೫,೦೦೦ ಮೈಲಿಗಳ ದೂರದಲ್ಲಿರುವಾಗ ಹಿಲೊ ಎಂಬ ಕೇಂದ್ರದಿಂದ ರೇಡಿಯೊ ಸಂಕೇತಗಳನ್ನು ಕಳಿಸಿ ಸ್ತಂಭದಲ್ಲಿರುವ ಹಿಂದುಮುಂದಲ ರಾಕೆಟ್ಟನ್ನು (ಚಿತ್ರ ೧-ಬಿ ನೋಡಿ) ಹೊತ್ತಿಸಿ ಸ್ತಂಭದ ವೇಗವನ್ನು ಇಳಿಸುತ್ತಾರೆ. ಈ ದೂರದಲ್ಲಿ ಸ್ತಂಭ ಹವಾಯಿ ದ್ವೀಪಗಳಿಂದ ನೇರವಾದ ದೃಷ್ಟಿಪಥದಲ್ಲಿರುತ್ತದಾದ್ದರಿಂದ ಈ ಕೆಲಸಕ್ಕೆ ಹಿಲೋ ಕೇಂದ್ರವನ್ನಾರಿಸಿದ್ದಾರೆ.

## ರಾಕೆಟ್ಟಿನ ವೇಗವನ್ನೇಕೆ ಇಳಿಸಬೇಕು?

ಇಲ್ಲಿ ರಾಕೆಟ್ಟಿನ ವೇಗವನ್ನೇಕೆ ಇಳಿಸಬೇಕು ಎಂಬ ಪ್ರಶ್ನೆ ನಮ್ಮ ಮನಸ್ಸಿಗೆ ಹೊಳೆಯುವುದು ಸಹಜ. ಭೂಮಿ ಹೇಗೆ ಎಲ್ಲ ಪದಾರ್ಥಗಳನ್ನೂ ತನ್ನ ಕಡೆಗೆ ಸೆಳೆದುಕೊಳ್ಳುತ್ತದೆಯೊ ಹಾಗೆಯೆ ಚಂದ್ರನೂ ಸೆಳೆಯುತ್ತಾನೆ. ಆದ್ದರಿಂದ ಚಂದ್ರನ ದಿಕ್ಕಿನಲ್ಲಿ ಹೊರಟ ರಾಕೆಟ್ಟಿನ ದೂರ ಭೂಮಿಯಿಂದ ಹೆಚ್ಚಾದಂತೆಲ್ಲ ಭೂಮಿಯ ಎಳೆತ ಕಡಿಮೆಯಾಗುತ್ತ ಬಂದು ಚಂದ್ರನ ಎಳೆತ ಹೆಚ್ಚುತ್ತ ಹೋಗುತ್ತದೆ. ಭೂಮಿ ಚಂದ್ರರಿಗಿರುವ ದೂರ ಸುಮಾರು ೨,೪೦,೦೦೦ ಮೈಲಿಗಳು. ರಾಕೆಟ್ ಭೂಮಿಯಿಂದ ೨,೧೬,೦೦೦ ಮೈಲಿಗಳಲ್ಲಿ, ಅಂದರೆ ಚಂದ್ರನಿಂದ ೨೪,೦೦೦ ಮೈಲಿಗಳಲ್ಲಿ (೯ : ೧) ಇದ್ದಾಗ ಈ ಎರಡು ಎಳೆತಗಳೂ ಸಮವಾಗಿ ಆದರೆ ಎದುರುಬದುರಾಗಿ ಇರುತ್ತವೆ. ಆದ್ದರಿಂದ ಇದು ಸಂಧಿಸ್ಥಾನ. ಭೂಮಿಯಿಂದ ಹೊರಟ ರಾಕೆಟ್ ಸಂಧಿಸ್ಥಾನ ಸೇರಿದರೆ ಸಾಕು, ಹಾಗೆ ಸೇರಿದಾಗ ವೇಗಶೂನ್ಯವಾಗಿದ್ದರೂ ಚಂದ್ರನ ಮೇಲೆ ಬೀಳುತ್ತದೆ.

ಉದಾಹರಣೆಗೆ ಘಂಟೆಗೆ ೨೪,೬೬೦ ಮೈಲಿಗಳ ವೇಗದಲ್ಲಿ ಭೂಮಿಯನ್ನು ಬಿಟ್ಟ ರಾಕೆಟ್ ಸಂಧಿಸ್ಥಾನವನ್ನು ವೇಗರಹಿತವಾಗಿ ಸೇರಿದರೂ ಅಲ್ಲಿಂದ ಮುಂದಕ್ಕೆ ಚಂದ್ರನ ಸೆಳೆತಕ್ಕೆ ಸಿಕ್ಕಿ ವೇಗ ವರ್ಧನಗೊಂಡು ಚಂದ್ರನ ಮೇಲೆ ಬೀಳುತ್ತದೆ. ಆದರೆ ಭೂಮಿಯನ್ನು ಬಿಟ್ಟಾಗ ವೇಗ ಘಂಟೆಗೆ ಕೇವಲ ೨೫,೦೦೦ ಮೈಲಿಗಳಿಗೆ ಏರಿದರೆ ಸಾಕು; ಅಂಥ ರಾಕೆಟ್ ಸಂಧಿಸ್ಥಾನ ಸೇರಿದಾಗ ಅದರ ವೇಗ ಘಂಟೆಗೆ ಐದು ಸಾವಿರ ಮೈಲಿಗಳಷ್ಟಿರುತ್ತದೆ. ಇದರಲ್ಲಿ ಒಂದು ಅಪಾಯ ಇದೆ. ಅದು ಹೀಗೆ. ಘಂಟೆಗೆ ೨೫,೦೦೦ ಮೈಲಿಗಳನ್ನು ಮೀರಿದ ವೇಗ ಹೇಗೆ ಭೂಮಿಯ ಗುರುತ್ವಾಕರ್ಷಣದ ಮಿತಿಯನ್ನು ದಾಟದ ವೇಗವೋ ಹಾಗೆಯೆ ಘಂಟೆಗೆ ೫೦೦೦ ಮೈಲಿಗಳ ವೇಗ ಚಂದ್ರನ ಗುರುತ್ವಾಕರ್ಷಣವನ್ನು ಮೀರಿದ ವೇಗ. ಆದ್ದರಿಂದ ಅಂಥ ರಾಕೆಟ್ ಚಂದ್ರನ ಪಕ್ಕದಲ್ಲಿ ಹಾದು ಹೋಗಿ ಅಂತರಿಕ್ಷಗತವಾಗಿಬಿಡುತ್ತದೆ. ಆದ್ದರಿಂದಲೆ ಚಂದ್ರನನ್ನು ಸಮೀಪಿಸಿದಾಗ ರಾಕೆಟ್ಟಿನ ವೇಗವನ್ನು ಹಿಂದುಮುಂದಲ ರಾಕೆಟ್ಟನ್ನು ಹೊತ್ತಿಸಿ ಇಳಿಸುವ ಪ್ರಸಂಗ ಬೀಳುತ್ತದೆ.

ಅಂತೂ ಹವಾಯ ದ್ವೀಪಗಳ ಹಿಲೋಯಿಂದ ರೇಡಿಯೋ ಸಂಕೇತಗಳನ್ನು ಕಳಿಸಿ ಚಂದ್ರಶೋಧಕ ಸ್ತಂಭದ ವೇಗವನ್ನು ಇಳಿಸಿ ಅದನ್ನು ಚಂದ್ರಪ್ರದಕ್ಷಿಣಪಥದಲ್ಲಿ ನಿಲ್ಲಿಸುವ ಯೋಜನೆಯನ್ನು ಅಮೇರಿಕದ ವಾಯುದಳದವರು ಮಾಡಿದ್ದರು. ಸ್ತಂಭದಲ್ಲಿರುವ ರಾಕೆಟ್‌ನ್ನು ಒಂದು ಅಯಸ್ಕಾಂತಮಾಪಕದ (ಮ್ಯಾಗ್ನೆಟಾ ಮಿಟರ್‌ನ) ತಂತಿಯ ಸುರುಳಿ ಸುತ್ತಿರುತ್ತದೆ. ಇದು ಚಂದ್ರಲೋಕದ ಅಯಸ್ಕಾಂತತ್ವವನ್ನು ಅಳೆಯುತ್ತದೆ. ಹಾಗೆಯೇ ಎರಡು ಪಕ್ಕಗಳಲ್ಲಿ ಎರಡು ಪ್ರಭಾವಿದ್ಯುತ್ಕೋಶ (ಫೋಟೊ ಇಲೆಕ್ಟ್ರಿಕ್ ಸೆಲ್) ಗಳನ್ನು ಸ್ಥಾಪಿಸಿರುತ್ತಾರೆ. ಸ್ತಂಭ ಚಂದ್ರನನ್ನು ಸುತ್ತುತ್ತಿರುವಂತೆಯೇ ಇವು ರಶ್ಮಾಶೀತಬೆಳಕಿನಲ್ಲಿ ಚಂದ್ರಲೋಕದ ಸ್ಥೂಲ ಚಿತ್ರವನ್ನು ಹಿಡಿದು ಆ ಚಿತ್ರವನ್ನು ವಿದ್ಯುತ್ಸಂಕೇತಗಳನ್ನಾಗಿ ರ ಪಾಂತರಿಸುತ್ತವೆ. ಇದೇ ರೀತಿಯಲ್ಲಿ ಉಲ್ಕಾಕಣಗಳನ್ನೂ ಸ್ತಂಭದ ಒಳಗಿ ಮತ್ತು ಹೊರಗಿನ ಉಷ್ಣಾಂಶಗಳನ್ನೂ ರಾಕೆಟ್ ಒಳಗಿನ ಒತ್ತಡವನ್ನೂ ಅಳೆಯುವ ಉಪಕರಣಗಳೂ ಸ್ತಂಭದಲ್ಲಿ ಅಡಕವಾಗಿರುತ್ತವೆ.

ಈ ಎಲ್ಲ ಉಪಕರಣಗಳು ಸಂಗ್ರಹಿಸಿದ ಅಂಕಿ ಅಂಶಗಳನ್ನು ವಿದ್ಯುದ್ರೂಪಕ್ಕೆ ಪರಿವರ್ತಿಸಿ ಅವನ್ನು ಭೂಮಿಗೆ ಸೆಕಂಡೊಂದಕ್ಕೆ ೧೦ ಕೋಟಿ ೮೦ ಲಕ್ಷ ೩೦ ಸಾವಿರಗಳ ಆವರ್ತಸಂಖ್ಯೆಯ ರೇಡಿಯೊ ಅಲೆಗಳ ಮೂಲಕ ಪ್ರಸಾರಮಾಡಬಲ್ಲ ಪ್ರೇಷಕ (ಟ್ರಾನ್ಸ್‌ಮಿಟರ್), ಅದರ ಪ್ರಸರಣ ತಂತಿಗಳು ಮತ್ತು ಪ್ರೇಷಕಕ್ಕೆ ವಿದ್ಯುಚ್ಛಕ್ತಿಯನ್ನು ಒದಗಿಸುವ ಬ್ಯಾಟರಿಗಳು ಇವೇ ಸ್ತಂಭದಲ್ಲಿರುವ ಉಳಿದ ಸಾಧನಗಳು. (ಚಿತ್ರ ೧-ಬಿ ನೋಡಿ).

ಚಂದ್ರನನ್ನು ಇಂಥ ಚಂದ್ರಶೋಧಕ ಸುಮಾರು ಒಂದು ವಾರ ಕಾಲ ವಿವಿಧ ಪಥಗಳಲ್ಲಿ ಪ್ರದಕ್ಷಿಣೆ ಮಾಡಿ ಅನಂತರ ಅದೃಶ್ಯವಾದೀತೆಂಬ ನಿರೀಕ್ಷಣೆ ಇದೆ. ಈ ಅವಧಿಯಲ್ಲಿ ಇದು ಭೂಮಿಯ ದೃಷ್ಟಿಗೆ ಮರೆಯಾಗದಂತೆ ನೋಡಿಕೊಳ್ಳಲು ಮತ್ತು ಇದು ಕಳಿಸುವ ಸಂದೇಶಗಳನ್ನು ಶೇಖರಿಸಿಡಲು ಹವಾಯ್‌ನ ಹಿಲೋ ಕೇಂದ್ರ, ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯದ ಜೋಡ್ರೆಲ್ ಬ್ಯಾಂಕ್‌ನ ಬೃಹದ್ರೇಡಿಯೊ ಟೆಲೆಸ್ಕೋಪ್, ಮಸಾಚುಸೆಟ್ಸ್‌ನ ಮಿಲ್‌ಸ್ಟೋನ್ ಹಿಲ್, ಮಲಯಾದ ಸಿಂಗಪುರ ಮತ್ತು ಫ್ಲಾರಿಡಾದ ಕೆನವೆರಾಲ್ ಭೂಶಿರದ ಕೇಂದ್ರ, ಇವು ಎವೆಯಿಕ್ಕದೆ ಎಚ್ಚರಿಕೆಯಿಂದ ಕಾವಲಿರುತ್ತವೆ. ಇವಲ್ಲದೆ ಒಂಭತ್ತು ಉಪಕೇಂದ್ರಗಳ ಮತ್ತು ಇತರ ಅನಧಿಕೃತ ವೀಕ್ಷಕರ ಸಹಕಾರದ ನಿರೀಕ್ಷಣೆಯೂ ಇದೆ.

ಇದುವರೆಗೆ ಈ ದಿಕ್ಕಿನಲ್ಲಿ ರಷ್ಯನರ ನಾಲ್ಕೈದು ಪ್ರಯತ್ನಗಳೂ ಅಮೇರಿಕದ ಒಂದು ಪ್ರಯತ್ನವೂ ವಿಫಲವಾಗಿದ್ದರೂ ಪ್ರಪಂಚದ ರಾಜಕೀಯ ಪರಿಸ್ಥಿತಿ ಬಹಳವಾಗಿ ಹದಗೆಡದಿದ್ದರೆ ಈ ವರ್ಷ ಕಳೆಯುವುದರೊಳಗಾಗಿ ಇಂಥ ಒಂದು ಪ್ರಯತ್ನವಾದರೂ ಯಶಸ್ವಿಯಾಗಬಹುದೆಂದು ನಾವು ನಿರೀಕ್ಷಿಸಬಹುದು.

## ಅಂತರಿಕ್ಷಯಾನದ ಇತರ ವೈಚಿತ್ರ್ಯಗಳು

ಅಂತರಿಕ್ಷಯಾನದ ಒಂದೆರಡು ಇತರ ವೈಚಿತ್ರ್ಯಗಳನ್ನು ಅರಿತುಕೊಳ್ಳಲು ಇದು ಸರಿಯಾದ ಸಮಯ. ಚಂದ್ರನನ್ನು ಸೇರಬೇಕಾದರೆ, ಭೂಮಿಯನ್ನು ಬಿಟ್ಟಾಗ ರಾಕೆಟ್ಟಿಗೆ ಕನಿಷ್ಠಪಕ್ಷ ಘಂಟೆಗೆ ೨೪,೬೬೦ ಮೈಲಿಗಳ ವೇಗವಿರಬೇಕೆಂದು ಹಿಂದೆಯೇ ತಿಳಿಸಿದೆ. ಈ ವೇಗದಲ್ಲಿ ಹೊರಟ ರಾಕೆಟ್ಟಿಗೆ ಚಂದ್ರನನ್ನು ಸೇರಲು ೧೧೫ ಘಂಟೆಗಳು ಬೇಕಾಗುತ್ತವೆ. ಅದರ ಬದಲು ಆರಂಭವೇಗ ಘಂಟೆಗೆ




ಚಿತ್ರ ೨

ಚಂದ್ರಪಥದಲ್ಲಿ ಕಪ್ಪಾಗಿ ತೋರಿಸಿರುವ ಅರ್ಧ ಭಾಗ ಭೂಪಥದ ಮೇಲೆ ಇದೆ. ಉಳಿದರ್ಧ ಭಾಗ—ಛಿದ್ರರೇಖೆಯ ಭಾಗ—ಭೂಪಥದ ಕೆಳಗೆ ಇದೆ.

೨೫,೦೦೦ ಮೈಲಿಗಳಾದರೆ ಪ್ರಯಾಣಕಾಲ ೫೦ ಘಂಟೆಗಳು ಮಾತ್ರ; ಆರಂಭವೇಗ ಘಂಟೆಗೆ ೩೯,೫೪೦ ಮೈಲಿಗಳಿಗೇರಿದರೆ ಪ್ರಯಾಣಕಾಲ ಕೇವಲ ೬ ಘಂಟೆಗಳಿಗಿಳಿಯುತ್ತದೆ. ಅಂದರೆ ವೇಗ ನೂರರಲ್ಲೊಂದು ಭಾಗದಷ್ಟು ಹೆಚ್ಚಿದರೆ ಕಾಲ ಅರ್ಧದಷ್ಟು ಕಡಮೆಯಾಗುತ್ತದೆ; ವೇಗ ಎರಡರಷ್ಟಾದರೆ ಕಾಲ ಇಪ್ಪತ್ತರಲ್ಲೊಂದು ಭಾಗಕ್ಕೆ ಕುಸಿಯುತ್ತದೆ! ಭೂಯಾತ್ರೆಯಲ್ಲಿ ಇಂಥ ಸನ್ನಿವೇಶ ಅಸಾಧ್ಯ.



ಚಿತ್ರ ೩
ಥಾರ ಏಬಲ್ ನೆಲವನ್ನು ಬಿಟ್ಟು ಗಗನಕ್ಕೇರುತ್ತಿರುವಾಗ ತೆಗೆದ ಚಿತ್ರ

ಮತ್ತೊಂದು ಸಂಗತಿ. ರಾಕೆಟ್ಟಿನ ಯಾನಕಾಲವಾದ ಎರಡೂವರೆ ದಿನಗಳಲ್ಲಿ ಆರಂಭದಲ್ಲಿ ವೇಗೋತ್ಕರ್ಷಕ್ಕೆ ಐದಾರು ನಿಮಿಷಗಳನ್ನು, ಕಡೆಯಲ್ಲಿ ವೇಗಕ್ಷಯಕ್ಕಾಗಿ ಮೂರು ನಾಲ್ಕು ನಿಮಿಷಗಳನ್ನು ಬಿಟ್ಟರೆ, ಉಳಿದ ಕಾಲದಲ್ಲಿ ರಾಕೆಟ್ ಯಾನ ಯಾವ ಇಂಧನಸಹಾಯವನ್ನೂ ಅಪೇಕ್ಷಿಸುವುದಿಲ್ಲ. ಸುಮಾರು ಎರಡೂವರೆ ಲಕ್ಷ ಮೈಲಿಗಳಪ್ರಯಾಣದಲ್ಲಿ, ನಾನೂರು ಐನೂರು ಮೈಲಿಗಳನ್ನುಳಿದು ಮಿಕ್ಕ ಪ್ರಯಾಣವೆಲ್ಲ ಬಿಟ್ಟಿ-ಟಿಕೆಟ್ಟಿಲ್ಲದ-ಪ್ರವಾಸ.

ಇನ್ನೊಂದು ವಿಚಾರಾರ್ಹವಾದ ವಿಷಯ. ಚಂದ್ರಯಾನದ ಪ್ರಥಮ ಪ್ರಯತ್ನಕ್ಕೆ ಆಗಸ್ಟ್ ೧೭ ನೆಯ ದಿನವನ್ನು ಆರಿಸಿದ್ದು ಆಕಸ್ಮಿಕವೆ ಅಥವಾ ಆ ದಿನದಲ್ಲಿ ಏನಾದರೂ ವೈಶಿಷ್ಟ್ಯವಿದೆಯೆ ಎಂಬುದು. ಭೂಮಿ ಚಂದ್ರರಿಗಿರುವ ಸರಾಸರಿ ದೂರ ೨,೩೯,೦೦೦ ಮೈಲಿಗಳೆಂದು ಹಿಂದೆ ತಿಳಿಸಿದೆ. ಚಂದ್ರನ ಭೂಪ್ರದಕ್ಷಿಣಪಥ ಸಂಪೂರ್ಣ ವೃತ್ತಾಕಾರದ್ದಲ್ಲವಾದ್ದರಿಂದ ಚಂದ್ರ ಭೂಮಿಗೆ ಅತ್ಯಂತ ಸಮೀಪ ಬಂದಾಗ—ನೀಚಸ್ಥಾನದಲ್ಲಿದ್ದಾಗ—ಅದರ ದೂರ ೨,೨೬,೦೦೦ ಮೈಲಿಗಳು. ಅತ್ಯಂತ ದೂರ ಹೋದಾಗ—ಉಚ್ಚಸ್ಥಾನ ಸೇರಿದಾಗ ೨,೫೨,೦೦೦ ಮೈಲಿಗಳು. ಹೀಗಿರುವಾಗ ಅದು ಅತ್ಯಂತ ಹತ್ತಿರ ಇರುವ ಕಾಲದಲ್ಲಿ ಚಂದ್ರಯಾನ ಮಾಡುವುದು ಇದ್ದುದರಲ್ಲಿ ಅನುಕೂಲವಲ್ಲವೆ? ಆಗಸ್ಟ್ ೧೭ ಚಂದ್ರ ಹೀಗೆ ನಮ್ಮಿಂದ ಸಮೀಪತಮವಾಗಿದ್ದ ದಿನ. ಇನ್ನೊಂದು ದೃಷ್ಟಿಯಿಂದಲೂ ಆಗಸ್ಟ್ ೧೭ ಅನುಕೂಲದ ದಿನವಾಗಿತ್ತು- ಚಂದ್ರಪಥ ಭೂಪಥಗಳು ಒಂದೇ ತಲದಲ್ಲಿಲ್ಲ, ಒಂದಕ್ಕೊಂದು ಸ್ವಲ್ಪ ಓರೆಯಾಗಿವೆ. ಆದ್ದರಿಂದ ಈ ಪಥಗಳು ಸಂಧಿಸುವ ಸ್ಥಾನಗಳಲ್ಲಿ ಚಂದ್ರನಿದ್ದಾಗ ಮಾತ್ರ ಅಂದರೆ ರಾಹು ಚಂದ್ರರ ಅಥವಾ ಕೇತು ಚಂದ್ರರ ಸಮಾಗಮವಾದಾಗ ಮಾತ್ರ ಸೂರ್ಯ, ಭೂಮಿ, ಚಂದ್ರರು ಒಂದೇ ತಲದಲ್ಲಿರುತ್ತಾರೆ. ಈ ಸಂನಿವೇಶ ಒದಗಿದಾಗ ರಾಕೆಟ್ ಚಂದ್ರನನ್ನು ಸೇರುವಂಥ ಪಥವನ್ನು ಗುಣಿಸುವುದು ಹೆಚ್ಚು ಸುಲಭ. ಆಗಸ್ಟ್ ೧೯-೨೦, ಅಂದರೆ ರಾಕೆಟ್ ಚಂದ್ರನನ್ನು ಮುಟ್ಟುವುದೆಂದು ನಿರೀಕ್ಷಿಸಿದ್ದ ದಿನ ಇಂಥ ರಾಹುಚಂದ್ರ ಸಮಾಗಮ ದಿನವೂ ಆಗಿತ್ತು. ಚಿತ್ರ ೨ ರಲ್ಲಿ ಈ ಸಂನಿವೇಶವನ್ನೂ ರಾಕೆಟ್ಟಿನ ಪಥವನ್ನೂ ಗುರುತಿಸಿದೆ. ಚಂದ್ರ ಭೂಮಿಯನ್ನು ಒಂದು ಸಲ ಸುತ್ತಲು ೨೭ ದಿನಗಳನ್ನು ತೆಗೆದುಕೊಳ್ಳುತ್ತದೆಯಾದ್ದರಿಂದ, ಆಗಸ್ಟ್ ೧೭ ರ ಅನಂತರದ ಅನುಕೂಲದ ದಿನ ಸೆಪ್ಟೆಂಬರ್ ೧೪ ಆಗಿತ್ತು. ಅನೇಕ ಇತರ ಕಾರಣಗಳಿಂದ ಆ ದಿನ ಅಮೇರಿಕನ್ನರು ಪ್ರಯೋಗ ನಡೆಸಲಿಲ್ಲ.

## ಮಾನವನ ಚಂದ್ರಲೋಕಯಾತ್ರೆ

ಹೀಗೆ ಸಾಧನೋಪಕರಣಗಳನ್ನು ಚಂದ್ರಲೋಕಕ್ಕೆ ಕಳಿಸುವ ಸಮಸ್ಯೆಯನ್ನು ಪರಿಶೀಲಿಸಿದ್ದಾದ ಮೇಲೆ, ಜನಗಳು ಚಂದ್ರಲೋಕಯಾತ್ರೆಯನ್ನು ಹೇಗೆ ಮಾಡಬಲ್ಲರು ಎಂಬ ಪ್ರಶ್ನೆ ಉಳಿದಿದೆ. ಇದು ತೊಡಕಾದ ಪ್ರಶ್ನೆಯೆ.



ಚಿತ್ರ ೪
ಚಂದ್ರಲೋಕದ ಮೇಲೆ ಹತ್ತು ಮೈಲು ಎತ್ತರದಲ್ಲಿ ಹಾರುತ್ತಿರುವ ಆಕಾಶ ನೌಕೆಗೆ ಆ ಲೋಕದ 'ಆಲ್ಪ್ಸ' ಪರ್ವತಶ್ರೇಣಿಯ ಮಹಾಕಣಿವೆ ಕಾಣುವದು ಹೀಗೆ

ಮೊದಲನೆಯದಾಗಿ ರಾಕೆಟ್ ಭೂಮಿಯನ್ನು ಬಿಟ್ಟ ಮೊದಲ ನಾಲ್ಕೈದು ನಿಮಿಷಗಳಲ್ಲಿ ಅದರ ವೇಗವೃದ್ಧಿ ಬಹಳ ತೀವ್ರವಾಗಿರುತ್ತದೆ. ಮಾನವನ ಶರೀರಕ್ರಿಯೆಗಳ ಮೇಲೆ ಇದರಿಂದ ಹಲವು ದುಷ್ಪರಿಣಾಮಗಳಾಗುತ್ತವೆ. ಇದಕ್ಕೆ ಪರಿಹಾರ ಮಾರ್ಗಗಳನ್ನು ವೈದ್ಯವಿಜ್ಞಾನಿಗಳು ಕಂಡುಹಿಡಿಯುತ್ತಿದ್ದಾರೆ. ಇದೇ ರೀತಿಯಲ್ಲಿಯೆ ಪ್ರಯಾಣದ ಕೊನೆಯಲ್ಲಿ ವೇಗಕ್ಷಯವಾಗುವಾಗ ಸಂಭವಿಸುವ ವಿಪರೀತ ಕ್ರಿಯೆಗಳಿಗೂ ತನ್ನ ಮನಶ್ಶರೀರಗಳನು ಒಗ್ಗಿಸಿಕೊಳ್ಳುವುದರಲ್ಲಿ ಅಂತರಿಕ್ಷಯಾತ್ರಿಕನು ಶಿಕ್ಷಿತನಾಗಿರಬೇಕು.

ಎರಡನೆಯದಾಗಿ ರಾಕೆಟ್ ಆಕಾಶದಲ್ಲಿ ಜಾರು

ತ್ತಿರುವಾಗ ಪ್ರಯಾಣಿಕನಿಗೆ ಭಾರರಹಿತ ಸ್ಥಿತಿಯು ಅನುಭವವಾಗುತ್ತದೆ. ಈ ವಿಚಿತ್ರ ಅನುಭವಕ್ಕೆ ಮನಸ್ಸು ಸೋಲದಿರುವಂತೆ ಅವನು ತರಬೇತು ಪಡೆದಿರಬೇಕು. ಇವೆರಡು ತೊಂದರೆಗಳನ್ನೆದುರಿಸುವುದು ಕಷ್ಟವಾದರೂ ಅಸಾಧ್ಯವಲ್ಲವೆಂಬುದನ್ನು ರಷ್ಯನರ ಎರಡನೆಯ ಸ್ಪುಟ್ನಿಕ್‌ನಲ್ಲಿದ್ದ ನಾಯಿ ತೋರಿಸಿದೆ.

ಮೂರನೆಯದು ರಾಕೆಟ್‌ನ ಭಾರಕ್ಕೆ ಸಂಬಂಧಿಸಿದ್ದು. ಎಂಭತ್ತೈದು ಪೌಂಡುಗಳ ಚಂದ್ರ-ಶೋಧಕ ಸ್ತಂಭವನ್ನು ಚಂದ್ರನಿಗೊಯ್ಯಲು ೧ ಲಕ್ಷ ಪೌಂಡುಗಳ ರಾಕೆಟ್ ಬೇಕಾಗುತ್ತದೆ ಎಂದ ಮೇಲೆ ಇಬ್ಬರು ಮೂವರು ಪ್ರಯಾಣಿಕರನ್ನುಆರೇಳು ದಿನಗಳ ಕಾಲ ಅವರಿಗೆ ಅವಶ್ಯವಾಗಿ ಬೇಕಾಗುವ ಆಹಾರೋಪಚಾರಗಳೊಂದಿಗೆ ಚಂದ್ರಲೋಕಕ್ಕೆ ನೂಕಬೇಕಾದರೆ ಕಡೆಯ ಪಕ್ಷ ೨,೦೦೦ ಟನ್‌ಗಳ ರಾಕೆಟ್ ಬೇಕಾಗುತ್ತದೆ. ಇಷ್ಟೊಂದು ಶಕ್ತಿ-ಧನ ವ್ಯಯಗಳನ್ನು ತಟ್ಟಿಕೊಳ್ಳುವುದು ಶ್ರೀಮಂತ ರಾಷ್ಟ್ರಗಳಿಗೂ ಕಷ್ಟವೆ. ಮುನ್ನೂರರಿಂದ ಐನೂರು ಮೈಲಿಗಳ ಎತ್ತರದಲ್ಲಿ ಭೂಪ್ರದಕ್ಷಿಣೆ ಮಾಡುತ್ತಿರುವ ಕೃತಕ ಉಪಗ್ರಹಗಳನ್ನು ಸ್ಥಾಪಿಸುವುದೊಂದೇ ಇದಕ್ಕಿರುವ ಪರಿಹಾರ ಮಾರ್ಗ. ಇಂತಹ ಅಂತರಿಕ್ಷ ನಿಲ್ದಾಣಗಳಲ್ಲಿ ಇಂಧನಸಾಮಗ್ರಿಗಳನ್ನು ಶೇಖರಿಸಿಟ್ಟದ್ದರೆ, ಭೂಮಿಯಿಂದ ಹೊರಟ ರಾಕೆಟ್‌ಗಳು ಈ ನಿಲ್ದಾಣಗಳಿಗೆ ಬಂದು ತಮಗೆ ಅವಶ್ಯವಾದಷ್ಟು ಇಂಧನವನ್ನು ಸೆಳೆದುಕೊಂಡು ಪ್ರಯಾಣವನ್ನು ಮುಂದುವರಿಸಬಹುದು. ಆಗ ೨,೦೦೦ ಟನ್‌ಗಳ ರಾಕೆಟ್ ಬದಲು ೫೦ ಟನ್ನಿನದೇ ಸಾಕಾದೀತು.

ನಾಲ್ಕನೆಯದಾಗಿ ಅಂತರಿಕ್ಷದಲ್ಲಿ ಜಾರುತ್ತಿರುವ ರಾಕೆಟ್ಟುಗಳ ಮೇಲೆ ಸತತವಾಗಿ ಉಲ್ಕಾಶಿಲೆಗಳ ಮತ್ತು ವಿಶ್ವಕಿರಣಗಳ ಸುರಿಮಳೆ ಆಗುತ್ತಿರುತ್ತದೆ. ಉದಾಹರಣೆಗೆ ಈಗ ಭೂಮಿಯನ್ನು ಘಂಟೆಗೆ ೧೮,೦೦೦ ಮೈಲಿಗಳ ವೇಗದಲ್ಲಿ ಸುತ್ತುತ್ತಿರುವ ರಷ್ಯನರ ಮತ್ತು ಅಮೆರಿಕನರ ಉಪಗ್ರಹಗಳು ಭೂಮಿಯಿಂದ ಸುಮಾರು ೭೦೦ ಮೈಲಿಗಳ ಎತ್ತರದಲ್ಲಿ ವಿಶ್ವಕಿರಣಗಳ ವರ್ಷಾಪಾತ ಅತ್ಯಧಿಕವಾಗಿದೆ ಎಂದು ಸಂದೇಶ ಕಳಿಸುತ್ತಿವೆ. ಈ ವಿಶ್ವಕಿರಣಗಳು ಪ್ರಾಣಿಗಳಿಗೆ ಅಪಾಯಕಾರಿಗಳಾದ್ದರಿಂದ ಜನರಿಲ್ಲದ ಚಂದ್ರಶೋಧಕ ರಾಕೆಟ್ಟುಗಳಿಂದ ಭೂಚಂದ್ರಾಂತರ ಆಕಾಶ ಪ್ರದೇಶದಲ್ಲಿ ಇಂಥ ವಿಶ್ವಕಿರಣವರ್ಷವಲಯಗಳು ಇನ್ನೂ ಎಲ್ಲೆಲ್ಲಿವೆಯೆಂಬ ಪರಿಶೋಧನೆ ಮೊದಲು ನಡೆಯಬೇಕು, ಹಾಗೂ ಇವುಗಳಿಂದ ಪಾರಾಗುವ ರಕ್ಷಣಾಮಾರ್ಗಗಳೇನು ಎಂಬ ಸಂಶೋಧನೆ ಜರುಗಬೇಕು.

ಐದನೆಯದಾಗಿ ಚಂದ್ರಲೋಕದಲ್ಲಿ ನೀರಿಲ್ಲ, ಗಾಳಿಯಿಲ್ಲ. ಆದ್ದರಿಂದ ಚಂದ್ರನ ನೆಲದ ಮೇಲೆ ಇಳಿಯುವ ಮುನ್ನ ಆಪಾದಮಸ್ತಕ ಪರ್ಯಂತ ಅರ್ಥಾತ್ ಅಂಗಾಲು ಕೆಳಗಿನಿಂದ ನೆತ್ತಿಯ ಮೇಲಿನವರೆಗೆ ರಕ್ಷಾಕವಚದೊಳಗೆ ಯಾತ್ರಿಕ ಸೇರಿಕೊಳ್ಳಬೇಕು. ಈ ಕವಚದೊಳಗೆ ಅವನು ಉಸಿರಾಡುವ ಗಾಳಿಯು ಯುಕ್ತರೀತಿಯಲ್ಲಿ ಪರಿಚಲನೆಯಾಗುವಂತೆ ವ್ಯವಸ್ಥೆ ಇರಬೇಕು.

## ಚಂದ್ರಪ್ರವಾಸಿಗಳ ಸಂಕಷ್ಟ

ಚಂದ್ರನಿಗೆ ವಾಯುಮಂಡಲವಿಲ್ಲದಿರುವುದು ಚಂದ್ರಪ್ರವಾಸಿಗಳನ್ನು ಮತ್ತೊಂದು ಕಷ್ಟಕ್ಕೀಡು ಮಾಡುತ್ತದೆ. ಹಗಲಲ್ಲಿ ಚಂದ್ರನ ಉಷ್ಣಾಂಶ ೧೦೦ ಸೆಂಟಿಗ್ರೇಡು ಡಿಗ್ರಿ ( ಕುದಿಯುವ ನೀರಿನಷ್ಟು ) ಇರುತ್ತದೆ. ರಾತ್ರಿಯಲ್ಲಿ ಅಂದರೆ ಸೂರ್ಯಾಸ್ತವಾದ ಕ್ಷಣವೆ ಉಷ್ಣಾಂಶ —೧೫೦ ಕ್ಕೆ ಧುಮುಕುತ್ತದೆ. ಅಷ್ಟೇ ಅಲ್ಲ, ನೀವು ಸೂರ್ಯಮುಖರಾಗಿ ನಿಂತಿದ್ದರೆ, ನಿಮ್ಮ ಎದೆ ಕೆಂಡದ ಹಾಗೆ ಕಾಯುತ್ತದೆ, ನಿಮ್ಮ ಬೆನ್ನು ಮಂಜುಗಡ್ಡೆಗಿಂತ ತಣ್ಣಗಾಗುತ್ತದೆ. ಆದ್ದರಿಂದ ರಕ್ಷಾಕವಚದೊಳಗೆ ಶರೀರವನ್ನೆಲ್ಲ ಏಕರೀತಿಯ ಉಷ್ಣಾಂಶದಲ್ಲಿಟ್ಟರುವಂಥ , ಉಷ್ಣನಿಯಂತ್ರಕ ಸಾಧನವಿರಬೇಕು, ಜೊತೆಗೆ ಚಂದ್ರಲೋಕದ ವಿಪರೀತ ಶೀತೋಷ್ಣಗಳಿಗೆ ನ್ಯೆಯೊಡ್ಡಲೇಬೇಕಾದ ಕವಚ ಸಾಮುಗ್ರಿ ಅವುಗಳ ಪರಿಣಾಮವಾಗಿ ಬಿರುಕುಬಿಡದಂಥದ್ದಾಗಿರಬೇಕು, ಅದರೊಳಗಿರುವ ವ್ಯಕ್ತಿಯ ಚಲನವಲನಗಳಿಗೆ ಬಗ್ಗುವಂಥದ್ದೂ ಆಗಿರಬೇಕು.

ಇನ್ನು ಇಷ್ಟು ಭಾರವಾದ ಪೋಷಾಕನ್ನು ಹೊತ್ತಿರುವವನು ಚಂದ್ರನ ಮೇಲೆ ಓಡಾಡುವುದು ಹೇಗೆ ಎಂದು ನಿಮಗನ್ನಿಸಿರಬೇಕು. ಆದರೆ ಈ ತೊಂದರೆಯಂತೂ ಅವನಿಗಿರುವುದಿಲ್ಲ. ಏಕೆಂದರೆ, ಚಂದ್ರನ ಗುರುತ್ವಾಕರ್ಷಣ ಬಲ ಭೂಮಿಯುದರ ಆರರಲ್ಲೊಂದರಷ್ಟು ಮಾತ್ರ. ಹೀಗಾಗಿ ಇಲ್ಲಿಯ ಅರುವತ್ತು ಪೌಂಡು ಚಂದ್ರನ ಮೇಲೆ ಹತ್ತು ಪೌಂಡಿನಷ್ಟೇ ತೂಗುತ್ತದೆ.

ಆರನೆಯದು ಮತ್ತು ಕಡೆಯದು ಚಂದ್ರಪ್ರವಾಸಿ ತಿರುಗಿ ಭೂಮಿಗೆ ಹಿಂದಿರುಗುವಾಗ ಭೂಮಿಯ ವಾಯುಮಂಡಲದೊಳಗೆ ಅವನ ರಾಕೆಟ್ಟಿನ ಪುನಃಪ್ರವೇಶದ ಸಮಸ್ಯೆ. ರಾಕೆಟ್ ನೆಲದಿಂಡ ಮೇಲೆ ಹತ್ತುವಾಗ ಅದು ಎದುರಿಸುವ ವಾಯುಘರ್ಷಣೆಗಿಂತ ನೆಲಕ್ಕೆ ಬೀಳುವಾಗ ಎದುರಿಸಬೇಕಾದ ವಾಯುಘರ್ಷಣೆ ತೀವ್ರವಾದದ್ದು. ಏಕೆಂದರೆ ಹತ್ತುವಾಗ ರಾಕೆಟ್ಟಿನ ವೇಗ ಘಂಟೆಗೆ ಕೆಲವು ಸಾವಿರ ಮ್ಯೆಲಿಗಳಷ್ಟನ್ನು ಮುಟ್ಟುವ ಹೊತ್ತಿಗಾಗಲೆ ಅದು ವಾಯುಮಂಡಲದ ದಟ್ಟವಾದ ಭಾಗವನ್ನು ದಾಟ ವಿರಳತರ ಭಾಗದಲ್ಲಿ ಚಲಿಸುತ್ತಿರುತ್ತದೆ. ಇಳಿಯುವಾಗಾದರೆ ಸಾಂದ್ರತರ ಭಾಗಗಳನ್ನು ರಾಕೆಟ್ ತೂರುತ್ತಿದ್ದಂತೆ ವೇಗ ಅಧಿಕತರವಾಗುತ್ತಿರುತ್ತದೆ. ಇದರ ಪರಿಣಾಮವಾಗಿ ರಾಕೆಟ್ಟಿನ ಮುಖ ಮೂಗುಗಳ ಕಾವು ಏರಿ ಅವು ಕರಗಿ ನೀರಾಗುವ ಸಂಭವವುಂಟು. ಈ ದುಷ್ಪರಿಣಾಮವನ್ನು ತಡೆಗಟ್ಟಲು, ಟೈಟಾನಿಯಂ ಮಿಶ್ರಣಲೋಹದಿಂದ ಮಾಡಿರುವ ರಾಕೆಟ್ಟಿನ ಚೂಪು ಮೂಗನ್ನು ಮೊಂಡುಮಾಡಿ ಅದರ ಮೇಲೆ ಪ್ಲಾಸ್ಟಿಕ್ ದ್ರವ್ಯವನ್ನು ಹಲವು ಪದರಗಳಲ್ಲಿ ಬಳಿಯುವುದು ಒಂದು ಮಾರ್ಗ. ಇದಕ್ಕೆ ಸಹಾಯಕವಾಗಿ ಹಿಂದುಮುಂದಲ 'ರಾಕೆಟ್ಟನ್ನು ಹೊತ್ತಿಸಿ ವೇಗವನ್ನೂ ಇಳಿಸಲೇಬೇಕಾಗುತ್ತದೆ. ಆದರೂ ಸಂಪೂರ್ಣವಾಗಿ ಸಮರ್ಪಕವಾದ ಉಪಾಯ ಇನ್ನೂ ಹೊಳೆದಿಲ್ಲ.

ಇಷ್ಟೊಂದು ಮಹಾಪ್ರತಿಬಂಧಕಗಳಿರುವಾಗ ಮಾನವನ ಚಂದ್ರಲೋಕಯಾತ್ರೆ ಅಸಾಧ್ಯವೆಂದು ನಮಗನ್ನಿಸಬಹುದು. ಸಾಲದ್ದಕ್ಕೆ ಇವುಗಳ ಜೊತೆಗೆ ಭೂಮಿಯಿಂದ ಎಲ್ಲ ದಿಕ್ಕುಗಳಲ್ಲಿಯೂ ಎರಡು ಮೂರು ಲಕ್ಷ ಮ್ಯೆಲಿಗಳ ವರೆಗೆ ವ್ಯಾಪಿಸಿರುವ ಅಂತರಿಕ್ಷಪ್ರದೇಶದ ಆಳವಾದ ಶೋಧನೆ ನಡೆದಂತೆ ಅಲ್ಲಿಯ ಗುಪ್ತ ಪ್ರವಾಹಗಳು, ಕೊರಕಲುಗಳು, ತಿಟ್ಟುಗಳು ಹೊಸ ಅಡ್ಡಿಗಳನ್ನು ಎಬ್ಬಿಸಬಹುದು. ಈ ಎಲ್ಲ ಪ್ರತಿಬಂಧಕಗಳನ್ನೆದುರಿಸುವುದು ತುಂಬ ದುಷ್ಕರ ಎನ್ನುವುದರಲ್ಲಿ ಸಂದೇಹವೇ ಇಲ್ಲ. ಆದರೆ ಅದು ಅಸಾಧ್ಯವೂ ಅಲ್ಲ. ಇವಕ್ಕೆಲ್ಲ ಪರಿಹಾರಮಾರ್ಗಗಳನ್ನು ಕಂಡು ಹಿಡಿಯುವುದಕ್ಕೆ ಎಷ್ಟು ಕಾಲ ಬೇಕಾಗುತ್ತದೆ ಎಂದು ಭವಿಷ್ಯ ನುಡಿಯುವುದು ಸಾಹಸದ ಮಾತೇ ಸರಿ. ಹೀಗಿದ್ದರೂ ಈ ಶತಮಾನದ ಕಡೆಯ ವರ್ಷಗಳು ಮುಗಿಯುವುದರೊಳಗೆ ಮಾನವನು ಚಂದ್ರಲೋಕದ ಮೇಲೆ ಕಾಲಿಟ್ಟಿರುತ್ತಾನೆ ಎಂಬ ನಿರೀಕ್ಷಣೆ ನಿರಾಧಾರವಾದದ್ದಲ್ಲ.

---

**ಜ್ಯೋತಿಷಿ ಶ್ರೀ. ಕೃಷ್ಣಶಾಸ್ತ್ರಿ ಭಿಡೆ**
ಭವಿಷ್ಯ ಕಥನ ಕಾರ್ಯಾಲಯ,
ಮನೆ ನಂ. ೨೮೮೦ ಪೋಲೀಸ ಸ್ಟೇಶನ ಎದುರಿಗೆ
ಖಡೇಬಜಾರ–ಬೆಳಗಾಂವಿ

# ವರ್ಷ ಭವಿಷ್ಯ

**ಶಾಲಿವಾಹನ ಶಕೆ ೧೮೮೦ ಕಾರ್ತಿಕ ಶುದ್ಧ ಪ್ರತಿಪದ ಬುಧವಾರ ತಾ. ೧೨ ನವ್ಹಂಬರ ೧೯೫೮ ರಿಂದ ಶಕೆ ೧೮೮೧ ಆಶ್ವಿನ ಬಹುಳ ೩೦ ತಾ. ೩೧ ಅಕ್ಟೋಬರ ೧೯೫೯ರ ವರೆಗೆ**

**( ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗೆ )**

**ಸೂಚನೆ :—** ಈ ವರ್ಷದಲ್ಲಿ ಬೇರೆ ಬೇರೆ ಗ್ರಹಗಳು ಆಯಾ ರಾಶಿಯವರ ಮೇಲೆ ಯಾವ ಒಳಿತು ಕೆಟ್ಟ ಪರಿಣಾಮುಗಳನ್ನುಂಟು ಮಾಡುವವೆಂಬದನ್ನು ಸಂಕಲಿತ ರೀತಿಯಿಂದ ಇಲ್ಲಿ ಭವಿಷ್ಯವನ್ನು ಹೇಳಲಾಗಿದೆ. ಇದನ್ನೋದಿ ತಮ್ಮ ಭವಿಷ್ಯ ಫಲಗಳ ಅಂದಾಜು ಬಹುತಃ ಎಲ್ಲರಿಗೆ ಆಗಬಹುದು.

ವಾಸ್ತವಿಕವಾಗಿ ಪ್ರತಿಯೊಬ್ಬನ ಭವಿಷ್ಯವನ್ನು ಅವನ ಜನ್ಮಕುಂಡಲಿಯಿಂದ ವಿಚಾರಿಸಿದ್ದಾದರೆ ಅದು ಪೂರ್ಣವಾಗಿ ಕೂಡಿ ಬರುತ್ತದೆ. ಆದರೂ ಈ ಭವಿಷ್ಯವನ್ನು ನೋಡಿದರೆ ಈ ವರ್ಷದಲ್ಲಿ ಸುಖ-ದುಃಖಗಳ ವಾತಾವರಣದ ಕಲ್ಪನೆ ಬರುವದರಲ್ಲಿ ಸಂದೇಹವಿಲ್ಲ. ವಾಚಕರು ಈ ಭವಿಷ್ಯವನ್ನು ಮನನಪೂರ್ವಕವಾಗಿ ಮತ್ತು ಜನ್ಮರಾಶಿಗನುಸಾರವಾಗಿ ಜನ್ಮಲಗ್ನಕ್ಕನುಲಕ್ಷಿಸಿಯೂ ಓದಿಕೊಂಡು ಅದರಂತೆ ನಡೆದದ್ದಾದರೆ ಅಶುಭ ಫಲಗಳ ಬಗ್ಗೆ ಬಹಳಷ್ಟು ಜಾಗ್ರತೆಯಿಂದ ಇರಬಹುದಾಗಿದೆ. ಅದೇ ರೀತಿ ಶುಭಫಲ ಪ್ರಾಪ್ತವಾಗುವಾಗ ಹೆಚ್ಚು ಉತ್ಸಾಹದಿಂದ ಪ್ರಯತ್ನಮಾಡಲು ಅವಕಾಶ ದೊರೆಯುವದು ಎಂಬುದು ಸುನಿಶ್ಚಿತವಾಗಿದೆ.

ಪುರುಷರಂತೆ ಸ್ತ್ರೀಯರಿಗೂ ಸಾಧಾರಣವಾಗಿ ಅದೇ ರೀತಿ ಫಲಗಳು ದೊರೆಯುವವು. ಆದರೂ ದೈಹಿಕ ಭೇದದ ತಾರತಮ್ಯವನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾದುದು ಅವಶ್ಯವೆಂದು ಪ್ರತ್ಯೇಕ ಹೇಳಬೇಕಿಲ್ಲ.

## ಮೇಷ

ಒಟ್ಟಿನಲ್ಲಿ ಈ ರಾಶಿಯವರಿಗೆ ಈ ವರ್ಷ ಪ್ರಾಪಂಚಿಕ ದೃಷ್ಟಿಯಿಂದ ಬಹಳ ಸುಖದ್ದೆನಿಸದಿದ್ದರೂ ನೋಕರಿ ಇಲ್ಲವೆ ಉದ್ಯೋಗಕ್ಷೇತ್ರದಲ್ಲಿ ಒಳ್ಳೆ ಪ್ರಗತಿಯದು ಮತ್ತು ತುಂಬ ಲಾಭದ್ದೆನಿಸುವದು ನಿಶ್ಚಿತವಾಗಿದೆ.

ಈ ರಾಶಿಯ ಜನರ ಆರೋಗ್ಯ ಒಟ್ಟಾರೆ ಕಳೆದ ಎರಡು ಎರಡೂವರೆ ವರ್ಷಗಳಿಗಿಂತ ಬಹಳ ಅನುಕೂಲವುಳಿಯುವದು. ಆದರೆ ನವಂಬರ ೨೦ರ ವರೆಗೆ ಮತ್ತು ಜನೆವರಿ ೧೬ ರಿಂದ ಮಾರ್ಚ ೨೯ರ ವರೆಗೆ ಅನೇಕರಿಗೆ ನೇತ್ರಪೀಡೆ, ಮೂಲವ್ಯಾಧಿ, ಇಲ್ಲವೆ ಮೂತ್ರಾಶಯ ಕೆಡುವುದು ಮೊದಲಾದ್ದರಿಂದ ಬಳಲಬೇಕಾಗುವದು. ಅನೇಕರಿಗೆ ಆಗಸ್ಟ ೨೮ ರಿಂದ ಅಕ್ಟೋಬರ ೧೩ ರ ವರೆಗೆ ಅತಿಸಾರ ಕೂಡ ಇಲ್ಲವೆ ಗೋಣು ಒಳೆಯುವದರಿಂದ ಸ್ವಲ್ಪ ತೊಂದರೆಯ ಸಂಭವವಿದೆ. ಉಳಿದ ಅವಯುವಗಳೆಲ್ಲ ನಿರೋಗಿ ಉಳಿದು ಮನಸ್ಸಿನಲ್ಲಿ ಎಣಿಸಿದಂತೆ ದಿನಚರ್ಯೆ ನಡೆಯುವದು. ಉಳಿದ ವಿಷಯುಗಳಲ್ಲಿಯೂ ದೇಹಸುಖ ಉತ್ತಮ ದೊರೆಯುವದು ನಿಜ. ಆದರೆ ಸುಮಾರು ಹತ್ತು ತಿಂಗಳು ಈ ರಾಶಿಯ ಭಾಗ್ಯೇಶನಾದ ಗುರು ಅಷ್ಟಮದಲ್ಲಿರುವದರಿಂದ ಮನಸ್ಸಿನಲ್ಲಿ ಮಾತ್ರ ಒಂದು ಬಗೆಯ ರಖರಖಿ ಇದ್ದದ್ದೆ. ಅನೇಕ ಸಲ ಸ್ವಜಾತೀಯ ಇಲ್ಲವೆ ಆಪ್ತವರ್ಗದವರೊಡನೆ ಏನೂ ಸಂಬಂಧವಿಲ್ಲದೆಯೆ ಸಂಶಯದಿಂದ ಬಹಳ ಮನಸ್ತಾಪವಾಗುವದು. ಕುಟುಂಬದಲ್ಲಿಯ ಪ್ರತಿಯೊಬ್ಬನ ಬಗ್ಗೆ ಅನವಶ್ಯಕ ಆಸ್ಥೆಯನ್ನು ತಾಳುವಿರಿ. ಪರಿಣಾಮವಾಗಿ ನಿಮ್ಮ ಬಗ್ಗೆ ಆದರ ತಾಳುವದರ ಬದಲು ಅವರು ಉಪಹಾಸ ಮಾಡಹತ್ತುವರು. ವಿಶೇಷತಃ ಮೇ ೨೨ ರಿಂದ ಜುಲೈ ೧೧ರ ಮಧ್ಯಂತರದ ಅವಧಿಯು ವಿಶೇಷ ಕೊಂಪಕೆಯುದೆನಿಸುವದು.

ಹೆಂಡತಿಯ ಆರೋಗ್ಯ ಸಹಸಾ ಕೆಡುವದಿಲ್ಲ. ಆದರೆ ಕೆಲ ಮನೆತನ ವಿಷಯುಗಳಿಗಾಗಿ ಮಾರ್ಚ ೨೯ ರ ವರೆಗೆ ಹೊರಗೆ ಹೇಳಲಿಕ್ಕೆ ಬಾರದಂಥ ಒಳಗೊಳಗೇ ಅಸಹ್ಯವಾದ ಮಾನಸಿಕ ತೊಂದರೆಯನ್ನು ಅವಳು ಅನುಭವಿಸಬೇಕಾಗುವದು. ಮತ್ತು ಅಲ್ಲಿಯ ವರೆಗೆ ಅವಳು ನಿಮ್ಮೊಡನೆ ಉದಾಸೀನತೆಯಿಂದ ವರ್ತಿಸುವಳು. ಅನಂತರ ಮಾತ್ರ ಅವಳು ಒಳ್ಳೆ ಉತ್ಸಾಹದಿಂದ ವರ್ತಿಸಿ ಉಭಯತರಲ್ಲಿ ಒಳ್ಳೆ ಪ್ರೇಮ ಬೆಳೆಯುವದು. ಮಾರ್ಚ ೨೯ ರ ವರೆಗೆ ಕದಾಚಿತ ಸ್ತ್ರೀದೂರತ್ವದ ಸಂಭವವೂ ಇದೆ. ಯಾರ ವಿವಾಹವಿನ್ನೂ ಆಗಬೇಕಾಗಿದೆಯೊ ಅವರಿಗೆ ಡಿಸೆಂಬರ ೧೬ ರ ವರೆಗೆ ಒಳ್ಳೆ ಬಾಸಿಂಗ ಬಲವಿದೆ. ಅನಂತರ ಅದು ಇಲ್ಲದಿರುವದರಿಂದ ಒಂದು ವೇಳೆ ಕೂಡಿದರೂ ಅದು ಪ್ರತ್ಯಕ್ಷವಾಗಿ ಆಗುವವರೆಗೆ ಒಂದಿಲ್ಲೊಂದು ಅಡಚಣೆ ಬರುವದು. ಆದರೆ ದೊರೆತ ವಧು ಮಾತ್ರ ನಿಮ್ಮಗಿಂತ ರೂಪ-ಗುಣ, ಮತ್ತು ಬುದ್ಧಿ ಈ ಎಲ್ಲ ವಿಷಯುಗಳಲ್ಲಿ ಒಳ್ಳೆ ಅನುಕೂಲಳಾಗಿರುವಳು. ಅವಳ ತವರುಮನೆಯುವರೂ ಒಳ್ಳೆ ವಿಚಾರವಂತರು ಮತ್ತು ಆಚಾರಸಂಪನ್ನರು ಇರುವರು.

ನಿಮ್ಮ ಮಕ್ಕಳಲ್ಲಿ ಯಾರದಾದರೂ ವಿವಾಹ ಮಾಡುವದಿದ್ದರೆ ಅದಕ್ಕೂ ಈ ವರ್ಷ ಬಹಳ ಆಯಾಸಪಡಬೇಕಾಗುವದು. ಸೊಸೆ ಇಲ್ಲವೆ ಅಳಿಯನೇ ಮೊದಲು ಮನಸ್ಸಿಗೆ ಬಾರದ್ದರಿಂದ ಹಾಗೆಯೇ ವೇಳೆ ಕಳಕೊಳ್ಳಬೇಕಾಗುವದು. ಒಂದು ವೇಳೆ ಮನಸ್ಸಿಗೆ ಬಂದರೆ ಕೊಡತಕ್ಕೊಳ್ಳುವದರಲ್ಲಿ ಮುರಿಯುವದು. ಕೂಡಿ ಬಂದರೂ ಆಯುತ್ತಹೊತ್ತಿಗೆ ಏನಾದರೊಂದು ಅಡಚಣೆ ಬಂದು ಗೊತ್ತುಪಡಿಸಿದ ಮುಹೂರ್ತಕ್ಕೆ ಅದು ಆಗುವದಿಲ್ಲ. ಅದರಲ್ಲಿಯೂ ಮಾರ್ಚ ೨೯ ರಿಂದ ಮೇ ೨೨ ರ ಮಧ್ಯಂತರ ಅವಧಿಯು ಕೂಡಿಬರುವದಕ್ಕೆ ಬಹಳ ಅನುಕೂಲ. ಮಕ್ಕಳ ಉನ್ನತಿಗೆ ಈ ವರ್ಷ ಬಹಳ ಉತ್ತಮ. ಪ್ರಕೃತಿಯ ಬಗ್ಗೆಯೂ ಸಹಸಾ ಯಾವ ತಕರಾರೂ ಉಳಿಯದು. ಯಾವನೊ ಒಬ್ಬನೊಡನೆ ಕೂಡಿ ನಡೆಯಲಾರದು. ಉಳಿದವರೆಲ್ಲ ಅನುಕೂಲರಾಗಿಯೇ ವರ್ತಿಸುವರು.

ಧಂದೆ-ಕೂಲಿಕಾರರ ಪ್ರಗತಿಯಲ್ಲಿ ಅಷ್ಟಮ ಗುರುವಿನಿಂದ ಮೊದ ಮೊದಲು ಮಾಂದ್ಯ ಮತ್ತು ಶೈಥಿಲ್ಯವೆನಿಸಿದರೂ ನವಮಶನಿ ವರ್ಷದ ಕೊನೆಯಲ್ಲಿ ಒಳ್ಳೆ ಉತ್ಕರ್ಷವನ್ನುಂಟುಮಾಡುವನು. ಅಂದಾಜಿಗಿಂತ ಹೆಚ್ಚು ಹಣವನ್ನು ಕೊಡದೆ ಬಿಡನು. ಸ್ವತಂತ್ರ ಉದ್ಯೋಗ ಮಾಡುವವರು ಒಳ್ಳೆ ಪ್ರಗತಿ ಹೊಂದುವರು. ಅದೇ ರೀತಿ ನೌಕರದಾರರಿಗೂ ಒಳ್ಳೆ ಅವಕಾಶ ಬೇಕಾದಷ್ಟು ಬರುವವು. ಮೇಲಿನ ಗ್ರೇಡು ಯೋಗ್ಯ ಕಾಲಕ್ಕಲ್ಲದಿದ್ದರೂ ತಡವಾಗಿಯಾದರೂ ನಿಶ್ಚಿತವಾಗಿ ದೊರೆಯುವದು. ಬದಲಿಯಾದರೆ ಇರಲಿಕ್ಕೆ ಅನುಕೂಲ ಸ್ಥಳಕ್ಕೆ ಆಗುವದು. ಆದರೆ ಆ ಸ್ಥಳವು ಕೆಲಸದ ಮತ್ತು ಉಳಿದ ದೃಷ್ಟಿಯಿಂದ ಬಹಳ ಅನುಕೂಲವೆನಿಸುವದು. ಡಿಸೆಂಬರ ೨೫

ರಿಂದ ಮೇ ೨೨, ಜುಲೈ ೧೧ ರಿಂದ ಅಗಷ್ಟ ೨೮ ಮತ್ತು ಅಕ್ಟೋಬರ ೧೩ ರಿಂದ ಮುಂದಿನ ಕಾಲ ಒಳ್ಳೇ ಲಾಭದ ಹಾಗು ಉತ್ಸಾಹವರ್ಧಕವಿರುವದು. ವರಿಷ್ಠರು ಇಲ್ಲವೆ ಆಶ್ರಯದಾತರ ಪೂರ್ಣ ಮರ್ಜಿ ಉಳಿಯುವದು. ಆದರೆ ಕೈಕೆಳಗಿನವರು ಮಾತ್ರ ಸ್ವಲ್ಪ ಅಸಂತುಷ್ಟರಾಗುವರು. ನಿಮ್ಮ ಕರ್ತೃತ್ವಶಕ್ತಿಯ ಬಗ್ಗೆ ಎಲ್ಲರ ಮತವೂ ಅನುಕೂಲವೆ. ವೆಚ್ಚ ಬಹಳಾದರೂ ಅಷ್ಟೊಂದು ಹಣದ ಅಡಚಣೆ ಎನಿಸದು. ಯಾವದೊಂದು ಯಾತ್ರೆ ಮಾಡುವಿರಿ. ಆದರೆ ಪ್ರವಾಸದಲ್ಲಿ ಕಷ್ಟ ಬಹಳ. ಸ್ವಪ್ನಗಳಲ್ಲಿ ಬಹಳಷ್ಟು ಶುಭಸೂಚಕ. ಹಿರಿಯ ತಾಯಿತಂದೆಗಳಿದ್ದರೆ ಅವರ ಪ್ರಕೃತಿ ಚನ್ನಾಗಿ ಉಳಿಯುವದು. ತಂದೆಗಿಂತ ತಾಯಿಯೊಡನೆ ಹೆಚ್ಚು ಕೂಡಿ ನಡೆಯುವದು. ಮನೋರಂಜನೆಯ ಪ್ರಸಂಗ ಆಗಾಗ ಬರುವದು. ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ವೆಚ್ಚ ಮತ್ತು ತೊಂದರೆ ಹೆಚ್ಚು. ಆದರೆ ಷಷ್ಠ ರಾಹುವಿನಿಂದ ಅವುಗಳಲ್ಲಿ ಅನೇಕ ಸಂದರ್ಭಗಳಲ್ಲಿ ಪ್ರಚಂಡ ಜಯ ದೊರೆತು ಪ್ರತಿಪಕ್ಷಿಯು ಪೂರ್ಣ ಪರಾಜಯ ಹೊಂದಬೇಕಾಗುವದು. ಮಾರ್ಚ ೨೯ ರಿಂದ ಶತ್ರು ಸಂಹಾರಕ್ಕೆ ಒಳ್ಳೇ ಏರಿಕೆಯ ಕಾಲ.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ಆದಕ್ಕೆ ಅತ್ಯಂತ ಸುಲಭ ಯೋಗವಿದೆ. ಬಹುಶಃ ಅನೇಕರಿಗೆ ಕನ್ಯಾರತ್ನ ಹುಟ್ಟಿದರೂ ಅದು ನಿರೋಗಿ ಮತ್ತು ಒಳ್ಳೆ ಸುದೈವಿ ಇರುವದು. ಸ್ವಲ್ಪ ಉಷ್ಣದ ಬಾಧೆಯೆನಿಸಿದರೂ ಒಟ್ಟಾರೆ ಬಾಣಂತಿತನ ಸುಖಮಯವಾಗುವದು.

ಈ ರಾಶಿಯ ವಿದ್ಯಾರ್ಥಿಗಳು ಪರೀಕ್ಷೆಗೆ ಕೂಡ್ರುವವರಿದ್ದರೆ ನೂರರಲ್ಲಿ ೪೦ ರಷ್ಟು ಮಾತ್ರ ತೇರ್ಗಡೆ ಹೊಂದುವ ಯೋಗ ಸ್ಥೂಲಮಾನದಿಂದ ಇದೆ. ಆದರಲ್ಲಿಯೂ ಯಾರ ಪರೀಕ್ಷೆ ೧೬ ನವಂಬರ ವರೆಗೆ ಇಲ್ಲವೆ ಡಿಶೆಂಬರ ೧೫ ರಿಂದ ಜನೆವರಿ ೧೪, ಫೆಬ್ರುವರಿ ೧೨ ರಿಂದ ಮಾರ್ಚ ೧೩, ಎಪ್ರಿಲ ೧೩ ರಿಂದ ಜುಲೈ ೧೬ ಮತ್ತು ಅಗಸ್ಟ ೧೭ ರಿಂದ ಸಪ್ಟಂಬರ ೧೭ ಈ ಮಧ್ಯಂತರ ಅವಧಿಯಲ್ಲಿ ಆದುದಾದರೆ ಅವರಿಗೆ ಸಾಮಾನ್ಯ ಗುಣ ದೊರೆತರೂ ನಿಶ್ಚಯವಾಗಿ ತೇರ್ಗಡೆಹೊಂದುವರೆಂದು ತಿಳಿದುಕೊಳ್ಳಬೇಕು.

# ವೃಷಭ

ಒಟ್ಟಾರೆ ಈ ರಾಶಿಯವರಿಗೆ ಈ ವರ್ಷ ಒಳ್ಳೆ ಉತ್ಕರ್ಷದಾಯಕವಿಲ್ಲದಿದ್ದರೂ ಸ್ವಲ್ಪಿಲ್ಲ ಸ್ವಲ್ಪ ಪ್ರಗತಿದಾಯಕವಿದೆ. ಮತ್ತು ಶಾರೀರಿಕ ತೊಂದರೆ ಅಲ್ಪಸ್ವಲ್ಪ ಎನಿಸಿದರೂ ಪ್ರಾಪಂಚಿಕ ವಿಷಯಗಳಲ್ಲಿ ಬಹಳ ಸುಖ ಮತ್ತು ಯಶಸ್ಸು ಸಿಕ್ಕುವಲ್ಲಿ ಸಂದೇಹವಿಲ್ಲ.

ವರ್ಷಾರಂಭದಿಂದಲೆ ಅಷ್ಟಮ ಶನಿ ಮತ್ತು ಮಾರ್ಚ ೨೯ ರ ವರೆಗೆ ವಕ್ರಿಯಾಗುವದರಿಂದ ಮತ್ತು ಕೆಲ ದಿನ ದ್ವಾದಶ, ಕೆಲ ದಿನ ಪ್ರಥಮ ಮಂಗಲ ಇರುವದರಿಂದ ಈ ರಾಶಿಯವರ ಪ್ರಕೃತಿ ಬಹಳಷ್ಟು ಸಮಾಧಾನಕಾರಕವೆನಿಸುವದಿಲ್ಲ. ಆದರೆ ಡಿಶೆಂಬರ ೧೬ ರಿಂದ ಬರುವ ಸಪ್ತಮ ಗುರುವಿನಿಂದ ಹಾಸಿಗೆ ಹಿಡಿಯುವಷ್ಟು ಪ್ರಕೃತಿ ಕೆಡುವದಿಲ್ಲ. ವಿಶೇಷತಃ ಬಾಯಿ, ಮೂಗು, ಕಿವಿ, ಗಂಟಲು ಮತ್ತು ಕಾಲು ಇವುಗಳ ಸಂಬಂಧದಲ್ಲಿ ವಿಕಾರವುಂಟಾಗುವದು. ಅದರಂತೆ ವಾತದ ವಿಕಾರವೂ ಯಾವಾಗಾದರೊಮ್ಮೆ ಆಗುವದು. ಉಳಿದ ವಿಷಯಗಳಲ್ಲಿ ದೇಹಸುಖ ಬಹಳ ಅನುಕೂಲ. ಕುಟುಂಬದಲ್ಲಿಯ ಬಹುಶಃ ಎಲ್ಲ ಜನರು ಪ್ರೇಮದಿಂದ ವರ್ತಿಸುವರು. ಮನೆಯಲ್ಲಿ ಧಾರ್ಮಿಕ ಕಾರ್ಯಗಳು ಮತ್ತು ಮಂಗಲ ಕಾರ್ಯಗಳು ಬಹಳಾಗುವವು. ಆಪ್ತರಲ್ಲಿ ಒಬ್ಬರಿಂದ ಡಿಸೆಂಬರ ೧೫ ರಿಂದ ಫೆಬ್ರುವರಿ ೧೨ ರ ವರೆಗೆ ಬಹಳ ತೊಂದರೆಯಾಗುವ ಸಂಭವವಿದ್ದರೂ ಉಳಿದವರು ಪ್ರೇಮದಿಂದ ವರ್ತಿಸುವರು. ಸ್ತ್ರೀವರ್ಗದಲ್ಲಿ ಮಾತ್ರ ನಿಮ್ಮ ಬಗ್ಗೆ ಸ್ವಚ್ಛ ಮನಸ್ಸು ಉಳಿಯುವದಿಲ್ಲ.

ಹೆಂಡತಿಗೆ ಈ ವರ್ಷ ಮಾರ್ಚ ೨೯ ರಿಂದ ಮೇ ೨೨ ಮತ್ತು ಅಕ್ಟೋಬರ ೧೩ ನಂತರ ಕಾಲದಲ್ಲಿ ಸ್ವಲ್ಪಶಾರೀರಿಕ ಕ್ಲೇಶವೆನಿಸಿದರೂ ಉಳಿದ ದಿವಸ ಒಳ್ಳೆ ಆರೋಗ್ಯದ್ದೆನಿಸುವವು. ಉಭಯತರು ಒಳ್ಳೆ ಸೌಖ್ಯವನ್ನನುಭೋಗಿಸುವಿರಿ. ಬಹಳ ಕೆಲಸಗಳಲ್ಲಿ ಈಗ ಅವಳ ಸಲಹೆ ತೆಗೆದುಕೊಂಡು ವರ್ತಿಸಿದರೆ ಹೆಚ್ಚು ಯಶ ದೊರೆಯುವದು. ಅದರಂತೆ ನಿಮ್ಮ ಮದುವೆ ಈಗ ಆಗುವದಿದ್ದರೆ ಅದಕ್ಕೆ ಡಿಶೆಂಬರ ೧೬ ರಿಂದ ಒಳ್ಳೆ ಬಾಶಿಂಗಬಲ ಬರುವದರಿಂದ ಅದು ಒಮ್ಮೆಲೆ ಗೊತ್ತಾಗಿ, ಗೊತ್ತುಪಡಿಸಿದಂತೆ ಏನೂ ಟಬ್ಬಾಟವಿಲ್ಲದೆ ನಡೆದು ಹೋಗುವದು. ವಧು ಇಲ್ಲವೆ ವರ ಪರಸ್ಪರ ರೂಪ ಮತ್ತು ಗುಣಗಳಿಂದ ಪೂರ್ಣ ಅನುರೂಪವಿರುವರು ಮತ್ತು ಪರಿಚಯವಾದ ನಂತರ ಪರಸ್ಪರರ ಸ್ವಭಾವಧರ್ಮವೂ ಒಬ್ಬರಿಗೊಬ್ಬರಿಗೆ ಚನ್ನಾಗಿ ಸೇರಹತ್ತುವದು.

ಅದರಂತೆಯೆ ನಿಮ್ಮ ಮಕ್ಕಳ ಮದುವೆ ಮಾಡುವದಿದ್ದರೆ ಅದೂ ಅಲ್ಪಾಯಾಸದಿಂದ ಕೂಡಿಬರುವದು. ವೆಚ್ಚವೂ ಅಂದಾಜಿಗಿಂತ ಕಡಿಮೆ ಆಗುವದು. ಬೀಗರು ಸ್ವಲ್ಪ ಕಂಜೂಷರಿದ್ದರೂ ಸೊಸೆ ಇಲ್ಲವೆ ಅಳಿಯ ನಿಮ್ಮ ಮನಸ್ಸಿಗೆ ಬರುವಂಥವರೇ ಸಿಗುವರು. ಅದರಂತೆ ಪಂಚಮ ರಾಹುವಿನಿಂದ ಮಕ್ಕಳಲ್ಲಿ ಒಬ್ಬಿಬ್ಬರು ನಿಮ್ಮ ಮಾತು ಮೀರಿ ವರ್ತಿಸುವರು. ಆದರೆ ಉಳಿದವರು ನೀವು ಹೇಳಿದಂತೆಯೇ ಕೇಳುವರು. ಅವರ ಮನಸ್ಸು ಮತ್ತು ಯೋಗ್ಯತೆಗೆ ತಕ್ಕಂತೆ ಈ ಸಲ ಅವರ ಉನ್ನತಿಯು ಆಗುವದು. ಅವರಲ್ಲಿ ಒಬ್ಬರಿಗೆ ಜನೆವರಿ ೬ ರೊಳಗಾಗಿ ಆದರೆ ಇನ್ನೊಬ್ಬರಿಗೆ ಜೂನ ರಿಂದ ೨೫ ರ ಮಧ್ಯಂತರ ಅವಧಿಯಲ್ಲಿ ವಿಶೇಷವಾಗಿ ನೆನಪಿನಲ್ಲಿಡುವಂತೆ ಉನ್ನತಿಯಾಗುವದು. ಅದರಂತೆ ಈ ವರ್ಷ ಬಂಧುಗಳು, ಮಿತ್ರರ ಮತ್ತು ಹೆಂಡತಿಯ ಬಂಧುಗಳು ಉನ್ನತಿ ಹೊಂದುವರು.

ನಿರ್ವಾಹವಿಲ್ಲದೆ ಮಾಡುವ ನೋಕರಿ ಇಲ್ಲವೆ ಧಂದೆಯ ದೃಷ್ಟಿಯಿಂದ ವಿಚಾರ ಮಾಡಿದರೆ ಖರೀದಿ ಮಾರಾಟ ಮಾಡುವ ಧಂದೆಯವರಿಗಿಂತ ಬುದ್ಧಿಜೀವಿ ಧಂದೆ ಮಾಡುವವರಿಗೆ ಈ ವರ್ಷ ಹೆಚ್ಚು ಲಾಭದಾಯಕವಿದೆ. ಅದರಲ್ಲಿ ಸಾವಕಾಶವಾಗಿ ಪ್ರಗತಿಯಾಗುತ್ತಿದ್ದರೂ ಪ್ರತಿಷ್ಠೆ ಮತ್ತು ಲೌಕಿಕವೂ ಹೆಚ್ಚುವದು. ನಿಮ್ಮ ಮಾತಿಗೆ ಕಲ್ಪನೆಗಿಂತ ಹೆಚ್ಚು ಬೆಲೆ ಇದ್ದದ್ದು ಕಂಡುಬರುವದು. ವ್ಯಾಪಾರಿಗೆ ಮಾರ್ಚ ೨೯ ರ ವರೆಗಿನ ಕಾಲವು, ಅದರಂತೆ ಅಗಸ್ಟ ೨೮ ರಿಂದ ಅಕ್ಟೋಬರ ೧೩ ರ ವರೆಗಿನ ಕಾಲವು ಹೆಚ್ಚು ಲಾಭದಾಯಕವೆನಿಸುವದು. ನೋಕರದಾರರಿಗೂ ವರಿಷ್ಠರ ಕಿರಿಕಿರಿಯನ್ನು ಮೇಲಿಂದ ಮೇಲೆ ಸಹಿಸಬೇಕಾಗಿ ಬಂದರೂ ಅವರು ನಿಮ್ಮ ಹಿತವಾಗುವ ರೀತಿಯಲ್ಲಿಯೇ ವರ್ತಿಸುವರು. ಮತ್ತು ಮೇಲಿನ ಗ್ರೇಡು ನಿಮಗೆ ಸಿಕ್ಕುವದಿದ್ದರೆ ಅವರ ಸಿಫಾರಸೂ ಈ ಕಾಲಕ್ಕೆ ಉಪಯೋಗ ಬೀಳುವದು. ಬದಲಿ ಆದರೆ ಲಾಭದ ದೃಷ್ಟಿಯಿಂದ ಅನುಕೂಲ ಸ್ಥಳಕ್ಕೆ ಆದರೂ ಪ್ರಪಂಚದ ದೃಷ್ಟಿಯಿಂದ ಬಹಳ ಅನನುಕೂಲ ಸ್ಥಳಕ್ಕಾಗುವದು. ಕೈಕೆಳಗಿನ ನೌಕರರು ದರ್ಪದಿಂದಾದರೂ ಪ್ರಾಮಾಣಿಕ ರೀತಿಯಿಂದ ವರ್ತಿಸುವರು. ರೊಕ್ಕ ಬೇಕಾದಷ್ಟು ದೊರೆತರೂ ವೆಚ್ಚದ ಪ್ರಮಾಣವೂ ಹೆಚ್ಚುವದರಿಂದ ಶಿಲ್ಲಕು ಬಹಳಷ್ಟು ಉಳಿಯುವದಿಲ್ಲ.

ಆದರೂ ಒಂದೆರಡು ಉಚ್ಚ ವಸ್ತುಗಳನ್ನು ಕೊಳ್ಳುವಿರಿ. ಪ್ರವಾಸ ಬಹಳಷ್ಟು ಆಗದಿದ್ದರೂ ಭೆಟ್ಟಿ ಮತ್ತು ಎಲ್ಲ ಬಗೆಯ ಲೇಖನದ ಕೆಲಸಗಳು ಮನಸ್ಸಿನಂತೆ ಸಂಭವಿಸುವವು. ಮಿತ್ರಸುಖ ಬಹಳ ಅನುಕೂಲ.

ದಾವೆ, ಖಟ್ಲೆ ಇದ್ದರೆ ಉಭಯ ಪಕ್ಷಗಳು ಒಳ್ಳೆ ತುರಸಿನಿಂದ ನಡೆಯುವವು. ಅನುಕೂಲ ಮತ್ತು ಪ್ರತಿಕೂಲ ಹೀಗೆ ಯಾವದೇ ನಿರ್ಣಯ ದೊರೆಯಲಾರದು. ಖಾಸಗಿ ಸ್ಪರ್ಧೆಯಲ್ಲಿ ಮಾತ್ರ ಡಿಶೆಂಬರ ೧೬ ರಿಂದ ನಿಮ್ಮ ಮೇಲ್ಗೈಯಾಗುವದು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ಅವರಿಗೆ ಪ್ರಸವವೇದನೆ ಸ್ವಲ್ಪಾದರೂ ಎನಿಸುವದು. ಜೀವಕ್ಕೆ ಮಾತ್ರ ಅಪಾಯದ ಅಂಜಿಕೆ ಇಲ್ಲ. ಗಂಡು ಹುಟ್ಟಿದರೆ ಅದು ಬಹಳ ಅಶಕ್ತ ಇರುವದು. ಆದರೆ ಕನ್ಯಾ ಹುಟ್ಟಿದರೆ ಅದು ಸದೃಢವಿರುವದು. ವಿಶೇಷವಾಗಿ ಕನ್ಯಾ ಹುಟ್ಟುವ ಸಂಭವವೇ ಹೆಚ್ಚು.

ಪರೀಕ್ಷೆಗೆ ಕೂಡ್ರುವ ವಿದ್ಯಾರ್ಥಿಗಳಲ್ಲಿ ನೂರಕ್ಕೆ ೭೫ ರಷ್ಟಾದರೂ ಪಾಸಾಗುವರು. ಯಾರ ಪರೀಕ್ಷೆ ಜನೆವರಿ ೬ ರೊಳಗಾಗಿ ಮತ್ತು ಅನಂತರ ಜನೆವರಿ ೨೫ ರಿಂದ ಫೆಬ್ರುವರಿ ೧೧, ಎಪ್ರಿಲ ೨೩ ರಿಂದ ಜೂನ ೯ ಮತ್ತು ಸಪ್ಟಂಬರ ೧೮ ರಿಂದ ಅಕ್ಟೋಬರ ೪ ಈ ಮಧ್ಯಂತರ ಅವಧಿಯಲ್ಲಿ ಆಗುವದೊ ಅವರು ಮೊದಲನೇ ವರ್ಗದಲ್ಲಿ ಇಲ್ಲವೆ ಎರಡನೇ ವರ್ಗದಲ್ಲಿಯಾದರೂ ತೇರ್ಗಡೆ ಹೊಂದುವರು. ಸಂಶಯವಿಲ್ಲ.

ವಾಸ್ತವ್ಯ ಅತಿ ದೂರವಾಗುವ ಯೋಗವಿದೆ. ಪ್ರತಿಯೊಬ್ಬರು ತಮ್ಮ ಸ್ವತಂತ್ರ ಬುದ್ಧಿಯಿಂದ ವರ್ತಿಸಹತ್ತುವದರಿಂದ ನಿಮ್ಮ ಮನಸ್ಸು ಸ್ವಲ್ಪ ಕಷ್ಟದ್ದಾಗಿ ಪರಿಣಮಿಸುವದು.

ಧಂದೆ, ಕೂಲಿಕಾರರ ದೃಷ್ಟಿಯಿಂದ ಮಾತ್ರ ಈ ವರ್ಷ ಕೊನೆ ಕೊನೆಯಲ್ಲಿ ಒಳ್ಳೆ ಉನ್ನತಿಯು ಮತ್ತು ಬಹಳಷ್ಟು ಭಾಗ್ಯೋದಯದ್ದಾಗಿ ಪರಿಣಮಿಸುವದು. ಬುದ್ಧಿಜೀವಿ ಮತ್ತು ಶ್ರಮಜೀವಿ ಈ ಎರಡೂ ಬಗೆಯ ಸ್ವತಂತ್ರ ಧಂದೆಮಾಡುವವರಿಗೆ ಮಾರ್ಚ ೨೯ ರಿಂದ ತುಂಬ ಲಾಭವಾಗಹತ್ತುವದು ಮತ್ತು ಮುಂದೆ ಬರುವ ಅವಕಾಶ ಅನಾಯಾಸವಾಗಿ ಲಭ್ಯವಾಗುವದು. ಮತ್ತು ಅದಕ್ಕಿಂತ ನೋಕರರಿಗೆ ಕೂಡ ಪ್ರಥಮತಃ ಮೇ ೨೩ರ ವರೆಗೆ ಅನೇಕ ವಿಘ್ನಗಳು ಉತ್ಪನ್ನವಾದರೂ ಅನಂತರ ದೂರ ದೂರ ಹೋಗಿ ಜುಲೈ ೧೧ ರಿಂದ ಸ್ವಲ್ಪೂ ಉಳಿಯುವದಿಲ್ಲ. ಮತ್ತು ಮೇಲೆ ಹೋಗುವ ಅವಕಾಶ ಕನಸುಮನಸ್ಸಿನಲ್ಲಿ ಇಲ್ಲದಿದ್ದರೂ ಒಮ್ಮೆಲೆ ಅಕಸ್ಮಾತ್ತಾಗಿ ಬರುವದು. ಅನೇಕರಿಗೆ ಕ್ರಮಶಃ ದೊರೆಯುವ ಹಕ್ಕಿಗಿಂತಲೂ ಹೆಚ್ಚು ಮೇಲಿನ ವರ್ಗದ ಅಧಿಕಾರ ದೊರೆಯುವದು. ಮತ್ತು ಆದರಂತೆ ದ್ರವ್ಯಪ್ರಾಪ್ತಿಯ ಪ್ರಮಾಣ ಹೆಚ್ಚಿ ಮನಸ್ಸಿನಂತೆ ಜೀವನವನ್ನು ಸುಧಾರಿಸಿಕೊಳ್ಳಲು ಬರುವದು. ಅದರೂ ಹೆಚ್ಚು ವೆಚ್ಚವಾಗುವದರಿಂದ ಎಷ್ಟು ದುಡು ಬಂದರೂ ಸ್ವಲ್ಪೂ ಕೂಡಿಬೀಳುವದಿಲ್ಲೆಂದೆನಿಸುವದು. ಅನೇಕ ಕೆಲಸಗಳಲ್ಲಿ ಇಮ್ಮಡಿಯಷ್ಟು ಹಣ ವೆಚ್ಚಮಾಡಬೇಕಾಗಿ ಬರುವದು. ವರಿಷ್ಠರು ಇಲ್ಲವೆ ಆಶ್ರಯದಾತರ ಮರ್ಜಿ ಚನ್ನಾಗಿ ಉಳಿಯುವದು. ಅದರೂ ಅವಾಂತರ ಲೋಕಮತ ಮಾತ್ರ ಸ್ವಲ್ಪ ವಿಪರೀತವಾಗುವದು. ಸಮೀಪದ ಯಾತ್ರೆ ಮಾಡುವ ಯೋಗವಿದೆ. ವಿಶೇಷವಾಗಿ ಜನೆವರಿ ೨೫ ರಿಂದ ಫೆಬ್ರುವರಿ ೧೩ರ ಮಧ್ಯಂತರದಲ್ಲಿ ಯಾತ್ರೆ ಸಂಭವಿಸುವದು. ಮಿತ್ರರಲ್ಲಿ ಕೆಲವರು ನಿರರ್ಥಕವಾಗಿ ತಲೆತಿರುಕರಂತೆ ವರ್ತಿಸುವರು. ವಾಹನ ಸುಖಕ್ಕೆ ಈ ವರ್ಷ ಹಿತಕರವಿಲ್ಲ. ಆ ಬಗ್ಗೆ ಸುಖಕ್ಕಿಂತ ಬಹಳ ತೊಂದರೆಯೆನಿಸುವದು. ತಂದೆತಾಯಿ ಜೀವಂತ ಇದ್ದರೆ ಅವರೂ ನಿಮ್ಮ ಮೇಲೆ ಅಸಂತುಷ್ಟ ಮತ್ತು ರುಷ್ಟ ಆಗುವರು. ಬಂಧು ವರ್ಗದವರು ಮಾತ್ರ ಚನ್ನಾಗಿರುವರು.

## ಮಿಥುನ

ಈ ರಾಶಿಯವರಿಗೆ ಒಟ್ಟಿಗೆ ಈ ವರ್ಷ ಪ್ರಕೃತಿ ಮತ್ತು ಪ್ರಾಪಂಚಿಕ ಸುಖದ ದೃಷ್ಟಿಯಿಂದ ಎಷ್ಟೊಂದು ತ್ರಾಸದಾಯಕವೆನಿಸುವದೋ ಅಷ್ಟೇ ಉದ್ಯೋಗಧಂದೆಗೆ ಉತ್ಕರ್ಷದ್ದೆನಿಸುವದೆಂಬುದು ನಿಶ್ಚಿತ.

ಜನವರಿಯಿಂದ ಬರುವ ಷಷ್ಠಗುರು ಮತ್ತು ಮೇ ೨೨ ರ ವರೆಗೆ ಕೆಲದಿನ ದ್ವಾದಶ ಮತ್ತು ಮುಂದೆ ಕೆಲದಿನ ಪ್ರಥಮ ಮಂಗಳ ಹಾಗು ಇಡಿ ವರ್ಷವಿರುವ ಸಪ್ತಮ ಶನಿ ಇವರಿಂದ ಈ ರಾಶಿಯವರ ಆರೋಗ್ಯ ಎಷ್ಟು ಚೆನ್ನಾಗಿ ಉಳಿಯಬೇಕೊ ಅಷ್ಟು ಉಳಿಯುವದಿಲ್ಲ. ಮೇಲಿಂದ ಮೇಲೆ ಒಂದಿಲ್ಲೊಂದು ಬಗೆಯ ತೊಂದರೆ ಇದ್ದದ್ದೇ. ದಮ್ಮಿನ ವಿಕಾರವಿದ್ದವರು ಹೆಚ್ಚು ಜಪ್ಪಿಸಬೇಕು. ಮೇ ೨೨ ರ ನಂತರ ಮಾತ್ರ ಅವರ ಹೊರತು ಉಳಿದವರ ಆರೋಗ್ಯ ಬಹಳ ಮಟ್ಟಿಗೆ ಸುಧಾರಿಸುವದು. ಉಳಿದ ದೃಷ್ಟಿಯಿಂದಲೂ ದೇಹಸುಖಕ್ಕೆ ಈ ವರ್ಷ ಅಷ್ಟೊಂದು ಹಿತಕರವಿರುವದಿಲ್ಲ. ಇಡೀ ವರ್ಷ ಇರುವ ಚತುರ್ಥ ರಾಹು, ಸಮೀಪದ ಆಪ್ತರು, ನೆರೆಯವರು ನೋಕರರು ಮತ್ತು ಮಿತ್ರರು ಇವರೊಡನೆ ಬಹಳ ಮತಭೇದ, ವಿರೋಧ, ವಿತಂಡವಾದದ ಪ್ರಸಂಗ ಇಲ್ಲವೆ ಕಲಹಗಳನ್ನು ಉಂಟು ಮಾಡುವನು. ಮನೆಯವರು ಬಹಳ ಮಟ್ಟಿಗೆ ನಿಮ್ಮ ಮನಸ್ಸನ್ನು ನೋಯಿಸುವರು. ಪ್ರತಿಯೊಬ್ಬ ತನ್ನ ಮನಸ್ಸಿಗೆ ಬಂದಂತೆ ವೆಚ್ಚ ಮಾಡುವದರಿಂದ ಹತ್ತರವಿದ್ದ ಹಣವೆಲ್ಲ ವ್ಯಯವಾಗುವದು. ಒಂದುವೇಳೆ ಹಣವೇ ಇಲ್ಲದಿದ್ದರೆ ಸಾಲವಾಗುವದು. ಅದರಲ್ಲಿಯೂ ಫೆಬ್ರುವರಿ ೧೧ ರಿಂದ ಮೇ ೨೩ ಮತ್ತು ಜೂನ ೯ ರಿಂದ ೨೫ ಹಾಗು ಆಗಸ್ಟ ೩೧ ರಿಂದ ಅಕ್ಟೋಬರ ೪ ರ ವರೆಗಿನ ಕಾಲ ಕೆಲಮಟ್ಟಿಗೆ ಅನುಕೂಲವಾಗಿ ಪರಿಣಮಿಸುವದು.

ಹೆಂಡತಿಯ ಆರೋಗ್ಯವು ಅಷ್ಟೊಂದು ಸಮಾಧಾನಕಾರಕವಾಗಿ ಉಳಿಯುವದಿಲ್ಲ. ರಜೋದೋಷ, ಹೊಟ್ಟೆನೋವು, ಟೊಂಕಶೂಲಿಯಿಂದ ಅವಳ ಪ್ರಕೃತಿ ಕೆಡುವ ಸಂಭವವಿದೆ. ಉಭಯತರಲ್ಲಿ ಮತ್ತೈಕ್ಯ ಅನುಕೂಲ. ಆದರೆ ಮನೆಯಲ್ಲಿಯ ಎಲ್ಲ ಜನರು ನಿಮ್ಮಿಬ್ಬರ ವಿರುದ್ಧ ವರ್ತಿಸುವದರಿಂದ ಈ ಮತ್ತೈಕ್ಯದಿಂದ ದೊರೆಯಬಹುದಾದ ಆನಂದ ಸಾಕಷ್ಟು ಎನಿಸುವದಿಲ್ಲ. ನಿಮ್ಮ ಮದುವೆ ಇನ್ನೂ ಆಗುವದಿದ್ದರೆ ಜನೆವರಿಯೊಳಗಾಗಿ ಅದು ಆಗಬೇಕು. ಮುಂದೆ ಮಾತ್ರ ಅದಕ್ಕೆ ಅನುಕೂಲವೇ ಇಲ್ಲ. ಒಂದು ವೇಳೆ ಮದುವೆ ನಿಶ್ಚಿತವಾದರೂ ಅದು ಆಗುವಂಥ ಸಂಭವ ಕಡಿಮೆ. ಕ್ಷುಲ್ಲಕ ಕಾರಣಗಳಿಗಾಗಿಯೂ ಅದು ಮುರಿಯುವ ಸಂಭವವಿದೆ. ಇಷ್ಟಾದರೂ ಲಗ್ನವಾದರೆ ವಧು ವರರು ಮನಸ್ಸಿಗೆ ಬರುವರೆಂದು ಹೇಳಲಿಕ್ಕೆ ಬರುವದಿಲ್ಲ.

ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಅದು ಮಾತ್ರ ಅಲ್ಪಾಯಾಸದಿಂದ ಕೂಡಿಬಂದು ಗೊತ್ತುಪಡಿಸಿದ ಸಮಯದಲ್ಲಿ ವ್ಯವಸ್ಥಿತವಾಗಿ ಲಗ್ನವಾಗಿಹೋಗುವದು. ಸೊಸೆ ಇಲ್ಲವೆ ಅಳಿಯ ರೂಪಕ್ಕಿಂತ ಗುಣದಿಂದ ಹೆಚ್ಚು ಒಳ್ಳೆಯವರಿರುವರು. ಆದರೆ ಲಗ್ನಸಮಾರಂಭ ನಿಮ್ಮ ಮನೆಯಲ್ಲಿ ಮಾಡದೆ ಬೀಗರ ಮನೆಯಲ್ಲಿಯೆ ಮಾಡುವದು ಹೆಚ್ಚು ಸುಸೂತ್ರವಾಗುವದು. ಎಲ್ಲ ಮಕ್ಕಳ ಉತ್ಕರ್ಷಕ್ಕೂ ಈ ವರ್ಷ ಬಹಳ ಅನುಕೂಲ. ಆದರೆ ಬಹುತರ ಎಲ್ಲರ

ದಾವೆ, ಫಿರ್ಯಾದಿ ನಡೆದಿದ್ದರೆ ಮಾರ್ಚ ೨೯ ರ ವರೆಗೆ ನೀವು ಬಹಳ ಹಿಂದೆ ಜೀಳಬೇಕಾಗಿ ಬಂದು ಬಹಳಹಾನಿಗೊಳಗಾಗಬೇಕಾಗುವದು. ಅನಂತರ ಮಾತ್ರ ಅವರಲ್ಲಿ ಬಹುತರ ಖಟ್ಲೆ ನಿಮಗೆ ಅನುಕೂಲವೇ ಆಗಿ ಪರಿಣಮಿಸುವವು. ಖಾಸಗಿ ಸ್ಪರ್ಧೆಯಲ್ಲಿ ಮಾತ್ರ ಉಭಯ ಪಕ್ಷಗಳ ಜೋರು ಅಷ್ಟೇ.

ಈ ರಾಶಿಯ ಸ್ತ್ರೀಯರು ಪ್ರಸವವಾಗುವವರಿದ್ದರೆ ಅವರಲ್ಲಿ ಬಹಳ ಜನರಿಗೆ ಪುತ್ರರತ್ನ ಹುಟ್ಟುವದು. ಆದರೆ ಮಾರ್ಚ ೨೯ ರ ಪೂರ್ವದಲ್ಲಿ ಹಡೆದರೆ ಪ್ರಸವವೇದನೆ ಸ್ವಲ್ಪಾದರೂ ಅನಿಸುವದು ಆದರೆ ಅನಂತರದ ಬಾಣಂತಿತನ ಮಾತ್ರ ಒಳ್ಳೆ ಸುಖಕರವಾಗಿ ಪರಿಣಮಿಸುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಜನೆವರಿಗಿಂತ ಮೊದಲು ಆಗುವದೊ ಅವರು ಖಾತ್ರಿಯಿಂದ ಪಾಸಾಗುವರು. ಆದರೆ ಅನಂತರ ಪರೀಕ್ಷೆಯಾದವರಲ್ಲಿಯೂ ಅರ್ಧದಷ್ಟು ಜನ ತೇರ್ಗಡೆ ಹೊಂದುವ ಯೋಗವಿದೆ.

## ಕರ್ಕ

ಈ ವರ್ಷ ಕೆಲ ಕಿರುಕಳ ವಿಷಯಗಳನ್ನು ಬಿಟ್ಟರೆ ಪ್ರಾಪಂಚಿಕ ಮತ್ತು ಆರ್ಥಿಕ ಈ ಎರಡೂ ವಿಷಯಗಳಲ್ಲಿ ಬಹಳ ಉನ್ನತಿ ಹೊಂದುವಿರಿ ಎಂಬುದು ಸುನಿಶ್ಚಿತವಾಗಿದೆ.

ಈ ರಾಶಿಯ ಜನರು ಆರೋಗ್ಯದ ಬಗ್ಗೆ ಸಂತುಷ್ಟ ಉಳಿಯುವರು. ಕೆಲವರಿಗೆ ಅಪಚನ ಹೊಟ್ಟೆನೋವು ಇಲ್ಲವೆ ಭೋಳಿ ಬರುವದು ಇಂಥ ಕಿರುಕಳ ರೋಗಗಳು ಜನೇವರಿ ವರೆಗೆ ಎನಿಸಿದರೂ ಮುಂದೆ ಯಾವದೇ ಬಗೆಯ ತಕರಾರು ಉಳಿಯುವದಿಲ್ಲ. ಅದು ಬಹಳೇ ಚನ್ನಾಗಿ ಉಳಿಯುವದು. ವರ್ಷವಿಡಿ ಷಷ್ಠ ಶನಿ ಮತ್ತು ತೃತೀಯ ರಾಹು ಮತ್ತು ಡಿಶೆಂಬರ ಕೊನೆಯಿಂದ ಪಂಚಮ ಗುರು ಇವರಂಥ ಬಲಿಷ್ಠ ಮತ್ತು ಶುಭೋತ್ಪಾದಕ ಗೋಚರ ಗ್ರಹಗಳಿರುವದರಿಂದ ಆರೋಗ್ಯದಂತೆ ಇತರ ವಿಷಯಗಳಿಂದ ದೊರೆಯುವ ದೇಹಸುಖವೂ ಹಿಂದೆ ಅನೇಕ ವರ್ಷಗಳಿಂದ ಸಿಕ್ಕದಿದ್ದಷ್ಟು ಈ ವರ್ಷ ಸಿಕ್ಕುವದು. ಮನೆಯಲ್ಲಿ ಇರುವವರು ನೀವು ಹೇಳಿದಂತೆಯೇ ನಡೆಯುವರು. ಊರಿನಲ್ಲಿ ಇಲ್ಲವೆ ನಿಮ್ಮ ಜಾತಿಯವರಲ್ಲಿ ನಿಮ್ಮ ವರ್ಚಸ್ಸು ಬಹಳಷ್ಟು ಹೆಚ್ಚುವಂತೆ ಘಟನೆಗಳು ಸಂಭವಿಸುವವು. ಇಂಥ ಘಟನೆಗಳಲ್ಲಿ ಕೆಲವು ಪುರಸ್ಕೃತವಾಗಿ ಮತ್ತೆ ಕೆಲವು ಅನಾಹೂತವಾಗಿ ಸಂಭವಿಸುವವು. ಮತ್ತು ಒಟ್ಟಾರೆ ಪ್ರಾಪಂಚಿಕ ಸುಖ ಬಹಳ ಉತ್ಸಾಹಕಾರಕವೆನಿಸುವದು. ಯೋಚಿಸಿದ್ದೆಲ್ಲ ಯಶಸ್ವಿಯಾಗುವದು. ನಿಮ್ಮಲ್ಲಿಲ್ಲದಿದ್ದರೂ ಎರಡನೆಯವರ ವಾಹನಗಳ ಸುಖವೂ ತುಂಬ ದೊರೆಯುವದು. ಡಿಶೆಂಬರದ ನಂತರ ಬಂಧುಗಳ ಪ್ರಕೃತಿ ಸ್ವಲ್ಪ ಕೆಡುವದು. ಆದರಿಂದ ನಿಮ್ಮ ನಿಮ್ಮಲ್ಲಿ ಕಿಲ್ಮಿಷ ಉಂಟಾಗುವ ಸಂಭವವಿದ್ದರೂ ಜನೆವರಿಯಿಂದ ಎಲ್ಲರೂ ಪ್ರೇಮದಿಂದ ವರ್ತಿಸುವರು.

ಹೆಂಡತಿಯ ಆರೋಗ್ಯ ಮಾರ್ಚ ೨೯ ರಿಂದ ಮೇ ೨೨ ಮತ್ತು ಅಕ್ಟೋಬರ ೧೩ ರ ನಂತರ ಕಿರುಕಳ ಕಾಯಿಲೆಯಿಂದ ಕೆಡುವ ಸಂಭವವಿದೆ. ಆದರೂ ಇತರ ಸಮಯದಲ್ಲಿ ಅದು ಬಹಳ ಚನ್ನಾಗಿ ಉಳಿಯುವದು. ಅವಳ ಸ್ವಭಾವ ಸ್ವಲ್ಪ ಚಿರಡಿಗೇಳುವಂತಹದಾಗುವದು. ಆದರೆ ಸಂಸಾರದಕ್ಷತೆಯೂ ಹೆಚ್ಚು ಬೆಳೆದಂತೆ ತೋರುವದು ಮತ್ತು ಉಭಯತರಲ್ಲಿ ಬಹಳ ಚನ್ನಾಗಿ ಕೂಡಿ ನಡೆಯುವದು. ನಿಮ್ಮ ವಿವಾಹವಿನ್ನೂ ಆಗಬೇಕಾಗಿದ್ದರೆ, ಜನೆವರಿಯಿಂದ ಗುರುಬಲ ಬಹಳ ಚನ್ನಾಗಿ ಬರುವದರಿಂದ ಅದು ಆಕಸ್ಮಾತ್ ಮತ್ತು ಅಪೇಕ್ಷಿಸಿದ್ದಕ್ಕಿಂತ ಹೆಚ್ಚು ಉತ್ತಮ ಸ್ಥಳದಲ್ಲಿ ಕೂಡಿಬಂದು ನಾಲ್ಕೆಂಟು ದಿನಗಳಲ್ಲಿಯೇ ಲಗ್ನವಾಗಿಬಿಡುವದು. ನಿಮಗಿಂತಲೂ ವಧು ಸ್ವಲ್ಪ ಕಪ್ಪುಬಣ್ಣದವಳಿರುವಳು. ಆದರೆ ಕಣ್ಣು ಮೂಗು ಬಹಳ ಚನ್ನಾಗಿ ಇರುವವು.

ನಿಮ್ಮ ಮಕ್ಕಳು ಮರಿಗಳಲ್ಲಿ ಯಾರದಾದರೂ ಮದುವೆಯಾಗುವದಿದ್ದರೆ, ಅದಾದರೂ ಸಹಜವಾಗಿ ಕೂಡಿಬರುವದು. ಮತ್ತು ಅದರಲ್ಲಿಯೂ ಎಲ್ಲ ಆಕಾಂಕ್ಷೆಗಳು ಮನಸ್ಸಿನಂತೆ ಈಡೇರುವವು. ಸೊಸೆ ಇಲ್ಲವೆ ಅಳಿಯ ಬಹಳ ಉತ್ತಮ ದೊರೆಯುವರು. ಬಹುಶಃ ಹಳೆಯ ಪರಿಚಯದವರ ಸಂಬಂಧವೇ ಆಗುವದು. ಮಕ್ಕಳಲ್ಲಿ ಒಬ್ಬರಿಗೆ ಊಷ್ಣದಿಂದ ಜನೆವರಿ ೧೬ ರಿಂದ ಮಾರ್ಚ ೨೯ ರ ಮಧ್ಯಂತರ ಅವಧಿಯಲ್ಲಿ ಬಹಳ ಕ್ಲೇಶವಾಗುವ ಯೋಗವಿದೆ. ಅದಾದರೂ ಯಾರ ಜನ್ಮರಾಶಿ ವೃಶ್ಚಿಕ-ಧನು ಇಲ್ಲವೆ ವೃಷಭ ಇರುವದೋ ಅವರಿಗೇ ಹೆಚ್ಚಿಗೆ ಆಗುವದು. ಆದರೆ ಇತರ ರಾಶಿ ಇದ್ದವರಿಗೆ ಕಿರುಕಳ ತೊಂದರೆ ಮಾತ್ರ. ಮಕ್ಕಳಲ್ಲಿ ಬಹುತರ ಜನರ ಉನ್ನತಿಯಾಗುವದು. ಅದರಲ್ಲಿಯೂ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳ ಉನ್ನತಿ ಹೆಚ್ಚಿಗೆ ಆಗುವದು. ಎಲ್ಲರೂ ನಿಮಗೆ ಒಳ್ಳೇ ಸುಖವಾಗುವಂತೆ ವರ್ತಿಸುವರು.

ಧಂದೆ ಇಲ್ಲವೆ ನೋಕರಿ ಮಾಡುವವರಿರಲಿ ಎಲ್ಲರಿಗೂ ಈ ವರ್ಷ ಒಳ್ಳೆ ಉತ್ಕರ್ಷದಾಯಕವಿದೆ. ಜನವರಿಯಿಂದಲಂತೂ ಕೇಳಬೇಕಾಗಿಯೇ ಇಲ್ಲ. ಅಷ್ಟೊಂದು ವೇಗದಿಂದ ಅದು ಬೆಳೆಯುವದು. ಆದರೆ ಧಂದೆಯವರಿಗೆ ಮಾತ್ರ ಮಾರ್ಚ ೨೯ ರಿಂದ ಮೇ ೨೨ ಈ ಅವಧಿಯು ಅನಪೇಕ್ಷಿತವಾಗಿ ಅಲ್ಪಸ್ವಲ್ಪ ಹಾನಿಕಾರಕವಾಗಿ ಪರಿಣಮಿಸುವದು. ಅದರಂತೆಯೆ ನೋಕರರಿಗೆ ಮೇ ೨೨ ರಿಂದ ಜುಲೈ ೧೧ ಈ ಮಧ್ಯಂತರ ಅವಧಿಯಲ್ಲಿ ಮಾತ್ರ ಯಾವದೊಂದು ಚಕ್ರದಲ್ಲಿ ಸಿಕ್ಕಂತೆ ಭೀತಿಯುಂಟಾಗುವದು. ಆದರೆ ಕೇವಲ ವಿಚಾರಾನಂತರ 'ಎಲ್ಲವೂ ಸರಿಯಾಗಿ ಹೋಗುವದೆಂದು ಬಗೆಯಬೇಕು. ವ್ಯಾಪಾರಸ್ಥರು ಮತ್ತು ಬುದ್ಧಿಜೀವಿಗಳಿಗಿಂತ ಕಲಾಕಾರರಿಗೆ ಈ ವರ್ಷ ಹೆಚ್ಚು ಪ್ರಸಿದ್ಧಿ ಮತ್ತು ದ್ರವ್ಯಲಾಭ ದೊರೆಯುವಂತಹದು. ನೋಕರ ವರ್ಗದವರಿಗೆ ಮೇಲಿನ ಗ್ರೇಡು ಖಾತ್ರಿಯಿಂದ ದೊರೆಯುವದು ಮತ್ತು ಅಂಥ ಯೋಗ ಬಹುಶಃ ಮಾರ್ಚ ೨೯ ಕ್ಕಿಂತ ಮೊದಲು ಇಲ್ಲದಿದ್ದರೆ ಜುಲೈ ೧೧ ರಿಂದ ಅಗಸ್ಟ ೨೮ ಈ ಅವಧಿಯಲ್ಲಿ ದೊರೆಯುವದು. ಒಂದು ವೇಳೆ ಆಗಲೂ ಸಿಕ್ಕದಿದ್ದರೆ, ಅಕ್ಟೋಬರ ೧೩ ರಿಂದ ೩೧ ರ ಮಧ್ಯಂತರ ಅವಧಿಯಲ್ಲಿ ಖಾತ್ರಿಯಿಂದ ಸಿಕ್ಕುವದು. ವರಿಷ್ಠರ ಇಲ್ಲವೆ ಆಶ್ರಯದಾತರ ಪೂರ್ಣ ಮರ್ಜಿ ಇರುವದು. ಬದಲಿಯಾಗುವದಿದ್ದರೆ ಎಲ್ಲ ರೀತಿಯಿಂದ ಅನುಕೂಲವಿರುವ ಸ್ಥಳಕ್ಕೆ ಆಗುವದು. ವಿಶೇಷವಾಗಿ ಹೆಚ್ಚು ಲಾಭಕ್ಕೆ ನವಂಬರ ೧೪ ರಿಂದ ಡಿಶೆಂಬರ ೯ ಜನೆವರಿ ೧ ರಿಂದ ಮೇ ೪ ಮತ್ತು ಜುಲೈ ೧ ರಿಂದ ಮುಂದೆ ವರ್ಷ ಮುಗಿವವರೆಗೆ ಅತ್ಯಂತ ಅನುಕೂಲ ಕಾಲವಿದೆ. ದೊರೆತಂತೆ ಸಂಗ್ರಹವೂ ಆಗುವದು. ಗುರು, ಮಂಗಳ ಮತ್ತು ರವಿ ಸ್ವ ಮತ್ತು ಉಚ್ಚ ರಾಶಿಯಲ್ಲಿದ್ದವರು ಆಸ್ತಿಯನ್ನು ಮಾಡುವ ಸಂಭವವೂ ಇದೆ. ಬಗೆಬಗೆಯ ಧಾರ್ಮಿಕ ಮತ್ತು ಮಂಗಳ ಕೃತ್ಯಗಳು ಸಂಭವಿಸುವವು.

ರೆ ಮನಸ್ಸು ಮತ್ತು ಅನುಕೂಲತೆಗಳಿದ್ದರೂ ತ್ರಿಯ ಯೋಗವಿಲ್ಲ. ಮಿತ್ರರು ಒಮ್ಮೆ ಪ್ರೇಮದಿಂದ ವರ್ತಿಸಿದರೆ ಮತ್ತೆ ಕೆಲಸಲ ಂತ ಚುರಿ ಹುರಿ ಹೀಗೆ ಇಬ್ಬಗೆಯಿಂದ ವರ್ತಿ ವರು. ತಾಯಿತಂದೆ ಇದ್ದರೆ ಅವರ ಆರೋಗ್ಯ ನ್ನಾಗಿ ಉಳಿಯುವದು ಮತ್ತು ನಿಮ್ಮ ನಿಮ್ಮಲ್ಲಿ ವಸ್ಥಿತತೆ ಉಳಿಯುವದು.

ವಾವೆ, ಫಿರ್ಯಾದಿ ನಡೆದಿದ್ದರೆ ಅವುಗಳಲ್ಲಿ ಬಹು ಕೆಲಸಗಳು ಜನೆವರಿಯಿಂದ ನಿಮಗೆ ಅನು ಲವಾಗಿ ಪರಿಣಮಿಸುವವು. ಆದರೆ ಶತ್ರುಗಳು ವಾಗಿ ಪರಾಭವ ಹೊಂದಿದರೂ ಸ್ವತಃ ಗೆ ದೊರೆವ ಯಶಸ್ಸು ಮೂಲ್ಯದ ಮಾನ ದ ಬಹಳ ಕಡಿಮೆಯೆನಿಸುವದು. ಖಾಸಗಿ ರ್ನೆಯಲ್ಲಿಯೂ ಮನಸ್ಸಿನಲ್ಲಿಯ ಘಳಮಳಿ ೀಗುವಷ್ಟು ಯಶಸ್ಸು ದೊರೆಯುವದಿಲ್ಲ.

ಕರ್ಕರಾಶಿಯ ಯಾವ ಸ್ತ್ರೀಯರ ಪ್ರಸೂತಿ ಯಾಗುವದಿದೆಯೋ ಅದು ಅತ್ಯಂತ ಸುಲಭ ರೀತಿ ಯಿಂದ ಅಗಿ, ಮಗು ಬಹಳ ಸುಂದರ, ಸಶಕ್ತ ಮತ್ತು ಸುದೈವಿಯಾಗಿರುವದು. ಆದರೆ ಮಗ ಬೇಕೆಂಬವವರಿಗೆ ಮಗಳು, ಮಗಳು ಬೇಕೆಂದವರಿಗೆ ಮಗುವು ಹುಟ್ಟಿ ಒಂದು ಬಗೆಯಿಂದ ಅಪೇಕ್ಷೆ ಭಂಗವಾಗುವ ಸಂಭವ ವಿದೆ.

ಯಾರ ಪರೀಕ್ಷೆ ಜನೆವರಿಯಿಂದಮುಂದೆ ಯಾವಾಗಾದರೂ ಆದರೆ ಬಹುಶಃ ಅದರಲ್ಲಿ ಎಲ್ಲರೂ ಯಶಸ್ವಿಯಾಗುವರು ಮತ್ತು ಅದರಲ್ಲಿಯೂ ಜನೆವರಿ ೧೬ ರಿಂಥ ಮಾರ್ಚ ೨೯ ಮತ್ತು ಜುಲೈ ೧೧ ರಿಂದ ಅಗಸ್ಟ ೨೮ ಈ ಮಧ್ಯಂತರ ಅವಧಿಯಲ್ಲಿ ಯಾರ ಪರೀಕ್ಷೆ ಆಗುವದೋ ಅವರಿಗೆ ನಿಶ್ಚಯವಾಗಿ ವರ್ಗವೂ ದೊರೆಯುವದು.

ಸೊಸೆ ಇಲ್ಲವೆ ಅಳಿಯ ಮನಸ್ಸಿಗೆ ಬರುವಂಥ ವರೇ ಇರುವರೆಂದು ಹೇಳಲಿಕ್ಕೆ ಬರುವದಿಲ್ಲ. ಲಗ್ನಸಮಾರಂಭವನ್ನು ಬಹಳ ಕಿಟಕಿಟಯಿಂದ ಸಾಂಗಮಾಡಬೇಕಾಗುವದು. ಮಕ್ಕಳ ಉನ್ನತಿಗೆ ಈ ವರ್ಷ ಜನೆವರಿ ವರೆಗೆ ಇದ್ದಷ್ಟು ಮುಂದೆ ಪ್ರಗತಿದಾಯಕವಿಲ್ಲ. ಪ್ರತಿಯೊಬ್ಬನು ಜಾಣತನದಲ್ಲಿ ಎಲ್ಲರಿಗಿಂತ ಮುಂದೆ ಮುಂದೆ ಇರುವನು. ಆದರೆ ಸಂಗ್ರಹದ ದೃಷ್ಟಿಯಿಂದ ಆಯುತ್ತ ವೇಳೆಗೆ ಹಿಂದೆಬೀಳುವನು. ಆದರೆ ನಿಮ್ಮೊಡನೆ ಮಾತ್ರ ಎಲ್ಲರೂ ಚನ್ನಾಗಿಯೇ ನಡೆದುಕೊಳ್ಳುವರು.

ಕೇವಲ ಧಂದೆ, ಕೂಲಿಯ ದೃಷ್ಟಿಯಿಂದ ವಿಚಾರ ಮಾಡಿದರೆ ಈ ವರ್ಷ ಬಹಳ ಉತ್ತಮವಿರುವದು. ಧಂದೆ ಮಾಡುವವರಿಗಿಂತ ನೋಕರಿ ಮಾಡುವವರಿಗೆ ಹೆಚ್ಚು ಪ್ರಗತಿಪರವಾಗಿದ್ದು ಬಹುತರ ಜನರಿಗೆ ಮೇಲಿನ ಗ್ರೇಡು ಸಿಗುವದು. ಸತ್ತಾ ಮತ್ತು ಅಧಿಕಾರದ ಕ್ಷೇತ್ರ ಬಹಳ ಹೆಚ್ಚುವದು. ದ್ರವ್ಯಲಾಭವೂ ಅಂದಾಜಿಗಿಂತ ಹೆಚ್ಚಿಗೆ ಆಗಿ ವೆಚ್ಚದ ಪ್ರಸಂಗ ಹೆಚ್ಚಿಗೆ ಬಂದರೂ ಅದನ್ನೆಲ್ಲ ಸಹಿಸಿ ಸಂಗ್ರಹ ಮಾಡುವಿರಿ. ಬದಲಿಯಾ-ದರೆ ಅದು ಅತ್ಯಂತ ಅನುಕೂಲ ಸ್ಥಳಕ್ಕೆ ಆಗುವದು ಮತ್ತು ಅಲ್ಲಿ ಮೊದಲಿಗಿಂತ ಲೋಕಪ್ರಿಯತೆ ಹೆಚ್ಚುವದು. ನಿಮ್ಮ ಕರ್ತೃತ್ವ ಶಕ್ತಿಯ ಬಗ್ಗೆ ವರಿಷ್ಠರಲ್ಲದೆ ಕೆಳಗಿನವರೂ ಸಂತುಷ್ಟ ಉಳಿಯುವರು. ಧಂದೆಯುವಪಲ್ಲಿ ಬುದ್ಧಿಜೀವಿಗಳಿಗಿಂತ ಶ್ರಮಜೀವಿಗಳಿಗೆ ಈ ವರ್ಷ ಹೆಚ್ಚು ಉತ್ಕರ್ಷದ್ದಾಗಿ ಪರಿಣಮಿಸುವದು. ಬುದ್ಧಿಜೀವಿಯು ಮಾತ್ರ ವಿಪರೀತ ಅಗ್ರಹ ಇಲ್ಲವೆ ಆಳ್ಸತೆಯಿಂದ ಹಿಂದೆಬೀಳುವನು. ವಿಶೇಷವಾಗಿ ದ್ರವ್ಯಲಾಭಕೆ ಜನೆವರಿ ೬ ರಿಂದ ೨೫ ಫೆಬ್ರುವರಿ ೧೧ ರಿಂದ ಮಾರ್ಚ ೧ ಮೇ ೬ ರಿಂದ ಜೂನ ೨೫ ಮತ್ತು ಅಗಸ್ಟ ೩೧ ರಿಂದ ಅಕ್ಟೋಬರ ೨೪ ಈ ಅವಧಿಯು

## ಸಿಂಹ

ಒಟ್ಟಿಗೆ ಈ ವರ್ಷ ಉಳಿದ ಎಲ್ಲ ವಿಷಯ ಗಿಂತ ಧಂದೆ ಮತ್ತು ಕೂಲಿಕಾರರಿಗೆ ರೇ ಉತ್ತಮವಿರುವದೆಂದು ತಿಳಿದುಕೊಳ್ಳ ಕ್ಕದ್ದು.

ವರ್ಷವಿಡಿ ಅಷ್ಟಮ ಕೇತು ಮತ್ತು ಡಿಶೆಂಬರ ನೆಗೆ ಬರುವ ಚತುರ್ಥ ಗುರು ನಿಮ್ಮ ಆರೋ ವನ್ನು ಅಷ್ಟೊಂದು ಚನ್ನಾಗಿ ಇಡದಿದ್ದರೂ ರ್ಷವೆಲ್ಲ ಇರುವ ಪಂಚಮ ಶನಿ ವಿಶೇಷವಾಗಿ ಿಸುವ ಯಾವ ವಿಕಾರವನ್ನೂ ಉಂಟು ಾಡುವದಿಲ್ಲ. ಹಲ್ಲುನೋವು, ದವಡಿಸೂಲಿ, ಲು ಒಳಿಯುವದು ಮತ್ತು ನೇತ್ರವಿಕಾರಗಳಿಂದ ಲ್ಲ ತೊಂದರೆಯಾಗುವದು. ಮತ್ತು ದ್ವಿತೀಯ ನಿಂದ ಪೈಶಾಚಿಕ ಉಪದ್ರವವೂ ಕೆಲ ಟ್ಟಿಗೆ ಆಗುವದು. ಅದರಂತೆ ಯಾವದೊಂದು ಸ್ತು ಕಳವಾಗಿ ಹೋಗುವದರಿಂದ ಮನಸ್ಸಿಗೆ ಹಳ ದುಃಖವೆನಿಸುವದು. ಅವಾಂತರ ವಿಷಯ ಲ್ಲಿ ದೇಹಸುಖ ಸಾಧಾರಣ ಚನ್ನಾಗಿ ದೊರೆ ುವದು. ಮತ್ತು ಅದರಲ್ಲಿಯೂ ಮೇ ೨೨ ದ ಜುಲೈ ೧೧ ಮತ್ತು ಅಗಸ್ಟ ೨೪ ರಿಂದ ಕ್ಟೋಬರ ೧೩ ಈ ಅವಧಿಯನ್ನು ಬಿಟ್ಟು ಉಳಿದ ಲವೆಲ್ಲ ಬಹಳ ಸಮಾಧಾನದಿಂದ ಹೋಗು ವು. ಪತ್ನಿಯ ಪ್ರಕೃತಿಗೆ ಈ ವರ್ಷ ಬಹಳ ನುಕೂಲವಿದೆ. ಪ್ರಪಂಚದ ಕೆಲಸ ಕಾರ್ಯಗಳಲ್ಲಿ ವಳ ಶಕ್ತಿ ಮತ್ತು ಯುಕ್ತಿ ಬಹಳ ಉಪಯೋಗ ುವವು. ದ್ವಿತೀಯ ರಾಹುವಿನಿಂದ ಮನೆ ಲ್ಲಿಯ ಜಗಳ ಹೆಚ್ಚುವದು. ಆದರೆ ಅವಳ ತುರ್ಯ ಮತ್ತು ಸಹನಶೀಲತೆಯಿಂದ ಹೊರಗೆ ಷ್ಟೊಂದು ಬೊಬ್ಬಾಟವಾಗುವದಿಲ್ಲ, ಎಲ್ಲವೂ ಂತವಾಗುವದು. ಕದಾಚಿತ್ ಜುಲೈ ೧೧ ರಿಂದ ಗಸ್ಟ ೨೮ ರ ವರೆಗೆ ಅವಳು ಇಲ್ಲವೆ ನೀವು ಬೇರೆ ಹೋಗುವದರಿಂದ ತಾತ್ಪೂರ್ತಿಕವಾಗಿ ವಳ ಸಹವಾಸಸುಖ ತಪ್ಪುವದು ಇಷ್ಟೇ, ದರೆ ನಿಮ್ಮ ವಿವಾಹವೇ ಇನ್ನೂ ಆಗಿರದಿದ್ದರೆ

ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಜನೇವರಿ ಒಳಗೇ ಆದರೆ ಆಯಿತು, ಏಕೆಂದರೆ ಮುಂದೆ ಮಾತ್ರ ಬಾಶಿಂಗಬಲಕ್ಕೆ ಗ್ರಹಾನುಕೂಲ ಸ್ವಲ್ಪೂ ಇಲ್ಲದ್ದರಿಂದ ಅದು ಆಗುವದು ಕಠಿಣವೇ. ಒಂದು ವೇಳೆ ಆದರೂ ಅದರಿಂದ ಮನಸ್ಸಿಗೆ ಒಗ್ಗುವಂಥ ವಧು ಮತ್ತು ವರ ಸಿಕ್ಕುವದಿಲ್ಲ. ಸಹಸಾ ಕೂಡಿ ಬರುವದಿಲ್ಲ ಮತ್ತು ಮುಂದೆ ಗೊತ್ತುಪಡಿಸುವಾಗ ಏನಾದರೂ ತಕರಾರು ಬರುವದು.

ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಅದಕ್ಕಾದರೂ ಅನೇಕ ಅಡಚಣೆಗಳು ಬರುವವು. ಆದರೆ ಕೊನೆಗೆ ಹೇಗಾದರೂ ಕೂಡಿಬರುವದು, ಇದು ನಿಶ್ಚಿತ. ಆದರೆ ಅದರಲ್ಲಿ ನಿಮ್ಮ ಆಶೆ ಆಕಾಂಕ್ಷೆಗಳನ್ನು ಬಹಳ ಮಟ್ಟಿಗೆ ಹಿಂದೆ ಸರಿಸಬೇಕಾಗುವದು. ಹೀಗೆ ಮಾಡಿಯೂ

ಹೆಚ್ಚು ಅನುಕೂಲವಿರುವದು. ಕೈಯಿಂದ ಪರೋ-ಪಕಾರದ ಕೃತ್ಯಗಳಾಗುವವು. ಕನಸು ಮನಸಿನಲ್ಲಿ ಇಲ್ಲದಿದ್ದರೂ ಮಹತ್ವದ ಯಾತ್ರೆಯೊಂ-ದನ್ನು ಮಾಡುವಿರಿ. ಬುದ್ಧಿಯ ಹೆಚ್ಚು ಉಪಯೋಗವಾಗುವ ಕೆಲಸದಲ್ಲಿ ಸಾಮಾನ್ಯ ಕೆಲಸಕ್ಕಿಂತ ಹೆಚ್ಚು ಯಶಸ್ಸು ದೊರೆಯುವದು. ಮಿತ್ರರಿಗಿಂತ ಅಪರಿಚಿತ ಜನರಿಂದ ಮತ್ತು ನಿಮ್ಮ ಪ್ರತಿಸ್ಪರ್ಧಿಯೆಂದು ಭಾವಿಸಲಾಗುತ್ತಿದ್ದ ಜನರಿಂದ ಹೆಚ್ಚು ಸುಖಕರ ಕೃತಿಗಳು ಸಂಭವಿಸುವವು. ತಂದೆತಾಯಿ ಇದ್ದರೆ ತಾಯಿಯ ಪ್ರಕೃತಿ ಮಾತ್ರ ಚನ್ನಾಗಿ ಉಳಿಯುವದಿಲ್ಲ.

ದಾವೆ, ಖಟ್ಲೆ ನಡೆದಿದ್ದರೆ ಅವುಗಳಲ್ಲಿ ಹೆಚ್ಚಾಗಿ ಯಶಸ್ಸು ಸಿಕ್ಕುವದು. ಆದರೆ ಅದಕ್ಕಾಗಿ ದಗ-ದಗಿ ಮತ್ತು ವೆಚ್ಚ ಬಹಳಾಗಿ ಜೀವ ಬೇಸರವೆನಿ-ಸುವದು. ಖಾಸಗಿ ಸ್ಪರ್ಧೆಗಳಲ್ಲಿಯೂ ಮೊದಲು ಬಹಳ ತೊಂದರೆಯಾಗಿ ಬಹಳ ಹಿಂದೆ ಬಿದ್ದರೂ ಮುಂದೆ ನಿಮಗೆ ವಿಜಯಶ್ರೀ ಮಾಲೆಹಾಕುವಳು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ಅವರಿಗೆ ಬಹುಶಃ ಕನ್ಯಾ ಹುಟ್ಟುವದು. ಮತ್ತು ಅವರ ಪ್ರಸೂತಿಯು ಸುಲಭವಾಗುವದು. ಆದರೆ ಯಾರಿಗೆ ಗಂಡು ಹುಟ್ಟುವದೋ ಅವರಿಗೆ ಪ್ರಸೂತಿ ಕಷ್ಟವೆನಿಸುವದು. ಆದರೆ ಜೀವಕ್ಕೆ ಮಾತ್ರ ಏನೂ ಗಂಡಾಂತರವಿಲ್ಲೆಂಬುದು ನಿಶ್ಚಿತ.

ವಿದ್ಯಾರ್ಥಿಗಳ ಪರೀಕ್ಷೆಯಲ್ಲಿ ಯಶಸ್ಸಿಗೆ ಈ ವರ್ಷ ಅಷ್ಟೊಂದು ಹಿತಕರವಾಗಿರುವದಿಲ್ಲ. ಜನೆವರಿಯಿಂದ ಮುಂದೆ ಯಾರ ಪರೀಕ್ಷೆಯಾಗಬೇಕಾಗಿದೆಯೋ ಅವರು ಬಹಳ ಜೋರಿನಿಂದ ಅಭ್ಯಾಸಮಾಡಿದರೆ ಮಾತ್ರ ಹೇಗಾದರೂ ಪಾಸಾಗುವಷ್ಟು ಗುಣಗಳನ್ನು ಪಡೆಯುವರು.

ರಣವಾಗಿ ಫೆಬ್ರುವರಿ ೧೮ ರಿಂದ ಮಾರ್ಚ ೧೫ ಇಲ್ಲವೆ ಎಪ್ರಿಲ ೯ ರಿಂದ ಮೇ ೪, ಇಲ್ಲದಿದ್ದರೆ ಮೇ ೨೭ ರಿಂದ ಜುಲೈ ೧ ಈ ಅವಧಿಯಲ್ಲಿ ನಿಶ್ಚಯವಾಗಿ ಆಗುವದು. ವ್ಯಾಪಾರಸ್ಥರು ಮತ್ತು ಶ್ರಮಜೀವಿ ಉದ್ಯೋಗ ಮಾಡುವವರು ಮಾತ್ರ ಬಹಳಷ್ಟು ಶ್ರಮಮಾಡದೆ ಮೇಲೆ ಹೋಗುವರು ಪ್ರತಿಯೊಂದು ಮಾತು ಅನಾಯಾಸವಾಗಿ ಒದಗಿಬರುವದು ಮತ್ತು ದ್ರವ್ಯಲಾಭ ತುಂಬಾ ಆಗುವದು ನಿಷ್ಕಾರಣ ವೆಚ್ಚದ ಪ್ರಸಂಗಗಳು ಈ ವರ್ಷ ಬಹಳಷ್ಟು ಬರುವದಿಲ್ಲ. ಆದರೆ ಯೋಗ್ಯ ವೆಚ್ಚವೇ ಹೆಚ್ಚಿಗೆ ಬರುವದರಿಂದ ಕೆಲಸಲ ದುಡ್ಡಿನ ಅಡಚಣೆ ಬೀಳುವದು. ದೂರದ ಪ್ರವಾಸ ಕಡಿಮೆಯೆ. ಜನೆವರಿಯಿಂದ ಮಿತ್ರಸುಖ ಹೆಚ್ಚು ಅನುಕೂಲ ದೊರೆಯುವದು. ವಾಹನ ಸುಖದಲ್ಲಿ ಮೇಲಿಂದ ಮೇಲೆ ವ್ಯತ್ಯಯ ಬರುವದು. ತಂದೆ ತಾಯಿ ಜೀವಂತವಿದ್ದರೆ ಅವರಲ್ಲಿ ಒಬ್ಬರು ಆಕಸ್ಮಿಕವಾಗಿ ವಿಯೋಗಹೊಂದುವ ಸಂಭವವಿದೆ.

ದಾವೆ, ಫಿರ್ಯಾದಿ ಕೆಲಸ ನಡೆದಿದ್ದರೆ ಮೊದಲು ಪ್ರತಿಪಕ್ಷಿಗಳಿಂದ ಬಹಳಷ್ಟು ತೊಂದರೆಯಾಗುವದು ನಿಜ. ಆದರೆ ಮುಂದೆ ಜನೆವರಿಯಿಂದ ಅನುಕೂಲತೆಯ ವಾತಾವರಣ ತಂತಾನೆ ಉಂಟಾಗುವದು ಮತ್ತು ಅದರಲ್ಲಿ ಒಂದರಲ್ಲಿ-ಯಾದರೂ ಒಳ್ಳೆ ಯಶಸ್ಸು ದೊರೆಯುವದು. ಖಾಸಗಿ ಸ್ಪರ್ಧೆಯಲ್ಲಿ ಉಭಯ ಪಕ್ಷಗಳ ಜೋರು ಸಮಾನವಾದುದು.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಅಲ್ಪಸ್ವಲ್ಪ ಕಷ್ಟದಿಂದಲೆ ಹಡೆಯುವರು. ಆದರೆ ಬಾಣಂತಿ ಮಗುಗಳ ಜೀವಕ್ಕೆ ಅಪಾಯವಾಗದೆ ಪ್ರಸೂತಿನಂತರ ಬಾಣಂತಿತನದ ದಿವಸ ಒಳ್ಳೆ ಆರೋಗ್ಯಕರವಾಗಿ ಪರಿಣಮಿಸುವದು. ಅನೇಕರಿಗೆ ಗಂಡು ಹುಟ್ಟುವವು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಜನೆವರಿಗಿಂತ ಮೊದಲು ಇದೆಯೋ ಅವರು ಖಾತ್ರಿಯಿಂದ ಯಶಸ್ವಿಯಾಗುವರು. ಆದರೆ ಅನಂತರ ಪರೀಕ್ಷೆ ಕಟ್ಟಿದವರು ಜೋರಿನಿಂದ ಅಭ್ಯಾಸ ಮಾಡಿದರೆ ಮಾತ್ರ ಯಶಸ್ಸು ಸಂಪಾದಿಸುವರು.

## ಕನ್ಯಾ

ಒಟ್ಟಿಗೆ ಈ ರಾಶಿಯವರಿಗೆ ಔದ್ಯೋಗಿಕ ಕ್ಷೇತ್ರಗಳಿಗಿಂತ ಪ್ರಾಪಂಚಿಕ ಪರಿಸರದಲ್ಲಿ ಹೆಚ್ಚು ಸೌಖ್ಯ ಸಿಕ್ಕುವದು.

ಈ ರಾಶಿಯವರಿಗೆ ವರ್ಷವಿಡೀ ಪ್ರಥಮ ರಾಹು ಮತ್ತು ಚತುರ್ಥ ಶನಿ ಇರುವದರಿಂದ ಪ್ರಕೃತಿ ಅಲ್ಪಸ್ವಲ್ಪ ಪ್ರಮಾಣದಿಂದ ಕೆಡುವದು. ಗ್ಯಾಸಿನ ಉಪದ್ರವ ಹೆಚ್ಚು ಜನರಿಗೆ ಆಗುವದು. ಆದರೆ ಮಂಗಳ, ಗುರು ಒಳ್ಳೆ ಅನುಕೂಲರಾಗಿರುವದರಿಂದ ಯಾವದೊಂದು ರೋಗವು ಅಷ್ಟೊಂದು ಗಂಭೀರವಾಗಿ ಪರಿಣಮಿಸುವದಿಲ್ಲ. ಉಳಿದ ವಿಷಯುಗಳಲ್ಲಿ ದೇಹಸುಖ ಅನುಕೂಲ. ಕುಟುಂಬದಲ್ಲಿಯ ಪ್ರತಿಯೊಬ್ಬನು ಕೂಡ ನಿಮ್ಮ ಹೇಳಿಕೆಯಂತೆ ನಡೆಯುವನು. ಆದರೆ ನೆರೆಯವರು ಮತ್ತು ದೂರದ ಆಪ್ತರು ಇವರಿಂದ ಏನಾದರೊಂದು ತೊಂದರೆ ಕೊಡುವರು. ಹೊಲ,ತೋಟ-ಪಟ್ಟಿ. ಮನೆಮಾರು ಮೊದಲಾದ ಸ್ಥಾವರ ಆಸ್ತಿಯಲ್ಲಿ ಹೊಸ ಸಂಗ್ರಹ ಮಾಡುವ ಅವಕಾಶ ಅನಾಯಾಸ ಮತ್ತು ಅಲ್ಪ ಬೆಲೆಯಲ್ಲಿ ಸಿಕ್ಕುವ ಯೋಗವುಂಟಾಗುವದು. ಮನಸ್ಸು ಪ್ರಪಂಚದಲ್ಲಿ ಬಹಳ ರಮಮಾಣವಾಗುವಂತಹ ವಾತಾವರಣ ಸುತ್ತಲೆಲ್ಲ ಉಂಟಾಗುವದು. ಅತಿಪ್ರಿಯ ಜನರ ಸಹವಾಸ ಮೇಲಿಂದ ಮೇಲೆ ಆಗುವ ಯೋಗವಿದೆ. ವಿಶೇಷತಃ ನವಂಬರ ೧೪ ರಿಂದ ಡಿಶೆಂಬರ ೯, ಎಪ್ರಿಲ ೯ ರಿಂದ ಮೇ ೪ ಮತ್ತು ಮೇ ೨೭ ರಿಂದ ಜುಲೈ ೧ ಈ ಅವಧಿಯಲ್ಲಿ ಹಾಗೆ ಸಂಭವಿಸಿದ ಅನುಭವ ಈ ರಾಶಿಯ ಜನರಿಗೆಲ್ಲ ನಿಶ್ಚಿತವಾಗಿ ಬರುವದು. ಹೆಂಡತಿಯ ಆರೋಗ್ಯ ಶೀತಪಿತ್ತದಿಂದ ಎರಡು ಮೂರು ಸಲ ಕೆಡುವ ಯೋಗವಿದೆ. ಆದರೆ ನಂತರ ಕೆಟ್ಟರೆ ಅದಷ್ಟೊಂದು ಎನಿಸುವದಿಲ್ಲ. ಬಹಳ ವಿಷಯುಗಳಲ್ಲಿ ಗಂಡನಿಗಿಂತ ತಾನೇ ಹೆಚ್ಚು ಜಾಣಳೆಂಬ ದುರಭಿಮಾನ ಅವಳಲ್ಲಿ ಉಂಟಾಗಿದೆಂಬುದು ಕಂಡುಬರುವದು. ಆದರೆ ಪರಸ್ಪರರಲ್ಲಿ ಏಕನಿಷ್ಠ ಪ್ರೇಮ ಅಚಲವಾಗಿರುವದು. ಆದರೆ ನಿಮ್ಮ ಮದುವೆ ಇನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಇಡೀ ವರ್ಷ ಒಳ್ಳೆ ಬಾಶಿಂಗಬಲವಿದೆ ಮದುವೆ ಕೂಡಿಬರಲಿಕ್ಕೆಮತ್ತು ಸಾಂಗವಾಗಲಿಕ್ಕೆ ಯಾವದೇ ಬಗೆಯ ಅಡಚಣೆಗಳು ಬರದಿದ್ದರೂ ಸೂತಕದಂತಹ ಗೌತ್ರಿಕ ಯಾವದಾದರೊಂದು ಅಡಚಣೆ ಬರುವ ಸಂಭವವಿದೆ.

ನಿಮ್ಮ ಮಕ್ಕಳ ವಿವಾಹ ಮಾಡುವದಿದ್ದರೆ ಅದಕ್ಕೂ ವರ್ಷವಿಡೀ ಅನುಕೂಲ ಯೋಗವಿದೆ. ಆದರೆ ಜನೆವರಿಯಿಂದ ಮುಂದೆ ಆಗುವದಕ್ಕಿಂತ ಮೊದಲು ಆದರೆ ಎಲ್ಲ ವಿಷಯುಗಳಲ್ಲಿ ಸ್ವಲ್ಪ ಹೆಚ್ಚು ಸುಖಕರವಾಗಿಯೇ ಪರಿಣಮಿಸುವದು. ಸೊಸೆ ಇಲ್ಲವೆ ಅಳಿಯ ಸಾಮಾನ್ಯವಾಗಿ ಹತ್ತು ಜನರಂತೆ ಇರುವರು. ಮಕ್ಕಳ ಉನ್ನತಿಗೆ ಈ ವರ್ಷ ಅಪಕರ್ಷವಿರುವದು. ಆದರೆ ಅಪೇಕ್ಷಿಸಿದಷ್ಟು ಮತ್ತು ಹೊರಗೆ ತೋರಿಬರುವಷ್ಟು ಉತ್ಕರ್ಷಕಾರಕವೂ ಇರುವದಿಲ್ಲವೆಂದು ಸ್ಥೂಲಮಾನದಿಂದ ತಿಳಿಯತಕ್ಕದ್ದು.

ಧಂದೆ, ಕೂಲಿಯವರ ದೃಷ್ಟಿಯಿಂದ ವಿಚಾರ ಮಾಡಿದರೆ ಈ ವರ್ಷ ಬಹಳ ಉತ್ಕರ್ಷದ್ದು ಇದೆ, ಇದರಲ್ಲಿ ಸಂಶಯವಿಲ್ಲ. ರಾಹು ಮತ್ತು ಶನಿ ಕೆಲಸದ ದಗದಗಿ ಹೆಚ್ಚಿಸುವಂಥವರಾಗಿದ್ದರೂ ಲಾಭಕ್ಕೆ ಅಷ್ಟೇ ಅನುಕೂಲವಾಗಿರುವರು. ಜನರ ಮನಸ್ಸಿನಲ್ಲಿ ನಿಮ್ಮ ಪತ್ತು ಮತ್ತು ಲೌಕಿಕಗಳ ಬಗ್ಗೆ ಪೂರ್ಣ ವಿಶ್ವಾಸವಿದ್ದರೂ ಅದು ಹಾಗಿರುವದಿಲ್ಲವೆಂಬ ತಪ್ಪು ತಿಳುವಳಿಕೆ ನಿಮಗೆ ಅನೇಕ ಸಲ ಆಗುವದು. ನೋಕರರಿಗೆ ಮತ್ತು ಬುದ್ಧಿಜೀವಿಗಳಿಗೆ ಮೇಲಿನ ಗ್ರೇಡು ಇಲ್ಲವೆ ಮುಂದೆ ಬರುವ ಅವಕಾಶ ಗೊತ್ತಾದ ಸಮಯಕ್ಕೆ ಸಿಕ್ಕದೆ ಮುಂದೆ ಅನೇಕ ದಿನಗಳ ನಂತರ ಆದರೆ ಅವಶ್ಯವಾಗಿ ಸಿಕ್ಕುವದು. ಬದಲಿಯಾದರೆ ಬಹಳ ಅನುಕೂಲ ಸ್ಥಳಕ್ಕೆ ಆಗುವದು. ಪ್ರಗತಿಯ ಅವಕಾಶ ಸಾಧಾ

# ತುಲಾ

ಒಟ್ಟಾರೆ ಈ ರಾಶಿಯವರಿಗೆ ಈ ವರ್ಷ ಹಿಂದಿನ ಏಳೆಂಟು ವರ್ಷಗಳಿಗಿಂತ ಬಹಳ ಸುಖದ್ದು ಮತ್ತು ಉತ್ಕರ್ಷದ್ದಾಗಿ ಪರಿಣಮಿಸುವದೆಂಬಲ್ಲಿ ಸಂದೇಹವಿಲ್ಲ.

ಕಳೆದ ಏಳುವರೆ ವರ್ಷಗಳಿಂದ ಈ ರಾಶಿಯವರಿಗೆ ಇದ್ದ ಸಾಡೆಸಾತಿ ದೀಪಾವಳಿಗಿಂತ ಮೊದಲು ನಾಲ್ಕು ದಿನ ಒಮ್ಮೆ ಮುಗಿದುಹೋದ್ದರಿಂದ ಈ ರಾಶಿಯ ಅನೇಕ ಜನರಿಗೆ ಬಹಳಷ್ಟು ಹಾಯವೆನಿಸುವದು. ಇದರಲ್ಲಿ ಯಾವ ಸಂದೇಹವೂ ಇಲ್ಲ. ಇನ್ನು ಮುಂದೆ ಸುಮಾರು ಇಪ್ಪತ್ತೆರಡೂವರೆ ವರ್ಷ ಅದರ ಅಂಜಿಕೆಯಿರುವದಿಲ್ಲ. ಈಗ ಬಂದಿರುವ ತೃತೀಯ ಶನಿ ಮನಸ್ಸಿನ ಉತ್ಸಾಹವನ್ನು ಮತ್ತು ಶಕ್ತಿಯನ್ನು ದಿನದಿನಕ್ಕೆ ಜೋರಿನಿಂದ ಹೆಚ್ಚಿಸುವನು. ಮತ್ತು ಸ್ವಲ್ಪದರಲ್ಲಿಯೇ ಹೇಳುವದಾದರೆ ಪ್ರಾಪಂಚಿಕ ಇಲ್ಲವೆ ಔದ್ಯೋಗಿಕ ಯಾವದೇ ವಿಷಯವಿದ್ದರೂ ಅದರಲ್ಲಿಯ ಪ್ರತಿಯೊಂದು ಯೋಜನೆಯೂ ಮನಸ್ಸಿನಂತೆ ನಡೆಯುಹತ್ತುವದು. ಪ್ರಕೃತಿಗೆ ಈಗ ಅನುಕೂಲವೆ-ಆದರೆ ಮಾರ್ಚ ೨೯ ರ ವರೆಗೆ ಏನಾದರೂ ಕಿರುಕಳ ತೊಂದರೆಯಾಗುವದು ಅಷ್ಟೇ. ಆದರೆ ಅಗಸ್ಟ ೨೮ ರಿಂದ ಅಕ್ಟೋಬರ ೧೩ ರ ಮಧ್ಯಂತರ ಅವಧಿಯಲ್ಲಿ ಕೆಲವೊಂದು ಮನೆತನದ ವಿಷಯಗಳಲ್ಲಿ ವಿವೇಕದ ಸಮತೂಕ ತಪ್ಪುವಷ್ಟು ಮಾನಸಿಕ ತೊಂದರೆಯಾಗುವ ಸಂಭವ ಬಹಳಿದೆ.

ಹೆಂಡತಿಯ ಆರೋಗ್ಯಕ್ಕೆ ಈ ವರ್ಷ ಬಹಳ ಅನುಕೂಲವಿದ್ದರೂ ಜನೆವರಿ ೧೬ ರಿಂದ ಫೆಬ್ರುವರಿ ೧೯ ಮತ್ತು ಮೇ ೨೨ ರಿಂದ ಜುಲೈ ೧೧ ಈ ಅವಧಿಯಲ್ಲಿ ಅವಳ ಗಂಟಲು ಇಲ್ಲವೆ ಸ್ತನಕ್ಕೆ ಅಲ್ಪ ಸ್ವಲ್ಪ ತೊಂದರೆಯಾಗುವ ಸಂಭವವಿದೆ. ಅಲ್ಲದೆ ಉಭಯತರಲ್ಲಿ ಬಹಳ ವಿಷಯಗಳ ಬಗ್ಗೆ ಮೇಲಿಂದ ಮೇಲೆ ಮತಭೇದವಾಗಹತ್ತುವದರಿಂದ ಕ್ಷಣದಲ್ಲಿ ಪ್ರೇಮವಿದ್ದರೆ ಮರುಕ್ಷಣದಲ್ಲಿ ಅದು ಕೆಡುವದು. ಈ ಬಗೆಯ ಚಕ್ರ ಸತತವಾಗಿ ತಿರುಗುತ್ತಿರುವದು. ನಿಮ್ಮ ವಿವಾಹವಿನ್ನೂ ಆಗಿರದಿದ್ದರೆ ಅದಕ್ಕೆ ಮಾತ್ರ ಈ ವರ್ಷ ಒಳ್ಳೆ ಬಾಶಿಂಗ ಬಲವಿರುವದರಿಂದ ಅದು ಬೇಗನೆ ಕೂಡಿಬಂದು ಗೊತ್ತುಪಡಿಸಿದ ವೇಳೆಗೆ ನಿರ್ವಿಘ್ನದಿಂದ ಸಾಂಗವಾಗುವದು. ವಧುವರರು ಮೊದಲು ಕೆಲವರ್ಷ ಪರಸ್ಪರರ ಸ್ವಭಾವದ ಬಗ್ಗೆ ಅಸಂತುಷ್ಟರಾಗಿದ್ದಂತೆ ತೋರುವದು. ಆದರೆ ಮುಂದೆ ಬೇಗನೆ ಸಂಶಯ ನಿವೃತ್ತಿಯಾಗಿ ಪರಸ್ಪರರು ಒಳ್ಳೆ ಪ್ರೇಮ ಮಾಡಹತ್ತುವರು. ಎಲ್ಲ ವಿಷಯಗಳಲ್ಲಿ ಜನೆವರಿಯಿಂದ ದೇಹಸೌಖ್ಯ ಬಹಳ ಅನುಕೂಲ. ಕುಟುಂಬದಲ್ಲಿಯ ಬಹುತರ ಜನರು ನೀವು ಹೇಳಿದಂತೆ ಕೇಳಹತ್ತುವರು. ಆದರೆ ನೋಕರ ಚಾಕರರಲ್ಲಿ ಒಬ್ಬನು ದರ್ಪದಿಂದ ನಡೆಯುವನು ಇಲ್ಲವೆ ಮೋಸ ಮಾಡಲು ಬಯಸುವನು ಅಪ್ತರು ಒಳ್ಳೆ ಪ್ರೇಮದಿಂದ ವರ್ತಿಸುವರು.

ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆಯನ್ನು ಈ ವರ್ಷ ಮಾಡುವದಿದ್ದರೆ ಡಿಶೆಂಬರ ಕೊನೆಯ ವರೆಗೆ ಅನುಕೂಲವಿದೆ ಮತ್ತು ಅನಂತರವೂ ಬಾಶಿಂಗಬಲವಿರುವದು, ಅಂತೆಯೇ ಲಗ್ನ ಕೂಡಿಬರಲಿಕ್ಕೆ ಬಹಳಷ್ಟು ಪ್ರಯಾಸವಾಗಲಾರದು. ಹೊಸದಾಗಿ ಪರಿಚಯವಾದ ಒಬ್ಬನು ಲಗ್ನವನ್ನು ಕೂಡಿಸುವ ಸೂತಉವಾಚವನ್ನು ಪ್ರಾರಂಭಿಸುವನು ಮತ್ತು ಮದುವೆಯಾಗಲಿಕ್ಕೂ ಎಲ್ಲಬಗೆಯ ಅನುಕೂಲತೆ ಆಗುವದು. ಸೊಸೆ ಇಲ್ಲವೆ ಅಳಿಯ ಬಹಳಮಟ್ಟಿಗೆ ಮನಸ್ಸಿಗೆ ಬರುವರು. ಅದರಂತೆ ಮಕ್ಕಳಲ್ಲಿ ಅನೇಕರ ಉನ್ನತಿಗೆ ಈ ವರ್ಷ ಬಹಳ ಅನುಕೂಲವಿರುವದು. ಅವರಲ್ಲಿ ಒಬ್ಬನಂತೂ ಬಹಳ ಉತ್ಕರ್ಷ ಸ್ಥಿತಿಯನ್ನು ಮುಟ್ಟುವನು. ಮತ್ತು ಅವರೆಲ್ಲ ನಿಮ್ಮೊಡನೆ ಏಕನಿಷ್ಠರಾಗಿ ಉಳಿಯುವರು.

ಕೂಲಿ-ನೋಕರರ ದೃಷ್ಟಿಯಿಂದ ನೋಡಿದರೆ ಈ ವರ್ಷ ಧಂದೆಯವರಿಗೆನ್ನಿರಿ ನೋಕರ ವರ್ಗದವರಿಗೆನ್ನಿರಿ ಬಹಳ ಉತ್ಕರ್ಷದ್ದೆನಿಸುವದಕ್ಕಾ-

ಗಿಯೋ ಏನೋ ಎನ್ನುವಂತೆ ವರ್ಷಾರಂಭದಿಂದ ಇದ್ದ ತೃತೀಯ ಶನಿ ಮತ್ತು ಷಷ್ಠ ಕೇತು ಮತ್ತು ಜನೆವರಿಯಿಂದ ಬರುವ ದ್ವಿತೀಯ ಗುರು ಈ ಪ್ರಮುಖ ಗ್ರಹಗಳು ಸಿದ್ಧಹಸ್ತವಾಗಿ ಉಳಿಯುವವು. ಇದರಿಂದ ಧಂದೆಯಲ್ಲಿ ಸುಧಾರಣೆ, ಪ್ರಸಾರ ಮತ್ತು ಹೆಚ್ಚಳಕ್ಕಾಗಿ ಮನಸ್ಸಿನಲ್ಲಿ ಮಾಡಿದಂತೆ ಅಲ್ಪಾಯಾಸದಿಂದ ಸಾಧ್ಯವಾಗುವದು. ವ್ಯಾಪಾರಸ್ಥರ ಮತ್ತು ಶ್ರಮಜೀವಿ ಉದ್ಯೋಗ ಮಾಡುವವರ ಉತ್ಕರ್ಷವಂತೂ ಹೇಳತೀರದು. ಬುದ್ಧಿಜೀವಿಗಳಿಗೆ ಕೂಡ ಮಾರ್ಚ ೨೯ ರ ನಂತರ ಒಳ್ಳೆ ದಿನಗಳು ಬರುವವು. ನೋಕರರಿಗೆ ಮೇ ೨೨ ರ ವರೆಗೆ ವರಿಷ್ಠರ ಕೋಪವನ್ನು ಕೆಲಮಟ್ಟಿಗೆ ಸಹಿಸಬೇಕಾಗುವದು ನಿಜ. ಆದರೆ ಮುಂದೆ ಹಾಗೆ ಮಾಡಿದ್ದಕ್ಕಾಗಿ ಅವರ ಮನಃಪಲ್ಲಟವಾಗಿ ನಿಮ್ಮ ಕಲ್ಯಾಣವನ್ನೇ ಹೆಚ್ಚಿಗೆ ಮಾಡುವರು. ಬದಲಿಯಾದರೆ ಪ್ರಾಪಂಚಿಕ ದೃಷ್ಟಿಯಿಂದ ಸ್ವಲ್ಪ ಅನನುಕೂಲ ಸ್ಥಳಕ್ಕೆ ಆಗುವದು. ಆದರೆ ಕೆಲಸದ ದೃಷ್ಟಿಯಿಂದ ಮತ್ತು ಲಾಭದ ದೃಷ್ಟಿಯಿಂದ ಆ ಸ್ಥಳ ಬಹಳ ಅನುಕೂಲವೆನಿಸುವದು. ಜುಲೈ ೧೧ ರಿಂದ ಅಗಸ್ಟ ೨೪ ರ ಮಧ್ಯಂತರ ಅವಧಿಯಲ್ಲಿ ಯಾರಿಗೆ ಗ್ರೇಡು ಸಿಕ್ಕುವದಿದೆಯೋ ಅವರಿಗೆ ನಿಶ್ಚಯವಾಗಿ ಸಿಕ್ಕಿ, ಬಹಳ ವೆಚ್ಚವಾಗಿಯೂ ಅಲ್ಪಸ್ವಲ್ಪ ಸ್ಥಾವರ ಜಂಗಮ ಮತ್ತು ಉಚ್ಚ ವಸ್ತುಗಳ ಸಂಗ್ರಹವನ್ನು ಸಹಜವಾಗಿ ಮಾಡಲಿಕ್ಕೆ ಬರುವದು. ಮಿತ್ರರು ಮತ್ತು ಕೈಕೆಳಗಿನ ನೋಕರರು ವಿಶ್ವಾಸದಿಂದ ವರ್ತಿಸುವರು. ತಂದೆ ತಾಯಿ ಜೀವಂತವಿದ್ದರೆ ತಾಯಿಯ ಆರೋಗ್ಯ ಸ್ವಲ್ಪ ಕಿರಿಕಿರಿಯುದೆನಿಸುವದು. ಆದರೆ ತಂದೆಯ ಆರೋಗ್ಯ ಚೆನ್ನಾಗಿ ಉಳಿಯುವದು. ಡಿಶೆಂಬರ ವರೆಗೆ ಯಾವದೊಂದು ಯಾತ್ರೆ ಸಂಭವಿಸುವದು. ಇಲ್ಲವೆ ವಿಶೇಷ ಧಾರ್ಮಿಕ ಕೃತ್ಯ ಜರಗುವದು.

ದಾವೆ, ಫಿರ್ಯಾದಿ ನಡೆದಿದ್ದರೆ ಅವುಗಳಲ್ಲಿ ಯಾವದರ ನಿರ್ಣಯ ಮಾರ್ಚ ೨೯ ರೊಳಗಾಗಿ ಆಗುವದೋ ಅದರಲ್ಲಿ ಅಪಯಶಸ್ಸಿನ ಸಂಭವನಿದೆ. ಆದರೆ ಎಪ್ರಿಲದಿಂದ ಮುಂದೆ ಆದ ನಿರ್ಣಯಗಳು ನಿಮಗೆ ಪೂರ್ಣವಾಗಿ ಯಶಸ್ವಿಯಾಗುವವು. ಖಾಸಗಿ ಸ್ಪರ್ಧೆಯಲ್ಲಿ ಮಾತ್ರ ಅಗಸ್ಟ ೨೮ ರಿಂದ ಅಕ್ಟೋಬರ ೧೪ ಈ ಅವಧಿಯನ್ನು ಬಿಟ್ಟು ಉಳಿದ ವೇಳೆಯಲ್ಲಿ ನಿಮ್ಮದೇ ಹೋಲ್ಗೈಯಾಗುವದು.

ಈ ರಾಶಿಯ ಸ್ತ್ರೀಯರು ಈ ವರ್ಷ ಹಡೆಯುವವರಿದ್ದರೆ ಮತ್ತು ಅದು ಡಿಸೆಂಬರ ೧೬ ರಿಂದ ಮಾರ್ಚ ೨೯ ರ ಮಧ್ಯಂತರ ಅವಧಿಯಲ್ಲಿ ಆದರೆ ಸ್ವಲ್ಪ ಕಷ್ಟವೆನಿಸುವದು. ಆದರೆ ಅವರಿಗೆ ಪುತ್ರರತ್ನ ಹುಟ್ಟುವ ಯೋಗ ಹೆಚ್ಚಿಗೆ ಇದೆ. ಉಳಿದ ವೇಳೆಯಲ್ಲಿ ಪ್ರಸೂತಿಯು ಸುಲಭವಾದರೂ ಬಹುತರ ಕನ್ಯಾರತ್ನ ಹುಟ್ಟುವ ಯೋಗ ಹೆಚ್ಚಿಗೆ ಇದೆ.

ಯಾರ ಪರೀಕ್ಷೆ ಜನೆವರಿಗಿಂತ ಮೊದಲು ಆಗುವದೋ ಅವರು ಬಹುಶಃ ವರ್ಗವನ್ನು ಸಂಪಾದಿಸುವರು. ಆದರೆ ಅನಂತರ ಪರೀಕ್ಷೆಯಾದವರಲ್ಲಿ ನೂರಕ್ಕೆ ೯೦ ರಷ್ಟು ವಿದ್ಯಾರ್ಥಿಗಳಾದರೂ ತೇರ್ಗಡೆ ಹೊಂದುವರು.

# ವೃಶ್ಚಿಕ

ಒಟ್ಟಿಗೆ ಹೇಳಬೇಕಾದರೆ ಈ ರಾಶಿಯವರು ಎಲ್ಲ ವಿಷಯಗಳಲ್ಲಿ ಕಷ್ಟದಿಂದಲಾದರೂ ಗೌರವ ಕಾಯ್ದುಕೊಂಡು ಕಾಲಕ್ರಮಣ ಮಾಡುವರು ಇದು ಮಾತ್ರ ನಿಶ್ಚಿತ.

ಈ ರಾಶಿಯವರಿಗೆ ಇನ್ನೂ ಸಾಡೆಸಾತಿ ಇರುವದು. ಆದರೆ ವರ್ಷಾರಂಭದಿಂದ ಸಾಡೇಸಾತಿಯಲ್ಲಿ ಐದು ವರ್ಷ ಮುಗಿದು ಕೊನೆಯ ಎರಡೂವರೆ ವರ್ಷ ಮುಗಿಸುವ ಮಾರ್ಗಕ್ರಮಣದಲ್ಲಿ ಶನಿಯು ಇರುವನು; ಅರ್ಥಾತ್ ದೀಪಾವಳಿಯಿಂದ ದ್ವಿತೀಯ ಶನಿ ಬರುವನು. ಈ ಸ್ಥಾನವು ರಾಶಿಯ ಮಿತ್ರಕ್ಷೇತ್ರವಾಗಿರುವದರಿಂದ ಹಿಂದಿನ ಎರಡೂವರೆ ವರ್ಷಗಳಷ್ಟು ಕಷ್ಟವನ್ನು ಶನಿ ಕೊಡಲಾರನು. ಇದನ್ನು ನಿಶ್ಚಿತವಾಗಿ ತಿಳಿದುಕೊಳ್ಳಬೇಕು. ಅಲ್ಲದೆ ವರ್ಷವಿಡೀ ಇರುವ ಏಕಾದಶ ರಾಹು ಮತ್ತು ಜನೆವರಿಯಿಂದ ಬರುವ ಪ್ರಥಮ ಗುರು ಶುಭಪ್ರದವಿರುವದರಿಂದ ಈ ರಾಶಿಯ ಜನರ ಆರೋಗ್ಯ ಬಹಳ ಉತ್ತಮ ಉಳಿಯುವದು. ಆದರೂ ಈ ರಾಶಿಯ ಸ್ವಾಮಿ ಮಂಗಳನು ವಕ್ರಿಯಾಗುವದರಿಂದ ಜನೆವರಿ ೧೬ರ ವರೆಗೆ ಅವನು ಸ್ವಲ್ಪ ಕಿರಿಕಿರಿಯನ್ನೇ ಕೊಡುವನು. ಅದರಂತೆ ಎಪ್ರಿಲದಲ್ಲಿ ಶನಿಯೊಡನೆ ಪ್ರತಿದೃಷ್ಟಿಯೋಗವಿರುವದು. ಆದರಿಂದ ಸಣ್ಣದೊಡ್ಡ ಅಪಘಾತವಾಗುವ ಸಂಭವವೂ ಇದೆ. ಮೇ ೨೯ ರಿಂದ ಮುಂದೆ ಒಳ್ಳೇ ನಿರೋಗಿಯಾಗಿ ಉಳಿಯುವಿರಿ ಮತ್ತು ಆಗಿನಿಂದ ದೇಹಸೌಖ್ಯಕ್ಕೆ ಬಾಹ್ಯೋಪಚಾರಿಕವಾದ ಸಂಗತಿಗಳೂ ಒಂದರ ಹಿಂದೊಂದು ಸಂಭವಿಸುತ್ತ ಹೋಗುವವು.

ಹೆಂಡತಿಯ ಆರೋಗ್ಯಕ್ಕೆ ನವಂಬರ ೨೦ ರಿಂದ ಡಿಸೆಂಬರ ೨೫ ರ ವರೆಗೆ ಸ್ವಲ್ಪ ತೊಂದರೆ. ಆದರೆ ಉಳಿದ ವೇಳೆಗೆ ಮಾತ್ರ ಅದು ಉತ್ತಮ ಉಳಿಯುವದು. ಮನೆತನದ ಕಾರಣಕ್ಕಾಗಿ ಉಭಯತರಲ್ಲಿ ಯಾವಾಗಾದರೊಮ್ಮೆ ಸಣ್ಣ ದೊಡ್ಡ ವಾಗ್ಯುದ್ಧ ನಡೆಯುವದು. ಆದರೆ ಪ್ರೇಮದಲ್ಲಿ ಇಲ್ಲವೆ ಸಹವಾಸದಲ್ಲಿ ಸ್ವಲ್ಪೂ ಅಂತರ ಬೀಳುವದಿಲ್ಲ. ಒಂದು ವೇಳೆ ಇನ್ನೂ ನಿಮ್ಮ ಮದುವೆಯಾಗಿರದಿದ್ದರೆ ಮತ್ತು ಈ ವರ್ಷ ಮಾ… ಕೊಳ್ಳುವದಿದ್ದರೆ ಅದಕ್ಕೆ ಜನೆವರಿಯಿಂದ ಗುರು… ಬಲ ಉತ್ತಮ ಬರುವದು. ಅನಂತರವೆ ಅದ… ಅನಾಯಾಸವಾಗಿ ಜರಗುವದು. ವಧೂ ಮತ್ತು… ವರ ಮನಸ್ಸಿನಂತೆ ದೊರೆಯುವರು.

ಅದರಂತೆ ನಿಮ್ಮ ಮಕ್ಕಳಲ್ಲಿ ಯಾರದಾ… ಮದುವೆ ಮಾಡುವದಿದ್ದರೆ ಅದಕ್ಕಾದರೂ ಜ… ವರಿಯಿಂದಲೆ ಉತ್ತಮ ಬಾಶಿಂಗಬಲ ಬರುವದು. ಆದುದರಿಂದ ಅನಂತರವೆ ಸ್ವಲ್ಪ ಪ್ರಯತ್ನದಿಂ… ಸಹಜವಾಗಿ ಸಾಧ್ಯವಾಗುವದು ಮತ್ತು ಸೊ… ಇಲ್ಲವೆ ಅಳಿಯ ಮನಸ್ಸಿಗೆ ಬರುವಂಥವರು ದೊ… ಯುವರು. ಮಕ್ಕಳ ಉನ್ನತಿಯಾದರೂ ಜನೆವ… ಯಿಂದ ಹೆಚ್ಚಾಗಿ ಆಗುವದು ಮತ್ತು ಆಗಿನಿಂದ… ಮೊದಲಿಗಿಂತ ಹೆಚ್ಚು ಚೆನ್ನಾಗಿ ವರ್ತಿಸುವರು. ಅದರಲ್ಲಿ ನಿಮ್ಮ ಗಂಡುಮಗನಿಗಿಂತ ಮಗಳಿ… ಈ ವರ್ಷ ಹೆಚ್ಚು ಸುಖ.

ಧಂದೆ ಕೂಲಿಕಾರರಿಗೆ ಈ ವರ್ಷ ಜನೆವರಿಯಿಂದಲೇ ಲಾಭ. ಅದಕ್ಕೂ ಮೊದಲು ಎಷ್ಟೇ ಜಪ್ಪಿ… ದಕ್ಷತೆಯಿಂದ ವರ್ತಿಸಿದರೂ ಇಷ್ಟ ಕಾರ್ಯದಲ್ಲಿ ಅಪಯಶಸ್ಸು ಇಲ್ಲವೆ ಮನೋಭಂಗವಾಗುವದು. ಜನೆವರಿಯಿಂದ ಮಾತ್ರ ಶ್ರಮಜೀವಿ ಮತ್ತು ಬುದ್ಧಿಜೀವಿಗಳ ಜೀವನ ಸರಳ ಸಾಗಹತ್ತಿ ರೂಪಾಯಿಯಲ್ಲಿ ಹನ್ನೆರಡಾಣೆಯಷ್ಟಾದರೂ ಯಶಸ್ಸು ಮತ್ತು ಲಾಭವಾಗುವದು. ನೋಕರರಿಗೆ ಮೇಲಿ… ಗ್ರೇಡು ಹಕ್ಕಿನಿಂದ ದೊರೆಯುವದಿದ್ದರೆ ಅದ… ಸಿಕ್ಕುವ ಅವಕಾಶ ಮುಂದೆ ಮುಂದೆ ಬೀಳುವದು. ಅದರಲ್ಲಿಯೂ ಒಂದು ವೇಳೆ ಯಶಸ್ಸು … ಯುವದಾದರೆ ಅಗಷ್ಟ ೧೫ ರಿಂದ ಅಕ್ಟೋಬ… ೧೬ ರ ಮಧ್ಯಂತರ ಅವಧಿಯಲ್ಲಿ ಸಿಕ್ಕಬಹುದು. ಬದಲಿಯಾಗುವದಾದರೆ ಅದು ನಿಶ್ಚಿತವಾ… ಪ್ರಾಪಂಚಿಕ ದೃಷ್ಟಿಯಿಂದ ಅನುಕೂಲವಿ… ಸ್ಥಳಕ್ಕೆ ಆಗುವದು ಮತ್ತು ಕೆಲಸದ ಭಾರವನ್ನು ಹೆಚ್ಚಿಗೆ ಹೊರಬೇಕಾಗುವದು. ಆದರೂ ಮನಸ್ಸಿ… ಹುರುಪು ಹೆಚ್ಚುವದು. ವರಿಷ್ಠರೂ ಸಂತುಷ್ಟರಾಗುವರು. ದ್ರವ್ಯಲಾಭ ಅಂದಾಜಿನಷ್ಟಂತೆ ದೊರೆಯುವದು; ಆದರೆ ಕೆಲ ಸಂದರ್ಭಗಳ…

ಅನಪೇಕ್ಷಿತವಾಗಿ ಹೆಚ್ಚಿಗೂ ದೊರೆಯುವದು. ವೆಚ್ಚದ ಪ್ರಮಾಣವು ಜೀವ ಬೇಸರ ಬರುವಷ್ಟು ಹೆಚ್ಚುವದು. ಆದರೆ ಅದರಲ್ಲಿಯು ಹೇತು ಬಹಳಷ್ಟು ಸಾಧ್ಯವಾಗುವದು. ಸಂಗ್ರಹ ಮಾತ್ರ ಹೆಚ್ಚುವ ಆಸೆಯುನ್ನು ತಾಳಬಾರದು. ಎಷ್ಟೊಂದು ಮಿತವ್ಯಯದಿಂದ ವರ್ತಿಸಿದರೂ ದ್ವಿತೀಯ ಶನಿ ಹಾಗೆ ಮಾಡಗೊಡುವದಿಲ್ಲ. ಆದರೆ ಸ್ಥಾವರ ಆಸ್ತಿಯಲ್ಲಿ ಕೆಲ ಸುಧಾರಣೆಯಾಗುವದು. ಇಲ್ಲವೆ ಅದರಲ್ಲಿಯು ಅಪೇಕ್ಷಿತ ಕಾರ್ಯಗಳು ಅನುಕೂಲವಾಗಹತ್ತುವವು. ಕೇವಲ ಲಾಭಕ್ಕೆ ನವಂಬರ ೨೬ ರಿಂದ ಜನೆವರಿ ೬, ಮಾರ್ಚ ೧ ರಿಂದ ಮೇ ೬, ಮೇ ೨೩ ರಿಂದ ಜುಲೈ ೧೪ ಮತ್ತು ಸಪ್ಟಂಬರ ೧೪ ರಿಂದ ಅಕ್ಟೋಬರ ೪. ಈ ಅವಧಿಯು ಹೆಚ್ಚು ಅನುಕೂಲ. ಮಿತ್ರಸುಖ ಉತ್ತಮ ದೊರೆಯುವದು. ಜನೆವರಿಯಿಂದ ಮಂಗಳ ಮತ್ತು ಧಾರ್ಮಿಕ ಕೃತ್ಯಗಳು ಬೇಕಾದಷ್ಟು ಸಂಭವಿಸುವವು. ಆದರೆ ಮನೆಯಲ್ಲಿ ಅಲ್ಪಸ್ವಲ್ಪ ಕಲಹವುಂಟಾಗುವದು. ಆದರೂ ಅದು ಅಷ್ಟೊಂದು ಹೆಚ್ಚುವದಿಲ್ಲ. ತಂದೆ ತಾಯಿ ಜೀವಂತವಿದ್ದರೆ ತಂದೆಗಿಂತ ತಾಯಿಯ ಆರೋಗ್ಯ ಹೆಚ್ಚು ಉತ್ತಮ ಉಳಿಯುವದು. ಆದರೆ ಇಬ್ಬರೊಡನೆಯು ನಿಮ್ಮದು ಅಷ್ಟೊಂದು ಕೂಡಿ ನಡೆಯುವದಿಲ್ಲ.

ದಾವೆ, ಫಿರ್ಯಾದಿಗಳಿಗೆ ಈ ವರ್ಷ ಅಷ್ಟೊಂದು ಯಶಸ್ವಿಯಿಲ್ಲ. ಜನೆವರಿಗಿಂತ ಮೊದಲು ಆಗುವ ತೀರ್ಪುಗಳು ಬಹುತರ ನಿಮ್ಮ ವಿರುದ್ಧ ಆಗುವವು ಮತ್ತು ಅನಂತರ ಆಗುವ ತೀರ್ಪು ನಿಮ್ಮಂತೆ ಆದರೂ ಅವಷ್ಟೊಂದು ತುಂಬಿ ಬರುವದಿಲ್ಲ. ಖಾಸಗಿ ಸ್ಪರ್ಧೆಯಲ್ಲಿ ಮಾತ್ರ ಜನೆವರಿಯಿಂದ ನಿಮ್ಮದು ಬಹಳ ಮೇಲ್ಗೈ.

ಈ ರಾಶಿಯ ಸ್ತ್ರೀಯರು ಜನೆವರಿಗಿಂತ ಮೊದಲು ಹಡೆಯುವವರಿದ್ದರೆ ಅವರ ಮಗುಗಳಿಗೆ ಅಲ್ಪಸ್ವಲ್ಪ ಕ್ಲೇಶವಾಗುವ ಸಂಭವವಿದೆ. ಆದರೆ ಜನೆವರಿಯಿಂದ ಮುಂದೆ ಹಡೆದರೆ ಸುಲಭ ಪ್ರಸೂತಿಯಾಗಿ ಮಗುವೂ ಒಳ್ಳೆ ಸಶಕ್ತವಾಗುವದು. ಯಾರ ಜನ್ಮಕುಂಡಲಿಯಲ್ಲಿ ಗುರು ವಿಷಮರಾಶಿಯಲ್ಲಿ ( ಮೇಷ, ಮಿಥುನ, ಸಿಂಹ, ತುಲಾ, ಧನು ಮತ್ತು ಕುಂಭ ) ಇರುವನೋ ಅವರಿಗೆ ಗಂಡು ಹುಟ್ಟುವದು ವ ಯಾರ ಗುರು ಸಮರಾಶಿಯಲ್ಲಿರುವನೊ (ವೃಷಭ, ಕರ್ಕ, ಕನ್ಯಾ, ವೃಶ್ಚಿಕ ಮತ್ತು ಮೀನ) ಅವರಿಗೆ ಬಹುಶಃ ಕನ್ಯಾ ಹುಟ್ಟುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಜನೆವರಿಗಿಂತ ಮೊದಲು ಆಗುವದೋ ಅವರು ಬಹಳ ಚೆನ್ನಾಗಿ ಅಭ್ಯಾಸಮಾಡಿದರೆ ಯಶಸ್ಸಿನ ಆಸೆಹಿಡಿಯಬೇಕು ಮತ್ತು ಜನೆವರಿಯಿಂದ ಮುಂದೆ ಯಾರ ಪರೀಕ್ಷೆ ಆಗುವದೋ ಅವರಲ್ಲಿ ನೂರಕ್ಕೆ ೬೫ ರಷ್ಟು ಜನರಾದರೂ ಯಶಸ್ಸು ಸಂಪಾದಿಸುವ ಅಂದಾಜಿದೆ.

## ಧನು

ಒಟ್ಟಿಗೆ ಈ ರಾಶಿಯವರಿಗೆ ಈ ವರ್ಷ ದ್ರವ್ಯ ಲಾಭಕ್ಕೆ ಬಹಳ ಹಿತಕರವಿದ್ದರೂ ಉಳಿದ ವಿಷಯಗಳಲ್ಲಿ ಅಲ್ಪ ಸ್ವಲ್ಪ ತೊಂದರೆಯದೇ ಆಗಿ ಪರಿಣಮಿಸುವದು.

ಈ ರಾಶಿಗೆ ಪ್ರಾರಂಭವಾದ ಸಾಡೇಸಾತಿಯಲ್ಲಿ ಮಧ್ಯದ ಎರಡೂವರೆ ವರ್ಷ ಇದೇ ತಾನೆ ದೀಪಾವಳಿಯಿಂದ ಪ್ರಾರಂಭವಾಗಿದೆ. ಅಂದರೆ ಕಳೆದ ಎರಡೂವರೆ ವರ್ಷ ಇದ್ದ ದ್ವಾದಶ ಶನಿ ಹೋಗಿ ಈಗ ಜನ್ಮಸ್ಥ ಅಂದರೆ ಪ್ರಥಮ ಶನಿ ಬಂದಿರುವನು. ಧನು ಅವನ ಮಿತ್ರರಾಶಿಯಾಗಿರುವದರಿಂದ 'ಕಲ್ಲಿಗಿಂತ ಇಟ್ಟಂಗಿ ಮಿದುವು' ಎಂಬಂತೆ ಹಿಂದಿನ ಎರಡೂವರೆ ವರ್ಷಗಳಿಗಿಂತ ಈ ಎರಡೂವರೆ ವರ್ಷ ಕಡಮೆ ಕಷ್ಟದ್ದೆನಿಸುವದು ಎಂದು ನಿಶ್ಚಿತವಾಗಿ ತಿಳಿಯಬೇಕು. ಆದರೂ ಈ ವರ್ಷವಿಡೀ ಉಳಿಯುವ ಚತುರ್ಥಕೇತು ಮತ್ತು ಜನೆವರಿಯಿಂದ ಈ ರಾಶಿಯ ಸ್ವಾಮಿ ದ್ವಾದಶ ಗುರು ಇವರೆಲ್ಲರ ಫಲಗಳನ್ನು ಸಂಕಲಿತ ರೀತಿಯಿಂದ ವಿಚಾರ ಮಾಡಿದ್ದಾದರೆ ಈ ರಾಶಿಯವರ ಆರೋಗ್ಯ ಚೆನ್ನಾಗಿ ಉಳಿಯುವದೆಂದು ಹೇಳಲಿಕ್ಕೆ ಬರಲಾರದು. ವಿಶೇಷವಾಗಿ ಜನೆವರಿಯಿಂದ ಅದು ಸ್ವಲ್ಪಿಲ್ಲ ಸ್ವಲ್ಪ ಕೆಡುವ ತಕರಾರು ಮೇಲಿಂದ ಮೇಲೆ ಕೇಳುವಿರಿ. ಕಿಡ್ನಿ ಇಲ್ಲವೆ ಮೂತ್ರವಿಕಾರವಿದ್ದವರು ಹೆಚ್ಚು ಜಾಗ್ರತೆ ವಹಿಸುವದವಶ್ಯ. ಅವಾಂತರ ವಿಷಯಗಳಲ್ಲಿ ದೇಹ ಸುಖ ಅತಿ ಉತ್ತಮವಿಲ್ಲದಿದ್ದರೂ ಅಷ್ಟೊಂದು ಕುರಕುರಿ ಮಾಡುವಂತಹದೂ ಇರುವದಿಲ್ಲ.

ಹೆಂಡತಿಯ ಆರೋಗ್ಯ ಈ ವರ್ಷ ಅಷ್ಟೊಂದು ಚೆನ್ನಾಗಿಯೂ ಇಲ್ಲಿ ಕೆಟ್ಟೂ ಇಲ್ಲ ಹೀಗೆ ಇದೆ. ಅದರಲ್ಲಿಯೂ ಜುಲೈ ೧೧ ರಿಂದ ಬಹಳ ಉತ್ತಮವಿರುವದು. ಒಂದು ವೇಳೆ ನಿಮ್ಮ ಮದುವೆಯಾಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಜನೆವರಿಗಿಂತ ಮೊದಲೆ ಒಳ್ಳೆ ಬಾಶಿಂಗ ಬಲವಿರುವದು. ಅಂತೆಯೆ ಆಗ ಅದು ಸಹಜವಾಗಿ ಸಾಂಗವಾಗುವದು. ಆದರೆ ಜನೆವರಿಯಿಂದ ಮುಂದೆ ಮಾತ್ರ ಬಲ ಸ್ವಲ್ಪೂ ಇಲ್ಲದ್ದರಿಂದ ಒಂದು ವೇಳೆ ಕೂಡಿ ಬಂದರೂ ಪ್ರತ್ಯಕ್ಷ ಮದುವೆಯಾಗುವದು ಕಠಿಣವೇ. ವಧು ಇಲ್ಲವೆ ವರ ಮನಸ್ಸಿನಂತೆ ಇದ್ದೇ ತೀರುವದೆಂದಿಲ್ಲ. ಒಂದು ವೇಳೆ ಲಗ್ನ ಕೂಡಿದರೂ ನಿಮ್ಮ ಸಮೀಪದ ಇಲ್ಲವೆ ದೂರದ ಆಪ್ತರು ಅದನ್ನು ಮುರಿದು ಹಾಕಲಿಕ್ಕೆ ಪ್ರಯತ್ನ ಮಾಡುವರು.

ಅದರಂತೆಯೇ ನಿಮ್ಮ ಮಕ್ಕಳುಮರಿಗಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಅದಕ್ಕಾದರೂ ಜನೆವರಿಗಿಂತ ಮೊದಲು ಉತ್ತಮ, ಆದರೆ ಅನಂತರ ಮಧ್ಯಮ ಬಾಶಿಂಗಬಲವಿರುವದೆಂದು ತಿಳಿದುಕೊಳ್ಳಬೇಕು. ಆದರೆ ಅಳಿಯ ಇಲ್ಲವೆ ಸೊಸೆ ಪೂರ್ಣ ಮನಸ್ಸಿನಂತೆ ಇರುವರು. ಜನೆವರಿ ೧೬ ರಿಂದ ಮಾರ್ಚ ೨೯ ರ ವರೆಗೆ ಮದುವೆಯಾದರೆ ಅನಪೇಕ್ಷಿತವಾಗಿ ಬರುವ ಅಡಚಣಿಗಳಿಂದ ಮನೋಭಂಗವಾಗುವ ಸಂಭವವೂ ಇದೆ. ಮಕ್ಕಳ ಉನ್ನತಿಗೆ ಈ ವರ್ಷ ಜನೆವರಿಗಿಂತ ಮೊದಲು ಮತ್ತು ಜುಲೈ ೧೧ ರಿಂದ ಆಗಸ್ಟ ೨೮ ಹಾಗು ಅಕ್ಟೋಬರ ೧೩ ರ ನಂತರ ಈ ಎಲ್ಲ ಕಾಲ ಬಹಳ ಉತ್ತಮವಿರುವದು. ಆದರೆ ಅವರದು ಮತ್ತು ನಿಮ್ಮದು ಕೂಡಿ ಬರುವ ಯೋಗ ಮಾತ್ರ ಚೆನ್ನಾಗಿ ಇರುವದಿಲ್ಲ. ಅದು ಬಹಳಷ್ಟು ಸಾಮಾನ್ಯವಾಗಿರುವದು.

ಧಂದೆ ಕೂಲಿಕಾರರ ದೃಷ್ಟಿಯಿಂದ ಈ ವರ್ಷ ದಶಮರಾಹುವಿನಿಂದ ನೋಕರರಿಗೆ ಎಷ್ಟು ಸುಖಕರವಾಗಿದೆಯೋ ಅಷ್ಟು ಧಂದೆಯವರಿಗೆ ಸುಖಕರವಾಗಿ ಪರಿಣಮಿಸುವದಿಲ್ಲ. ನೋಕರಿ ಮಾಡುವವರಿಗೆ ಮೇಲಿನ ಗ್ರೇಡು ಸಿಕ್ಕುವ ಸಂಭವ ಇಲ್ಲದಿದ್ದರೂ ಅದು ಸಿಕ್ಕುವದು. ಆದರೆ ಧಂದೆ ಮಾಡುವವರಿಗೆ ಮಾತ್ರ ನಿಶ್ಚಯವಾಗಿ ಸಿಕ್ಕತಕ್ಕ ಲಾಭ ಕೂಡಲೆ ಉಡಿಯಲ್ಲಿ ಬೀಳಬೇಕಾದರೆ ಸಾಕುಬೇಕಾಗಿ ಹೋಗುವದು. ಶ್ರಮಮಾಡುವವರು ನೀವು, ಅದರ ಲಾಭ ಮಾತ್ರ ಎರಡನೆಯವರಿಗೆ, ಇಂಥ ಚಮತ್ಕಾರಿಕ ಸ್ಥಿತಿ ಅನೇಕ ಸಲ ಕಂಡುಬರುವದು. ಆದರೆ ಅದರಲ್ಲಿಯೂ ಡಿಸೆಂಬರ ೯ ರಿಂದ ಜನೆವರಿ ೨೫, ಮಾರ್ಚ ೧ ರಿಂದ ಎಪ್ರಿಲ ೯, ಮೇ ೪ ರಿಂದ ೨೬, ಜುಲೈ ೧ ರಿಂದ ಆಗಸ್ಟ ೬ ಮತ್ತು ಸಪ್ಟಂಬರದಿಂದ ಮುಂದಿನ ಕಾಲ ಬಹಳ ಉತ್ತಮವೆನಿಸುವದು. ನೋಕರರ ವರ್ಗವಾದರೆ ಅದು ಬಹಳ ಅನನುಕೂಲ ಸ್ಥಳಕ್ಕೆ ಆಗುವದು. ಆದರೆ ವರಿಷ್ಠರು ಒಳ್ಳ ರೀತಿಯಿಂದ ವರ್ತಿಸುವರು, ನಡೆಸಿಕೊಳ್ಳುವರು. ಜನೆವರಿಯವರೆಗೆ

ಹೊಸಸಂಗ್ರಹವನ್ನು ಮಾಡುವಿರಿ. ಆದರೆ ಮುಂದೆ ಹೆಚ್ಚಿನ ವೆಚ್ಚದಿಂದ ಅದು ಕರಗಹತ್ತಬಹುದು. ಕೈಕೆಳಗಿನವರು ಅವಿಧೇಯರಾಗಿ ನಡೆಯುವರು. ಧಾರ್ಮಿಕ ಇಲ್ಲವೆ ಮಂಗಳಕಾರ್ಯಗಳು ವಿಶೇಷವಾಗಿ ಜರುಗುವುದಿಲ್ಲ. ಅವುಗಳ ಪ್ರಖ್ಯಾತಿಯೂ ಆಗುವದಿಲ್ಲ. ಆದರೆ ಜನೆವರಿಗಿಂತ ಮೊದಲು ಯಾವದೊಂದು ಯಾತ್ರೆ ಮಾಡುವಿರಿ. ಜನೆವರಿನಂತರ ಸಮೀಪದ ಆಪ್ತರೊಬ್ಬರ ಹಿತಕ್ಕಾಗಿ ಮುಂದೆ ಬಿದ್ದು, ಬಹಳ ಹಣ ವೆಚ್ಚ ಮಾಡಬೇಕಾಗುವದು. ಆದರೆ ಅದರಲ್ಲಿ ಯಶಸ್ಸು ಚೆನ್ನಾಗಿ ದೊರೆಯುವದು. ವಾಹನ ಸುಖ ಅನುಕೂಲವಾಗಿ ಪರಿಣಮಿಸುವವದಿಲ್ಲ. ಹರಿ-ಮುರಿಯಿಂದ ಅದು (ವಾಹನ) ಮೇಲಿಂದ ಮೇಲೆ ಕೆಡಹತ್ತುವದು. ತಂದೆ ತಾಯಿ ಜೀವಂತವಿದ್ದರೆ ಅವರ ಆರೋಗ್ಯ ಅಲ್ಪ ಸ್ವಲ್ಪ ಕಿರಿಕಿರಿಯದೆನಿಸುವದು. ಆದರೆ ಅವರೊಡನೆ ಕೆಲಮಟ್ಟಿಗೆ ಕೂಡಿ ನಡೆಯುವದು. ಮಿತ್ರಸುಖ ಅನುಕೂಲ. ಅವರಲ್ಲಿ ಕೆಲವರ ಒಳ್ಳೆ ಉತ್ಕರ್ಷವಾಗುವದು. ಅವರು ನಿಮಗೆ ಅನೇಕ ಸಂದರ್ಭಗಳಲ್ಲಿ ಸಹಾಯ ಮಾಡುವರು.

ದಾವೆ, ಖಟ್ಲೆ ಇದ್ದರೆ ಅವುಗಳಲ್ಲಿ ಅರ್ಧಕ್ಕಿಂತ ಹೆಚ್ಚು ನಿಮ್ಮ ಪರವಾಗಿ ತೀರ್ಮಾನವಾಗುವವು. ಮೇ ೨೨ ರ ವರೆಗೆ ಮಹತ್ವದ ದಾವೆಗಳಲ್ಲಿ ಪ್ರಚಂಡ ಯಶಸ್ಸು ಸಿಕ್ಕುವದು. ಮೇ ೨೩ ರಿಂದ ಜುಲೈ ೧೧ ರ ಮಧ್ಯಂತರ ಅವಧಿಯಲ್ಲಿ ತೀರ್ಪುಕೊಡಲ್ಪಟ್ಟರೆ ಅದು ನಿಮ್ಮ ವಿರುದ್ಧ ಹೋಗುವದು. ಖಾಸಗಿ ಸ್ಪರ್ಧೆಯಲ್ಲಿ ಇಲ್ಲವೆ ತುರುಸಿನ ವಿಷಯಗಳಲ್ಲಿ ದೊರೆಯಬೇಕಾದಷ್ಟು ಲಾಭ ದೊರೆಯುವದಿಲ್ಲ.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ, ಅವರಲ್ಲಿ ಜನೆವರಿಗಿಂತ ಮೊದಲು ಹಡೆಯುವವರಿಗೆ ಸ್ವಲ್ಪವೂ ಕಷ್ಟವಾಗದೆ ಬಹುಶಃ ಪುತ್ರರತ್ನ ಪ್ರಾಪ್ತಿಯಾಗುವದು. ಅನಂತರ ಕಷ್ಟ ಪ್ರಸೂತಿಯ ಯೋಗವಿರದಿದ್ದರೂ ಬಹುಶಃ ಹೆಣ್ಣು ಹುಟ್ಟಿ ಬಾಣಂತಿತನದ ದಿನಗಳು ಸ್ವಲ್ಪ ಕಿರಿಕಿರಿಯವೆನಿಸುವವು ಎಂದು ತಿಳಿಯುತ್ತದೆ.

ಯಾರ ಪರೀಕ್ಷೆ ಜನೆವರಿಗಿಂತ ಮೊದಲು ಇರುವದೋ ಅವರು ನಿಶ್ಚಯವಾಗಿ ಪಾಸಾಗುವರು. ಒಂದು ವೇಳೆ ಅವರಿಗೆ ವರ್ಗವೂ ಸಿಕ್ಕಬಹುದು. ಆದರೆ ಜನೆವರಿನಂತರ ಯಾರ ಪರೀಕ್ಷೆಯಾಗುವದೋ ಅವರಲ್ಲಿ ನೂರಕ್ಕೆ ೨೫-೩೦ ರಷ್ಟೇ ಜನ ಪಾಸಾಗುವ ಸಂಭವವಿದೆ.

## ಮಕರ

ಒಟ್ಟಾರೆ ಈ ವರ್ಷ ಈ ರಾಶಿಯವರಿಗೆ ಸಾಡೇಸಾತಿಯಿಂದ ಹೆಚ್ಚು ವೆಚ್ಚ ಮಾಡಬೇಕಾಗಿ ಬಂದರೂ ಪ್ರಾಪಂಚಿಕ ಮತ್ತು ಔದ್ಯೋಗಿಕ ವಿಷಯಗಳಲ್ಲಿಯೂ ಹೆಚ್ಚು ಸಮಾಧಾನಕರದ್ದೆನಿಸುವದೆಂಬುದು ಮಾತ್ರ ನಿಶ್ಚಿತ.

ದೀಪಾವಳಿಯಿಂದ ಈ ರಾಶಿಯವರಿಗೆ ಗೋಚರ ದ್ವಾದಶ ಶನಿ ಬರುವದರಿಂದ ಸಾಡೇಸಾತಿ ಸುರುವಾಯಿತೆಂದು ತಿಳಿಯತಕ್ಕದ್ದು. ಆದರೆ ಈ ರಾಶಿಯ ಸ್ವಾಮಿ ಇದೇ ಗ್ರಹವಾಗಿರುವದರಿಂದ ಅಷ್ಟೊಂದು ಅಂಜುವ ಕಾರಣವಿಲ್ಲ. ತದ್ವಿರುದ್ಧ ಈ ಏಳುವರೆ ವರ್ಷಗಳಲ್ಲಿ ಕಡೆಯ ಐದು ವರ್ಷ ಕಿರುಕಳ ತೊಂದರೆ ಹೊರತು ಉಳಿದ ಎಲ್ಲ ವಿಷಯಗಳಲ್ಲಿ ಒಳ್ಳೆ ಉತ್ಕರ್ಷದ ದಿನಗಳನ್ನೇ ಕಳೆಯುವಿರಿ. ಇದನ್ನು ನಿಶ್ಚಿತವಾಗಿ ತಿಳಿದುಕೊಂಡು ಮೊದಲಿನ ಎರಡೂವರಿ ವರ್ಷಗಳನ್ನು ಒಳ್ಳೆ ಧೈರ್ಯದಿಂದ ಕಳೆಯಿರಿ. ಕೇವಲ ಇದೊಂದು ವರ್ಷದ ಬಗ್ಗೆ ಹೇಳಬೇಕಾದರೆ ಇಡೀ ವರ್ಷ ತೃತೀಯಕೇತು ಮತ್ತು ಕೆಲದಿನ ದಶಮ ಮತ್ತು ಕೆಲದಿನ ಏಕಾದಶ ಗುರು ಹೀಗೆ ಶುಭಪ್ರದ ಗ್ರಹಗಳಿರುವದರಿಂದ ಪ್ರಕೃತಿಯು ಒಟ್ಟಾರೆ ಅನುಕೂಲ ಉಳಿಯುವದು. ಆದರೆ ಮಾರ್ಚ ೨೯ ರಿಂದ ಮೇ ೨೨ ರ ಮಧ್ಯಂತರ ಅವಧಿಯಲ್ಲಿ ಕುತ್ತಿಗೆ ಇಲ್ಲವೆ ಕಿವಿಗೆ ಸ್ವಲ್ಪ ತೊಂದರೆಯಾಗುವದು. ಉಳಿದ ವಿಷಯಗಳಲ್ಲಿ ದೇಹಸುಖ ಬಹಳ ಉತ್ತಮ. ಆದರೆ ಮನಸ್ಸಿನಲ್ಲಿ ಮಾತ್ರ ಹಾಗೆ ಇದೆಯೆಂದೆನಿಸುವದಿಲ್ಲ.

ಸ್ತ್ರೀ ಸುಖಕ್ಕೆ ಈ ವರ್ಷ ಉತ್ತಮವಾಗಿದ್ದು ಜನೆವರಿಯಿಂದ ಅವಳ ಪ್ರಕೃತಿ ಸುಧಾರಿಸಿ ಪ್ರೀತಿ ಹೆಚ್ಚುವದು. ಮನೆಯ ಅನೇಕ ವಿಷಯಗಳಲ್ಲಿ ನಿಮ್ಮ ಮಾತೇ ವರ್ಚಸ್ವಿಯೆನಿಸುವದು. ಆದರೆ ಇನ್ನೂ ನಿಮ್ಮ ಲಗ್ನವಾಗಿರದಿದ್ದರೆ ಜನೆವರಿನಂತರ ಶ್ರಮವಿಲ್ಲದೆ ಆಗುವದು ಮತ್ತು ಅತ್ತೆ ಮನೆಯವರ ಸ್ಥಿತಿ ನಿಮ್ಮಕಿಂತ ಹೆಚ್ಚು ಚೆನ್ನಾಗಿ ಇರುವದು ಮತ್ತು ವಧು ಹಾಗು ವರ ಪೂರ್ಣ ಅನುರೂಪ ಇರುವರು. ಸಮೀಪದ ಆಪ್ತರ ಸುಖ ಕಡಮೆಯೇ ಆದರೆ ದೂರದ ಆಪ್ತರ ಸುಖ ಅನುಕೂಲ. ಜನೆವರಿ ವರೆಗೆ ಬಂಧುಗಳೊಡನೆ ಸ್ವಲ್ಪ ಕೆಡುವದು. ಆದರೆ ಮುಂದೆ ಮಾತ್ರ ಚೆನ್ನಾಗಿ ಮನಃಸಮ್ಮಿಳನವಾಗುವದು.

ನಿಮ್ಮ ಮಕ್ಕಳ ಮದುವೆಯನ್ನು ಮಾಡುವದಿದ್ದರೆ, ಜನೆವರಿಯಿಂದ ಉತ್ತಮ ಬಾಶಿಂಗಬಲವಿರುವದು. ಆದುದರಿಂದ ಅದು ಸಹಜವಾಗಿ ಮತ್ತು ಮನಸ್ಸಿಗೆ ಒಗ್ಗುವಂಥವರೊಡನೆ ಕೂಡುವದು. ಯಾರ ಮದುವೆ ಜನೆವರಿ ೧೬ ರಿಂದ ಮಾರ್ಚ ೨೯ ರ ಮಧ್ಯಂತರದಲ್ಲಿ ಒದಗಿಬರುವದೊ ಅವರು ಬಹಳಷ್ಟು ಸುದೈವಿಗಳಾಗಿ ಪರಿಣಮಿಸುವರು ಮತ್ತು ಸೊಸೆ ಇಲ್ಲವೆ ಅಳಿಯ ಬಹಳ ಜಾಣರು, ಒಳ್ಳೆ ಸುಂದರರು ಮತ್ತು ಬಂಧುಗಳ ದೃಷ್ಟಿಯಿಂದ ಒಳ್ಳೆ ಸುಶಿಕ್ಷಿತರು ಮತ್ತು ಸುಧಾರಕರು ಇರುವರು. ಮಕ್ಕಳ ಉನ್ನತಿಗೂ ಈ ವರ್ಷ ಜನೆವರಿ ವರೆಗೆ ಅಪೇಕ್ಷೆಯಷ್ಟು, ಅನಂ-ತರ ಅದಕ್ಕೂ ಹೆಚ್ಚು ಅನುಕೂಲ ಪರಿಣಮಿಸುವದು. ಆದರೆ ಅವರಲ್ಲಿ ಒಬ್ಬಿಬ್ಬರ ಆರೋಗ್ಯಕ್ಕೂ ಸ್ವಲ್ಪ ತೊಂದರೆಯೆನಿಸುವದು. ಒಬ್ಬಿಬ್ಬರು ನೇರವಾಗಿ ನಿಮ್ಮ ಮನಸ್ಸಿನ ವಿರುದ್ಧವಾಗಿ ವರ್ತಿಸುವರು.

ಧಂದೆ, ಕೂಲಿಯವರಿಗೆ ಈ ವರ್ಷ ಅತ್ಯಂತ ಲಾಭದ್ದು ಆದರಂತೆ ಹೆಚ್ಚು ವೆಚ್ಚದ್ದು ಆಗಿರುವದು. ಇದರಿಂದ ಎಷ್ಟು ಹಣವನ್ನು ಕೂಡಿಸಿದರೂ ಅದರಲ್ಲಿ ಸ್ವಲ್ಪೂ ಕೈಯಲ್ಲಿ ಉಳಿಯುವದಿಲ್ಲ. ಮಾರ್ಚ ೨೯ ರಿಂದ ಮೇ ೨೨ ರ ವರೆಗೆ ಅನೇಕರಿಗೆ ಸಾಲ ತೆಗೆಯುವ ಪ್ರಸಂಗವೂ ಬರುವದು. ಆದರೆ ಮಾಡುವ ವೆಚ್ಚದ ಉದ್ದೇಶ ಮಾತ್ರ ಚೆನ್ನಾಗಿ ಸಾಧಿಸುವದು. ಜನೆವರಿಯಿಂದ ಲಾಭದ ಪ್ರಮಾಣವೂ ಹೆಚ್ಚುವದು. ನೋಕರರಿಗೆ ಜುಲೈ ೧೧ ರಿಂದ ಅಕ್ಟೋಬರ ೧೩ರ ಮಧ್ಯಂ-ತರದ ಅವಧಿಯಲ್ಲಿ ಮೇಲಿನ ಗ್ರೇಡು ಖಾತ್ರಿಯಿಂದ ಸಿಕ್ಕುವದು. ವರಿಷ್ಠರು ಬಹಳ ಸಂತುಷ್ಟ ಉಳಿಯುವರು ಮತ್ತು ಅನೇಕ ವಿಷಯಗಳಲ್ಲಿ ನಿಮ್ಮ ಸಲಹೆಯಂತೆ ವರ್ತಿಸುವರು. ಬದಲಿಯಾದರೆ ಅದೂ ಹೆಚ್ಚು ವೆಚ್ಚದ, ಆದರೆ ಒಳ್ಳೆ ಸುಖ ಸೌಕರ್ಯಗಳ ಸ್ಥಳಕ್ಕೆ ಆಗುವದು. ಸ್ವತಂತ್ರ ಧಂದೆ ಮಾಡುವವರಿಗೂ ಲೌಕಿಕ ಮತ್ತು ದ್ರವ್ಯ ಲಾಭ ಜನೆವರಿಯಿಂದ ಒಳ್ಳೆ ಅನುಕೂಲವಾಗಿ ಪರಿಣಮಿಸುವವು. ಆದರೆ ಉದ್ಯೋಗವನ್ನು ಅಭಿವೃದ್ಧಿಪಡಿಸಿಕೊಳ್ಳುವ ದೃಷ್ಟಿಯಿಂದ ಭಾರಿ ವೆಚ್ಚ ಮಾಡುವ ಪ್ರಸಂಗವೂ ಬರುವದು. ವಿಶೇಷತಃ ಈ ಬಗೆಯ ವೆಚ್ಚ ಡಿಸೆಂಬರ ೯ ರಿಂದ ಜನೆವರಿ ೧,

ಮೇ ೪ ರಿಂದ ೨೭ ಮತ್ತು ಅಗಸ್ಟ ೬ ರಿಂದ ಸಪ್ಟಂಬರ ೧೮ ಈ ಮಧ್ಯಂತರ ಅವಧಿಯಲ್ಲಿ ಹೆಚ್ಚು ಆಗುವದು. ಶ್ರಮಜೀವಿಗಳಿಗಿಂತ ಬುದ್ಧಿಜೀವಿಗಳಿಗೆ ಈ ವರ್ಷ ಹೆಚ್ಚು ಯಶಸ್ಸಿನದು ಮತ್ತು ಲಾಭದ್ದು ಮತ್ತು ಕಡಮೆ ಖರ್ಚಿನದು ಪರಿಣಮಿಸುವದು. ಮಿತ್ರಸುಖ ಅನುಕೂಲ. ಮಾರ್ಚ ೨೯ ರಿಂದ ಮೇ ೨೨ ರ ಮಧ್ಯಂತರದಲ್ಲಿ ಅವರಲ್ಲಿ ಒಬ್ಬರಿಂದ ಬಹಳ ತೊಂದರೆಯಾಗುವದು ಇಲ್ಲವೆ ಅವರು ವಿತುಷ್ಟರಾಗುವ ಸಂಭವವಿದೆ. ತಂದ ತಾಯಿ ಗಳಿದ್ದರೆ ಅವರ ಪ್ರಕೃತಿಗೆ ಈ ವರ್ಷ ಅನುಕೂಲ. ಆದರೆ ಕೆಲ ಕಾರಣಗಳಿಗಾಗಿ ಅವರು ಹಾಗೂ ನಿಮ್ಮಲ್ಲಿ ಬಹಳ ಅಸಮಾಧಾನ. ನಿಮ್ಮ ತಾಯಿಗಿಂತ ಹಿರಿಯರೊಡನೆ ಹೆಚ್ಚು ಕೂಡಿ ನಡೆಯುವದು. ಎರಡುಮೂರುಸಲ ಬಹಳ ದೂರಿನ ಪ್ರವಾಸ ಕೈಕೊಳ್ಳುವಿರಿ. ಅದರಲ್ಲಿಯ ಉದ್ದೇಶವೂ ಚೆನ್ನಾಗಿ ಸಾಧಿಸುವದು. ಸರಕಾರಿ ಕೆಲಸಗಳು ಅಲ್ಪಾಯಾಸದಿಂದ ಬಹಳಮಟ್ಟಿಗೆ ಮನಸ್ಸಿನಂತೆ ಆಗುವವು. ಅದರಂತೆ ಸಣ್ಣ ದೊಡ್ಡ ಲೇಖನ ಕೆಲಸಗಳೂ ಮನಸ್ಸಿನಂತೆ ಸಂಭವಿಸುವವು.

ದಾವೆ, ಖಟ್ಲೆ ನಡೆದಿದ್ದರೆ ಅದಕ್ಕಾಗಿ ವೆಚ್ಚ ಮತ್ತು ದಗದಗಿ ಬಹಳ. ಆದರೆ ಯಾವ ಖಟ್ಲೆಗಳ ತೀರ್ಪು ಮಾರ್ಚ ೨೯ರಿಂದ ಮೇ ೨೨ ಮತ್ತು ಅಗಸ್ಟ ೨೮ ರಿಂದ ಅಕ್ಟೋಬರ ೧೩ ರ ಮಧ್ಯಂತರ ಅವಧಿಯಲ್ಲಿ ಹೊರಬೀಳುವದೊ ಅದರಲ್ಲಿ ನಿಮಗೆ ಪ್ರಚಂಡ ಯಶಸ್ಸು. ಖಾಸಗಿ ಸ್ಪರ್ಧೆಯಲ್ಲಿಯಂತೂ ಜನೆವರಿಯಿಂದಲೇ ನಿಮ್ಮ ಮೇಲ್ಗೈ ಯಾಗುವದು.

ಈ ರಾಶಿಯ ಸ್ತ್ರೀಯರ ಪ್ರಸೂತಿಯು ಜನೆವರಿ ಮುಂದೆ ಯಾವ ಸಮಯದಲ್ಲಿ ಆದರೂ ಅದು ಸುಲಭವಾಗಿ ಆಗುವದು ಮತ್ತು ಬಹುತೇಕ ಜನರಿಗೆ ಕನ್ಯಾ ಆಗುವ ಯೋಗವಿದ್ದರೂ ಮಗು ಬಾಣಂತಿಯರ ಆರೋಗ್ಯ ಒಳ್ಳೆ ನಿರೋಗಿಯು ಳಿದು ಬಾಣಂತಿತನ ಸುಖಪ್ರದವಾಗಿ ಪರಿಣಮಿಸುವದು.

ಯಾರ ಪರೀಕ್ಷೆ ಜನೆವರಿ ಮೊದಲು ಆಗುವದೊ ಆ ವಿದ್ಯಾರ್ಥಿಗಳು ಹೇಗೆ ಹೇಗೊ ಪಾಸಾದರೂ ಪರಮೇಶ್ವರನ ಕೃಪೆ ಬಹಳವಿದ್ದಿತೆಂದು ತಿಳಿಯಬೇಕು. ಆದರೆ ಜನೆವರಿಯಿಂದ ಮುಂದೆ ಪರೀಕ್ಷೆಯಾಗುವವರಿಗೆ ವರ್ಗವೂ ದೊರೆಯುವಷ್ಟು ಭಗವತ್ಕೃಪೆಯಿದೆಯೆಂದು ತಿಳಿಯಬೇಕು.

## ಕುಂಭ

ಈ ವರ್ಷ ಮಕ್ಕಳಿಂದ ದೊರೆಯುವ ಸುಖದ ಬಗ್ಗೆ ಸ್ವಲ್ಪ ಕಿರಿಕಿರಿಯಿದ್ದರೂ ಇತರ ಬಹುತರ ವಿಷಯಗಳಲ್ಲಿ ಬಹಳ ಉತ್ಕರ್ಷದ್ದು ಮತ್ತು ಸಮಾಧಾನಕರವಾದದ್ದಾಗಿ ಪರಿಣಮಿಸುವದೆಂಬುದು ನಿಶ್ಚಿತ.

ಈ ವರ್ಷ ಈ ರಾಶಿಯವರಿಗೆ ಏಕಾದಶ ಶನಿ ಮತ್ತು ಜನೆವರಿವರೆಗೆ ನವಮ ಗುರು ಅನಂತರ ದಶಮ ಗುರು ಹೀಗೆ ಇಬ್ಬರದೂ ಸ್ಥಾನ ಬಲಿಷ್ಠವಿದ್ದು, ಶನಿಯೆ ಈ ರಾಶಿಯ ಸ್ವಾಮಿಯಾಗಿರುವನು ಮತ್ತು ಅವನ ಪೂರ್ಣದೃಷ್ಟಿ ಈ ಮತ್ತು ಅಷ್ಟಮ ಉರ್ಫ ಆಯುಷ್ಯಸ್ಥಾನದ ಮೇಲೆ ಇರುವ ಕನ್ಯಾ ರಾಶಿಯ ಮೇಲೆ ಇರುವದರಿಂದ ಸಾಮಾನ್ಯವಾಗಿ ಆರೋಗ್ಯವು ಚೆನ್ನಾಗಿಯೇ ಉಳಿಯುವದು. ಆದರೆ ಇಡೀ ವರ್ಷ ಅಷ್ಟಮರಾಹು ಇರುವದರಿಂದ ಯಾವಾಗಾದರೊಮ್ಮೆ ಟೊಂಕಶೂಲಿ. ಕಣ್ಣಬೇನೆ ಮೊದಲಾದ್ದರಿಂದ ಸ್ವಲ್ಪ ತೊಂದರೆಯಾಗುವದು. ಅಗಸ್ಟ ೨೮ ರಿಂದ ಅಕ್ಟೋಬರ ೧೩ ರ ವರೆಗೆ ಇದು ಸಂಭವಿಸುವ ಯೋಗ ಹೆಚ್ಚಿಗೆ ಇದೆ. ದ್ವಿತೀಯ ಕೇತು ಇರುವದರಿಂದ ಕುಟುಂಬದಲ್ಲಿಯ ಪ್ರತಿಯೊಬ್ಬರ ಮತ ಭಿನ್ನ ಭಿನ್ನ ಬೀಳುವದರಿಂದ ಬಹಳ ವಿಷಯಗಳಲ್ಲಿ ಕಲಹವಾಗುತ್ತ ನಡೆಯುವದು. ಆದರೆ ಜನೆವರಿಯಿಂದ ಪ್ರತಿಯೊಬ್ಬರಲ್ಲಿ ಸಮಂಜಸತನ ತೋರಿಬರುವದರಿಂದ ಹೊರಗೇನೂ ವಿಶೇಷ ಕಂಡುಬರದೆ ಒಳಗೊಳಗೆ ಅದು ಹತ್ತಿಕ್ಕಲ್ಪಡುವದು. ಉಳಿದ ವಿಷಯಗಳಲ್ಲಿ ದೇಹಸುಖಕ್ಕೆ ಸ್ವಲ್ಪೂ ಪ್ರತಿಕೂಲವೆನಿಸುವದಿಲ್ಲ. ಯಾವದೇ ಬಗೆಯ ಬೇಡಿಕೆ ಅಪೇಕ್ಷೆಯಂತೆ ಪೂರೈಸಲ್ಪಡುವದು.

ಸ್ತ್ರೀ ಸುಖಕ್ಕೆ ಈ ವರ್ಷ ಬಹಳ ಉತ್ತಮವಿದೆ. ಮನೆಯಲ್ಲಿಯ ಕೆಲಜನರೊಡನೆ ಅವಳು ಅಷ್ಟೊಂದು ಚೆನ್ನಾಗಿ ನಡೆಯದಿದ್ದರೂ ನಿಮ್ಮೊಡನೆ ಅತ್ಯಂತ ನಮ್ರತೆಯಿಂದ ಮತ್ತು ಒಮ್ಮತದಿಂದ ವರ್ತಿಸುವಳು. ಮತ್ತು ಅನೇಕ ವಿಷಯಗಳಲ್ಲಿ ಅವಳ ವಿಚಾರ ಇಲ್ಲವೆ ಸಲಹೆ ಕೊನೆಗೆ ಹಿತಕರವೆನಿಸುವದು. ಅವಳ ಆರೋಗ್ಯ ಜನೆವರಿ ೧೭ ರಿಂದ ಮಾರ್ಚ ೨೯ ರ ವರೆಗೆ ಜ್ವರ ಇಲ್ಲವೆ ಹುರುಕಿನಂಥ ವಿಕಾರಗಳಿಂದ ಸ್ವಲ್ಪ ಕೆಡುವ ಸಂಭವವಿದೆ. ಒಂದು ವೇಳೆ ಇನ್ನೂ ನಿಮ್ಮ ಲಗ್ನವೇ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವ ಇಚ್ಛೆ ಇದ್ದರೆ ಅದು ನಿಶ್ಚಯವಾಗಿ ಒದಗಿಬರುವದು. ಆದರೆ ಜನೆವರಿ ಪೂರ್ವದಲ್ಲಿ ಅದು ಎಷ್ಟೊಂದು ಅಲ್ಪಾಯಾಸದಿಂದ ಕೂಡಿಬರುವದೋ ಅಷ್ಟು ಮುಂದೆ ಕೂಡಿಬರದೆ ಅಲ್ಪಸ್ವಲ್ಪ ದಗದಗಿಯಿಂದ ಕೂಡಿಬರುವದು. ಇಷ್ಟೇ ಅಲ್ಲ ವಧು ಇಲ್ಲವೆ ವರ ಮನಸ್ಸಿನಂತೆ ಸಿಕ್ಕುವರು ಮತ್ತು ಲಗ್ನ ಸಮಾರಂಭ ನಿಮ್ಮ ಘನತೆಗೆ ತಕ್ಕಂತೆ ಒಳ್ಳೆ ಸಂಭ್ರಮದಿಂದ ನೆರವೇರುವದು.

ಅದರಂತೆ ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಡಿಶೆಂಬರ ಕೊನೆಯ ವರೆಗೆ ಎಷ್ಟೊಂದು ಸಹಜವಾಗಿ ಒದಗಿಬರುವ ಬಾಶಿಂಗಬಲವಿರುವದೊ ಅಷ್ಟು ಮುಂದೆ ಇರುವದಿಲ್ಲ. ಒಂದು ವೇಳೆ ಕೂಡಿಬಂದರೂ ಲಗ್ನವಾಗಿಹೋಗುವದೆಂದಲ್ಲ. ನಿಮ್ಮ ಹಿತಶತ್ರುಗಳು ಬೀಗರಲ್ಲಿ ನಿಮ್ಮ ಬಗ್ಗೆ ಏನೇನೋ ಹೇಳುವದರಿಂದ ಆಯತ್ತ ಸಮಯದಲ್ಲಿ ಕೂಡ ಅದು ಮುರಿಯಬಹುದು. ಆದರೆ ಮೇಲೆ ಹೇಳಿದ ಅವಧಿಯಲ್ಲಿ ಯಾರ ಲಗ್ನವಾಗುವದೊ, ಅವರ ಆತ್ತೆಮನೆಯವರಿಗೆ ಮಾತ್ರ ಸೊಸೆ ಇಲ್ಲವೆ ಅಳಿಯ ಅತಿ ಉತ್ತಮ ದೊರೆತ ಬಗ್ಗೆ ಬಹಳ ಆನಂದವೆನಿಸುವದು. ಮಕ್ಕಳ ಉನ್ನತಿಗೆ ಈ ವರ್ಷ ಸಾಧಾರಣವೇ ಇದೆ. ಅನೇಕರಿಗೆ ಉನ್ನತಿಯಾಗುವದು ಗೊತ್ತಾಗಿಯೂ ಅದು ಮುಂದೆಬೀಳಬೇಕಾದರೆ ಸಾಕು ಬೇಕಾಗಿ ಹೋಗುವದು. ಅದರಲ್ಲಿಯೂ ಜನೆವರಿ ಬರುವವರೆಗೆ ಮತ್ತು ಅನಂತರ ಫೆಬ್ರುವರಿ ೧೧ ರಿಂದ ಮಾರ್ಚ ೧, ಮೇ ೬ ರಿಂದ ೨೩, ಜೂನ ೯ ರಿಂದ ೨೫, ಸಪ್ಟಂಬರ ೧ ರಿಂದ ೧೮ ಮತ್ತು ಅಕ್ಟೋಬರ ೪ ರಿಂದ ೨೪ ಈ ಅವಧಿಯಲ್ಲಿ ಅನೇಕರು ಉತ್ಕರ್ಷ ಹೊಂದುವ ಸಂಭವವಿದೆ. ಅವರದು ನಿಮ್ಮದು ಈ ವರ್ಷ ಅಷ್ಟಕಷ್ಟೇ ಕೂಡಿ ನಡೆಯುವದು. ಅದರಲ್ಲಿಯೂ ಯಾವ ಮಗನ ಅಥವಾ ಮಗಳ ಉನ್ನತಿ ಹೆಚ್ಚಿಗೆ ಆಗುವದೋ ಅವರು ನಿಮ್ಮೊಡನೆ ಹೆಚ್ಚು ದೂರವಿರುವರು.

ಉದ್ಯೋಗ ಧಂದೆ ಇಲ್ಲವೆ ನೋಕರಿ ದೃಷ್ಟಿಯಿಂದ ನೋಡಿದರೆ, ಈ ವರ್ಷ ಇತರ ಬಹುತರ ರಾಶಿಯವರಿಗಿಂತ ಹೆಚ್ಚು ಉತ್ಕರ್ಷದ ಮತ್ತು ಲೌಕಿಕದ್ದೆನಿಸುವದು. ಇದರಲ್ಲಿ ಸಂಶಯವಿಲ್ಲ

ವ್ಯಾಪಾರಸ್ಥರು ಮತ್ತು ಶ್ರಮಜೀವಿಗಳು ಇಂಥ ಸ್ವತಂತ್ರ ಉದ್ಯೋಗ ಮಾಡುವವರದು ಬುದ್ಧಿ ಜೀವಿಗಳಿಗಿಂತ ಬಹಳ ಉತ್ತಮ ನಡೆಯುವದು. ಬುದ್ಧಿಜೀವಿಗಳಲ್ಲಿಯೂ ಇತರರಿಗಿಂತ ಡಾಕ್ಟರ ಮತ್ತು ನಟರು ಹೆಚ್ಚು ಮುಂದೆ ಬರುವರು. ಎಲ್ಲರದೂ ಲೋಕಪ್ರಸಿದ್ಧಿಯಾಗುವದು. ಪ್ರತಿಯೊಂದು ಕೆಲಸವು ಮೊದಮೊದಲು ಯಶಸ್ವಿಯಾಗುವದೊ ಇಲ್ಲವೊ ಎಂಬಶಂಕೆಯುಂಟಾಗುವದು. ಆದರೆ ಕೊನೆಗೆ ಅದು ನೀವು ಎಣಿಸಿದ್ದಕ್ಕಿಂತ ಹೆಚ್ಚು ಯಶಸ್ವಿ ಇಲ್ಲವೆ ಲಾಭದಾಯಕವಾಗುವದು. ನೋಕರರಿಗೆ ವರಿಷ್ಠರ ಪೇಚು ಕೆಲ ಮಟ್ಟಿಗೆ ಸಹಿಸಬೇಕಾಗುವದು. ಬೇಡಾದವರ ಸಹವಾಸದಲ್ಲಿ ಇರಬೇಕಾಗುವದು. ಆದರೆ ಅವರಿಂದ ಯಾವದೇ ಬಗೆಯ ಹಾನಿಯಾಗದಂತೆ ದಕ್ಷತೆ ವಹಿಸಬೇಕು. ವಿಶೇಷತಃ ದೊಡ್ಡ ದೊಡ್ಡ ಜನರ ಭೆಟ್ಟಿ ಸಹವಾಸದ ಯೋಗ ಈ ವರ್ಷ ಅನೇಕ ಸಲ ಬರುವದು. ಮೇಲಿನ ಗ್ರೇಡು ಜನೆವರಿಗಿಂತ ಪೂರ್ವದಲ್ಲಿ ಇಲ್ಲವೆ ಹೊಸ ಹಬ್ಬದ ಏಳನೇ ಇಲ್ಲವೆ ಎಂಟನೇ ತಿಂಗಳಲ್ಲಿ ಖಾತ್ರಿಯಿಂದ ದೊರೆಯುವದು. ಆದರೆ ಸ್ವಲ್ಪ ಅನನುಕೂಲ ಸ್ಥಳಕ್ಕೇ ವರ್ಗವಾಗುವದು. ಜನೆವರಿಯಿಂದ ಅಲ್ಪಸ್ವಲ್ಪ ಸ್ಥಾವರ ಜಂಗಮ ಇಲ್ಲವೆ ಮುಖ್ಯ ವಸ್ತುಗಳ ಸಂಗ್ರಹ ಮಾಡಲಿಕ್ಕೆ ಶಕ್ಯವಾಗುವದು. ಆದರೆ ಆ ಬಗ್ಗೆ ಮನೆಯವರೊಡನೆ ಬಹಳ ಇಮ್ಮತವಾಗುವದು. ವಿಶೇಷತಃ ಡಿಸೆಂಬರ ೯ ರಿಂದ ಜನೆವರಿ ೧, ಜನೆವರಿ ೨೫ ರಿಂದ ಮಾರ್ಚ ೧೫, ಎಪ್ರಿಲ ೯ ರಿಂದ ಮೇ ೨೭, ಜುಲೈ ೬ ರಿಂದ ಅಕ್ಟೋಬರ ೩ ಈ ಅವಧಿಯು ಲಾಭಕ್ಕೆ ಹೆಚ್ಚು ಅನುಕೂಲವಾಗಿರುವದು. ಮಿತ್ರ ಸುಖ ಜನೆವರಿವರೆಗೆ ಉತ್ತಮ ದೊರೆಯುವದು. ಆದರೆ ಅನಂತರ ಮಾತ್ರ ಕೆಲ ಜನರೊಡನೆ ಅಲ್ಪಸ್ವಲ್ಪ ಕೆಡುವ ಸಂಭವ. ಸಮೀಪದ ಆಪ್ತರು ಮತ್ತು ನೆರೆಯುವರೊಡನೆ ಬಹಳಷ್ಟು ರಹಸ್ಯ ಉಳಿಯುವದಿಲ್ಲ. ತಂದೆ ತಾಯಿ ಇದ್ದರೆ ತಾಯಿಗಿಂತ ತಂದೆಯ ಪ್ರಕೃತಿ ಹೆಚ್ಚು ಅನುಕೂಲ ಉಳಿಯುವದು ಮತ್ತು ನಿಮ್ಮದು ಅವರದು ಮೇಲೆ ಮೇಲೆ ಚೆನ್ನಾಗಿ ತೋರಿದರೂ ಮನಸ್ಸಿನಲ್ಲಿ ಕೆಡುವದು. ಜನೆವರಿ ವರೆಗೆ ಒಂದಾದರೂ ಒಳ್ಳೆ ಪುಣ್ಯ ಕಾರ್ಯ ಮಾಡುವಿರಿ. ಮತ್ತು ಅನಂತರ ಜನರಲ್ಲಿ ವರ್ಚಸ್ಸು ಕೊಡುವಂಥ ಮಹತ್ವದ ಕೆಲಸವಾಗುವದು. ಕೆಲ ಸ್ವಪ್ನಗಳು ಬಹಳ ಸೂಚಕವಾದವುಗಳಿರುವವು.

ದಾವೆ, ಖಟ್ಲೆ ನಡೆದಿದ್ದರೆ ಅವುಗಳಲ್ಲಿ ಬಹುಶಃ ಒಳ್ಳೆ ಯಶಸ್ಸು ದೊರೆಯುವದು. ಮೇ ೨೭ ರಿಂದ ಜುಲೈ ೧೧ ರ ಈ ಅವಧಿಯಲ್ಲಿ ಶತ್ರುಗಳಲ್ಲಿ ಒಬ್ಬಿಬ್ಬರು ಬಹಳ ಪರಾಜಯಹೊಂದುವರು. ಖಾಸಗಿ ಸ್ಪರ್ಧೆಯಲ್ಲಿ ಯಾವಾಗಲೂ ನಿಮ್ಮದೇ ಮೇಲ್ಗೈಯಾಗುವದು ಆದರೆ ಅದರಲ್ಲಿ ಕೆಲವು ಸಂದರ್ಭಗಳಲ್ಲಿ ಕುಟಿಲ ನೀತಿಯನ್ನು ಅವಲಂಬಿಸಬೇಕಾಗುವದು.

ಈ ರಾಶಿಯ ಸ್ತ್ರೀಯರು ಜನೆವರಿಗಿಂತ ಮೊದಲು ಹಡೆದರೆ ಅವರಿಗೆ ಕಷ್ಟವಾಗದೆ ಪುತ್ರರತ್ನವು ಹುಟ್ಟುವದು ಮತ್ತು ಅನಂತರ ಹಡೆದವರಿಗೆ ಕಷ್ಟ ಹೆಚ್ಚಿಗೆ ಆಗದಿದ್ದರೂ ಬಹುಶಃ ಕನ್ಯಾರತ್ನ ಹುಟ್ಟುವ ಸಂಭವವಿದೆ.

ಈ ರಾಶಿಯ ವಿದ್ಯಾರ್ಥಿಗಳು ತೇರ್ಗಡೆ ಹೊಂದೇ ತೀರುವರು. ಆದರೆ ಜನೆವರಿಗಿಂತ ಮೊದಲು ಪಾಸಾದವರು ವರ್ಗವನ್ನು ಸಂಪಾದಿಸುವರೆಂದು ತೋರುತ್ತದೆ.

## ಮೀನ

ಒಟ್ಟಿಗೆ ಈ ರಾಶಿಯವರಿಗೆ ಈ ವರ್ಷ ಬಹುತರ ವಿಷಯಗಳಲ್ಲಿ ಜನೆವರಿಯಿಂದ ಹೆಚ್ಚು ಸುಖ ಲಾಭ ಮತ್ತು ಉತ್ಕರ್ಷವಾಗುವದು. ಇದು ಅವರ ಗಮನಕ್ಕೆ ಬಂದೇ ತೀರುವದು.

ಈ ರಾಶಿಯವರಿಗೆ ಇಡಿ ವರ್ಷ ಪ್ರಥಮಕೇತು ಮತ್ತು ಡಿಸೆಂಬರ ಪೂರ್ಣವಾಗುವವರೆಗೆ ಅಷ್ಟಮ ಗುರು ಇರುವದರಿಂದ ಅಲ್ಲಿಯ ವರೆಗೆ ಪ್ರಕೃತಿಯ ಬಗ್ಗೆ ಕಿರುಕಳ ತಕರಾರು ಇದ್ದದ್ದೆ. ಆದರೆ ಕೇತು ಸ್ವಗೃಹದಲ್ಲಿರುವದರಿಂದ ದಶಮಶನಿ ಅಂದರೆ ಒಳ್ಳೆ ಬಲಿಷ್ಠ ಶನಿ ಇರುವದರಿಂದ ಅಷ್ಟೊಂದು ಕುದಿಯುತ್ತ ಕೂಡ್ರಬೇಕಾಗಿಲ್ಲ ಎಂಬುದು ಸುಸ್ಪಷ್ಟವಿದೆ. ಜನೆವರಿಯಿಂದ ಬರುವ ನವಮ ಗುರುವಿನಿಂದ ಮುಂದೆ ಆರೋಗ್ಯ ಬಹಳ ಚನ್ನಾಗಿ ಉಳಿಯುವದು. ಪಿತ್ತ ಮತ್ತು ವಾತವಿಕಾರದ ತೊಂದರೆ ಎನಿಸುವದು. ಉಳಿದ ವಿಷಯಗಳಲ್ಲಿಯೂ ಜನೆವರಿಯಿಂದ ಸಮಾಧಾನ ಹೆಚ್ಚುವಂಥ ಸುಖ ದೊರೆಯುಹತ್ತುವದು. ಮತ್ತು ಮಾರ್ಚ ೨೯ ರಿಂದ ಮೇ ೨೭ ಈ ಅವಧಿಯನ್ನು ಬಿಟ್ಟು ಮೀರಿದ ಅವಧಿಯಲ್ಲಿ ಮನೆಯವರೆಲ್ಲ ನಿಮ್ಮ ಮನಸ್ಸಿನಂತೆಯೇ ವರ್ತಿಸುವರು. ನವಂಬರ ೨೦ ರಿಂದ ಮಾರ್ಚ ೨೮ರ ವರೆಗೆ ಮನೆತನಕ್ಕೆ ಪೋಷಕ ಮತ್ತು ಲೌಕಿಕಾಸ್ಪದವಾದ ಒಂದು ಮಹತ್ವದ ಕಾರ್ಯ ನಿಮ್ಮಿಂದ ಆಗುವದು. ಅದಾದರೂ ಅಲ್ಪಾಯಾಸದಿಂದ ಸಾಧ್ಯವಾಗುವದರಿಂದ ಜನರ ಮೇಲೆ ನಿಮ್ಮ ವರ್ಚಸ್ಸು ಬಹಳ ಸುಲಭವಾಗಿ ಕೂಡುವದು.

ಸ್ತ್ರೀ ಸುಖಕ್ಕೆ ಈ ವರ್ಷ ಅಗಸ್ಟ ೨೮ ರಿಂದ ಅಕ್ಟೋಬರ ೧೩ ಈ ಮಧ್ಯಂತರ ಅವಧಿಯು ಸ್ವಲ್ಪ ಅಸಮಾಧಾನದ್ದು ಇದ್ದರೂ ಅವಳ ಆರೋಗ್ಯ ಸದಾ ಕಾಲದಲ್ಲಿ ಅನುಕೂಲವೇ ಉಳಿಯುವದು. ಉಭಯತರಲ್ಲಿ ಮೇಲಿಂದ ಮೇಲೆ ಮತಭೇದವಾಗಿ ದೀರ್ಘಕ್ಕೆ ಹೋಗುವ ಪ್ರಸಂಗ ಬರುವ ಯೋಗವಿದ್ದರೂ ಪರಸ್ಪರರ ಬಗ್ಗೆ ಇರುವ ಆದರ ಪ್ರೀತಿ ಮೊದಲಿಗಿಂತ ಹೆಚ್ಚೇ ಆಗುವದು. ಮತ್ತು ಇದರ ಅನುಭವವು ಜನೆವರಿಯಿಂದ ಅನೇಕ ಸಲ ಬರುವದು. ಉಳಿದ ವಿಷಯಗಳಲ್ಲಿ ಕೌಟುಂಬಿಕ ಸುಖ ಮೇಲೆ ಹೇಳಿದ ಅವಧಿಯಿಂದಲೆ ಹೆಚ್ಚು ಉತ್ಸಾಹವರ್ಧಕವೆನಿಸುವದು. ಆದರೆ ನಿಮ್ಮ ಲಗ್ನ ಇನ್ನೂ ಆಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಅದಕ್ಕಾದರೂ ಜನೆವರಿಯಿಂದ ಬರುವ ನವಮ ಗುರುವಿನ ಪ್ರಭಾವದಿಂದ ಖಾಶಿಂಗ ಬಲ ಚೆನ್ನಾಗಿದೆಯೆಂದು ತಿಳಿದು ಆ ಸಿದ್ಧತೆಯನ್ನು ಮಾಡಬೇಕು. ಏಕೆಂದರೆ ಅಲ್ಪಾಯಾಸದಿಂದ ನಿಮ್ಮಗಿಂತ ಹೆಚ್ಚು ವರ್ಚಸ್ಸುಳ್ಳ ವಧುವಿನೊಡನೆ ಮತ್ತು ಪೂರ್ವ ಪರಿಚಿತ ಮನೆತನ

ದವರೊಡನೆ ಕೂಡಿ ಬರುವದು. ಮತ್ತು ಗೊತ್ತು ಪಡಿಸಿದ ಸಮಯಕ್ಕೆ ನಿರ್ವಿಘ್ನವಾಗಿ ಲಗ್ನ ಸಮಾರಂಭ ಸಾಂಗವಾಗುವದು. ವಧು ಮತ್ತು ವರ ಒಳ್ಳೆ ಅನುರೂಪ ಇರುವರು.

ಅದರಂತೆಯೇ ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆಯನ್ನು ಈ ವರ್ಷ ಮಾಡುವದಿದ್ದರೆ ಅದಾದರೂ ಜನೆವರಿಯ ನಂತರವೇ ಕೂಡಿ ಬರುವ ಯೋಗವಿದೆ. ಈ ಯೋಗವು ಬಹಳ ಪ್ರಬಲವಿರುವದರಿಂದ ಒಮ್ಮೆಲೆ ಕೂಡಿಂದು ಬೇಗನೆ ಸಾಂಗವಾಗಿ ಹೋಗುವದು. ಬೀಗರೂ ನಿಮಗಿಂತ ಬಹಳ ಘನವಂತರಿರುವ ಸಂಭವವಿದೆ. ಸೊಸೆ ಇಲ್ಲವೆ ಅಳಿಯ ಸ್ವಭಾವದಿಂದ ಸ್ವಲ್ಪ ಸಿಡುಕು ಮತ್ತು ವಿಚಿತ್ರ ಸ್ವಭಾವದವರು ಇರಬಹುದು. ಆದರೆ ರೂಪದಿಂದ ಸಾವಿರಕ್ಕೊಬ್ಬನಂತೆ ಇರುವ ಸಂಭವವಿದೆ. ಮಕ್ಕಳ ಉನ್ನತಿಗೂ ಈ ವರ್ಷ ಪ್ರಾರಂಭದಿಂದ ಅನುಕೂಲವಿದ್ದರೂ ಜನೆವರಿಯಿಂದ ಮುಂದೆಯೂ ಕೆಲಜನರ ಕಣ್ಣು ಕುಕ್ಕುವಷ್ಟು ಅದು ಕಂಡುಬರುವದು. ಮತ್ತು ಅವರದು ಹಾಗು ನಿಮ್ಮದು ಒಟ್ಟಾರೆ ಕೂಡಿಯೇ ನಡೆಯುವದು.

ಧಂದೆ ಕೂಲಿಯವರ ದೃಷ್ಟಿಯಿಂದ ಜನೆವರಿ ವರೆಗೆ ಬಹಳ ತೊಂದರೆ ಮತ್ತು ಅನಂತರ ಅಂದಾಜಿಗಿಂತ ಹೆಚ್ಚು ಮತ್ತು ಬಹಳ ಪ್ರಗತಿಯದೆನಿಸುವದು. ಅನೇಕರಿಗೆ ಗುಪ್ತ ಇಲ್ಲವೆ ಆಕಸ್ಮಿಕ ಲಾಭವೂ ಆಗುವದು. ಹಣದ ದೃಷ್ಟಿಯಿಂದ ಮತ್ತು ಬೆಲೆ ಬಂದೂ ಲಾಭವಾಗುವದು. ಕೇವಲ ವ್ಯಾಪಾರಿಗಳಿಗಿಂತ ಬುದ್ಧಿಜೀವಿ ಮತ್ತು ಶ್ರಮಿಕ ಧಂದೆಯವರಿಗೂ ಹೆಚ್ಚು ಲಾಭದಾಯಕವೆನಿಸುವದು. ನೋಕರರಿಗೆ ನವಮ ಗುರು ಮತ್ತು ದಶಮ ಶನಿ ಮೇಲಿನ ಗ್ರೇಡನ್ನು ನಿಶ್ಚಯವಾಗಿ ಕೊಡುವನು. ಬದಲಿಯಾದರೆ ಬಹಳ ದೂರ ಮತ್ತು ಅಪರಿಚಿತ ಸ್ಥಳಕ್ಕೆ ಆಗುವದರಿಂದ ಮೊದಮೊದಲು ಬಹಳ ಕಠಿನವೆನಿಸುವದು. ಕೈಕೆಳಗಿನ ಜನರಿಗಿಂತ ಮೇಲಿನವರೆ ಹೆಚ್ಚು ಪ್ರೇಮದಿಂದ ನಡೆದುಕೊಳ್ಳುವರು. ಜನೆವರಿ ೧೬ ರಿಂದ ಮಾರ್ಚ ೨೯ ಮತ್ತು ಜುಲೈ ೧೧ ರಿಂದ ಅಕ್ಟೋಬರ ೧೩ ಈ ಅವಧಿಯು ಲಾಭಕ್ಕೆ ಹೆಚ್ಚು ಅನುಕೂಲವಿರುವದು. ಆಸ್ತಿಯ ದೃಷ್ಟಿಯಿಂದ ಸಂಗ್ರಹವನ್ನೂ ಮಾಡಲಿಕ್ಕೆ ಬರುವದು. ತಂದೆ ತಾಯಿಗಳಿದ್ದರೆ ಜನೆವರಿ ವರೆಗೆ ತಂದೆಯೊಡನೆ ಆದರೆ ಮುಂದೆ ತಾಯಿಯೊಡನೆ ಹೆಚ್ಚು ಕೂಡಿಕೊಂಡು ಹೋಗುವದು. ಆದರೆ ಬಂಧುಗಳೊಡನೆ ಮಾತ್ರ ಯಾವಾಗಲೂ ಕೂಡಿ ನಡೆಯುವದಿಲ್ಲ. ಜನೆವರಿ ನಂತರ ಮಿತ್ರಸುಖ ಹೆಚ್ಚು ಅನುಕೂಲ ದೊರೆಯುವದು. ಸ್ವಪ್ನಗಳು ಬಹಳ ಶುಭಸೂಚಕ ಬೀಳುವವು. ಬಹಳ ಮಹತ್ವದ ಲೇಖನ ಕೆಲಸಗಳು ಈ ಸಲ ನೆರವೇರುವವು. ಜನೆವರಿಯಿಂದ ಧಾರ್ಮಿಕ ಮತ್ತು ಮಂಗಳಕಾರ್ಯಗಳು ಬಹಳ ನಡೆಯುವವು. ಪ್ರವಾಸ ಸುಖಕರವೆನಿಸುವವು. ಮತ್ತು ಒಮ್ಮೆಲೇ ನಿಶ್ಚಯವಾಗಿ ಯಾವದೊಂದು ಯಾತ್ರೆ ಮಾಡುವ ಸಂಭವವಿದೆ. ಸಮೀಪದ ಆಪ್ತರಿಗಿಂತ ದೂರಿನ ಆಪ್ತರು ಹೆಚ್ಚು ಪ್ರೀತಿಯಿಂದ ನಡೆದುಕೊಳ್ಳುವರು.

ದಾವೆ ಖಟಲೆ ನಡೆದಿದ್ದರೆ ಅವುಗಳಲ್ಲಿ ಬಹುಶಃ ಅನೇಕ ಯಶಸ್ವಿಯಾಗುವವು. ಮಾರ್ಚ ೨೯ ರಿಂದ ಮೇ ೨೨, ಮತ್ತು. ಜೂನ ೧೫ ರಿಂದ ಜುಲೈ ೧೬ ಈ ಮಧ್ಯಂತರ ಅವಧಿಯಲ್ಲಿ ಯಾರ ಖಟ್ಲೆಗಳ ತೀರ್ಪು ಹೊರಬೀಳುವದೊ ಅವರಿಗೆ ವಿರುದ್ಧವಾಗುವ ಅಂಜಿಕೆ ಇದೆ. ಖಾಸಗಿ ಸ್ಪರ್ಧೆಯಲ್ಲಿ ಪ್ರತಿಸ್ಪರ್ಧೆಗಳಿಗಿಂತ ನಿಮ್ಮದೇ ಮೇಲ್ಗೈಯಾಗುವದು.

ಈ ರಾಶಿಯ ಸ್ತ್ರೀಯರು ಜನೆವರಿಗಿಂತ ಮೊದಲು ಹಡೆದರೆ ಅವರಿಗೆ ಸ್ವಲ್ಪ ಕಷ್ಟವಾಗುವದು. ಆದರೂ ಅವರಿಗೆ ಬಹುಶಃ ಪುತ್ರರತ್ನ ಹುಟ್ಟುವ ಯೋಗವಿದೆ. ಮತ್ತು ಜನೆವರಿಯಿಂದ ಮುಂದೆ ಕನ್ಯಾ ಹುಟ್ಟುವವು. ಆದರೂ ಅವರಿಗೂ ಪ್ರಸೂತಿಕಷ್ಟ ಸ್ವಲ್ಪಾ ಇಲ್ಲ.

ಯಾರ ಪರೀಕ್ಷೆ ಜನೆವರಿಗಿಂತ ಮೊದಲು ಇದೆಯೊ ಅವರು ಪ್ರಯಾಸದಿಂದ, ಅನಂತರ ಅದವರು ಖಾತ್ರಿಯಿಂದ ಪಾಸಾಗುವ ಯೋಗವಿದೆ.

**ಶುಭಂ ಭವತು**

# ಪಂಡಿತ ರಾಮಾಚಾರ್ಯರು ಪರಿಷತ್ತಿನ ಅಧ್ಯಕ್ಷತೆ ವಹಿಸಿದಾಗ...?

ಮೂವತ್ತೈದು ವರುಷ ಅಖಂಡವಾಗಿ ಶಿಕ್ಷಕವೃತ್ತಿಯನ್ನು ಕೈಕೊಂಡಿದ್ದ ರಾಮಾಚಾರ್ಯರು ಮುಖ್ಯಾಧ್ಯಾಪಕರಾಗಿ ಅದನ್ನು ಕಾದುಕೊಂಡುಬಂದುದು ಬುರುಡೆಯ ಬಲದಿಂದಲೇ. ಆದರೆ ಆದೂ ಒಮ್ಮೆ ಬಯಲಾಯಿತು. ಯಾವಾಗ ಎಂಬುದನ್ನು ಈಗ ಓದಿರಿ. . . . . . . . . .

ಲೇಖಕರು : **ಶ್ರೀ ಗೋವಿಂದ ದೇಸಾಯಿ,** ಬಿ. ಎ. ( ಆನರ್ಸ ), ಧಾರವಾಡ

ರಾಮಾಚಾರ್ಯರು ನಿವೃತ್ತಿ ಪಡೆದಾಗ ಇನ್ನೂ ಮೂವತ್ತೈದು ವರುಷ ನೌಕರಿಯನ್ನು ಮಾಡುವಷ್ಟು ಚೇತನಯುಕ್ತರಾಗಿದ್ದರಲ್ಲದೆ, ಮತ್ತೊಂದು ಮದುವೆ ಮಾಡಿಕೊಳ್ಳುವಷ್ಟು ವರಲಕ್ಷಣಿಗರಾಗಿದ್ದರು. ಆಚಾರ್ಯರ ಮೂವತ್ತೈದು ವರುಷಗಳ ಅಖಂಡ ಶಿಕ್ಷಕವೃತ್ತಿಯಲ್ಲಿ ಅವರ ಪ್ರತಿನಿತ್ಯದ ಪ್ರಾತರ್ವಿಧಿಯಲ್ಲಾಗಲಿ ಪೂಜೆ ನೈವೇದ್ಯಗಳಲ್ಲಾಗಲಿ ಒಂದು ದಿವಸನಾದರೂ ವ್ಯತ್ಯಯ ಬಂದದ್ದನ್ನು ಗುಂಡೂರಿನ ಹಳ್ಳಿಯವರು ಕಂಡಿರಲಿಲ್ಲ. ಪ್ರಾತರ್ವಿಧಿಯೆಂದರೆ ಚಹಾಪಾನವೆಂದೂ ಪೂಜೆಯೆಂದರೆ ಉಪಾಹಾರವೆಂದೂ ಹಾಗು ನೈವೇದ್ಯವೆಂದರೆ ಸಮೀಚೀನ ಭೋಜನವೆಂದೂ ಆಚಾರ್ಯರ ಸಾಂಕೇತಿಕ ಅರ್ಥಕೋಶವು ಸಾರುತ್ತಿತ್ತು.

ಆಚಾರ್ಯರು ಒಂದು ದಿವಸನಾದರೂ ಸರಿಯಾಗಿ ಶಾಲೆಗೆ ಹೋಗದಿದ್ದರೂ ಕರ್ತವ್ಯದಲ್ಲಿ ಅವರಷ್ಟು ನಿಷ್ಠುರವ್ಯಕ್ತಿಗಳೇ ಇಲ್ಲವೆಂದು ಸವಣೂರ ಸಂಸ್ಥಾನದ ತುಂಬಾ ಪ್ರತೀತಿ! ಅವರ ಶಾಲೆಗೆ ಸರಕಾರದವರು ಗಡಿಯಾರವನ್ನು ಕೊಟ್ಟರದ್ದರಿಂದ ತಮ್ಮ ಮನೆಯ ಟಾಯಿಂಪೀಸನ್ನೇ ಅವರು ಉಪಯೋಗಿಸುತ್ತಿದ್ದರು. ಗಡಿಯಾರವು ಎಷ್ಟೇ ವೇಳೆಯನ್ನು ತೋರಿಸುತ್ತಿದ್ದರೂ ಆಚಾರ್ಯರು ಮನೆಯನ್ನು ಬಿಡುವಾಗ ಮುಂಜಾನೆ ಏಳೂವರೆಯನ್ನೂ ಮಧ್ಯಾನ್ಹ ಎರಡು ಗಂಟೆಯನ್ನೂ ತೋರಿಸಲೇಬೇಕು. ಮನೆಯಿಂದ ಆ ಗಡಿಯಾರವನ್ನು ಒಯ್ದು ಮನೆಗೆ ಬರುವಾಗ ಮರಳಿ ತರುವದು ಅವರ ವಾಡಿಕೆ. ಒಂದು ದಿವಸ ದ್ವಾದಶಿ ಇದ್ದುದರಿಂದ ಆಚಾರ್ಯರ ಊಟವು ತಡವಾಯಿತು. ಅಂದು ಒಂಭತ್ತು ಗಂಟೆಯ ಸುಮಾರಿಗೆ ಶಾಲೆಯ ಸಾಹೇಬನು ಬಂದು ಶಾಲೆಯ ಹೊರಗಡೆ ನಿಂತಿದ್ದನು. ಹುಡುಗರೆಲ್ಲಾ ಅಲ್ಲಲ್ಲಿ ಆಡುತ್ತಿದ್ದರು. ಇತರ ಶಿಕ್ಷಕರು ತುಂಬಾ ಅಂಜಿ ಬಾಗಿಲದ ಹೊರಗೆ ನಿಂತಿದ್ದರು. ಆಚಾರ್ಯರು ಊಟಕ್ಕೆ ಕುಳಿತಾಗ ಯಾವನೋ ಒಬ್ಬ ಶಿಷ್ಯನು ಬಂದು "ಮಾಸ್ತರ್, ಸಾಹೇಬ ಬಂದಾನಂತಿ, ಶಿವಪೂಜಿ ಮಾಸ್ತರು ಕೀಲಿಕೈ ತಗೊಂಡು ಕರಕೊಂಡ ಬಾ ಅಂದಾರ್ರಿ" ಎಂದನು. ಆದರೂ ಆಚಾರ್ಯರು ಭೋಜನದಲ್ಲಿ ಅವಸರವನ್ನು ಮಾಡಲಿಲ್ಲ. ಊಟ ಮಾಡಿ ಬಟ್ಟೆಗಳನ್ನು ಹಾಕಿಕೊಂಡು ಗಡಿಯಾರವನ್ನು ತೆಗೆದುಕೊಂಡರು. ಅದರಲ್ಲಿ ಆಗಲೇ ಒಂಭತ್ತು ಹೊಡೆದುಹೋಗಿತ್ತು. ಕೂಡಲೇ ಗಡಿಯಾರದ ಮುಳ್ಳನ್ನು ತಿರುಗಿಸಿ ಏಳೂ ಇಪ್ಪತ್ತೈದಕ್ಕೆ ಇಟ್ಟು ಶಾಲೆಗೆ ಹೋದರು. ಸಾಹೇಬರ ಕೋಪವು ಆದಾಗಲೇ ನೂರೆಂಟು ಸಲ ಕುದ್ದಿತ್ತು. ಆಚಾರ್ಯರು ನಮಸ್ಕಾರ ಮಾಡಿದರೂ ಸಾಹೇಬರು ಅದನ್ನು ಸ್ವೀಕರಿಸಲಿಲ್ಲ. ಒಮ್ಮೆಲೆ ಒದರಾಡತೊಡಗಿದರು. ರಾಮಾಚಾರ್ಯರು ಮಾತನಾಡದಲೇ ತಮ್ಮ ಟೈಯಂಪೀಸನ್ನು ಎತ್ತಿ ಹಿಡಿದರು. ಕೂಡಲೇ ಸಾಹೇಬರೂ ತಮ್ಮ ವಾಚನ್ನು ತೋರಿಸಿದರು. ಅದರಲ್ಲಿ ಒಂಭತ್ತೂವರೆಯಾಗಿತ್ತು. ಅಷ್ಟರಲ್ಲಿ ಆಚಾರ್ಯರು "ನಾನು ನನ್ನ ಗಡಿಯಾರದಂತೆ ಏಳೂವರೆಗೆ ಸುರುವು ಮಾಡಿ ಹತ್ತೂವರೆಗೆ ಬಿಡುತ್ತೇನೆ. ಇದರಲ್ಲಿ ನನ್ನದೇನೂ ತಪ್ಪಿಲ್ಲ" ಎಂದರು. ಸಾಹೇಬರು ಬಳ್ಳೇ ದರ್ಪದಿಂದ "ಇಂಥ ಗಡಿಯಾರವನ್ನೇಕೆ ಇಟ್ಟಿದ್ದೀರಿ. ಸರಿಯಾದ ಕಾಲವನ್ನು ತೋರಿಸುವ ಗಡಿಯಾರವನ್ನಿಡಬೇಕು" ಎಂದರು. ಶಾಂತಚಿತ್ತದಿಂದ ಆಚಾರ್ಯರು "ಹೌದು ಸಾಹೇಬರೇ, ನೀವು ನಮ್ಮ ಶಾಲೆಗೆ ಗಡಿಯಾರವನ್ನೇ ಕೊಟ್ಟಿಲ್ಲ. ನನ್ನ ಮುತ್ತಾತನಿಂದ ಬಂದ ಈ ಗಡಿಯಾರವನ್ನು ಸರಕಾರದ ಕೆಲಸಕ್ಕೆ ಉಪಯೋಗಿಸುತ್ತೇನೆ. ನೀವು ಬೇಡವೆಂದರೆ ನಾಳೆ ಗಡಿಯಾರವನ್ನೇ ಶಾಲೆಗೆ ತರುವದಿಲ್ಲ. ಸೂರ್ಯನ ಬೆಳಕಿನ ಮೇಲೆಯೇ ನಾನು ಇನ್ನುಮೇಲೆ ಶಾಲೆಯನ್ನು ನಡೆಸುತ್ತೇನೆ" ಎಂದರು. ಸಾಹೇಬರಿಗೆ ಮಾತೇ ಬಾರದಾಯಿತು. ಗಡಿಯಾರವನ್ನೇ ಸರಕಾರದವರು ಕೊಡದಾಗ ಈ ರೀತಿಯಲ್ಲಿ ಕೇಳುವ ಅಧಿಕಾರವೇ ಇಲ್ಲವೆಂದು ಅನಿಸಿದ್ದರಿಂದ ಸಾಹೇಬರು ಸುಮ್ಮನಾಗಿಬಿಟ್ಟರು; ಆಚಾರ್ಯರಿಗೆ ಗೆಲುವಾಯಿತು.

ಗುಂಡೂರಿನ ಶಾಲೆಯಲ್ಲಿಯೇ ಆಚಾರ್ಯರು ಶಿಕ್ಷಕರೆಂದು ಜೀವನವನ್ನು ಪ್ರಾರಂಭಿಸಿ ಅಲ್ಲಿಯೇ ಹೆಡ್ ಮಾಸ್ತರರಾದರೂ ಅವರನ್ನು ಅಲ್ಲಿಂದ ವರ್ಗ ಮಾಡುವ ಧೈರ್ಯವು ಯಾರಿಗೂ ಆಗಲಿಲ್ಲ. ಆಚಾರ್ಯರಿಗೂ ಸಂಸ್ಥಾನಾಧೀಶ್ವರ ನವಾಬಸಾಹೇಬರಿಗೂ ಸ್ನೇಹವಿದೆಯೆಂಬ ಪ್ರತೀತಿಯು ಮಹಿಮೆಯದು. ಒಮ್ಮೆ ನವಾಬಸಾಹೇಬರು ರಾಮಾಚಾರ್ಯರಿಂದ ಜ್ಯೋತಿಷ್ಯವನ್ನು ಕೇಳಿದ್ದರಿಂದ ಹಾಗು ಅವರ ಭವಿಷ್ಯವು ಸತ್ಯವಾಗಿದ್ದರಿಂದ ಅವರನ್ನು ಅರಮನೆಗೆ ಕರೆಸಿ ಗೌರವಿಸಿದ್ದರು. ಸ್ಕೂಲ ಬೋರ್ಡಿನ ಸಾಹೇಬನು ಈ ವಾರ್ತೆ ಕೇಳಿ ರಾಮಾಚಾರ್ಯರಿಗೆ "ನವಾಬಸಾಹೇಬ್ರಿಗೆ ನೀವು ಭವಿಷ್ಯ ಹೇಳಿದಿರಂತೆ ಹೌದೇ?" ಎಂದು ಕೇಳಿದಾಗ ಆಚಾರ್ಯರು ಅದಕ್ಕೆ ತಲೆದೂಗಿ ತಮ್ಮದು ಹಾಗು ದೊರೆಗಳದು ಹದಿನಾರಾಣೆ ಸ್ನೇಹವೆಂದು ಸಾಹೇಬರಿಗೆ ಹೇಳಿದರು. ( ನಿಜವಾಗಿಯೂ ಜ್ಯೋತಿಷ್ಯ ಹೇಳಿದ ರಾಮಾಚಾರ್ಯರೇ ಬೇರೆ! ಈ ರಾಮಾಚಾರ್ಯರೇ ಬೇರೆ! ) ಅನಾಹೂತವಾಗಿ ಪಾಲಿಗೆ ಬಂದ ಕೀರ್ತಿಯನ್ನು ಅವರೇಕೆ ಕಳೆದುಕೊಂಡಾರು? ಹೀಗಿರುವಾಗ ಅವರನ್ನು ವರ್ಗ ಮಾಡುವ ಧೈರ್ಯವನ್ನಾರು ಮಾಡಿಯಾರು?

ಒಮ್ಮೆ ಏನಾಯಿತಂತೀರಿ. ಗುಂಡೂರಿನ ಗೌಡಪ್ಪನು ಮಾಸ್ತರರು ತಡಮಾಡಿ ಶಾಲೆಗೆ ಹೋದರೂ ಬೇಗ ಶಾಲೆಯನ್ನು ಬಿಟ್ಟದ್ದನ್ನು ನೋಡಿ ತಡೆಯಲಾಗದೇ ಕೇಳಿದಾಗ "ಯಾಕ ಗೌಡಪ್ಪಾ, ನಿನಗೇಕೆ ಅದರ ಚಿಂತೆ? ಈ ವಾರ ಸವಣೂರಿಗೆ ಹೋಗಿ ನವಾಬಸಾಹೇಬರನ್ನು ಭೆಟ್ಟಿಯಾಗಬೇಕಾಗಿದೆ. ಅವರ ಮಗನ ಜಾತಕವನ್ನು ಬರೆಯಬೇಕಂತೆ. ಹಾಗೆಯೇ ನೋಡು..?" ಎಂದಾಗ ಕುದಿಯುತ್ತಿದ್ದ ಗೌಡಪ್ಪನ ರಕ್ತವೆಲ್ಲಾ ಹೆಪ್ಪುಗಟ್ಟಿತು. ಹೀಗಾಗಿ ರಾಮಾಚಾರ್ಯರು ಏಕಮೇವ ಸ್ವಯಂಪ್ರಭುಗಳಾಗಿದ್ದರು. ಆಚಾರ್ಯರೊಡನೆ ಮಾತಾಡಲು ಎಂಟೆದೆ ಬೇಕೆಂದು ಸಂಸ್ಥಾನದ ತುಂಬಾ ಜನರು ಅದಿಕೊಳ್ಳುತ್ತಿದ್ದರು. ಇಷ್ಟಿ





ದ್ದರೂ ರಾಮಾಚಾರ್ಯರಿಗೆ ಅರಮನೆ ಯಾವ ದಿಕ್ಕಿಗಿದೆಂಬುದೇ ಗೊತ್ತಿರಲಿಲ್ಲ.

ಆಚಾರ್ಯರ ಮನೆಯಲ್ಲಿ ಯಾರೂ ಚಿತ್ರಾವತಿಯನ್ನಿಡದಿದ್ದರೂ ಆಚಾರ್ಯರಷ್ಟು ಬೇರೆಯವರ ಮನೆಯಲ್ಲಿ ಉಂಡವರೇ ವಿರಳ. ಆದರೆ ಅಂಥ ರಾಮಾಚಾರ್ಯರು ಒಮ್ಮೆ ಒಬ್ಬ ಶಾಲೆಯ ಸಾಹೇಬನಿಗೆ ಮೇಜವಾನಿ ಮಾಡಿಸಿದ್ದು ಸವಣೂರ ಸಂಸ್ಥಾನದ ಇತಿಹಾಸದಲ್ಲಿಯೂ ಗುಂಡೂರಿನ ಜೀವನದಲ್ಲಿಯೂ ಬರೆದಿಡುವಂಥದ್ದು. ಮೇಲಿನ ಸಾಹೇಬನು ಯಥಾರೀತಿ ಆಚಾರ್ಯರಿಗೆ ತೊಂದರೆಕೊಡಹತ್ತಿದನು. ಸಾಹೆಬರಿಗೆ ಮುತ್ತಲದೆಲೆಯಾಯಿತು, ಬೆಣ್ಣೆಯಾಯಿತು, ಬಂದಾಗೊಮ್ಮೆ ಬಾಳೀಗೊನೆಯಾಯಿತು. ಆದರೂ ಸಾಹೇಬರ ಅವಕೃಪೆ ಆಚಾರ್ಯರಿಗೆ ತಪ್ಪಲಿಲ್ಲ. ಒಮ್ಮೆ ಅವರಿಗೆ ಭೋಜನಕ್ಕೆ ಕರೆದು ಅವರ ಮನಸ್ಸಿನಲ್ಲಿದ್ದುದನ್ನು ಕೇಳಬೇಕೆಂದು ತಪಾಸಣೆಗೆ ಬಂದಾಗ ಅವರನ್ನು ಆವ್ಹಾನಿಸಿದರು. ಆಚಾರ್ಯರು ನವಾಬಸಾಹೇಬರ ಗುಳಿಗೆಯನ್ನು ಸಾಹೇಬನೆದುರು ಒಗೆದು ನೋಡಿದ್ದರು. ಆದರೆ ಬಿಸಿರಕ್ತದ ತರುಣ ಸಾಹೇಬರು ಮಣಿದಿರಲಿಲ್ಲ. ಅಂತಲೇ ಭೋಜನಕ್ಕೆ ಕರೆದಿದ್ದರು. ಆಚಾರ್ಯರಲ್ಲಿ ಸಾಹೇಬರದು ಸುಗ್ರಾಸ ಭೋಜನವಾಯಿತು. ತಾಂಬೂಲ ಹಾಕಿಕೊಳ್ಳಬೇಕೆನ್ನುವಷ್ಟರಲ್ಲಿ ಸಾಹೇಬರ ಸಿಪಾಯಿ ಸೈಕಲ್ಲ ಮೇಲೆ ಸವಣೂರ ರಾಜಧಾನಿಯಿಂದ ಗುಂಡೂರಿಗೆ ಯಾವದೋ ಅವಸರದ ಕಾಗದವನ್ನು ತಂದು ಕೊಟ್ಟನು. ಆ ಕಾಗದವನ್ನು ಸಾಹೇಬರು ಓದುತ್ತಿದ್ದಂತೆ ಅವರ ಮುಖವೆಲ್ಲಾ ವಿವರ್ಣವಾಯಿತು. ಆಚಾರ್ಯರು ಲಕ್ಷಣ ತಿಳಿದುಕೊಂಡು "ಸಾಹೇಬರೆ, ಏನಾಯಿತು?" ಎಂದರು. ಏಕೋ ಅರೆಮನಸ್ಸಿನಿಂದ ಸಾಹೇಬರು "ಏನೂ ಇಲ್ಲ, ನನ್ನನ್ನು ಈ ಭಾಗದಿಂದ ಬೇರೆ ಭಾಗಕ್ಕೆ ವರ್ಗಾಯಿಸಿದ್ದಾರಂತೆ. ಬೇಗನೇ ಈ ಶಾಲೆಯ ತಪಾಸಣೆ ಮುಗಿಸಲು ಹೇಳಿದ್ದಾರೆ" ಎಂದರು. ಆಚಾರ್ಯರಿಗೆ ಜಂಬಕೊಚ್ಚಿಕೊಳ್ಳಲು ಸುವರ್ಣ ಸಂಧಿ ಒದಗಿತು. "ಹೋದ ಶುಕ್ರವಾರ ಸಂಜೆಗೆ ಹೋದಾಗ ನವಾಬಸಾಹೇಬರಿಗೆ ಸೂಚು ಕೊಟ್ಟಿದ್ದೆ" ಎಂದು ಹೇಳುತ್ತಾ ಸಿದ್ಧಪಡಿಸಿದ ತಾಂಬೂಲವನ್ನು ಆಚಾರ್ಯರು ತಾವೊಬ್ಬರೆ ಬಾಯಲ್ಲಿ ಹಾಕಿಕೊಂಡು ಬಿಟ್ಟರು. ಸಾಹೇಬರಿಗೆ ಅಪಮಾನವೆನಿಸಿತು. ಈ ವಾರ್ತೆಯನು ಸಾಹೇಬರ ಸಿಪಾಯಿ ಎಲ್ಲೆಡೆಗೆ ಹೇಳಿಬಿಟ್ಟನು. ಸಾಹೇಬರ ವರ್ಗಕ್ಕೆ ಆಚಾರ್ಯರೇ ಕಾರಣರೆಂದಾಗ ಉಳಿದವರೆಲ್ಲಾ ಆಚಾರ್ಯರಿಗೆ ಮತ್ತಷ್ಟು ಅಂಜುವಂತಾಯಿತು. ಆದರೆ ಆಚಾರ್ಯರದು ಬುರುಡೆಯೆಂಬದು ಗೊತ್ತಾದ್ದದ್ದು ಅವರಿಗೇ ಮಾತ್ರ. ಅಂದಿನಿಂದ ಆಚಾರ್ಯರ ಪೀಠವು ಮತ್ತೆರಡು ಗೇಣು ಮೇಲಕ್ಕೇರಿತು.

ಆಚಾರ್ಯರು ವಿಸ್ಮೃತಿಸಾಮ್ರಾಜ್ಯದ ಚಕ್ರವರ್ತಿಗಳು. ಮನೆಯಲ್ಲಿ ಊಟಕ್ಕೆ ಕುಳಿತಾಗ ತಾವು ಸಾರೂ ಅನ್ನವನ್ನು ಉಂಡರೋ ಅಥವಾ ತುಪ್ಪಾನ್ನವನ್ನು ಉಂಡರೋ ಎಂದು ಅವರಿಗೆ ಊಟಕ್ಕೆ ಬಡಿಸುವವರೇ ಹೇಳಬೇಕು. ಮಾತನಾಡುತ್ತಾ ಆಡುತ್ತಾ "ನೋಡು ನಾನೀಗ ಎಷ್ಟು ಭಕ್ಕರಿ ತಿಂದೆ? ಮೂರು ತಿಂದಿದ್ದರೆ ಇನ್ನೊಂದನ್ನು ಹಾಕು. ನಾಲ್ಕು ತಿಂದಿದ್ದರೆ ಅನ್ನವನ್ನು ತೆಗೆದುಕೊಂಡು ಬಾ" ಎಂದು ಹೆಂಡತಿಗೆ ಹೇಳುತ್ತಿದ್ದರು. ರಾಮಾಚಾರ್ಯರಿಗೆ ಶಾಲೆಯ ಹೆಡ್‌ಮಾಸ್ತರಿಕೆ ಬಂದರೂ ಕ್ವೆಲೋನವು ಭಾರತದಲ್ಲೋ ಯುರೋಪದಲ್ಲೋ ಎಂಬುದೇ ಗೊತ್ತಿರಲಿಲ್ಲ. ಗಣಿತವಂತೂ ಶೂನ್ಯ. ಭಾಷಾಶಾಸ್ತ್ರದಲ್ಲಿಯಂತೂ ಹೇಳಲಾರದಷ್ಟು ಅಜ್ಞಾನ. ಶಾಲೆಯಲ್ಲಿ ಅವರು ಕಲಿಸುವ ಗೋಜಿಗೆ ಹೋಗುತ್ತಿರಲಿಲ್ಲ. ಅಲ್ಲದೆ ಆಚಾರ್ಯರಿಗೆ ಶೀನು ಬಂದರೆ, ಅವರ ಮೂರು ವರುಷದ ಶೀನಿ ಎಡವಿಬಿದ್ದರೆ, ಹಿರಿಯ ಮಗಳು ಸಾವಿತ್ರಿ ನಾಗರಪಂಚಮಿಗೆ ಗುಂಡೂರಿಗೆ ಬಂದರೆ ಶಾಲೆಗೆ ಬಿಡುವು ದೊರೆಯಿತೆಂದೇ ತಿಳಿಯಬೇಕು. ಶಾಲೆಯನ್ನು ಮುಚ್ಚಲು ಆಚಾರ್ಯರಿಗೆ ಯಾರದೂ ಆಜ್ಞೆ ಬೇಕಿರಲಿಲ್ಲ. ಒಮ್ಮೆ ಆಚಾರ್ಯರು ಈ ರೀತಿ ಶಾಲೆ ಬಿಟ್ಟು ತಮ್ಮ ಅಧಿಕಾರವನ್ನು ಚಲಾಯಿಸಲು ಹೋಗಿ ಪೇಚಿಗೆ ಬಿದ್ದಿದ್ದರು. ಅಂದು ಹಬ್ಬದ ಊಟವಾಗಿದ್ದರಿಂದ ಆಚಾರ್ಯರಿಗೆ ಮಧ್ಯಾಹ್ನದ ನಿದ್ರೆ ಶಾಲೆಯಲ್ಲಿ ಜೋರಾಗಿ ಬಂದಿತು. ಅಂದು ಕೈಕೆಳಗಿನ ಒಬ್ಬ ಶಿಕ್ಷಕರೂ ಬಂದಿರಲಿಲ್ಲ. ಹೀಗಾಗಿ ಮಧ್ಯಾಹ್ನದ ಮೂರೂವರೆಗೆ ಶಾಲೆ ಬಿಟ್ಟತೆಂದು ಮಕ್ಕಳನ್ನೆಲ್ಲಾ ಮನೆಗೆ ಕಳಿಸಿ ಶಾಲೆಗೆ ಕೀಲಿಯನ್ನು ಹಾಕಿ ಮನೆಗೆ ಹೋಗಿ ಹಾಸಿಗೆ ಹಾಸಿ ಮಲಗಿಬಿಟ್ಟರು.

ಇದ್ದ ಇನ್ನೊಬ್ಬ ಶಿಕ್ಷಕನಾದ ಅಪ್ಪಣಾಚಾರಿಯೂ ಮನೆಗೆ ಹೋದನು. ಆಚಾರ್ಯರಿಗೆ ಒಳ್ಳೇ ಜೊಂಪು ಹತ್ತಿತ್ತು. ಮಧ್ಯದಲ್ಲಿ ಅವರ ಹೆಂಡತಿ ಕೂಗಿ ಎಬ್ಬಿಸಿದರು. ಅಪ್ಪಣಾಚಾರಿಯು ಸ್ಕೂಲ ಬೋರ್ಡಿನ ಚೇರಮನ್ನರು ಬಂದಿರುವರೆಂದು ಹೇಳಲಿಕ್ಕೆ ಬಂದದ್ದೇ ಆಚಾರ್ಯರ ನಿದ್ರೆಗೆ ಭಂಗ ತಂದಿತ್ತು. ಎದ್ದು ಮುಖ ತೊಳೆದು ರುಮಾಲ ಸುತ್ತಿ ಶಾಲೆಗೆ ಕೀಲಿಕೈ ತೆಗೆದುಕೊಂಡು ಹೋದರು. ಚೇರಮನ್ನರು ಶಾಲೆಯ ಅಂಗಳದಲ್ಲಿ ನಿಂತು ಆಚಾರ್ಯರನ್ನು ಸಿಕ್ಕಾಪಟ್ಟೆ ಬೈಯ್ಯತೊಡಗಿದರು. "ಮೂರೂವರೆಗೆ ಶಾಲೆಯನ್ನು ಬಿಡಲು ನಿಮಗಾರು ಹೇಳಿದರು? ನಿಮ್ಮ ಮೇಲೆ ರಿಪೋರ್ಟ ಮಾಡಿ ನಿಮ್ಮನ್ನು ಶಾಲೆಯಿಂದ ಕಿತ್ತಿಸಿ ಹಾಕುತ್ತೇನೆ" . . . ಹಾಗೆ . . . ಹೀಗೆ . . . ಎಂದು. ಆಚಾರ್ಯರು ಶಾಲೆಯ ಬಾಗಿಲ ತೆಗೆದು, ಒಳಕ್ಕೆ ಚೇರಮನ್ನರನ್ನು ಕರೆದರು. ಅವರನ್ನು ಕರೆದಂತೆಲ್ಲಾ ಅವರ ಮಾತಿನ ಮಳೆ ಜೋರಾಯಿತು. ಆಚಾರ್ಯರು ಕ್ಷಣಕಾಲ ಸಹಿಸಿ "ಸಾಹೇಬ, ನನ್ನದೇನೂ ಇದರಲ್ಲಿ ತಪ್ಪಿಲ್ಲ. ೫ ಹೊಡೆಯಿತು ಶಾಲೆ ಬಿಟ್ಟು ಮನೆಗೆ ಹೋಗಿದ್ದೇನೆ" ಎಂದರು. ಕೂಡಲೇ ಸಾಹೇಬರು "ಈಗೇನು ಐದು ಹೊಡೆಯುತ್ತಿದೆ. ಇನ್ನೂ ನಾಲ್ಕು ಗಂಟೆಯಾಗಿಲ್ಲ. ನೋಡಿರಿ ನನ್ನ ವಾಚನ್ನು" ಎಂದು ವಾಚು ತೆಗೆದು ಹಿಡಿದರು. ಕೂಡಲೇ ಆಚಾರ್ಯರು "ಅಪ್ಪಣಾಚಾರ ಮಾಸ್ತರ, ನಮ್ಮ ಗಡಿಯಾರವನ್ನು ತೆಗೆದುಕೊಂಡು ಬರ್ರಿ" ಎಂದು ಹೇಳಿ ಅವರಿಗೆ ಕಣ್ಣುಹೊಡೆದರು. ಕೂಡಲೇ ಅಪ್ಪಣಾಚಾರರು ತಾಸಿನ ಮುಳ್ಳನ್ನು ೫ರ ಮೇಲಿಟ್ಟು ಗಡಿಯಾರವನ್ನು ತಂದು ತೋರಿಸಿದರು. ಆಚಾರ್ಯರು ಅದನ್ನು ತೋರಿಸುತ್ತ "ನೋಡಿರಿಲ್ಲಿ . . . ." ಎಂದರು. "ಅದೆಲ್ಲವೂ ಸುಳ್ಳು. ನಿಮ್ಮ ಗಡಿಯಾರವನ್ನು ಮುಂದಕ್ಕಿಟ್ಟಿರುವಿರಿ. ನಾನು ಇದನ್ನು ರಿಪೋರ್ಟ ಮಾಡುವವನೇ" ಎಂದರು. ಆಚಾರ್ಯರು ಎಷ್ಟು ಹೇಳಿದರೂ ಉಪಯೋಗಕ್ಕೆ ಬರಲಿಲ್ಲ. ರಾಮಾಚಾರ್ಯರೂ ಸಿಟ್ಟಿಗೆದ್ದು "ಅಪ್ಪಣಾಚಾರಿ, ಕಾಗದವನ್ನು ತೆಗೆದುಕೋ ಚೇರಮನ್ನರ ಮೇಲೆ ನಾವೂ ರಿಪೋರ್ಟ

ಮಾಡೋಣ '' ಎಂದು ಚೇರಮನ್ನರೆದುರಿಗೇನೆ "ಚೇರಮನ್ನರು ಐದು ಹೊಡೆದು ಶಾಲೆ ಬಿಟ್ಟ ಮೇಲೆ ಇಲ್ಲಿಗೆ ಬಂದು 'ಶಾಲೆಯನ್ನೇಕೆ ಮುಚ್ಚಿದ್ದೀರಿ?' ಎಂದು ಕೇಳಿ ಸುಮ್ಮನೆ ಬೈಯ್ದು ಅಪಮಾನ ಮಾಡಿದ್ದಾರೆ. ಇದಕ್ಕೆ ನನ್ನ ಅಸಿಸ್ಟಂಟ ಮಾಸ್ತರರೇ ಸಾಕ್ಷಿ'' ಎಂದು ಬರೆಯಿಸಿ ಚೇರಮನ್ನರೆದುರಿಗೆನೆ ವಾಲಿಕಾರನ ಕಡೆಯಿಂದ ಸವಣೂರಿಗೆ ವರದಿಯನ್ನು ಕಳಿಸಿದರು. ಚೇರಮನ್ನರೂ ಇಬ್ಬರು ಹಳ್ಳಿಯವರನ್ನೂ ಗೌಡರನ್ನೂ ಕರೆಯಿಸಿ ಮೂರುವರೆ ಗಂಟೆಗೆ ಹೆಡ್‌ಮಾಸ್ತರರು ಶಾಲೆಯನ್ನು ಬಿಟ್ಟು ಮನೆಗೆ ಹೋಗಿದ್ದರು ಎಂದು ಬರೆದು ಅವರ ಸಾಕ್ಷಿಗಳನ್ನು ಹಾಕಿಸಿದರು. ಎರಡೂ ವರದಿಗಳು ಸವಣೂರ ದಿವಾಣರ ಕೈಸೇರಿದವು. ಯಾರ ವರದಿ ಸತ್ಯವೆಂದು ದಿವಾಣರು ನಂಬಬೇಕು? ಹೆಡ್‌ಮಾಸ್ತರರ ವರದಿಗೆ ಅವರ ಇಬ್ಬರು ಶಿಕ್ಷಕರ ಸಾಕ್ಷಿಗಳಿದ್ದವು. ಚೇರಮನ್ನರ ವರದಿಗೆ ಗೌಡನ ಮತ್ತು ಇಬ್ಬರು ಹಳ್ಳಿಯವರ ಸಾಕ್ಷಿಗಳಿದ್ದವು. ಎಲ್ಲರೂ ವಿಚಾರಣೆಯ ದಿವಸ ದಿವಾಣರ ಮುಂದೆ ಬಂದರು. ವಿಚಾರಣೆ ಮುಗಿದು ದಿವಾಣರು ರಾಮಾಚಾರ್ಯರದೇ ತಪ್ಪೆಂದು ಸಾರುವ ಲಕ್ಷಣ ಕಂಡವರೇ ರಾಮಾಚಾರ್ಯರು ನಮ್ರರಾಗಿ "ದಿವಾಣ ಸಾಹೇಬರೇ ಚೇರಮನ್ನರು ಬಂದಾಗ ನಿಜವಾಗಿಯೂ ೫ ಗಂಟೆಯಾಗಿತ್ತು. ಆದರೆ ಚೇರಮನ್ನರು ತಮ್ಮ ವಾಚು ತೋರಿಸಿ ಮೂರೂವರೆಯಾಗಿದೆಯೆಂದರು. ಅದಕ್ಕೆ ಈ ಗೌಡಪ್ಪಾ, ಭರಮಾ ಹಾಗೂ ಕರಿಯಾ ನನ್ನ ಮೇಲಿನ ದ್ವೇಷದಿಂದ ಸಾಕ್ಷಿ ಹಾಕಿದ್ದಾರೆ. ಇವರಿಗೆ ಗಡಿಯಾರವಾದರೂ ತಿಳಿಯುತ್ತದೇನು ಕೇಳಿರಿ'' ಎಂದರು. ಹೆಡ್‌ಮಾಸ್ತರರ ಮಾತು ದಿವಾಣರಿಗೆ ಸರಿಯೆನಿಸಿತು. ಗೌಡನಿಗಾಗಲಿ ಆ ಹಳ್ಳಿಯವರಿಗಾಗಲಿ ಗಡಿಯಾರವೇ ತಿಳಿಯುತ್ತಿರಲಿಲ್ಲ. ಚೇರಮನ್ನರಿಗೆ ಈ ಸುದ್ದಿಯೇ ತಿಳಿದಿರಲಿಲ್ಲ. ಚೇರಮನ್ನರ ಮಾತಿನಿಂದ ಅವರು ಹೆಬ್ಬೆಟ್ಟು ಒತ್ತಿ ಸಾಕ್ಷಿಗೆ ಬಂದಿದ್ದರು. ಗೌಡನು ಆಚಾರ್ಯರ ಮೇಲಿನ ಸಿಟ್ಟಿನಿಂದ ಬಂದಿದ್ದನು. ಹೀಗಾಗಿ ಚೇರಮನ್ನರದೇ ತಪ್ಪೆಂದು ಅವರ ವರದಿಗೆ ಸಾಕ್ಷಿಗಳೇ ಇಲ್ಲವೆಂದೂ ದಿವಾಣರು ಅವರ ಅರ್ಜಿಯನ್ನು ಕಿತ್ತುಹಾಕಿ ಸುಳ್ಳು ಹೇಳಿದ್ದಕ್ಕೆ ಮೂವರಿಗೂ ಎಚ್ಚರಿಕೆಯನ್ನಿತ್ತು ಕಳಿಸಿದರು. ಈ ವಾರ್ತೆ ರಾಮಾಚಾರ್ಯರ ಹೆಸರನ್ನು ಸಂಸ್ಥಾನದಾದ್ಯಂತ ಹರಡಿತದಲ್ಲದೆ ಅವರ ಕೀರ್ತಿಯನ್ನು ಹೆಚ್ಚಿಸಿತು. ಅಂಥ ಸತ್ಯಸಂಧರ ಪಾಡಿಗೆಹೋದರೆ ಎಲ್ಲರಿಗೂ ಇದೇ ಗತಿಯೆಂದು ಜನರಾಡಿಕೊಂಡರು. ಆ ಗುಟ್ಟು ರಾಮಾಚಾರ್ಯರಿಗೂ ಅಸಿಸ್ಟಂಟ ಮಾಸ್ತರರಿಬ್ಬರಿಗೂ ಮಾತ್ರ ಗೊತ್ತು.

ಆಚಾರ್ಯರು ಹೆಡ್‌ಮಾಸ್ತರಕಿ ಬಂದಮೇಲೆ ಬರುತ್ತಿದ್ದ ಇಪ್ಪತ್ತು ರೂಪಾಯಿ ಅರಾಣೆಯಲ್ಲಿ ಒಂದು ಕಾಸನ್ನೂ ಮನೆಯ ವೆಚ್ಚಕ್ಕೆ ಉಪಯೋಗಿಸುತ್ತಿರಲಿಲ್ಲ. ಪಗಾರವು ಕಡಿಮೆಯಾದರೂ ಅವರಷ್ಟು ಸುಖದಿಂದ ಬಾಳಿದವರು ಹಾಗು ನೌಕರಿ ಮಾಸ್ತರಕಿಯಾದರೂ, ಅವರಷ್ಟು ಅಧಿಕಾರವನ್ನು ನಡೆಯಿಸಿದವರು ಈ ರೇಶನ್ ಯುಗದಲ್ಲಿ ಮಾತ್ರ ನಮಗೆ ಕಾಣಲು ಸಿಗುವದಿಲ್ಲವೆಂದು ಎಂಭತ್ತು ವರ್ಷದ ನನ್ನಜ್ಜನು ತಾನು ನಾಲ್ವತ್ತು ವರ್ಷದವನಿದ್ದಾಗ ನೋಡಿದ ರಾಮಾಚಾರ್ಯರ ಸಂಸಾರ ಕುರಿತು ಹೇಳುತ್ತಿದ್ದನು. ಈ ಮಾಸ್ತರಕಿಯ ಜೊತೆ ಆಚಾರ್ಯರು ಪುರಾಣವನ್ನೂ ಹೇಳುತ್ತಿದ್ದರು. ಅದಕ್ಕಾಗಿ ನವರಾತ್ರಿಯಲ್ಲಿ ಒಂಭತ್ತು ದಿವಸ ಆಚಾರ್ಯರು ಗುಂಡೂರಿನಿಂದ ಸವಣೂರಿಗೆ ಬರುತ್ತಿದ್ದರು. ಸಂಸ್ಕೃತ ಅಷ್ಟಕ್ಕಷ್ಟೇ ಇದ್ದರೂ ಅವರ ಮುಖದಿಂದ ಪುರಾಣವು ಒಳ್ಳೇ ರಸವತ್ತಾಗಿ ಹೊರಬರುತ್ತಿತ್ತು. ಮಾತಿನ ಚಪಲತೆ ಅವರ ಪುರಾಣಕ್ಕೆ ಕಳೆ ತರುತ್ತಿತ್ತು.

ಈ ಹೆಸರಿನ ಮೇಲೆ ಒಮ್ಮೆ ಅಲ್ಲಿ ನೆರೆದ ವೇದಾಂತ ಪರಿಷತ್ತಿನ ಅಧ್ಯಕ್ಷಸ್ಥಾನವನ್ನು ಅಲಂಕರಿಸುವ ಪುಣ್ಯ ಆಚಾರ್ಯರ ಪಾಲಿಗೆ ಬಂದಿತು. ಆಚಾರ್ಯರು ಸಂಸ್ಕೃತ ಪಂಡಿತರು ಹಾಗು ವೇದಾಂತ, ತರ್ಕಶಾಸ್ತ್ರ, ನ್ಯಾಯಗಳನ್ನು ಓದಿಕೊಂಡವರು ಎಂದು ಸವಣೂರಿನಲ್ಲಿ ಪ್ರತೀತಿ. ಆದರೆ ಆಚಾರ್ಯರ ಪಾಂಡಿತ್ಯ ಅವರಿಗೇ ಗೊತ್ತು. ಶಾಕುಂತಲೆಯು ಗಂಡ ಕಾಳಿದಾಸನೆಂದೂ ವೇಣೀಸಂಹಾರವೆಂದರೆ ಕೂದಲವನ್ನು ಕತ್ತರಿಸಿ ಮುಖಭಂಗ ಮಾಡುವದೆಂದೂ ತಮ್ಮ ಶಿಷ್ಯರಿಗೆ ಆಚಾರ್ಯರು ಹೇಳುತ್ತಿದ್ದುದುಂಟು. ಅಯಾಚಿತವಾಗಿ ಬಂದ ಅಧ್ಯಕ್ಷತೆಗೆ ಅನಿವಾರ್ಯವಾಗಿ ಒಪ್ಪಿಬಿಟ್ಟರು. ಪರಿಷತ್ತು ಸಮೀಪಿಸಿದಂತೆಲ್ಲಾ ಆಚಾರ್ಯರ ಜೀವವು ಗಾಳಿಗೆ ಸಿಕ್ಕ ಸೊಡರಿನಂತೆ ಹೊಯ್ದಾಡುತ್ತಿತ್ತು. ಆದರೂ ತಮ್ಮ ಕೈಕೆಳಗಿನ ಶಿಕ್ಷಕನಾದ ಅಪ್ಪಣಾಚಾರಿಯ ಕಡೆಯಿಂದ ತಮ್ಮ ಭಾಷಣವನ್ನು ಬರೆಸಿದರು. ಭಾಷಣವು ಕನ್ನಡದಲ್ಲಿಯೇ ಇದ್ದರೂ ಅದರಲ್ಲಿ ಬರುವ ಕ್ಲಿಷ್ಟ ಸಂಸ್ಕೃತ ಶಬ್ದಗಳ ಉಚ್ಚಾರವೇ ಆಚಾರ್ಯರ ನಾಲಿಗೆಗೆ ಹಾಯುತ್ತಿರಲಿಲ್ಲ. ಬಹು ಕಷ್ಟಪಟ್ಟು ಮುಖೋದ್ಗತ ಮಾಡಿಕೊಳ್ಳುವ ಪ್ರಯತ್ನ ಮಾಡಿದರು. ಅವರ ಭಾಷಣವು ಸಿದ್ಧವಾಗುವ ಕಾಲವೆಲ್ಲ ಗುಂಡೂರಿನ ಶಾಲೆಗೆ ರಜೆಯೆಂದು ಬೇರೆ ಹೇಳಬೇಕಾಗಿಲ್ಲ. ಸರಿ, ಪರಿಷತ್ತಿನ ದಿವಸ ಗಂಭೀರವದನದ ಆಚಾರ್ಯರು ಜರದ ಶಾಲನ್ನು ಹೊತ್ತುಕೊಂಡು ಸಭೆಗೆ ಬಂದರು. ಅವರ ಮುಂದೆ ಅಪ್ಪಣಾಚಾರಿಯು ಆಚಾರ್ಯರ ಗಂಟನ್ನು ಹೊತ್ತುಕೊಂಡು ವೇದಿಕೆಯ ಮೇಲೆ ಹೋದನು. ಮೊದಲು ಪರಿಷತ್ತಿನವರು ಆಚಾರ್ಯರನ್ನು ತುಂಬಾ ಪ್ರಶಂಸಿಸಿ ಮಾನಪತ್ರವನ್ನು ಕೊಟ್ಟರಲ್ಲದೆ ಅದೇ ಪರಿಷತ್ತಿನಲ್ಲಿ 'ಪಂಡಿತರತ್ನ' ಎಂಬ ಬಿರುದನ್ನು ಕೊಟ್ಟರು. ಆಚಾರ್ಯರ ಭವ್ಯದೇಹವನ್ನು ಹಾಗು ಹೊತ್ತ ಶಾಲನ್ನು ಕಂಡು ಅವರು ತುಂಬಾ ಓದಿಕೊಂಡ ನಿಷ್ಣಾವಂತರಿರಬೇಕೆಂದು ನೆರೆದ ಸಾವಿರಾರು ಜನರು ತಿಳಿದುಕೊಂಡರು. ಸಭೆಗೆ ಮೊದಲು ಆಚಾರ್ಯರು ಎದ್ದು "ನನ್ನ ಸರಕಾರೀ ಸೇವೆಯಲ್ಲಿ ನಾನು ಹೆಚ್ಚು ಸಂಸ್ಕೃತ ಮತ್ತು ವೇದಾಂತದ ಅಭ್ಯಾಸವನ್ನು ಮಾಡುವದಾಗಲಿಲ್ಲ. ಆದರೂ ಸದ್ಯಕ್ಕೆ ನಾನು ಮಾಡಿದ ಅಭ್ಯಾಸದ ಮೇಲಿಂದ ಮತ್ತು ಅನನ್ಯಭಾವದಿಂದ ದೇವರ ಚಿಂತನೆಯನ್ನು ಮಾಡಿದ ಪುಣ್ಯದಿಂದ ನನಗೆ ಸ್ವರ್ಗ ಲಭಿಸುವದೆಂದು ತಿಳಿಯುತ್ತೇನೆ. ನಾನು ಯಾರಿಗೂ ಪಾಠಹೇಳಿಕೊಡಲು ಆಗದಿದ್ದರೂ ನನ್ನ ಶಿಷ್ಯನಾದ ಈ ಅಪ್ಪಣಾಚಾರ್ಯರನ್ನು ಮಾತ್ರ ತಯಾರುಮಾಡಿದ್ದೇನೆ. ಮೊದಲು ಅವನು ಕೆಲ ಮಾತುಗಳನ್ನು ಹೇಳುತ್ತಾನೆ ಕೇಳಿರಿ. ಎಂದರು. ಅಪ್ಪಣಾಚಾರ್ಯರು ಭಾಷಣವನ್ನು ಪ್ರಾರಂಭಿಸಿದರು. ಅವರು ಓದಿಕೊಂಡವರೇ ಇದ್ದುದರಿಂದ ಅವರಿಗೆ ಮಾತನಾಡಲು ಬರುತ್ತಿತ್ತು. ಅವರ ಧ್ವನಿಯು ಬಲದಿಂದ ಅವರಿಗೆ ಶ್ಲೋಕಗಳನ್ನೂ ಚನ್ನಾಗಿ ಅನ್ನಲಿಕ್ಕೆ ಬರುತ್ತಿತ್ತು. ಹೀಗಾಗಿ ಅವರ ಮಾತುಗಳು ಹಿಡಿಸಿದವು. ಅವರ ಶಿಷ್ಯರೇ ಇಷ್ಟು ಸುಂದರವಾಗಿ ಮಾತನಾಡಿದ ಮೇಲೆ ಅವರೆಷ್ಟು ಸುಂದರವಾಗಿ ಮಾತನಾಡಬಹುದೆಂದು ಜನರೆಲ್ಲರೂ ಕುತೂಹಲಿಗಳಾಗಿ ಅವರ ಭಾಷಣವನ್ನು ಕೇಳಲು ಕುಳಿತರು. ಆಚಾರ್ಯರು ಎದ್ದು ತಾವು ಬರೆದು ತಂದ ಭಾಷಣವನ್ನು ಓದಲು ಪ್ರಾರಂಭಿಸಿದರು. ಓದುವದು ದುಸ್ತರವಾದಾಗ "ಇಲ್ಲಿಯ ಪರಿಷತ್ತಿನ ವ್ಯವಸ್ಥಾಪಕರು ತುಂಬಾ ತುಪ್ಪವನ್ನು ಹಾಕಿದ್ದಾರೆ. ಅದರಿಂದ ಗಂಟಲು ಹೀಗೆ ಹಿಡಿಯುತ್ತಿದೆ" ಎಂದು ತಮ್ಮ ಪೊಳ್ಳನ್ನು ಮುಚ್ಚಿಕೊಳ್ಳಲು ಪ್ರಯತ್ನಿಸಿದರು. ಮತ್ತೆ ಭಾಷಣವು ಪ್ರಾರಂಭವಾಯಿತು. ಮಧ್ಯದಲ್ಲಿ ಬರುತ್ತಿದ್ದ ಸಂಸ್ಕೃತ ಪದಗಳು ಆಚಾರ್ಯರ ಜೀವವನ್ನೇ ಹಿಂಡುತ್ತಿದ್ದವು. ಮಧ್ಯದಲ್ಲಿ ಬಂದಾಗ ಬರೆದ ಭಾಷಣವು ತಿಳಿಯದಾದಾಗ ಭಾವನಾಪರವಶರಾದ ಆಚಾರ್ಯರು "ಏ ಅಪ್ಪಣಾಚಾರಿ ಇದನ್ನೇನು ಬರೆದಿರುವಿಯೋ ಹೇಳು ಬಾ'' ಎಂದುಬಿಟ್ಟರು. ಜನರು ಚಪ್ಪಾಳೆಯಿಟ್ಟು ನಕ್ಕುಬಿಟ್ಟರು ನಿತ್ಯವೂ ಈ ರೀತಿ ಮನೆಯಲ್ಲಿ ರಂಗತಾಲೀಮು ಮಾಡಿ ಆಚಾರ್ಯರಿಗೆ ಅಭ್ಯಾಸವಾಗಿ ಹೋಗಿತ್ತು. ಅದೇ ಇಂದೂ ಬಂದುಬಿಟ್ಟಿತು. ಆಚಾರ್ಯರ ಬಣ್ಣ ಕೊನೆಗೊಮ್ಮೆ ಬಯಲಾಯಿತು. ಅವರು ಗುಂಡೂರಿಗೆ ಹೇಗೆ ಬಂದರೋ ತಿಳಿಯದು.



# ಪ್ರಜಾಪ್ರಭುತ್ವದಲ್ಲಿ ನ್ಯಾಯಾಲಯಗಳು

ನ್ಯಾಯಾಲಯಗಳು ಪ್ರಜಾಪ್ರಭುತ್ವದ ತಳಹದಿ. ಪ್ರಜಾಪ್ರಭುತ್ವ ಸರಿಯಾಗಿ ನಡೆಯುವಂತೆ ನೋಡಿಕೊಳ್ಳುವದು ಅವುಗಳ ಕರ್ತವ್ಯವೇ ಆಗಿರುವದು. ಅದಕ್ಕಾಗಿಯೇ ಅವು ಸ್ವತಂತ್ರವಾಗಿರಬೇಕಾಗಿದೆ. ನ್ಯಾಯಾಧೀಶರು ಸರಕಾರದ ನೇರ ಆಧೀನದಲ್ಲಿರದಂಥವರು ನ್ಯಾಯಾಂಗ, ಕಾರ್ಯಾಂಗದಿಂದ ಪ್ರತ್ಯೇಕವಿರಬೇಕಾದುದು ಅವಶ್ಯವಾಗಿದೆ. ಭಾರತದಲ್ಲಿ ನ್ಯಾಯಾಲಯಗಳು ತಮ್ಮ ಹೊಣೆಯನ್ನು ಯಥಾರ್ಥವಾಗಿ ನಿರ್ವಹಿಸುತ್ತಿರುವವು.

ಲೇಖಕರು : ಶ್ರೀ. ರಂಗರಾವ ತಲಚೇರಿಕರ

ಜಗತ್ತಿನ ರಾಜಕೀಯ ಇತಿಹಾಸದ ಸಿಂಹಾವಲೋಕನವನ್ನು ಮಾಡಿದರೆ ಸಾಧಾರಣವಾಗಿ ಹದಿನೆಂಟನೇ ಶತಮಾನದಿಂದೀಚೆಗೆ ಸರಕಾರಗಳ ಘಟನೆಯಲ್ಲಿಯೂ ಕಾರ್ಯಕ್ಷೇತ್ರದಲ್ಲಿಯೂ ಎರಡು ಮಹತ್ವದ ಬದಲಾವಣೆಗಳು ಕಂಡುಬರುವವು.

ಪ್ರಾಚೀನ ಭಾರತದ ಕೆಲವೆಡೆಗಳಲ್ಲಿ ಹಾಗೂ ಗ್ರೀಸ ಇತ್ಯಾದಿ ಕೆಲವು ದೇಶಗಳಲ್ಲಿ ಪ್ರಜಾಪ್ರಭುತ್ವವನ್ನು ಹೋಲುವ ಗಣರಾಜ್ಯಗಳು ಅಸ್ತಿತ್ವದಲ್ಲಿದ್ದವಾದರೂ ಶಾಶ್ವತ ಸರಕಾರವಿದ್ದ ಕಡೆಗಳಲ್ಲೆಲ್ಲಾ ಬಹುತೇಕ ಅರಸೊತ್ತಿಗೆಯ ರಾಜ್ಯಪದ್ಧತಿಯೇ ರೂಢವಾಗಿತ್ತು. ಆದರೆ, ಆಧುನಿಕ ರಾಷ್ಟ್ರಗಳಲ್ಲಿ ಈಗ ಅಂತಹ ನಿರಂಕುಶ ಅರಸೊತ್ತಿಗೆಯು ಬರೆ ಇತಿಹಾಸದ ಮಾತಾಗಿ ಉಳಿದಿದೆಯೆನ್ನಬಹುದು. ಪ್ರಜಾಪ್ರಭುತ್ವವೇ ನವಯುಗದ ಸರ್ವಸಮ್ಮತ ರಾಜ್ಯಪದ್ಧತಿ. ಅರಸೊತ್ತಿಗೆಯು ಕೆಲವು ದೇಶಗಳಲ್ಲಿ ಉಳಿದಿದ್ದರೂ ಅದು ಸಂವಿಧಾನದ ನಿಯಮುಗಳಿಂದ ಬದ್ಧವಾದ ಸಾಂಕುಶ ಅರಸೊತ್ತಿಗೆಯಾಗಿದೆ.

ಪ್ರಜಾಪ್ರಭುತ್ವದ ಕಲ್ಪನೆಯು ಸರ್ವತ್ರ ಹರಡಿ ಪ್ರಜಾಪ್ರಭುತ್ವ ಸರಕಾರಗಳು ಸ್ಥಾಪಿತವಾದರೂ ಜನತೆಯ ಸರ್ವತೋಮುಖ ಹಿತವನ್ನು ಸಾಧಿಸುವದು ಸರಕಾರದ ಕರ್ತವ್ಯವೆಂಬ ಕಲ್ಯಾಣ ರಾಷ್ಟ್ರಕಲ್ಪನೆಯು ಮಾತ್ರ ತೀರಾ ಹೊಸದೆಂದೇ ಹೇಳಬಹುದು. ಹಿಂದಿನ ಶತಮಾನದಲ್ಲಿ That Government is the best which governs least ಅಂದರೆ ತನ್ನ ಅಧಿಕಾರವ್ಯಾಪ್ತಿಯನ್ನು ಎಷ್ಟು ಸಂಕುಚಿತಗೊಳಿಸುತ್ತದೊ ಅಷ್ಟು ಅದು ಉತ್ತಮ ಸರಕಾರ ಎಂಬ ಭಾವನೆಯು ಬಲವಾಗಿ ಬೇರೂರಿತ್ತು. ಹಾಗೂ ಸರಕಾರದ ಅಧಿಕಾರ ಕ್ಷೇತ್ರವು ತೀರ ಅಲ್ಪವಿದ್ದು ಕಾಯದೆಗಳು ಅತಿ ಕಡಿಮೆ ಇದ್ದ ದೇಶದಲ್ಲಿ ಮಾತ್ರವೇ ನಾಗರಿಕರು ನಿಜವಾಗಿ ಸ್ವತಂತ್ರರೆಂದು ಜನರ ನಂಬುಗೆಯಾಗಿತ್ತು. ಈ ಕಲ್ಪನೆಯ ಪ್ರಕಾರ ದೇಶವನ್ನು ಹೊರಗಣ ಶತ್ರುಗಳಿಂದ ರಕ್ಷಿಸುವದು ಹಾಗೂ ದೇಶದೊಳಗೆ ಅಪರಾಧಗಳ ಶಾಸನ ಹಾಗೂ ವೈಯಕ್ತಿಕ ವಿವಾದಗಳ ತೀರ್ಮಾನ ಇವಿಷ್ಟೇ ಸರಕಾರದ ಕರ್ತವ್ಯಗಳೆಂದು ಪರಿಗಣಿಸಲಾಗುತ್ತಿತ್ತು.

### ಭ್ರಾಮಕ ಕಲ್ಪನೆ

ತುಸು ವಿಚಾರಮಾಡಿದರೆ ಈ ಕಲ್ಪನೆಯು ಬರಿಯ ಭ್ರಾಮಕ ಕಲ್ಪನೆಯೆಂದು ಹೊಳೆಯದಿರದು. ಪ್ರಸಿದ್ಧ ತತ್ವಜ್ಞಾನಿ ವೆಬ್‌ಸ್ಟರ್ ಅನ್ನು



ವಂತೆ ಸ್ವಾತಂತ್ರ್ಯವು ಕಾಯದೆಯ ಸೃಷ್ಟಿ. ಹಕ್ಕುಗಳ ಮೇಲೆ ಅತಿಕ್ರಮಿಸುವ ಸ್ವೇಚ್ಛಾಚಾರಕ್ಕಿಂತ ಅದು ತೀರಾ ಭಿನ್ನವಾಗಿದೆ. ಅದು ನ್ಯಾಯಾತ್ಮಕ ಹಾಗೂ ಸುಸಂಸ್ಕೃತ ಕಲ್ಪನೆ ಹಾಗೂ ವನ್ಯಮಾನವನಿಗೆ ಎಂದಿಗೂ ತಿಳಿಯಲಾಗದ ನಾಗರಿಕತೆಯು ಫಲ. ಹಿತಕಾರಿಯಾದ ನಿರ್ಬಂಧಕ್ಕನುಗುಣ ಪ್ರಮಾಣದಲ್ಲಿಯೇ ಸ್ವಾತಂತ್ರ್ಯದ ಅಸ್ತಿತ್ವ. ನಮ್ಮ ಗೋಜಿಗೆ ಬಾರದಂತೆ ಇತರರ ಮೇಲೆ ಎಷ್ಟು ಹೆಚ್ಚು ನಿರ್ಬಂಧಗಳಿರುತ್ತವೊ ಅಷ್ಟೂ ನಮಗೆ ಸ್ವಾತಂತ್ರ್ಯವಿದೆ.

ನಾಗರಿಕರಲ್ಲಿ ಎಲ್ಲರ ಶಕ್ತಿಸಾಮರ್ಥ್ಯಗಳು ಒಂದೇ ಇರುವದಿಲ್ಲ ಎಲ್ಲರಿಗೂ ಒಂದೇ ರೀತಿಯ ಸ್ವಾತಂತ್ರ್ಯ ಕೊಡುವದೆಂದರೆ ನಾಡಿನ ನೀತಿಯ ಬದಲು ಕಾಡಿನ ಕಾಯದೆಯನ್ನು ಜಾರಿಯಲ್ಲಿ ತಂದಂತಾಗುವದು. ಮಗುವಿನ ರಕ್ಷಣೆಗಾಗಿ ಅದರ ಪಾಲನ ಪೋಷಣದ ಹೊಣೆಯನ್ನು ಅದನ್ನು ಹೆತ್ತವರ ಮೇಲೆ ಹಾಕಲೇಬೇಕು. ಕೆಲಸಗಾರರ ಹಿತ ರಕ್ಷಣೆಯ ಸಲುವಾಗಿ ಅವರನ್ನು ನಿಯಮಿತ ತಾಸುಗಳಿಗಿಂತ ಹೆಚ್ಚು ವೇಳೆ ದುಡಿಸದಿರುವ ಹಾಗೂ ಕಾರಖಾನೆಯನ್ನು ಅವರ ಆರೋಗ್ಯ ಕೆಡದಂತಹ ಸ್ಥಿತಿಯಲ್ಲಿ ಇಡುವ ಹೊಣೆಯನ್ನು ಮಾಲಕರ ಮೇಲೆ ಹೊರಿಸಲೇಬೇಕು. ರೈತರ ಆರ್ಥಿಕ ಹಿತದ ಉದ್ದೇಶದಿಂದ ಗೇಣಿಯು ಮಿತಿಮೀರದಂತೆ ಭೂ-ಮಾಲಕರ ಮೇಲೆ ನಿರ್ಬಂಧವಿರಲೇಬೇಕು. ಇಂತಹ ವಿಷಯಗಳಲ್ಲಿ ಕಾಯದೆಗಳು ಅಗತ್ಯವಿಲ್ಲವೆಂದು ಯಾರೂ ಹೇಳಲಾರರು.

ಆಧುನಿಕ ನಾಗರಿಕತೆ ಅರ್ಥಾತ್ ಯಂತ್ರಯುಗವು ಪ್ರಾರಂಭವಾದಂದಿನಿಂದ ಜನತೆಯ ಸರ್ವಾಂಗೀಣ ಜೀವನ, ಉದ್ಯೋಗ, ಸಮಾಜ ರಚನೆ ಇತ್ಯಾದಿಗಳೆಲ್ಲವೂ ವೈವಿಧ್ಯಪೂರ್ಣವಾಗಿವೆ. ಸಮಾಜದಲ್ಲಿನ ವಿವಿಧ ಅಂಗಗಳ ಪರಸ್ಪರ ಘರ್ಷಣೆಯೂ ಅಧಿಕವಾಗಿದೆ ಹಾಗೂ ಜನಜೀವನವು ಪ್ರಗತಿಪಥದಲ್ಲಿ ಮುಂದೆ ಸಾಗಿದ ಹಾಗೆ ಅದು ಜಟಿಲವೂ ತೊಡಕಿನದೂ ಆಗುತ್ತ ಹೋಗಿದೆ. ಜನತೆಯ ಸರ್ವತೋಮುಖ ಹಿತವನ್ನು ಸಾಧಿಸುವ ಉದ್ದೇಶವಿರುವ ಪ್ರಜಾಪ್ರಭುತ್ವಗಳು ತಮ್ಮ ಧ್ಯೇಯಸಾಧನೆಗಾಗಿ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಳ್ಳಬೇಕಾಗಿ ಬಂದಿರುವದರಿಂದ ಜನಜೀವನದ ವೈವಿಧ್ಯಕ್ಕೆ ಅನುಗುಣವಾಗಿ ಸರಕಾರದ ಕಾರ್ಯಗಳೂ ಕಾಯದೆಗಳೂ ಅಧಿಕವಾಗುತ್ತವೆ. ಈ ಪರಿಸ್ಥಿತಿಯಲ್ಲಿ ಸರಕಾರದ ವಿವಿಧ ಅಂಗಗಳೊಳಗಿರಬೇಕಾದ ಪರಸ್ಪರ ಸಂಬಂಧ ಯಾವ ರೀತಿಯಲ್ಲಿರಬೇಕೆಂಬುದೊಂದು ಮಹತ್ವಪೂರ್ಣ ಪ್ರಶ್ನೆ ಎನ್ನಬಹುದು.

### ಸರಕಾರದ ಕಾರ್ಯಾಚರಣೆಯ ಮೂರು ವಿಭಾಗಗಳು

ಆಧುನಿಕ ಸರಕಾರಗಳ ಕಾರ್ಯಾಚರಣೆಯಲ್ಲಿ ಸ್ಥೂಲವಾಗಿ ಮೂರು ವಿಭಾಗಗಳನ್ನು ಮಾಡ

ಬಹುದು. ಮೊದಲನೆಯದು Legislative ಅಂದರೆ ನ್ಯಾಯವಿಧಾಯಕ ಅರ್ಥಾತ್ ಕಾಯದೆಗಳನ್ನು ಮಾಡುವ ಅಂಗ. ಎರಡನೆಯದು Executive ಅಂದರೆ ಕಾರ್ಯಾಂಗ ಅಂದರೆ ಪ್ರತ್ಯಕ್ಷ ಆಡಳಿತ ನಡೆಸುವ ಅಂಗ ಮೂರನೆಯದು Judicial ಅಂದರೆ ಜನತೆಯ ಹಕ್ಕುಗಳ ರಕ್ಷಣೆ, ಅಪರಾಧಗಳ ಶಾಸನ, ವೈಯಕ್ತಿಕ ವಿವಾದಗಳ ತೀರ್ಮಾನ, ಇವುಗಳನ್ನು ಮಾಡುವ ನ್ಯಾಯಾಂಗ.

ಅರಸೊತ್ತಿಗೆಯಲ್ಲಿ ರಾಜಕೀಯ ಸಾರ್ವಭೌಮತ್ವವು ಅರಸನಲ್ಲೇ ಇರುತ್ತಿದ್ದುದರಿಂದ, ಈ ಮೂರೂ ವಿಭಾಗಗಳ ಪೂರ್ಣಾಧಿಕಾರವು ಅವನಲ್ಲೇ ಇರುತ್ತಿತ್ತು. ಹಿಂದಿನ ಗಣರಾಜ್ಯಗಳಲ್ಲಿ ಸಹ ಸಾರ್ವಭೌಮಾಧಿಕಾರವು ಜನತೆಯಲ್ಲಿದ್ದುದರಿಂದ ಈ ಮೂರೂ ಅಧಿಕಾರಗಳು ಏಕತ್ರವಾಗಿ ಜನತೆಯಲ್ಲೇ ಕೇಂದ್ರೀಕೃತವಾಗಿದ್ದುವಲ್ಲದೆ ಅವು ವಿಶಿಷ್ಟವಾಗಿ ಹಿಂಗಡಿಸಲ್ಪಟ್ಟಿದ್ದಿಲ್ಲ.

ಮೇಲೆ ಹೇಳಿದ ಮೂರೂ ಅಧಿಕಾರಗಳು ಒಂದೇ ವ್ಯಕ್ತಿಯಲ್ಲಿ ಅಥವಾ ವ್ಯಕ್ತಿಸಮುಚ್ಚಯದಲ್ಲಿ ಕೇಂದ್ರೀಕೃತವಾಗಬಾರದೆಂಬ ತತ್ವವು ಮೊಂಟೆಸ್ಕ್ಯೂ ಎಂಬ ಫ್ರೆಂಚ ರಾಜನೈತಿಕ ತತ್ತ್ವಜ್ಞಾನಿಯಿಂದ ಮೊದಲಾಗಿ ಪ್ರತಿಪಾದಿಸಲ್ಪಟ್ಟಿತು.

ಪ್ರಜಾಸತ್ತಾತ್ಮಕ ರಾಜ್ಯಗಳಲ್ಲಿ ಬಹುತರವಾಗಿ ಕೆಲವು ಸ್ಥಿತ್ಯಂತರಗಳೊಂದಿಗೆ ಈ ಮೂರೂ ಅಧಿಕಾರಗಳನ್ನು ಬೇರೆಬೇರೆಯಾಗಿರಿಸುವ ತತ್ವವು ಸ್ವೀಕೃತವಾಗಿದೆ.

ಈ ತ್ರಿವರ್ಗಪ್ರತ್ಯೇಕತೆಯ ಮುಖ್ಯ ಲಕ್ಷಣವೆಂದರೆ ಸಂಸತ್ತು, ವಿಧಾನಸಭೆ ಅಥವಾ ಮಂತ್ರಿಮಂಡಳಗಳು ತಮ್ಮ ಕರ್ತವ್ಯಗಳಾದ ಕಾಯದೆಗಳ ನಿರ್ಮಿತಿ ಹಾಗೂ ಸರಕಾರದ ಧೋರಣೆಯ ರೂಪಣೆ ಇವನ್ನಷ್ಟೇ ಮಾಡಬೇಕಲ್ಲದೆ ಅವುಗಳ ಅಮಲಬಜಾವಣೆ ಮಾಡುವ ಕಾರ್ಯಾಂಗ ಶಾಖೆಗಳ ದೈನಂದಿನ ವ್ಯವಹಾರದಲ್ಲಿ ಹಸ್ತಕ್ಷೇಪ ಮಾಡಬಾರದು. ಅದೇ ಪ್ರಕಾರ ಮೇಲೆ ಹೇಳಿದ ನ್ಯಾಯವಿಧಾಯಕ ಅಂಗವಾಗಲಿ ಕಾರ್ಯಾಂಗವಾಗಲಿ ನ್ಯಾಯಾಂಗದ ಕಾರ್ಯಕಲಾಪಗಳಲ್ಲಿ ಕೈಹಾಕಬಾರದು. ಸರಕಾರದ ಪ್ರತಿಯೊಂದು ಅಂಗವು ಕಾಯದೆ, ನಿಯಮಗಳ ಚೌಕಟ್ಟಿನೊಳಗೆ ತನ್ನ ಕಾರ್ಯಕ್ಷೇತ್ರದಲ್ಲಿ ಸ್ವತಂತ್ರವಿರಬೇಕು. ಮುಖ್ಯವಾಗಿ ನ್ಯಾಯಾಂಗವು ಸ್ವತಂತ್ರವಿರಬೇಕೆಂಬುದು ಪ್ರಜಾಪ್ರಭುತ್ವಗಳು ಪಾಲಿಸಬೇಕಾದ ಮಹತ್ವದ ವಿಷಯ.

## ನ್ಯಾಯಾಂಗದ ಸ್ವತಂತ್ರತೆ

ಪ್ರಜಾಪ್ರಭುತ್ವಗಳಲ್ಲಿ ಸಾರ್ವಭೌಮಾಧಿಕಾರವು ಪ್ರಜೆಗಳ ಕೈಯಲ್ಲೇ ಇರುವಾಗ, ಈ ತ್ರಿವರ್ಗಪ್ರತ್ಯೇಕತೆಯು ಅಥವಾ ನ್ಯಾಯಾಂಗವು ಸ್ವತಂತ್ರವಿರಬೇಕೆಂಬುದರ ಅವಶ್ಯಕತೆಯಾದರೂ ಏನು? ಎಂಬ ಪ್ರಶ್ನೆ ಉದ್ಭವಿಸಬಹುದು. ಚಕ್ರವರ್ತಿ ರಾಜಗೋಪಾಲಾಚಾರ್ಯರು ಮದರಾಸಿನ ಮುಖ್ಯಮಂತ್ರಿ ಇದ್ದಾಗ ನ್ಯಾಯಾಂಗ ಸ್ವತಂತ್ರವಿರಬೇಕೆಂಬ ಕಲ್ಪನೆಯು ಬ್ರಿಟಿಶರ ಆಳ್ವಿಕೆಯಲ್ಲಿ ಪರಕೀಯ ಸತ್ತೆಯ ಪರಿಣಾಮವಾಗಿ ಹುಟ್ಟಿದುದೆಂದೂ ಸ್ವತಂತ್ರ ಹಾಗೂ ಪ್ರಜಾಸತ್ತಾತ್ಮಕ ರಾಷ್ಟ್ರಗಳಲ್ಲಿ ಅದಕ್ಕೆ ಸ್ಥಾನವಿಲ್ಲೆಂದೂ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದರು. ವ್ಯಕ್ತಿ ಸ್ವಾತಂತ್ರ್ಯಕ್ಕೆ ಹೆಚ್ಚಿನ ಮನ್ನಣೆ ಕೊಡದೆ ಎಲ್ಲಾ ಅಧಿಕಾರಗಳನ್ನು ಜನತಾ ಸರಕಾರದಲ್ಲೇ ಕೇಂದ್ರೀಕರಿಸುವ ಕಮ್ಯುನಿಸ್ಟ್ ತತ್ವಪ್ರಣಾಲಿಯಲ್ಲಿಯೂ ನ್ಯಾಯಾಂಗದ ಸ್ವತಂತ್ರತೆಗೆ ಸ್ಥಳವಿಲ್ಲ.

ಪ್ರಾಚೀನ ಗಣರಾಜ್ಯಗಳಲ್ಲಿ ಅವುಗಳ ಸೀಮೆಯು ತೀರ ಚಿಕ್ಕದಿದ್ದುದರಿಂದ ಪ್ರತ್ಯಕ್ಷ ಪ್ರಜಾಪ್ರಭುತ್ವ (Direct Democracy) ಸಾಧ್ಯವಿತ್ತು. ಅಂದರೆ, ಯಾವತ್ತೂ ನಾಗರಿಕರು ಒಂದೆಡೆ ಸೇರಿ ನ್ಯಾಯನಿರ್ಣಯವನ್ನೊಳಗೊಂಡು ಸರಕಾರದ ಎಲ್ಲಾ ಕಾರ್ಯಗಳನ್ನು ಮಾಡುವದು ಸಾಧ್ಯವಿತ್ತು.

ಆದರೆ, ಈಗಿನ ಸರಕಾರಗಳು ಸಮಗ್ರ ದೇಶವ್ಯಾಪಿ ಇರುವಂಥವು. ಪ್ರತ್ಯಕ್ಷ ಪ್ರಜಾಪ್ರಭುತ್ವವು ಇಲ್ಲಿ ಸಾಧ್ಯವಿಲ್ಲ. ಈ ಕಾಲದ ಪ್ರಜಾಪ್ರಭುತ್ವಗಳೆಲ್ಲ ಸಂಸತ್ ಪ್ರಭುತ್ವದ ಮಾದರಿಯವು (Type of Parliamentary Democracy) ಸಂಸತ್ ಪ್ರಭುತ್ವದಲ್ಲಿ ಸಾರ್ವಭೌಮಾಧಿಕಾರವು ತಾತ್ವಿಕವಾಗಿ ಜನತೆಯಲ್ಲಿದ್ದರೂ ವಾಸ್ತವಿಕವಾಗಿ ಜನತೆಯು ಮತಕೊಟ್ಟು ಆರಿಸಿದ ಪ್ರತಿನಿಧಿಗಳ ಸಂಸತ್ತಿನಲ್ಲೇ ಇರುತ್ತದೆ.

## ಸರ್ವಸ್ವತಂತ್ರ ಸಂಸತ್ತು

ಈ ಪರಿಸ್ಥಿತಿಯಲ್ಲಿ ಸಂಸತ್ತು ಸರ್ವತಂತ್ರ ಸ್ವತಂತ್ರವಿರುವದರಿಂದ ಹಾಗೂ ಸಂಸತ್ತಿನಂತಹ ಪ್ರಾತಿನಿಧಿಕ ಸಭೆಯ ನಿರ್ಣಯಗಳು ಅದರೊಳಗಿನ ಬಹುಮತದ ಮೇಲೆಯೇ ಆಧರಿಸಿರುವದರಿಂದ ಪ್ರಜಾಪ್ರಭುತ್ವವು ಬಹುಮತದ ನಿರಂಕುಶ ಪ್ರಭುತ್ವವಾಗುವ ಸಂಭವ ತಪ್ಪಿದ್ದಲ್ಲ. ಯಾಕಂದರೆ ಬಹುಮತ ಪಕ್ಷವು ತಮ್ಮ ಅಧಿಕಾರವನ್ನು ಇತರರನ್ನು ಪೀಡಿಸುವದಕ್ಕೆ ಅಥವಾ ಅವರ ಹಕ್ಕುಗಳನ್ನು ಕಸಿದುಕೊಳ್ಳುವದಕ್ಕೆ ಉಪಯೋಗಿಸಬಹುದು ಅಥವಾ ಉದ್ದೇಶವು ಉದಾತ್ತವಿದ್ದರೂ ತಮ್ಮಲ್ಲಿರುವ ಭ್ರಾಮಕ ಕಲ್ಪನೆಗಳಿಂದಾಗಿ ಜನತೆಗೆ ಅನ್ಯಾಯವಾಗುವ ಇಲ್ಲವೆ ಸಂಕಷ್ಟಕ್ಕೆ ಗುರಿಮಾಡುವ ಕಾಯದೆಗಳನ್ನು ಮಾಡಬಹುದು.

ಪ್ರಜಾಪ್ರಭುತ್ವದ ಹೆಸರಿನಲ್ಲಿ ದಬ್ಬಾಳಿಕೆ ನಡೆದಾಗ, ಕ್ರಾಂತಿಯಲ್ಲದೆ ಬೇರೆ ನಿವಾರಣೋಪಾಯವಿರಲಿಲ್ಲ. ಅಮೇರಿಕದ ಸಂಯುಕ್ತ ರಾಷ್ಟ್ರಗಳ ಅಧ್ಯಕ್ಷನಾಗಿದ್ದ ಥಾಮಸ್ ಜೆಫರಸನನು ಸರಕಾರವನ್ನು ಸರಿ ದಾರಿಗೆ ತರಲು ಒಂದು ತಲೆಮಾರಿನಲ್ಲಿ ಒಂದು ಕ್ರಾಂತಿಯಾದರೂ ಅಗತ್ಯವೆಂದು ಅಭಿಪ್ರಾಯ ವ್ಯಕ್ತಮಾಡಿದ್ದನು.

ಇಂಗ್ಲಂಡಿನಲ್ಲಿ ಪರಸ್ಪರ ತೀಕ್ಷ್ಣ ವಿರೋಧವಿರುವ ರಾಜಕೀಯ ಪಕ್ಷಗಳಿದ್ದರೂ ಅಲ್ಲಿನ ರಾಜಕಾರಣಿಗಳ ಸದಸದ್ವಿವೇಕ ಬುದ್ಧಿ ಹಾಗೂ ಜನತೆಯ ಪರಂಪರಾಗತ ರಾಜಕೀಯ ಜಾಗ್ರತಿ ಇವುಗಳಿಂದಾಗಿ ಪ್ರಜಾಪ್ರಭುತ್ವವು ದಬ್ಬಾಳಿಕೆಯ ದಾರಿಗೆ ಎಂದೂ ತಿರುಗಿಲ್ಲ. ಅವುಗಳ ಅಭಾವವಿದ್ದ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ರೂಪದ ರಾಜ್ಯಘಟನೆ ಇದ್ದರೂ ದಬ್ಬಾಳಿಕೆಯ ಫಲವಾಗಿ ಆಗಾಗ ಕ್ರಾಂತಿಗಳೇಳುವದನ್ನು ಕಾಣಬಹುದು.

## ಮೂಲಭೂತ ಹಕ್ಕುಗಳು

ಇದನ್ನು ತಪ್ಪಿಸುವ ಒಂದು ಸಾಧನವೆಂದರೆ ರಾಜ್ಯಘಟನೆಯಲ್ಲಿ ಜನತೆಗೆ ಕೆಲವು ಮೂಲಭೂತ ಹಕ್ಕುಗಳನ್ನು ಕೊಡುವದು.

ಮೂಲಭೂತ ಹಕ್ಕುಗಳ ವ್ಯಾಖ್ಯೆಯನ್ನು ಪ್ರಸಿದ್ಧ ಬ್ರಿಟಿಶ ರಾಜಕೀಯ ತತ್ವಜ್ಞಾನಿ ಹೆರಾಲ್ಡ ಲಾಸ್ಕಿಯು State in Theory and Practice ಎಂಬ ಪುಸ್ತಕದಲ್ಲಿ ಸುಂದರವಾಗಿ ವರ್ಣಿಸಿದ್ದಾನೆ. ಮನುಷ್ಯರಿಗೆ ಕೆಲವು ಮೂಲಭೂತ ಹಾಗೂ ನೈಸರ್ಗಿಕ ಹಕ್ಕುಗಳಿವೆ. ಅವುಗಳ ನಿರಾಕರಣೆಯು ಯಾವದೇ ಸರಕಾರದ ನ್ಯಾಯ್ಯವಾದ ಅಧಿಕಾರಕ್ಷೇತ್ರವನ್ನು ಮೀರಿದುದು. ಅಂತಹ ಹಕ್ಕುಗಳೆಂದರೆ ಯಾವುಗಳಿಲ್ಲದೆ ಸುಖದ ಪ್ರಾಪ್ತಿಯು ಅಸಾಧ್ಯವೊ ಅಂತಹ ಆಚರಣೆಗಳು. ಅವುಗಳ ತಿರುಳು ಹಾಗೂ ಮಹತ್ವ ಕಾಲದೇಶಕ್ಕನುಸರಿಸಿ ಬದಲಾಗಬಹುದು. 'ಆದರೆ ಅವುಗಳ ರಚನೆಯು ಎರಡು ಮೂಲತತ್ವಗಳ ಮೇಲೆ ಆಧರಿಸಿರುತ್ತದೆ. ಅವೆಂದರೆ ಮೊದಲನೇದು ಅನಿರ್ಬಂಧ ಅಧಿಕಾರವು. ಅದನ್ನು ನಡೆಸುವವರಿಗೂ ಯಾರ ಮೇಲೆ ಅದು ನಡೆಸಲಾಗುತ್ತದೊ ಅವರಿಗೂ ಅಹಿತಕಾರಿಯು. ಎರಡನೇದಾಗಿ ಸಾಧಾರಣ ಪರಿಸ್ಥಿತಿಯು ಮಟ್ಟಿಗಾದರೂ ಸಮಾಜದಲ್ಲಿ ಸಾರ್ವಭೌಮಾಧಿಕಾರವುಳ್ಳ ಸಂಸ್ಥೆಯು ಅಧಿಕಾರದ ಮೇಲೆ ಕೆಲವು ಚಟುವಟಿಕೆಗಳನ್ನು ಹಾಗೂ ಕಾರ್ಯವಿಧಾನಗಳನ್ನು ಪ್ರತಿಬಂಧಿಸುವ ನಿಯಂತ್ರಣವನ್ನು ಹಾಕತಕ್ಕದ್ದು.

ಅರ್ವಾಚೀನ ಕಾಲದಲ್ಲಿ ಎಲ್ಲಿ ರಾಜ್ಯಘಟನೆಯ ಸಂವಿಧಾನವು ಲೇಖನ ರೂಪದಲ್ಲಿರುವದೊ (ಉದಾ:— ಅಮೇರಿಕದ ಸಂಯುಕ್ತ ರಾಷ್ಟ್ರ, ಸ್ವಿಝರಲ್ಯಾಂಡ ಇತ್ಯಾದಿ) ಅಲ್ಲೆಲ್ಲಾ ನಾಗರಿಕರ ಮೂಲಭೂತ ಹಕ್ಕುಗಳನ್ನು ನಮೂದಿಸಲಾಗಿದೆ. ಭಾರತದ ಸಂವಿಧಾನದ ಪ್ರಕಾರ ಹದಿನೇಳು ಮೂಲಭೂತ ಹಕ್ಕುಗಳನ್ನು ನಾಗರಿಕರಿಗೆ ಕೊಡಲಾಗಿದೆ. ಹಾಗೂ ಸಂವಿಧಾನದ ೧೩ ನೇ ನಿಯಮದಲ್ಲಿ ಈ ಮೂಲಭೂತ ಹಕ್ಕುಗಳಿಗೆ ವಿಸಂಗತವಾಗಿರುವ ಯಾವತ್ತೂ ಕಾಯದೆ ನಿಯಮ ಹಾಗೂ ಹುಕುಮುಗಳು ಶೂನ್ಯವೆಂದು ಸ್ಪಷ್ಟವಾಗಿ ಹೇಳಲಾಗಿದೆ.

ಸಂವಿಧಾನದಲ್ಲಿನ ಈ ವ್ಯವಸ್ಥೆಯಿಂದಾಗಿ ಯಾವದೇ ಪಕ್ಷದ ಸರಕಾರ ಅಸ್ತಿತ್ವದಲ್ಲಿ ಬಂದರೂ ಈ ರಾಜ್ಯಘಟನೆಯು ಊರ್ಜಿತವಿರುವವರೆಗೆ ಈ ಮೂಲಭೂತ ಹಕ್ಕುಗಳನ್ನು ನಿರಾಕರಿಸಲು ಅಥವಾ ಅಪಹರಿಸಲು ಸಾಧ್ಯವಿಲ್ಲ.

ಆದರೆ, ಸರಕಾರವು ಈ ಮೂಲಭೂತ ಹಕ್ಕುಗಳನ್ನು ಮೂಲೆಗೊತ್ತಿದರೆ ಅದಕ್ಕೆ ನಿವಾರಣೋಪಾಯ ಯಾವದು ?

### ಹಕ್ಕನ್ನುಲ್ಲಂಘಿಸಿದರೆ ನಿವಾರಣೋಪಾಯ

ಅದಕ್ಕೆ ನಿವಾರಣೋಪಾಯವೆಂದೇ ಅರ್ವಾಚೀನ ಪ್ರಜಾಪ್ರಭುತ್ವಗಳಲ್ಲಿ ನ್ಯಾಯಾಲಯಗಳಿಗೆ ಮೂಲಭೂತ ಹಕ್ಕುಗಳ ಸಂಬಂಧದಲ್ಲಿ ಕೊಟ್ಟಿರುವ ಅಧಿಕಾರಗಳು ಸಂಸತ್ತಾಗಲಿ, ಪ್ರಾಂತಿಕ ವಿಧಾನಸಭೆಗಳಾಗಲಿ ಪಾಸು ಮಾಡಿದ ಯಾವದೇ ಕಾಯದೆ ಅಥವಾ ಸರಕಾರವಾಗಲಿ ಇತರ ಸರಕಾರಿ ಅಧಿಕಾರಿಗಳಾಗಲಿ ಹೊರಡಿಸಿದ ಯಾವದೇ ಹುಕುಮು ಮೂಲಭೂತ ಹಕ್ಕುಗಳಿಗೆ ವಿಸಂಗತವಿದ್ದರೆ ಅಥವಾ ಅವುಗಳಿಂದ ನಾಗರಿಕರ ಮೂಲಭೂತ ಹಕ್ಕುಗಳಿಗೆ ಚ್ಯುತಿ ಬರುವದಾದರೆ ಹಾಗೆ ನಿರ್ಣಯ ಕೊಡುವ ಹಾಗೂ ಅಂತಹ ಕಾಯದೆ ಅಥವಾ ಹುಕುಮುಗಳು ಶೂನ್ಯವೆಂದು ನಿರ್ಣಯ ಕೊಡುವ ಅಧಿಕಾರವನ್ನು ವರಿಷ್ಠ ನ್ಯಾಯಾಲಯಗಳಿಗೆ ಕೊಡಲಾಗಿದೆ.

ಭಾರತದ ಸಂವಿಧಾನದಲ್ಲಿ ಈ ಅಧಿಕಾರವನ್ನು ಸುಪ್ರೀಮ ಕೋರ್ಟಗೂ ಪ್ರಾಂತಗಳಲ್ಲಿನ ಹೈಕೋರ್ಟುಗಳಿಗೂ ಕೊಡಲಾಗಿದೆ. ಯಾವದೇ ಕಾಯದೆ ಅಥವಾ ಹುಕುಮಿನಿಂದ ತನ್ನ ಮೂಲಭೂತ ಹಕ್ಕುಗಳಿಗೆ ಚ್ಯುತಿ ಬರುತ್ತದೆಂದು ಯಾರಿಗಾದರೂ ತೋರಿದರೆ ಹೈಕೋರ್ಟಗಾಗಲಿ, ಸುಪ್ರೀಮ ಕೋರ್ಟಗಾಗಲಿ ಅರ್ಜಿ ಸಲ್ಲಿಸಿ ಆ ಸಂಬಂಧದಲ್ಲಿ ನಿರ್ಣಯ ಪಡೆಯುವ ಹಕ್ಕನು ಸಂವಿಧಾನವು ಎಲ್ಲಾ ನಾಗರಿಕರಿಗೆ ದಯಪಾಲಿಸಿರುತ್ತದೆ.

### ನ್ಯಾಯಾಲಯಗಳ ಕಾರ್ಯ

ನಮ್ಮ ಪ್ರಜಾರಾಜ್ಯ ಘಟನೆಯು ಅಮಲಿನಲ್ಲಿ ಬಂದು ಆರೇಳು ವರ್ಷಗಳು ಮಾತ್ರವೇ ಆದರೂ ಈ ಅಲ್ಪಾವಧಿಯಲ್ಲೇ ಕೆಲವು ಕಾಯದೆಗಳೂ ಹುಕುಮುಗ ಬೇಕಾಯದೇಶೀರ ಹಾಗೂ

ಕೂಡನೆಂದು ನ್ಯಾಯಾಲಯುಗಳು ನಿರ್ಣಯ ಕೊಡುವ ಸಂದರ್ಭಗಳು ಒದಗಿವೆ. ಮೆಡಿಕಲ್ ಕಾಲೇಜುಗಳಲ್ಲಿ ಬ್ರಾಹ್ಮಣರಿಗೆ ಅದರಲ್ಲಿ ನಿರ್ದಿಷ್ಟ ಪಡಿಸಿದ್ದಕ್ಕಿಂತ ಹೆಚ್ಚಿನ ಸ್ಥಳಗಳನ್ನು ಕೊಡಬಾರದೆಂಬ ಮದರಾಸ ಸರಕಾರದ ಹುಕುಮು (ಕುಪ್ರಸಿದ್ಧ ಕಮ್ಯುನಲ್ ಜಿ. ಓ.) ಸಹಾಯ ಪಡೆಯುವ ಇಲ್ಲವೆ ನಡೆಸಲ್ಪಡುವ ವಿದ್ಯಾಸಂಸ್ಥೆಗಳಲ್ಲಿ ಧರ್ಮ, ಕುಲ, ಜಾತಿ, ಭಾಷೆಗಳ ಕಾರಣದಿಂದ ಪ್ರವೇಶ ನಿರಾಕರಿಸಬಾರದೆಂಬ ಮೂಲಭೂತ ಹಕ್ಕಿಗೆ ವಿಸಂಗತವಾದುದರಿಂದ ಬೇಕಾಯದೇಶೀರವೆಂದು ಸುಪ್ರೀಮ ಕೋರ್ಟಿನವರು ವಿದ್ಯಾರ್ಥಿನಿಯೊಬ್ಬಳು ಸಲ್ಲಿಸಿದ ಅರ್ಜಿಯಲ್ಲಿ ತೀರ್ಪು ಕೊಟ್ಟಿದ್ದಾರೆ. (ಚಂಪಕಂ ದೊರೆರಾಜನ್ ವಿರುದ್ಧ ಮದರಾಸ ಸರಕಾರ) ಅದರಂತೆ ಬ್ರಿಟಿಷರ ಆಳಿಕೆಯಲ್ಲಿ ಕುಪ್ರಸಿದ್ಧಿ ಪಡೆದಿದ್ದ ರಾಜದ್ರೋಹದ ಕಲಮು (ಪಿನಲ್ ಕೋಡಿನ ೧೨೪—ಅ ಕಲಮು) ಸಂವಿಧಾನದ ೧೯ನೇ ನಿಯಮಕ್ಕೆ (ವಾಕ್‌ಸ್ವಾತಂತ್ರ್ಯ ಹಾಗೂ ಉಚ್ಚಾರ ಸ್ವಾತಂತ್ರ್ಯ ವಿಸಂಗತವಾದುದರಿಂದ ಅದು ಬೇಕಾಯದೇಶೀರ ಎಂಬ ನಿರ್ಣಯವನ್ನು ಸುಪ್ರೀಮ ಕೋರ್ಟು ಕೊಟ್ಟಿದೆ. (ರಮೇಶ ಥಾಪರ ವಿರುದ್ಧ ಮದರಾಸ ಸರಕಾರ)

ಹೊಟೆಲ ನಡೆಸಲು ಲೈಸನ್ಸನ್ನು ಯಾವದೇ ಕಾರಣವಿಲ್ಲದೆ ನಿರಾಕರಿಸಿದ ಜಿಲ್ಲಾ ಮ್ಯಾಜಿಸ್ಟ್ರೇಟರ ಹುಕುಮನ್ನು ತನಗೆ ಇಷ್ಟವಿದ್ದ ನ್ಯಾಯವಾದ ಯಾವದೇ ಉದ್ಯೋಗವನ್ನು ಕೈಕೊಳ್ಳಬಹುದೆಂಬ ಮೂಲಭೂತ ಹಕ್ಕಿಗೆ ವಿಸಂಗತವೆಂಬ ಕಾರಣದಿಂದ ಮುಂಬಯಿ ಹೈಕೋರ್ಟಿನವರು ಸುರತದ ಜಿಲ್ಹಾ ಮ್ಯಾಜಿಸ್ಟ್ರೇಟರ ಹುಕುಮನ್ನು ರದ್ದು ಮಾಡಿದ್ದಾರೆ.

## ನ್ಯಾಯಾಲಯಗಳ ಮಹತ್ವ

ಪ್ರಜಾಪ್ರಭುತ್ವದಲ್ಲಿ ನ್ಯಾಯಾಲಯುಗಳಿಗಿರುವ ಮಹತ್ವದ ಸ್ಥಾನ. ಇದುವೇ ಪಕ್ಷದ ರಾಜಕಾರಣ ಅಥವಾ ಜಾತೀಯತೆಯಿಂದ ಪ್ರೇರಿತರಾಗಿ ಅಥವಾ ಬಹುಜನ ಸಮಾಜದ ಹಿತವನ್ನೇ ಮಾಡುತ್ತೇವೆಂಬ ಪ್ರಮಾದಯುಕ್ತ ಅಭಿಪ್ರಾಯದಿಂದ ಮಂತ್ರಿಮಂಡಳವಾಗಲಿ ಸರಕಾರಿ ಅಧಿಕಾರಿಗಳಾಗಲಿ ಪ್ರಜೆಗಳ ಮೂಲಭೂತ ಹಕ್ಕುಗಳನ್ನು ನಷ್ಟಗೊಳಿಸುವ ಕಾಯುದೆ ಅಥವಾ ಹುಕುಮುಗಳ ಅಮಲಬಜಾವಣೆಯನ್ನು ತಡೆಹಿಡಿದು ಇವರು ಪ್ರಜಾಪ್ರಭುತ್ವದ ನೇರ ಹಾದಿಯನ್ನು ಬಿಟ್ಟು ಅಡ್ಡಹಾದಿಗೆ ಹಾಯದಂತೆ ಪ್ರತಿಬಂಧ ಮಾಡುವ ಗುರುತರ ಹೊಣೆಯು ನ್ಯಾಯಾಲಯುಗಳ ಮೇಲೆ ಇರುತ್ತದೆ. ಅಮೇರಿಕದ ಮಾಜಿ ಅಧ್ಯಕ್ಷ ವುಡ್ರೋ ವಿಲ್ಸನರ ಮಾತಿನಲ್ಲಿ ಹೇಳುವದಾದರೆ "ನ್ಯಾಯಾಲಯುಗಳು ಸಂವಿಧಾನದ ತೋಲಚಕ್ರಗಳು." ಸರಕಾರ ಸುಗಮವಾಗಿ ಸಾಗಬೇಕಾದರೆ ಅದರ ವಿವಿಧ ವಿಭಾಗಗಳಲ್ಲಿ ಹಾಗೂ ಕಾರ್ಯಗಳಲ್ಲಿ ಸಮತೋಲವಿರಬೇಕು. ಅಂತಹ ತೋಲ ತಪ್ಪದಂತೆ ಮಾಡುವ ಕಾರ್ಯವು ನ್ಯಾಯಾಲಯುಗಳದ್ದು. ಮೊನ್ನೆ ದಿಲ್ಲಿಯಲ್ಲಿ ಸುಪ್ರೀಮ ಕೋರ್ಟಿನ ಹೊಸ ಕಟ್ಟಡವನ್ನು ಉದ್ಘಾಟಿಸುವಾಗ ನಮ್ಮ ರಾಷ್ಟ್ರಪತಿಗಳು ಅಪ್ಪಣೆ ಕೊಡಿಸಿದಂತೆ "ರಾಜಕಾರಣದಲ್ಲಿ ವಿವಿಧ ರಾಜಕೀಯ ಪಕ್ಷಗಳ ಹಾಗೂ ಧ್ಯೇಯಗಳ ಹೊಯ್ದಾಟದಲ್ಲಿ ಸ್ಥಿರವಾದ ಒಂದು ಘಟಕವೆಂದರೆ ನ್ಯಾಯಾಲಯುಗಳು."

ಮೇಲೆ ಹೇಳಿದಂತೆ ಪ್ರಜಾಪ್ರಭುತ್ವದಲ್ಲಿ ನ್ಯಾಯಾಲಯುಗಳಿಗೆ ಮಹತ್ವದ ಸ್ಥಾನವಿದ್ದರೂ ಅವುಗಳ ಅಧಿಕಾರದ ಮರ್ಯಾದೆಯನ್ನು ಮರೆಯಲಾಗದು. ಅಧೀನ ನ್ಯಾಯಾಲಯುಗಳ ನಿರ್ಣಯವನ್ನು ರದ್ದುಗೊಳಿಸುವ ಸಂಪೂರ್ಣ ಅಧಿಕಾರವು ಅಪೀಲ ನ್ಯಾಯಾಲಯುಗಳಿಗಿರುವಂತೆ ಸರಕಾರದವರು ಮಾಡಿದ ಪ್ರತಿಯೊಂದು ಕಾಯದೆ ಇಲ್ಲವೆ ಹುಕುಮನ್ನು ರದ್ದುಮಾಡುವ ಸರ್ವತಂತ್ರ ಅಧಿಕಾರ ನ್ಯಾಯಾಲಯುಗಳಿಗಿಲ್ಲ.

ಸರಕಾರವನ್ನು ನಡೆಸುವ ಸಂಪೂರ್ಣ ಹೊಣೆ ಸಂಸತ್ತಿನದು, ಹಾಗೂ ಅದರ ಪ್ರತಿನಿಧಿಯಾದ ಮಂತ್ರಿಮಂಡಲದ್ದು. ಅದನ್ನು ಸಂಪೂರ್ಣವಾಗಿ ನ್ಯಾಯಾಲಯುಗಳ ಅಧಿಕಾರಕ್ಕೆ ಒಳಪಡಿಸಿದರೆ ಪ್ರಾತಿನಿಧಿಕ ಸರಕಾರದ ಬದಲಿಗೆ ನ್ಯಾಯಾಲಯುಗಳ ಸರ್ವಾಧಿಕಾರವನ್ನು ಸ್ಥಾಪಿಸಿದಂತಾಗುವದು. ಇದು ಸರ್ವಥಾ ಸಮಂಜಸವಾಗಲಾರದು. ಸರಕಾರದ ಇತರ ಅಂಗಗಳು ಕಾಯದೆ ಮೀರಿ ವರ್ತಿಸದಂತೆ ನೋಡಿಕೊಳ್ಳುವ ಕೆಲಸವನ್ನಷ್ಟೇ ಕೋರ್ಟುಗಳು ಮಾಡತಕ್ಕದ್ದು.

ಭಾರತದ ಸುಪ್ರೀಮ ಕೋರ್ಟಿನ ಪ್ರಥಮ ಮುಖ್ಯ ನ್ಯಾಯಾಧೀಶರಾದ ನ್ಯಾಯಮೂರ್ತಿ ಕಾಣಿಯಾ ಇವರ ಮಾತಿನಲ್ಲಿ ಹೇಳುವದಾದರೆ "ಬಹುಮತ ಪಕ್ಷದ ತಾತ್ಪೂರ್ತಿಕ ಅಧಿಕಾರವನ್ನು ಹಾಗೂ ನ್ಯಾಯವಿಧಾಯಕ ಅಧಿಕಾರವನ್ನು ರಾಷ್ಟ್ರದ ಸಾವಧಾನ ಹಾಗೂ ವಿಚಾರಯುಕ್ತ ವಿವೇಕದಿಂದ ನಿರ್ಧರಿಸಲಾದ ಶಾಶ್ವತ ಹಾಗೂ ಸಾರ್ವಭೌಮಾಧಿಕಾರವುಳ್ಳ ಕಾಯದೆಯಿಂದ ನಿಯಂತ್ರಿಸುವ ನಿರ್ದಿಷ್ಟ ವ್ಯವಸ್ಥೆಯು ಸಂವಿಧಾನ

ದಲ್ಲಿ ಇದ್ದ ಸಂದರ್ಭದಲ್ಲಿ ಮಾತ್ರ ಯಾವದೇ ಕಾಯದೆಯು ಶೂನ್ಯವೆಂದು ನಿರ್ಧರಿಸುವ ನ್ಯಾಯಾಲಯಗಳ ಅಧಿಕಾರಕ್ಕೆ ಸುರಕ್ಷಿತ ಹಾಗೂ ಸ್ಥಿರವಾದ ಆಧಾರವನ್ನು ಕಾಣಬಹುದು.''

ಭಾರತದ ಸಂವಿಧಾನವು ರಾಷ್ಟ್ರದ ಎಲ್ಲಾ ಪಕ್ಷಗಳ ಪ್ರಮುಖರ, ರಾಜಕಾರಣಿಗಳ ಹಾಗೂ ಮೇಧಾವಿಗಳ ಸಂಯುಕ್ತ ವಿಚಾರಗಳ ಫಲ. ಅರ್ಥಾತ್ ಅದಕ್ಕೆ ರಾಷ್ಟ್ರದ ಶಾಶ್ವತ ವಿವೇಕದ ಫಲವೆನ್ನಬಹುದು. ರಾಜಕೀಯ ಪಕ್ಷಗಳ ಬಹುಮತ ಅಭಿಪ್ರಾಯವು ಶಾಶ್ವತವಲ್ಲ. ಅದು ನಾಳೆ ಬದಲಾಗಬಹುದು. ಆ ಕಾರಣದಿಂದ ಅದರ ಮಹತ್ವವು ಮರ್ಯಾದಿತವೇ ಸರಿ. ರಾಜ್ಯಘಟನೆಯಲ್ಲಿ ಅದಕ್ಕೆ ಹಾಕಿದ ನಿಯಂತ್ರಣಗಳು ಶಿಥಿಲವಾಗದಂತೆ ನೋಡುವದು ನ್ಯಾಯಾಲಯಗಳ ಕಾರ್ಯ.

ಪ್ರಜಾಪ್ರಭುತ್ವಗಳಲ್ಲಿ ಮೂಲಭೂತ ಹಕ್ಕುಗಳ ಉಲ್ಲಂಘನೆಯ ಪ್ರತಿಬಂಧವೊಂದೇ ನ್ಯಾಯಾಲಯಗಳ ಕಾರ್ಯವಲ್ಲ. ವೆಬಸ್ಟರನ ಮಾತಿನಲ್ಲಿ ಹೇಳುವದಾದರೆ ಜಟಲವಾದ ನಮ್ಮ ರಾಜ್ಯಪದ್ಧತಿಯಲ್ಲಿ ನ್ಯಾಯವಿಧಾಯಕ, ಕಾರ್ಯಾಂಗ ಹಾಗೂ ನ್ಯಾಯಾಂಗಗಳ ಮೇಲಿರುವ ಹಲವು ಪ್ರತಿಬಂಧ ಹಾಗೂ ನಿರ್ಬಂಧಗಳು ಸ್ವಾತಂತ್ರ್ಯ ಹಾಗೂ ನ್ಯಾಯದ ಬೆಳವಣಿಗೆಗೆ ಅನುಕೂಲವಾಗಿವೆ. ಈ ನಿರ್ಬಂಧ ಹಾಗೂ ಪ್ರತಿಬಂಧಗಳು ವೈಯಕ್ತಿಕ ಹಕ್ಕು ಹಾಗೂ ಹಿತಸಂಬಂಧಗಳ ಸುತ್ತಲೂ ನಿರ್ಮಿಸಿರುವ ರಕ್ಷಣೋಪಾಯಗಳು.

ಪ್ರಜಾಪ್ರಭುತ್ವವೆಂದರೆ ಸ್ವೇಚ್ಛಾಚಾರವಲ್ಲ. ಅಮೇರಿಕನ್ ಲೇಖಕ ಕೊರ್‌ವಿನ್ ಅಂದ ಹಾಗೆ "ನಮಗೆ ಬೇಕಾದಂತೆ ಕೈಬೀಸುವ ಹಕ್ಕಿದ್ದರೂ ಇನ್ನೊಬ್ಬರ ಮೂಗಿಗೆ ತಾಗದಂತೆ ಅದನ್ನು ನಿಯಂತ್ರಿಸಬೇಕು''. ಸ್ವಾತಂತ್ರ್ಯವು ಅನಿಯಂತ್ರಿತವಾದರೆ ಅದು ಅರಾಜಕತೆಯಲ್ಲಿ ಪರಿಣಮಿಸುತ್ತದೆ. ಅದ್ದರಿಂದ, ಪ್ರಜಾಪ್ರಭುತ್ವವು ಯಶಸ್ವಿಯಾಗಬೇಕಾದರೆ, ಪ್ರಜೆಗಳೂ ಸರಕಾರವೂ ತಮ್ಮ ಮೇರೆಗಳನ್ನು ಮೀರಬಾರದು. ನಿಜವಾದ ಪ್ರಜಾಪ್ರಭುತ್ವಕ್ಕೆ ಕಾಯದೆಯೇ ತಳಹದಿ, ಹಾಗೂ ಕಾಯದೆಯು ಎಲ್ಲರನ್ನೂ ಸಮಾನದೃಷ್ಟಿಯಿಂದ ನೋಡುತ್ತದೆ.

ನಿಜವಾದ ಪ್ರಜಾಪ್ರಭುತ್ವದಲ್ಲಿ ಸರಕಾರವಾಗಲಿ ಯಾವನೇ ಸರಕಾರಿ ಅಧಿಕಾರಿಯಾಗಲಿ ಕಾಯದೆಯನ್ನು ಮೀರಿ ನಡೆದರೆ ಅದರಿಂದ ಯಾರಿಗಾದರೂ ಆಗುವ ದುಷ್ಪರಿಣಾಮಗಳ ಸಂಬಂಧದಲ್ಲಿ ಅವರು ಹೊಣೆಗಾರರಿರುತ್ತಾರೆ. ಹಾಗೂ ಆ ಪರಿಸ್ಥಿತಿಯಲ್ಲಿ ಇತರ ನಾಗರಿಕರ ಮೇಲೆ ದಾವೆಮಾಡುವಂತೆ ಅವರ ಮೇಲೂ ದಾವೆ ಮಾಡುವ ಅಧಿಕಾರ ಪ್ರಜೆಗಳಿಗೆ ಇದೆ. ಇದು ಬ್ರಿಟಿಶ ರಾಜ್ಯಪದ್ಧತಿಯ ಒಂದು ಅನುಕರಣೀಯ ವೈಶಿಷ್ಟ್ಯ.

ಬ್ರಿಟಿಶರ ಈ ರಾಜಕೀಯ ತತ್ವವನ್ನು ಭಾರತದ ಸಂವಿಧಾನವೂ ಸ್ವೀಕರಿಸಿದೆ. ಇಂಗ್ಲಂಡಿನಲ್ಲಿರುವಂತೆ ಭಾರತದಲ್ಲಿಯೂ ಘಟನೆಯ ಪ್ರಕಾರ ಕಾಯದೆಯ ಸಾರ್ವಭೌಮತ್ವವು ಮಾನ್ಯವಾಗಿದೆ. ಸರಕಾರವನ್ನು ಸಹ ಸಾಮಾನ್ಯ ನ್ಯಾಯಾಲಯಗಳಲ್ಲಿ ವಾದಿ ಅಥವಾ ಪ್ರತಿವಾದಿಯನ್ನಾಗಿ ನಿಲ್ಲಿಸಬಹುದು.

ಈ ಪ್ರಕಾರ ಸರಕಾರ ಹಾಗೂ ಪ್ರಜೆಗಳೊಳಗೆ ನಿರ್ಭಯ ಹಾಗೂ ನಿಷ್ಪಕ್ಷಪಾತವಾಗಿ ನ್ಯಾಯನಿರ್ಣಯ ಕೊಡಬೇಕಾದರೆ ನ್ಯಾಯಾಧೀಶರು ಸ್ವತಂತ್ರರಿರಬೇಕು. ಅಂದರೆ ಸರಕಾರದ ಹಂಗಿನೊಳಗೆ ಇರಬಾರದು. ನ್ಯಾಯಾಧೀಶರು ಸಂಪೂರ್ಣವಾಗಿ ಸರಕಾರದ ಅಧೀನವಿದ್ದರೆ ಹಾಗೂ ಅವರ ಬಡತಿ, ಭವಿತವ್ಯಗಳು ಕೇವಲ ಸರಕಾರದ ಮರ್ಜಿಯನ್ನೇ ಅವಲಂಬಿಸಿದ್ದರೆ, ಅವರು ಸರಕಾರದ ಕಡೆಗೆ ಪಕ್ಷಪಾತ ತೋರಿಸುವದು ಸ್ವಭಾವಸಹಜವಿದೆ. ಹಾಗೂ ಆ ಪರಿಸ್ಥಿತಿಯಲ್ಲಿ ನ್ಯಾಯಾಲಯಗಳು ತಮ್ಮ ಕರ್ತವ್ಯದ ಹೊಣೆಯನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಲಾರವು.

ನ್ಯಾಯಾಂಗದ ಸ್ವಾತಂತ್ರ್ಯ ಇದು ಪ್ರಜಾಪ್ರಭುತ್ವಗಳಲ್ಲಿ ಸಾಧಾರಣವಾಗಿ ಸರ್ವಸಾಮಾನ್ಯವಾದ ತತ್ವ. ಈ ತತ್ವವು ಆಚರಣೆಯಲ್ಲಿರುವ ರಾಷ್ಟ್ರಗಳಲ್ಲಿ ನ್ಯಾಯಾಧೀಶರು ಇತರ ಸರಕಾರಿ ನೌಕರರಂತೆ ನೇರವಾಗಿ ಸರಕಾರದ ಅಧೀನವಿರುವದಿಲ್ಲ. ಬ್ರಿಟಿಶರ ಆಳಿಕೆಯಲ್ಲಿ ನ್ಯಾಯಾಂಗದ ವರಿಷ್ಠ ಅಧಿಕಾರಿಗಳು ಸರಕಾರದ ಅಧೀನವಿಲ್ಲದಿದ್ದರೂ ಮ್ಯಾಜಿಸ್ಟ್ರೇಟರು ಕಂದಾಯ ಖಾತೆಗೆ ಸೇರಿದವರಿದ್ದರು. ಹಾಗಾಗಿ ವಿಶೇಷವಾಗಿ ರಾಜಕಾರಣದ ಸಂಬಂಧವಿದ್ದ ಫೌಜದಾರಿ ಖಟ್ಲೆಗಳಲ್ಲಿ ನ್ಯಾಯಕ್ಕೆ ವಿರುದ್ಧವಾದ ಹಾಗೂ ಸರಕಾರಕ್ಕೆ ಬೇಕಾದಂಥ ಶಿಕ್ಷೆಯನ್ನು ಕೊಡಲೇಬೇಕಾದ ನಿರ್ಬಂಧಪರ ಅವಶ್ಯಕತೆಯು ಹಲವು ಸಾರೆ ಮ್ಯಾಜಿಸ್ಟ್ರೇಟರ ಪಾಲಿಗೆ ಬರುತ್ತಿತ್ತು.

### ಕಾರ್ಯಾಂಗ-ನ್ಯಾಯಾಂಗ ಪ್ರತ್ಯೇಕತೆ

ನ್ಯಾಯಾಂಗವನ್ನು ಕಾರ್ಯಾಂಗದಿಂದ ಬೇರ್ಪಡಿಸಬೇಕೆಂಬುದು ಭಾರತ ಸಂವಿಧಾನದ ಆದೇಶ ತತ್ವಗಳಲ್ಲೊಂದು. ಅದನ್ನನುಸರಿಸಿ ಬಹುತೇಕ ಎಲ್ಲ ಪ್ರಾಂತಗಳಲ್ಲಿ ನ್ಯಾಯಾಂಗವನ್ನು ಕಾರ್ಯಾಂಗದಿಂದ ಪ್ರತ್ಯೇಕಿಸಿ ಎಲ್ಲ ನ್ಯಾಯಾಧೀಶರನ್ನು ಹೈಕೋರ್ಟುಗಳ ಅಧೀನವಿರಿಸಿರುತ್ತದೆ.

ಹೈಕೋರ್ಟಿನ ಹಾಗೂ ಸುಪ್ರೀಮ ಕೋರ್ಟಿನ ನ್ಯಾಯಾಧೀಶರನ್ನು ನೇರವಾಗಿ ರಾಷ್ಟ್ರಪತಿಗಳೇ ನೇಮಿಸುತ್ತಾರೆ. ಪ್ರಾಂತಿಕ ಅಥವಾ ಕೇಂದ್ರ ಸರಕಾರಕ್ಕೆ ಅವರ ಮೇಲೆ ನಿಯಂತ್ರಣ ಅಧಿಕಾರವಿಲ್ಲ. ಅವರು ಅಯೋಗ್ಯರು ಅಥವಾ ಅಪ್ರಾಮಾಣಿಕರೆಂದು ಸಿದ್ಧವಾದಲ್ಲಿ ಸಹ ಅವರನ್ನು ಸಂಸತ್ತಿನ ಮೂರರಲ್ಲಿ ಎರಡಾಂಶದಷ್ಟು ಸದಸ್ಯರು ರಾಷ್ಟ್ರಪತಿಗಳಿಗೆ ಮನವಿ ಸಲ್ಲಿಸಿದರೆ ಮಾತ್ರನೇ ರಾಷ್ಟ್ರಪತಿಗಳು ಅವರನ್ನು ಕೆಲಸದಿಂದ ತೆಗೆಯಬಹುದು.

Rule of the law ನ್ಯಾಯದ ಸಾರ್ವಭೌಮತ್ವವನ್ನು ಸ್ಥಾಪಿಸುವದರಲ್ಲಿ ನ್ಯಾಯಾಲಯಗಳ ಸ್ಥಾನವು ಮೇಲೆ ಹೇಳಿದಂತೆ ಮಹತ್ವದ್ದಿದೆ. ನ್ಯಾಯಾಧೀಶರು ನಿರ್ಭಯ ಹಾಗೂ ನ್ಯಾಯತತ್ಪರರಾಗಿ ತಮ್ಮ ನ್ಯಾಯನಿರ್ಣಯದ ಕಾರ್ಯವನ್ನು ನಿರ್ವಹಿಸಿದರೆ ಪ್ರಜಾಪ್ರಭುತ್ವವು ನಿರಂಕುಶ ಪ್ರಭುತ್ವನಾಗುವದನ್ನು ಬಹುಮಟ್ಟಿಗೆ ತಡೆಯಬಹುದು.

ಕೊನೆಯ ಘಟ್ಟದಲ್ಲಿ ಸರಕಾರದ ರಥವು ಸರಿದಾರಿ ನಡೆಯುವಂತೆ ಮಾಡುವ ಅಂತಿಮ ಹೊಣೆ ಜನತೆಯನ್ನೇ ಸೇರಿದೆ. ಅನಂತ ಎಚ್ಚರಿಕೆಯು ಸ್ವಾತಂತ್ರ್ಯಕ್ಕೆ ತೆರಬೇಕಾದ ಬೆಲೆ. ನ್ಯಾಯಾಲಯಗಳು ಪ್ರಜಾಪ್ರಭುತ್ವದ ತಳಹದಿಯಾದರೂ ಆ ತಳಹದಿಯು ಕುಸಿಯದಂತೆ ಅಥವಾ ಅದನ್ನೇ ಯಾರೂ ಕೆಡವದಂತೆ ನೋಡಿಕೊಳ್ಳಬೇಕಾದುದು ಜಾಗ್ರತ ಜನಾಭಿಪ್ರಾಯ.

# ಶಿಕ್ಷಣದಲ್ಲಿ ಮಾನಸಶಾಸ್ತ್ರದ ಪಾತ್ರ

ವಿದ್ಯಾರ್ಥಿಗಳಿಗೆ ಶಿಕ್ಷಣಕೊಡುವಾಗ ಅವರ ಇಷ್ಟಾ-ನಿಷ್ಟಗಳನ್ನು ತಿಳಿದು ಕೊಳ್ಳಲು ಮನೋಧರ್ಮವನ್ನು ಅರಿತುಕೊಳ್ಳುವದು ಅವಶ್ಯ. ಇಂದಿನ ಶೈಕ್ಷಣಿಕ ಮಾನಸಶಾಸ್ತ್ರ ಆ ಕಾರ್ಯವನ್ನು ನಿರ್ವಹಿಸುತ್ತದೆ. ಅದರ ಮಹತ್ವ ಎಷ್ಟೆಂಬುದನ್ನೇ ಈ ಲೇಖದಲ್ಲಿ ವಿವರಿಸಲಾಗಿರುವದು. . . . . . . . . .

ಲೇಖಕರು : ಶ್ರೀ. ವ್ಹಿ. ಎಸ್. ಕುಸನೂರ, ಎಂ. ಈಡಿ.

ಮಕ್ಕಳು ದಡ್ಡರೂ ಅವಿವೇಕಿಗಳೂ ಆದರೆ ತಂದೆ-ತಾಯಿಗಳಿಗೆ ಆಗುವ ದುಃಖ, ಪ್ರಾಘಾತಗಳು ಇನ್ನಾವುದರಿಂದಲೂ ಆಗಲಿಕ್ಕಿಲ್ಲ. ಅಂತೇ ಸಾಮಾನ್ಯವಾಗಿ ಎಲ್ಲ ನಾಗರಿಕರೂ ತಮ್ಮ ಮಕ್ಕಳು ವಿದ್ಯಾವಂತರಾಗಲಿ, ಬುದ್ಧಿವಂತರಾಗಲಿ, ಸದಸದ್ವಿವೇಕಬುದ್ಧಿಯುಳ್ಳವರಾಗಲಿ, ಸದಾಚಾರಿಗಳಾಗಲಿ ಎಂಬ ಉದ್ದೇಶದಿಂದ ಅವರನ್ನು ಶಾಲೆ-ಕಾಲೇಜುಗಳಿಗೆ ಇಂದಿನ ದಿನಗಳಲ್ಲಿ ಕಳಿಸುವದುಂಟು. ಹಿಂದಿನ ಕಾಲದಲ್ಲಿಯೂ ಇಧೇ ಉದ್ದೇಶದಿಂದ ಎಲ್ಲರೂ ತಮ್ಮ ಮಕ್ಕಳನ್ನು ಗುರುಕುಲಕ್ಕೆ ಕಳಿಸಿಕೊಡುತ್ತಿದ್ದರು. ಅಲ್ಲದೆ, ಅನೇಕರು ತಮ್ಮ ಮಕ್ಕಳಿಗೆ ತಮ್ಮ ಮನೆಯಲ್ಲಿಯೇ ಶಿಕ್ಷಣ ಕೊಡುತ್ತಿದ್ದರು. ವಿಶೇಷವಾಗಿ ವೃತ್ತಿ ಶಿಕ್ಷಣವು ಆಶ್ರಮಗಳಲ್ಲಿ ದೊರೆಯದೆ, ಸ್ವಗೃಹದಲ್ಲಿಯಾಗಲಿ ಆಯಾ ವೃತ್ತಿಯನ್ನು ಮಾಡಿಕೊಂಡು ಉಪಜೀವನ ಮಾಡುತ್ತಿರುವ ಗೃಹಸ್ಥರ ಮನೆಗಳಲ್ಲಾಗಲಿ ದೊರೆಯುತ್ತಿತ್ತು. ಹೀಗೆ ವಿದ್ಯಾಭ್ಯಾಸಕ್ಕೆಂದು ಬಂದ ವಿದ್ಯಾರ್ಥಿಯನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ತಮ್ಮ ಮನೆಯಲ್ಲಿಯಾಗಲಿ, ಆಶ್ರಮದಲ್ಲಿಯಾಗಲಿ ತಮ್ಮ ಜೊತೆಯಲ್ಲಿಯೇ ಇಟ್ಟುಕೊಂಡು ಮೊದಲು ಅವನಿಗೆ ಒಂದು ವರುಷದ ವರೆಗೆ ಅನೇಕ ಕೆಲಸಗಳನ್ನು ಮಾಡಹಚ್ಚಿ ತಮ್ಮ ಬೇರೆ ಶಿಷ್ಯರ ಮಧ್ಯದಲ್ಲಿಯೂ ಅವನನ್ನು ಬಿಟ್ಟು ಅವನಲ್ಲಿರುವ ಸ್ವಾಭಾವಿಕ ಗುಣಧರ್ಮಗಳನ್ನೂ ವಿದ್ಯಾಭ್ಯಾಸಕ್ಕಿರುವ ವಿಶೇಷ ಬುದ್ಧಿಸಾಮರ್ಥ್ಯ ಮತ್ತು ಒಲವುಗಳನ್ನೂ ಶ್ರದ್ಧೆಯನ್ನೂ ಅಭ್ಯಾಸ ಮಾಡಿಕೊಂಡು ಅದಕ್ಕೆ ಸರಿಯಾಗಿ ಅವನ ನಡೆ, ನುಡಿ, ಆಚಾರ, ವಿಚಾರಗಳಿಗೂ ಬುದ್ಧಿ, ಮನಸ್ಸು, ಅಹಂಕಾರಗಳಿಗೂ ಸರಿಯಾದ ಸಂಸ್ಕಾರ, ಶಿಕ್ಷಣಗಳನ್ನು ಕೊಟ್ಟು ಅವನನ್ನು ಕೇವಲ ವಿದ್ಯಾವಂತನನ್ನಲ್ಲದೆ ಸುಸಂಸ್ಕೃತ, ಸದ್ಗುಣಿ, ಸದಾಚಾರಸಂಪನ್ನನನ್ನಾಗಿ ಮಾಡಿ, ಇನ್ನು ಇವನು ನಾಗರಿಕನಾಗಲು ಯೋಗ್ಯನಿರುವನೆಂದು ತಮ್ಮ ಮನವರಿಕೆಯಾದ ಮೇಲೆ ಆ ಶಿಷ್ಯನನ್ನು ಕರೆದು ಕೊನೆಯ ಉಪದೇಶದ ಮಾತುಗಳನ್ನು ಹೇಳಿ ಅವನನ್ನು ಆಶೀರ್ವದಿಸಿ ಆಶ್ರಮದಿಂದ ಕಳಿಸಿಕೊಡುತ್ತಿದ್ದರು. ಹೀಗೆ ಅನುಮತಿಯನ್ನು ಪಡೆದುಬಂದ ಶಿಷ್ಯರೇ ನಾಗರಿಕರಲ್ಲಿ ಗಣ್ಯರಾಗುತ್ತಿದ್ದರು. ಇದೇ ಅವರ ವಿದ್ಯಾಭ್ಯಾಸದ ಪ್ರಶಸ್ತಿಪತ್ರವು. ಈ ಮಧ್ಯದಲ್ಲಿ ಶಿಷ್ಯನು ಗುರುಗಳ ಅನುಗ್ರಹ ಆಶೀರ್ವಾದಗಳಿಗೆ ಪಾತ್ರನಾಗದಂತಹ ವ್ಯತಿರಿಕ್ತ ಕಾರ್ಯಗಳನ್ನು ಮಾಡಿದ್ದರೆ, ಗುರುಗಳು ಅಂಥವರನ್ನು ಶಾಪ ಕೊಟ್ಟು ಗುರುಕುಲದಿಂದ ಹೊರಗೆ ತಳ್ಳಿ ಬಿಡುತ್ತಿದ್ದರು. ಹೀಗೆ ಶಾಪದಿಂದ ಹೊರಬಿದ್ದವನನ್ನು ನಾಗರಿಕರು ಮಾನ್ಯಮಾಡುತ್ತಿರಲಿಲ್ಲ. ಅವನನ್ನು ಧರ್ಮಬಾಹಿರನನ್ನಾಗಿ ಮಾಡಿಬಿಡುತ್ತಿದ್ದರು.

ಹೀಗೆ ಹಿಂದಿನಕಾಲದಲ್ಲಿ ಗುರುಗಳಿಗೂ ಶಿಷ್ಯರಿಗೂ ವಿದ್ಯಾಭ್ಯಾಸ ಮುಗಿಯುವವರೆಗೆ, ನಿಕಟ ಸಂಬಂಧವಿರುತ್ತಿದ್ದು, ಶಿಷ್ಯರಿಗೆ ತಾವು ಗುರುಗಳ ಆಜ್ಞೆಯನ್ನು ಮೀರಿ ನಡೆದರೆ ಅವರ ಶಾಪಕ್ಕೆ ಗುರಿಯಾಗಿ, ಆಯುಷ್ಯವೆಲ್ಲವೂ ಅಧೋಗತಿಗೆ ಈಡಾಗುವೆವೆಂಬ ಭಯವು ಇದ್ದುದರಿಂದ ಗುರುಗಳಿಗೆ ಸಂಪೂರ್ಣ ಸ್ವಾಧೀನರಾಗುತ್ತಿದ್ದರು. ಗುರುಗಳಿಗೂ ತಮ್ಮಲ್ಲಿ ಬಂದ ಒಬ್ಬ ವಿದ್ಯಾರ್ಥಿಗೆ ಸರಿಯಾದ ಶಿಕ್ಷಣ ಸಿಗದೇ ಹೋದರೆ ಜನರಲ್ಲಿ ತಮ್ಮ ಮರ್ಯಾದೆ ಯೋಗ್ಯತೆ ಕಡಿಮೆಯಾದೀತೆಂಬ ಭಯವೂ ತಮ್ಮ ಶಿಷ್ಯನೆಂದು ಶರಣಾಗತನಾಗಿ ಬಂದವನಿಗೆ ಒಳ್ಳೇ ಮಾರ್ಗದರ್ಶನವನ್ನು ಮಾಡಿದೆನೆಂಬ ಸಂತೋಷವೂ ಇರುತ್ತಿತ್ತು.

## 'ಶಾಲೆ' ಶಬ್ದ ಬಂದ ಬಗೆ

ಆದರೆ ಕಾಲಾಂತರದಲ್ಲಿ ಇವು ಅಳಿದು ಹೋಗಿ ವಿದ್ಯಾಭ್ಯಾಸಕ್ಕೆ ಶಾಲೆಗಳು ಸುರುವಾದವು. 'ಶಾಲೆ' ಎಂದರೆ ಒಂದು ನಿಮಿತ್ತದಿಂದ ಕೆಲವರು ಒಂದಡಿಯಲ್ಲಿ ಕೂಡುವ ಸ್ಥಳವೆಂದು ಅರ್ಥ. ಅದರಂತೆ ನಮ್ಮಲ್ಲಿ ಶಾಲೆಗಳು ಅನೇಕವಿವೆ. ಗೋ-ಶಾಲೆ, ಗಜಶಾಲೆ, ಅಶ್ವಶಾಲೆ, ಕಮ್ಮಾರ-ಶಾಲೆ, ಕುಂಬಾರಶಾಲೆ, ಭೋಜನಶಾಲೆ, ಪಡಸಾಲೆ ಎಂದೂ ಶಾಲೆಯೆಂಬ ಶಬ್ದವನ್ನು ಉಪಯೋಗಿಸುವ ರೂಢಿಯುಂಟು. ಅದರಂತೆ ವಿದ್ಯಾಭ್ಯಾಸ ಮಾಡಿಸಲಿಕ್ಕೆ ದಿನಾಲು ಕೂಡ್ರುವ ಸ್ಥಳಕ್ಕೆ ಈಗ 'ಶಾಲೆ' ಎಂದು ಕರೆಯುವ ರೂಢಿಯಾಗಿದೆ.

ಪಾಶ್ಚಾತ್ಯರಲ್ಲಿಯೂ School ಎಂಬ ಶಬ್ದವು ಇದೇ ತಿಳಿವಳಿಕೆಯಿಂದಲೇ ಬಳಕೆಯಲ್ಲಿ ಬಂದಿದೆ. ಗ್ರೀಸ ದೇಶದ ಅಥೆನ್ಸ್‌ದಲ್ಲಿಯ ಜನರು ದಿನಾಲು ತಮ್ಮ ಕೆಲಸವನ್ನು ತೀರಿಸಿಕೊಂಡು ರಾತ್ರಿಯಲ್ಲಿ ಒಂದೆಡೆ ಕಲೆತು ತಮ್ಮ ತಮ್ಮ ಅನುಭವಗಳನ್ನು ನಿತ್ಯದಲ್ಲಿಯೂ ಎಲ್ಲರ ಮುಂದೆ ವ್ಯಕ್ತಮಾಡುವ ರೂಢಿ ಇತ್ತು. ಈ ಸ್ಥಳಕ್ಕೆ School ಎಂದು ಹೆಸರು. ಕಾಲಾಂತರದಲ್ಲಿ ಈ ಚಟುವಟಿಕೆಯನ್ನು ತಮ್ಮ ಮಕ್ಕಳಲ್ಲಿ ಅಭ್ಯಾಸ ಮಾಡಿಸುವದಕ್ಕೆ ಉಪಯೋಗ ಮಾಡಹತ್ತಿದಂದಿನಿಂದ School ಎಂಬುದು ಅಂದಿನಿಂದ ಇಲ್ಲಿಯವರೆಗೆ ವಿದ್ಯಾಮಂದಿರ ಅಥವಾ ಶಾಲೆ ಎಂಬ ಅರ್ಥದಲ್ಲಿ ಬಂದಿದೆ. ಇಂಥ ಇಂದಿನ ವಿದ್ಯಾಮಂದಿರದಲ್ಲಿ ಅಥವಾ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡಿಸುವ



ಗುರುಗಳೂ ವಿದ್ಯಾಭ್ಯಾಸ ಮಾಡುವ ಶಿಷ್ಯರೂ ದಿನದ ಕೆಲವೊಂದು ಸಮಯದಲ್ಲಿ ಮಾತ್ರ ಕೇವಲ ಕೆಲವೊಂದು ವಿದ್ಯೆಯನ್ನು ಓದು-ಬರಹಗಳ ಮೂಲಕ ಕಲಿಸುವದಕ್ಕೆ, ಕಲಿಯುವದಕ್ಕೆ ಕೂಡ ಹತ್ತಿದರು. ಇದರಿಂದ ಗುರು-ಶಿಷ್ಯರಲ್ಲಿಯ ನಿಕಟ ಸಂಬಂಧ, ಸಂಪರ್ಕಗಳು ಕಡಿಮೆಯಾಗುತ್ತ ಬಂದು ಗುರು-ಶಿಷ್ಯರಲ್ಲಿ ಕೇವಲ ಓದು-ಬರಹ ಹೇಳಿ ಕೊಡುವ ರೂಢಿ ಮಾತ್ರ ಉಳಿಯಿತಲ್ಲದೆ, ಯಾರಿಗೆ ಯಾವ ರೀತಿಯಿಂದ ಯಾವ ವಿಷಯವನ್ನು ಎಷ್ಟರಮಟ್ಟಿಗೆ ವಿದ್ಯಾಭ್ಯಾಸ ಮಾಡುವ ಯೋಗ್ಯತೆ ಇದೆ ಎಂಬುದನ್ನು ಗುರುಗಳು ಅರಿತುಕೊಳ್ಳಲಿಕ್ಕಾಗಲಿ, ಶಿಷ್ಯನ ಸ್ವಭಾವಗಳಲ್ಲಿ ಮಾರ್ಪಾಡುಗಳನ್ನು ಮಾಡಿ ಸುಸಂಸ್ಕೃತನನ್ನಾಗಿ ಮಾಡುವದಕ್ಕಾಗಲಿ ಆಸ್ಪದ ದೊರೆಯದೆ ಹೋಗಿ, ಗುರುಗಳು ತಾವು ಹೇಳಿದ್ದು ಶಿಷ್ಯರಿಗೆ ತೀವ್ರವಾಗಿ ಬಾರದೇ ಹೋದರೆ, ಹುಡುಗನ ಮೈಗಳ್ಳತನ, ಅಲಕ್ಷ್ಯಗಳೇ ಕಾರಣವೆಂದು ತಿಳಿದು ಅವರನ್ನು ದಂಡಿಸತೊಡಗಿದರು. ಈ ತೆರನಾದ ಹಿಂಸೆಯು ಮೊದಲು ಪಾಶ್ಚಿಮಾತ್ಯರಲ್ಲಿಯೇ, ಅದರಲ್ಲಿಯೂ ಇಂಗ್ಲಂಡದಲ್ಲಿಯೇ ಹೆಚ್ಚಾಗಿ ಸುರುವಾಯಿತು. (ನಮ್ಮ ದೇಶದಲ್ಲಿ ಮೊದಲು ಆಶ್ರಮಗಳಲ್ಲಿಯಾಗಲಿ, ಮನೆಯಲ್ಲಿಯಾಗಲಿ ಶಿಷ್ಯರನ್ನು ಗುರುಗಳು ಹೊಡೆದು ಬಡೆದು ಹಿಂಸೆ ಮಾಡಿದ ಉದಾಹರಣೆಗಳು ಎಲ್ಲಿಯೂ ಕಂಡು ಬಂದಿಲ್ಲ).

## ದಂಡನೆಯ ಒಂದು ಮಾದರಿ

ಈ ಬಗ್ಗೆ Swabian School Master Hauberk ಎಂಬವನ ಉದಾಹರಣೆಯನ್ನು Ross ರವರು ತಮ್ಮ Ground work of Educational Theory ಎಂಬ ಪುಸ್ತಕದಲ್ಲಿ ಕೊಟ್ಟಿರುವರು.

ಈ ಶಿಕ್ಷಕನು ತನ್ನ ಶಿಕ್ಷಕವೃತ್ತಿಯ ಅವಧಿಯಾದ ೫೧ ವರುಷ ೭ ತಿಂಗಳುಗಳಲ್ಲಿ ತಾನು ಸಾಧಾರಣವಾಗಿ ೯,೧೧,೫೨೭ ಹೊಡೆತಗಳನ್ನು ಬೆತ್ತರಿಂದಲೂ ೧,೨೪,೦೧೦ ಡೊಣ್ಣೆಯಿಂದಲೂ ೨೦,೯೮೯ ಚೂಲಕಟ್ಟಿಗೆಯಿಂದಲೂ ೧,೩೬,೭೧೫ ತನ್ನ ಕೈಯಿಂದಲೂ ೧೦,೨೩೫ ಮುಖದ ಮೇಲೂ ೭,೯೦೫ ಕಿವಿಗಡ್ಡೆಗೂ ೧೧,೧೫,೮೦೦ ತಲೆಗಡ್ಡೆಗೂ ೨೨,೭೬೩ ಪುಸ್ತಕ, ಪಾಟಿ ಮುಂತಾದ ಕೈಗೆ ಸಿಕ್ಕ ಸಾಮಾನುಗಳಿಂದಲೂ ವಿದ್ಯಾರ್ಥಿಗಳನ್ನು ಹೊಡೆದಿದ್ದನಲ್ಲದೆ ೭೭೭ ವಿದ್ಯಾರ್ಥಿಗಳನ್ನು ಬಟಾಣಿ ಕೂಡ್ರಿಸುವದೂ ೬೧೩ ತ್ರಿಕೋನದ ಪಟ್ಟಿಯಲ್ಲಿ ಕೂಡ್ರಿಸುವದೂ ೫,೦೦೧ ಕತ್ತೆಯ ಮೇಲೆ ಕೂಡ್ರಿಸಿ ಮೆರೆಯಿಸಿದ್ದನ್ನೂ ೧,೭೦೭ ದೊಡ್ಡ ಕಟ್ಟಿಗೆಯ ಕೊಡ್ಡವನ್ನು ಹೊತ್ತುಕೊಂಡು ತಿರುಗುವದನ್ನೂ ಇನ್ನೂ ಇಂಥ ಬೇರೆ ಬೇರೆ ಎಷ್ಟೋ ದಂಡನೆಗಳನ್ನು ತನ್ನ ವಿದ್ಯಾರ್ಥಿಗಳಿಗೆ ಕೊಟ್ಟಿರುವದಾಗಿ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ.

ಪಾಶ್ಚಿಮಾತ್ಯರಿಂದ ಅನೇಕ ವಿಷಯಗಳು ನಮ್ಮಲ್ಲಿ ಬಂದಿರುವಂತೆ ಹೀಗೆ ಶಿಕ್ಷೆಯನ್ನು ಕೊಡುವ ರೂಢಿಯೂ ನಮ್ಮಲ್ಲಿ ಅವರಿಂದಲೇ ಸೇರಿಕೊಂಡಿದೆ.

ಹೀಗೆ ಚಿಕ್ಕಮಕ್ಕಳಿಗೆ ವಿದ್ಯಾಭ್ಯಾಸದಲ್ಲಿ ಆಗತಕ್ಕ ಅನಾಹುತಗಳಿಂದ ಪಾಶ್ಚಾತ್ಯದೇಶದಲ್ಲಿಯೂ ಇತ್ತೀಚೆಗೆ ಅನೇಕ ಶಿಕ್ಷಣ ತಜ್ಞರಿಗೆ ದಿಗಿಲುಬಿದ್ದು ಅಂತಃಕರಣ ಕರಗಿ ಹೀಗಾಗಲಿಕ್ಕೆ ಕಾರಣಗಳೇನೆಂಬುದನ್ನು ಕಂಡು ಹಿಡಿಯತೊಡಗಿದರು. ಪ್ಲೇಟೋ, ಅರಿಸ್ಟಾಟಲ್‌ರಂತಹ ಮಹಾತತ್ವಜ್ಞಾನಿಗಳ ಗ್ರಂಥಗಳ ಆಧಾರದಿಂದ ಪೀಸ್ಟಲಾಜಿ ಮೊದಲಾದವರು ಶಿಕ್ಷಣದ ಮೂಲ ತಳಹದಿಯು ಏತರ ಮೇಲೆ ನಿಂತಿದೆ ಎಂಬುದನ್ನು ವಿಚಾರ ಮಾಡುತ್ತ, ಶಿಕ್ಷಣವೆಂಬ ಕ್ರಿಯೆಯು ಒಬ್ಬ ಕರ್ತಾನಿಂದ ನಡೆಯುತ್ತಿದ್ದರೂ ಅದರಲ್ಲಿ ಎರಡು ಕರ್ಮಗಳಿವೆ, ಎರಡು ಮುಖಗಳಿವೆ. ಅವಾವವೆಂದರೆ, ವಿಷಯವನ್ನು ಹೇಳುವದರ ಜೊತೆಗೆ ಯಾರಿಗೆ ಅಥವಾ ಯಾರನ್ನು ಕುರಿತು ಹೇಳುವದು, ಮತ್ತು ಏನನ್ನು ಹೇಳಿಕೊಡುವದು, ಎಂದು ಹೀಗೆ—ವಿಷಯ,ವಿಷಯಗ್ರಹಣಮಾಡಿಕೊಳ್ಳುವ ವಿದ್ಯಾರ್ಥಿ ಎಂಬ ಎರಡು ಕರ್ಮಗಳನ್ನು ವಿಚಾರ ಮಾಡಿ ಅವರಿಬ್ಬರಲ್ಲಿಯೂ ಸರಿಯಾದ ಜೋಡಣೆಯಾಗುವಂತೆ, ಕರ್ತಾನು, ಶಿಕ್ಷಣದ ಯೋಜನೆ ಮಾಡಬೇಕು ಎಂಬ ತತ್ವವು ಮೊದಲು ಹುಟ್ಟಿತು. ವಿಷಯವನ್ನು ಹೇಳುವದಕ್ಕಿಂತಲೂ ಗ್ರಹಣ ಮಾಡಿಕೊಳ್ಳುವ ಮಕ್ಕಳಲ್ಲಿಯ ಯೋಗ್ಯತೆ ಗುಣಧರ್ಮಗಳನ್ನು ಮೊದಲು ಕಂಡುಹಿಡಿದು ಅವುಗಳಿಗೆ ಸರಿಯಾಗಿ ಶಿಕ್ಷಣ ಕೊಟ್ಟರೆ ಈ ಕಾರ್ಯವು ಅನಾಯಾಸದಿಂದಲೂ ಪ್ರೀತಿ-ಸಂತೋಷದಿಂದಲೂ ಆಗುವದೆಂಬುದನ್ನು ಮನವರಿಕೆ ಮಾಡಿಕೊಂಡಂದಿನಿಂದ ಪಾಶ್ಚಾತ್ಯರಲ್ಲಿ ವಿದ್ಯಾಭ್ಯಾಸದಲ್ಲಿಯೂ ಶಿಕ್ಷಣದಲ್ಲಿಯೂ ಮಾನಸಶಾಸ್ತ್ರವೆಂಬುದು ತಲೆದೋರತೊಡಗಿತು. ಈ ಶಾಸ್ತ್ರವು ಸಂಪೂರ್ಣ ಮಾನಸಶಾಸ್ತ್ರದಿಂದ ಹೊರತಾಗಿರದೆ ಶಿಕ್ಷಣಕ್ಕೆ ಉಪಯುಕ್ತವಾಗಿರುವ ಅದರಲ್ಲಿಯ, ಅನೇಕ ತತ್ವಗಳನ್ನಾರಿಸಿ ತೆಗೆದು ಅದಕ್ಕೆ Educational Psychology ಎಂದು ಹೆಸರು ಕೊಟ್ಟರು. ಈ ಶಾಸ್ತ್ರವನ್ನು ಅನೇಕ ವಿದ್ಯಾಭಿಮಾನಿಗಳಾದ ವಿದ್ವಾಂಸರು ದಿನೇ ದಿನೇ ಅಭಿವೃದ್ಧಿಯನ್ನುಗೊಳಿಸುತ್ತ ಬಂದು ಇಂದಿಗೆ, ಪಾಶ್ಚಾತ್ಯರಲ್ಲಿ ಥಾರ್ನಡಾಯಿಕ್, ಮೆಗ್ಡೂಗಲ್, ಗೇಟ್ಸ್, ಸ್ಟ್ಯಾಂಡೀಫೋರ್ಡ, ಸೇವಲವ್, ನನ್, ಸಿರಿಲ್ ಬರ್ಟ, ಕು। ಮೆಂಟಸೂರಿ, ರೋಸ್, ಉಡ್‌ವರ್ಥ, ಮಿಲರ್, ಫ್ರೊಯಿಡ್ ಮುಂತಾದವರು ಮಕ್ಕಳ ಮಾನಸಶಾಸ್ತ್ರದ ತಳಹದಿಯ ಮೇಲೆ ಶಿಕ್ಷಣವನ್ನು ಕೊಡಬೇಕೆಂದು ಆಳವಾಗಿ ಅಭ್ಯಾಸ ಮಾಡಿ ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಇಂದಿನ ವಿದ್ಯಾವ್ಯಾಸಂಗದಲ್ಲಿ ಮಾನಸಶಾಸ್ತ್ರದಿಂದ ಅನೇಕ ಮಾರ್ಪಾಡುಗಳಾಗತೊಡಗಿವೆ. ಅದರ ಜೊತೆಯಲ್ಲಿಯೇ ಮಾನಸಶಾಸ್ತ್ರವು ಇನ್ನೂ ಬೆಳೆಯುತ್ತಲೇ ಇದೆ.




## ಮಾನಸಶಾಸ್ತ್ರ ರೂಪಗೊಂಡುದು ಹೇಗೆ?

ಪಾಶ್ಚಿಮಾತ್ಯರಲ್ಲಿ ಮೊದಲು ಜರ್ಮನಿಯಲ್ಲಿ ೧೮೭೯ ರಲ್ಲಿ Structural Psychology ಎಂಬುದು ಹುಟ್ಟಿತು. ಇದರಲ್ಲಿ ಮನುಷ್ಯನು ಆತ್ಮಸಾಕ್ಷಿಯಾಗಿ ಸದಸದ್ವಿವೇಕ ಬುದ್ಧಿಯಿಂದ ಕೆಲಸ ಮಾಡಬೇಕೆಂಬ ಪ್ರತಿಪಾದನೆ ಇದ್ದು ಇಂದ್ರಿಯಜ್ಞಾನವೇ ಮುಖ್ಯವಾಗಿದೆ. ಆದರೆ ಇದು ವ್ಯಕ್ತಿಗತವಾಗಿದೆ ಎಂದು ೧೮೯೮ ರಲ್ಲಿ ಜರ್ಮನಿಯಲ್ಲಿಯೇ, ಮನಸ್ಸಿನ ಗುಣಧರ್ಮಗಳ ಉಪಯೋಗ ಎಲ್ಲರಲ್ಲಿಯೂ ಒಂದೇ ಆಗಿರುವವೇ, ಮನುಷ್ಯನು ಏನು ಕೆಲಸ ಮಾಡುತ್ತಾನೆ, ಹೇಗೆ ಮಾಡುತ್ತಾನೆ, ಏಕೆ ಮಾಡುತ್ತಾನೆ ಎಂಬ ಕಾರಣಗಳನ್ನು ಕಂಡುಹಿಡಿಯಬೇಕೆಂಬ ವಿಚಾರ ಹುಟ್ಟಿತು. ಇದಕ್ಕೆ Functional Psychology ಎಂದು ಹೆಸರು ಬಂದಿತು. ಅನಂತರ ೧೮೯೮ ರಲ್ಲಿಯೇ ಅಮೇರಿಕೆಯಲ್ಲಿ ಥಾರ್ನಡಾಯಕ್ ಎಂಬವನು, ಯಾವುದೊಂದು ಜೀವಿಯು ಹೇಗೆ ಒಂದು ವಿಷಯವನ್ನು ಕಲಿತುಕೊಂಡು ಅಥವಾ ಅರಿಕೆ ಮಾಡಿಕೊಂಡು ಅದನ್ನು ಜ್ಞಾಪಕದಲ್ಲಿಟ್ಟುಕೊಂಡು ಒಂದು ವಿಷಯದ ಅರಿಕೆ ಮಾಡಿಕೊಂಡ ವಿಷಯವನ್ನು, ಇನ್ನೊಂದು ಹೊಸ ವಿಷಯವನ್ನು ಕಲಿಯುವಾಗ್ಗೆ ಹೇಗೆ ಉಪಯೋಗ ಮಾಡಿಕೊಳ್ಳಲಿಕ್ಕೆ ಬರುತ್ತದೆ ಎಂಬ ಪ್ರಯೋಗಗಳನ್ನು ಮಾಡಿ "ಕಲಿತುಕೊಳ್ಳುವ ನಿಯಮ" Laws of Learning ಗಳೆಂದು ಪ್ರಸಿದ್ಧಿಸಿದನು. ಅವಾವವೆಂದರೆ ಮನುಷ್ಯನಿಗೆ ಒಂದು ಏನಾದರೂ ಹೊಸ ವಿಷಯವನ್ನು ಅನುಭವ ಪಡೆಯಬೇಕಾದರೆ ಅದರಿಂದ ಅವನಿಗೇನಾದರೂ ಉಪಯೋಗವಿರಬೇಕು; ಅಂದರೆ ಅದನ್ನು ಮೇಲಿಂದ ಮೇಲೆ ಮಾಡುತ್ತಾನೆ. ಹಾಗೆ ಪದೇ ಪದೇ ಕಾರ್ಯ ಮಾಡುವಾಗ್ಗೆ ಅವನಿಗೆ ಉತ್ತೇಜನ ದೊರೆಯು

ತ್ತಿರಬೇಕು. ಅಗ್ಗೆ ಆ ಕಾರ್ಯವನ್ನು ಮಾಡಲಿಕ್ಕೆ ಯಾವಾಗಲೂ ಸಿದ್ಧನಾಗುತ್ತಾನೆ. ಆ ಕಾರ್ಯವನ್ನು ಮಾಡೋಣದರಿಂದ ಅವನಿಗೆ ಸಂತೋಷವುಂಟಾಗುತ್ತಿರಬೇಕು. ಅಂದರೆ ಅದನ್ನು ತೀವ್ರವಾಗಿ ಗ್ರಹಣಮಾಡಿಕೊಂಡು ಜ್ಞಾಪಕದಲ್ಲಿ ಇಡುತ್ತಾನೆ. ಆ ಕಾರ್ಯವು ತನ್ನದೇ, ತನ್ನ ಸಲುವಾಗಿಯೇ ಎಂದು ಅರಿಕೆಯಾದಾಗ್ಗೆ ಇನ್ನೂ ಚೊಕ್ಕತನದಿಂದ ವಿಷಯವನ್ನು ಅರಿಕೆ ಮಾಡಿಕೊಳ್ಳುತ್ತಾನೆ. ಹೀಗೆ ಒಂದು ವಿಷಯವನ್ನು ಕಲಿತುಕೊಳ್ಳಬೇಕಾದರೆ ಅದರಲ್ಲಿ ಇವೆಲ್ಲವೂ ಅಡಕವಾಗಿದ್ದರೆ ತೀವ್ರವಾಗಿ ಅರಿಕೆ ಮಾಡಿಕೊಳ್ಳಲಿಕ್ಕೆ ಸಹಾಯವಾಗುತ್ತದೆ. ಇದೂ ಅಲ್ಲದೆ ಮನುಷ್ಯನಲ್ಲಿ ಒಂದು ವಿಶೇಷವಾದ ಯೋಗ್ಯತೆಯುಳ್ಳ ಬುದ್ಧಿಸಾಮರ್ಥ್ಯವು ಸಾಮಾನ್ಯ ಬುದ್ಧಿಸಾಮರ್ಥ್ಯದಲ್ಲಿರುತ್ತದೆ. ಮತ್ತು ಈ ಬುದ್ಧಿಸಾಮರ್ಥ್ಯವು ಹುಟ್ಟುವಯಸ್ಸಿನ ಸಾಮರ್ಥ್ಯಕ್ಕೆ ಅನೇಕರಲ್ಲಿ ಸರಿ ಇರಲಿಕ್ಕಿಲ್ಲ. ಹೆಚ್ಚು ಕಡಿಮೆ ಇರಬಹುದು. ಆದ್ದರಿಂದ ವಿದ್ಯಾಭ್ಯಾಸವನ್ನು ಸುರುಮಾಡುವಾಗ್ಗೆ ವಿದ್ಯಾರ್ಥಿಯ ಬುದ್ಧಿಸಾಮರ್ಥ್ಯವನ್ನು ಪರೀಕ್ಷಿಸುವದು ಲೇಸೆಂಬುದನ್ನೂ ಪುರುಷ, ಸ್ತ್ರೀಸ್ವಭಾವ, ಯೋಗ್ಯತೆಗನುಸರಿಸಿ ಶಿಕ್ಷಣ ಕೊಡಬೇಕೆಂಬುದನ್ನೂ ಇನ್ನೂ ಅನೇಕ ಸಂಗತಿಗಳನ್ನು ಕಂಡುಹಿಡಿದರು.

## ಮನಸ್ಸು

೧೯೦೦ರಲ್ಲಿ ಫ್ರಾಯ್ಡನೆಂಬ ಆಸ್ಟ್ರಿಯಾ ದೇಶದವನು, ಮನಸ್ಸನ್ನು ಜಾಗ್ರತ ಮತ್ತು ಅಜಾಗ್ರತವೆಂದು ಎರಡು ಭಾಗಗಳಾಗಿ ಪರಿಗಣಿಸಿ ಅವುಗಳ ಪರಸ್ಪರ ಪ್ರತಿಕ್ರಿಯೆಗಳನ್ನು ಪರೀಕ್ಷಿಸಿ ಮನುಷ್ಯನು ಯಾವ ಕಾರಣದಿಂದ ಹೀಗೆ ವರ್ತನೆ ಮಾಡುವನೆಂಬ ಮೂಲ ಕಾರಣಗಳನ್ನು ಅರಿತುಕೊಳ್ಳುವ ಮನೋವಿಶ್ಲೇಷಣವೆಂಬ ಶಾಸ್ತ್ರವನ್ನು ಪ್ರಚುರಗೊಳಿಸಿದನು. ವಿದ್ಯಾಭ್ಯಾಸವನ್ನು ಮಾಡಿಸುವ ಮಕ್ಕಳ ಸ್ಥಿತಿಗತಿಗಳನ್ನು ಪರೀಕ್ಷಿಸಲು ಈ ಶಾಸ್ತ್ರವು ಬಹಳ ಉಪಯೋಗಬೀಳುತ್ತದೆ. ಯಾರ ಮನಸ್ಸಾದರೂ ಅಥವಾ ಇಚ್ಛೆಯಾದರೂ ಸ್ವಲ್ಪ ದಮನ ಮಾಡಲ್ಪಟ್ಟಿದ್ದರೆ ( Repressed ) ಅವರಿಂದ ಸರಿಯಾದ ಕೆಲಸವಾಗದು. ಅವನು ಉಡಾಳನಾಗಬಹುದು ಅಥವಾ ಮುಗ್ಧನಾಗಬಹುದು. ಶಿಕ್ಷಣಪಡೆಯುತ್ತಿರುವ ಚಿಕ್ಕಮಕ್ಕಳ ಮನಸ್ಸು ಅಥವಾ ಇಚ್ಛೆಗಳು ತಂದೆ-ತಾಯಿಗಳಿಂದಲೂ ಬೇರೆ ಅನೇಕರಿಂದ ಮೇಲಿಂದ ಮೇಲೆ ದಮನಮಾಡಲ್ಪಡುತ್ತಿರುವದರಿಂದ ವಿದ್ಯಾರ್ಥಿಯು ಎಷ್ಟು ಜಾಣನಿದ್ದರೂ ಮನಸ್ಸು ಬೇಜಾರಾಗಿ ವಿಷಯಗ್ರಹಣಮಾಡಿಕೊಳ್ಳುವದಿಲ್ಲ ಅಂಥ ಸಂದರ್ಭದಲ್ಲಿ ಈ ಶಾಸ್ತ್ರವು ಅವನ ಸ್ಥಿತಿಗತಿಯನ್ನು ಅರಿತುಕೊಳ್ಳಲಿಕ್ಕೆ ಬಹಳ ಉಪಯೋಗವಾಗುತ್ತದೆ.

೧೯೦೮ರಲ್ಲಿ ಇಂಗ್ಲಂಡ ದೇಶದವನಾದ ಮೆಕ್ಡೂಗಲ್ ಎಂಬವನು, ಚಿತ್ತವೃತ್ತಿಯ ಕಾರ್ಯಗಳನ್ನು ಮಾಡಿಸಲಿಕ್ಕೆ ಕಾರಣ, ಮನಸ್ಸೆಂಬುದೊಂದು ಇಂದ್ರಿಯವಿದೆ. ಎಲ್ಲ ಕಾರ್ಯಗಳನ್ನು ಜೀವಿಗಳು ಮಾಡಲಿಕ್ಕೆ ಅನೇಕ ಉದ್ದೇಶ, ಶಕ್ತಿ ಮತ್ತು ಯುಕ್ತಿಗಳಿದ್ದು ಜೀವಿಯು ತನ್ನ ಸಹಜ ಪ್ರವೃತ್ತಿಗಳನ್ನು ಉಪಭೋಗ ಮಾಡಲಿಕ್ಕೆ ಕರ್ಮಗಳನ್ನು ಮಾಡುತ್ತದೆ ಎಂದೂ ಯಾವ ಜೀವಿಯು ಯಾವ ಕರ್ಮವನ್ನು ಯಾತಕ್ಕೆ ಮಾಡುತ್ತದೆಂಬುದನ್ನು ಅವನ ವರ್ತನೆಯ ಮೇಲಿಂದ ಊಹಿಸಬಹುದೆಂದೂ ತೋರಿಸಿದ್ದಾನೆ. ಇದನ್ನು ಅರಿತುಕೊಳ್ಳಲಿಕ್ಕೆ ಮನುಷ್ಯನಿಗಿಂತಲೂ ಬೇರೆ ಪ್ರಾಣಿಗಳ ಕ್ರಿಯೆಯು ಬಹಳ ಉಪಯೋಗವಾಗುತ್ತದೆ. ಯಾಕಂದರೆ ಅವುಗಳ ವರ್ತನೆಯು ಯಾವಾಗಲೂ ಸ್ವಾಭಾವಿಕವಾಗಿರುತ್ತದೆಂಬುದನ್ನೂ ತೋರಿಸಿದ್ದಾನೆ.

೧೯೧೩ರಲ್ಲಿ ಅಮೇರಿಕೆಯಲ್ಲಿ ವಾಟ್ಸನ್ ಎಂಬವನು ಮನಸ್ಸೆಂಬ ಇಂದ್ರಿಯವನ್ನು ಒಪ್ಪದೆ ಪ್ರತಿಯೊಂದು ಜೀವಿಯೂ ಯಾವದಾದರೊಂದು ಕಾರ್ಯವನ್ನು ಮಾಡಬೇಕಾದರೆ ಬಾಹ್ಯ ವಾತಾವರಣವೂ ಬಾಹ್ಯ ವಸ್ತುವಿನಿಂದ ಉತ್ತೇಜನ ಹೊಂದಿದಂತೆ ಅದಕ್ಕೆ ಸರಿಯಾಗಿ ಮನುಷ್ಯನ ಪ್ರತಿಕ್ರಿಯೆಗಳೂ ನಡೆಯುತ್ತವೆಂದು ಪ್ರತಿಪಾದಿಸಿದನು. ಇದಕ್ಕೆ Behaviourism ಎಂದು ಹೆಸರು ಬಂದಿತು. ೧೯೧೩ರಲ್ಲಿಯೇ ಜರ್ಮನಿಯಲ್ಲಿ ವರ್ದಿಮರ, ಕೋಹಿಲರ್, ಕೋಫಕಾ ಎಂಬವರು, ಒಂದು ವಿಷಯಾನುಭವವಾಗಬೇಕಾದರೆ, ಅದರ ಬಗ್ಗೆ ಪೂರ್ಣ ತಿಳಿವಳಿಕೆಯನ್ನು ಯೋಗ್ಯವಾದ ಗತಿಯೊಡನೆ, ಯೋಗ್ಯ ಸಮಯದಲ್ಲಿ, ವಿದ್ಯಾರ್ಥಿಗಳ ಬುದ್ಧಿಗೆ ತಕ್ಕಂತೆ, ತಕ್ಕಷ್ಟು ತಿಳಿಸಿಕೊಡಬೇಕು. ವಿಷಯವು ಎಷ್ಟೇ ದೊಡ್ಡದಿದ್ದರೂ ಅದರಲ್ಲಿ ಅನೇಕ ಪೂರ್ಣ ಅಂಶಗಳಿರುತ್ತವೆ. ಒಮ್ಮೆ ಹೇಳುವಾಗ್ಗೆ ಒಂದೊಂದು ಅಂಶವನ್ನು ಪೂರ್ಣ ಮುಗಿಸುತ್ತ ಬಂದು ಕೊನೆಗೆ ಆ ಎಲ್ಲ ಅಂಶಗಳನ್ನೂ ಕೂಡಿಸಿ ಒಂದು ಪರಿಪೂರ್ಣವಾದ ಜ್ಞಾನವನ್ನು ಒಂದು ವಿಷಯದ ಮೇಲೆ ಮಾಡಿಕೊಟ್ಟಾಗಲೇ ಅದನ್ನು ಜ್ಞಾಪಕದಲ್ಲಿಡಲು ಸುಲಭವಾಗುತ್ತದಲ್ಲದೆ ಬೇರೆಬೇರೆ ವಿಷಯಗಳನ್ನು ಕಲಿಯುವಾಗ್ಗೆ ಬುದ್ಧಿಯಲ್ಲಿ ಸಂಶಯ, ತೊಡಕುಗಳು ಉಂಟಾಗಲಾರವೆಂದು ಹೇಳಿ ಇದಕ್ಕೆ ಚಲಚ್ಚಿತ್ರದ ಗತಿಯ ಉದಾಹರಣೆಯನ್ನು ಕೊಟ್ಟಿರುವರು.

## ಶೈಕ್ಷಣಿಕ ಮಾನಸಶಾಸ್ತ್ರ

ಹೀಗೆ ಅನೇಕ ಮುಖವಾಗಿ ಬೆಳೆಯುತ್ತ ಬಂದಿರುವ ಈ ಶೈಕ್ಷಣಿಕ ಮಾನಸಶಾಸ್ತ್ರದಿಂದ ಮನುಷ್ಯನಲ್ಲಿ ಅಡಕವಾಗಿರುವ ಆನುವಂಶಿಕ ಗುಣಗಳೂ ಮಜ್ಜಾತಂತುಗಳೂ ಸ್ನಾಯುಗಳೂ ಮಿದುಳೂ ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯಗಳೂ ಬುದ್ಧಿ, ಮನಸ್ಸು, ಅಹಂಕಾರ, ಬುದ್ಧಿ-ಸಾಮರ್ಥ್ಯ, ಜನನವಯಸ್ಸಿಗೂ ಜಾಣತನದ ವಯಸ್ಸಿಗೂ ಇರುವ ಸಂಬಂಧ, ಅದನ್ನು ಅಳತೆ ಮಾಡುವ ವಿಧಾನ, ಸಹಜ ಪ್ರವೃತ್ತಿಗಳೂ ಅದರಿಂದ ಜನ್ಯವಾಗುವ ಉದ್ವೇಗ ಭಾವಗಳೂ ಸಹಜ ಪ್ರವೃತ್ತಿಗಳ ತೃಪ್ತಿಗಳು ಸರಿಯಾಗಿ ಆಗದಿದ್ದರೆ, ತಂದೆ-ತಾಯಿಗಳು ಅದರ ಮೇಲೆ ಅಲಕ್ಷ್ಯ ಮಾಡಿದರೆ ಚಿಕ್ಕಮಕ್ಕಳು ಹೇಗೆ ಉಡಾಳರಾಗಲಿ, ಮುಗ್ಧರಾಗಲಿ ಆಗುವರೆಂಬುದನ್ನೂ ವಿಷಯಗ್ರಹಣ ನಿಯಮಗಳನ್ನೂ, ಮನುಷ್ಯನಲ್ಲಿ ಯಾವ-ಯಾವ ಕಾಲಕ್ಕೆ ಯಾವ ತರಹದ ಸಾಮರ್ಥ್ಯವುಂಟಾಗುತ್ತದೆಂಬುದನ್ನೂ ಒಂದು ವಿಷಯವನ್ನು ಕಲಿತುಕೊಳ್ಳಲಿಕ್ಕೂ ಜ್ಞಾಪಕದಲ್ಲಿ ಇಡುವುದಕ್ಕೂ ಮರೆಯುವದಕ್ಕೂ ಮರೆತದ್ದನ್ನು ಮರಳಿ ಜ್ಞಾಪಕಕ್ಕೆ ತಂದುಕೊಳ್ಳಲಿಕ್ಕೆ ಕಾರಣಗಳೇನೆಂಬುದನ್ನು ಮತ್ತು ಅವುಗಳನ್ನು ಹೇಗೆ ಸಾಧನೆ ಮಾಡಿಕೊಳ್ಳಬೇಕೆಂಬುದನ್ನೂ ಮನುಷ್ಯನು ಯಾವ ಸಂದರ್ಭದಲ್ಲಿ ಹೇಗೆ ವರ್ತನೆ ಮಾಡುತ್ತಾನೆ ಮತ್ತು ಆ ತರಹದ ವರ್ತನೆ ಮನುಷ್ಯಗಣಕ್ಕೆ ಯೋಗ್ಯವಾಗುವಂತೆ ಹೇಗೆ ಪರಿವರ್ತಿಸಬೇಕೆಂಬುದನ್ನೂ ಅರಿಯಬಹುದಾಗಿದೆ.

ಅಲ್ಲದೆ ಸರಿಯಾದ ಶಿಕ್ಷಣದಿಂದ ಮನುಷ್ಯನು ತನ್ನ ವ್ಯಕ್ತಿತ್ವವನ್ನು ಹೇಗೆ ಘನತೆಗೆ ತಂದುಕೊಳ್ಳಬಹುದೆಂಬುದನ್ನು ತಿಳಿಸಿಕೊಡುವ ಇಂದಿನ ಶೈಕ್ಷಣಿಕ ಮಾನಸಶಾಸ್ತ್ರವು ಎಲ್ಲ ವಿಜ್ಞಾನ ಶಾಸ್ತ್ರಕ್ಕಿಂತಲೂ ಇನ್ನೂ ಚಿಕ್ಕದಾಗಿದ್ದರೂ ದಿನೇ ದಿನೇ ಪ್ರಗತಿಯ ಮಾರ್ಗದಲ್ಲಿಯೇ ನಡೆದಿದೆಂಬುದನ್ನು ನಾವು ಗಮನದಲ್ಲಿ ಇಟ್ಟುಕೊಂಡು ಶಿಕ್ಷಣ ರಂಗದಲ್ಲಿ ಉಪಯೋಗ ಮಾಡುತ್ತ ಹೋದರೆ ಶಿಕ್ಷಣ ಕ್ಷೇತ್ರವು ಶುದ್ಧವಾಗಿಯೂ ವಿಶಾಲವಾಗಿಯೂ ಕಲಿಸುವದಕ್ಕೆ ಕಲಿಯುವದಕ್ಕೆ ಹಗುರಾಗುವುದರಲ್ಲಿ ಸಂದೇಹವಿಲ್ಲ. ಇಂಥ ಮನೋವಿಜ್ಞಾನವನ್ನು ಶಿಕ್ಷಕರಂತೂ ಅವಶ್ಯವಾಗಿ ಅಭ್ಯಾಸ ಮಾಡಬೇಕಲ್ಲದೆ ಪ್ರತಿಯೊಬ್ಬ ಪಾಲಕರೂ ಅರಿತುಕೊಳ್ಳಬೇಕು. ಇಂದಿನ ಕಾಲದಲ್ಲಿ ಆಶ್ರಮಜೀವನವು ಮರಳಿ ಬರಲಾರದು. ಮನೆಯಲ್ಲಿಯೂ ಮಕ್ಕಳಿಗೆ ಅಭ್ಯಾಸ ಮಾಡಿಸುವದು ಸಾಧ್ಯವಿಲ್ಲ. ಇಂದು ಶಾಲೆ-ಮನೆಗಳೆರಡೂ ಕೂಡಿಕೊಂಡು ಮಗುವಿನ ಹಿತವನ್ನು ನೋಡಬೇಕಾಗಿದ್ದರಿಂದ ಶಿಕ್ಷಕರೂ ಪಾಲಕರೂ ನಿಕಟಸಂಬಂಧವನ್ನು ಇಟ್ಟುಕೊಂಡು ಮಕ್ಕಳನ್ನು ಮುಂದೆ ತರಬೇಕಾದ ಈ ದಿನಗಳಲ್ಲಿ ಮಾನಸಶಾಸ್ತ್ರದ ಅಭ್ಯಾಸವು ಇವರಿಬ್ಬರಿಗೂ ಅವಶ್ಯವಾದದ್ದು.

---

# ನಮ್ಮ ಕೃಷಿಧೋರಣೆಯು ಕೆಲ ಪ್ರಶ್ನೆಗಳು

ಭಾರತದಲ್ಲಿ ಆಹಾರಪ್ರಶ್ನೆ ಗಂಭೀರವಾಗುತ್ತಲೇ ಇದೆ. ಪ್ರಥಮ ಯೋಜನೆಯಲ್ಲಿ ಒಕ್ಕಲತನ ಉತ್ಪಾದನೆಯು ಹೆಚ್ಚಿರುವದೇನೊ ನಿಜ. ಆದರೆ ಈಗೆರಡು ವರುಷಗಳಿಂದ ಕೊರತೆಪರಿಸ್ಥಿತಿ ತಲೆದೋರತೊಡಗಿದೆ. ಒಂದು ನಿಶ್ಚಿತ ಕೃಷಿಧೋರಣೆ ಇಂದು ಅತ್ಯಗತ್ಯವಾಗಿ ಬೇಕಾಗಿರುವದು. ಅದನ್ನು ಲೇಖಕರು ಇಲ್ಲಿ ಪ್ರತಿಪಾದಿಸಿದ್ದಾರೆ.

ಲೇಖಕರು: ಡಾ॥ ಎನ್. ಪಿ. ಮುಜುಮದಾರ, ಎಂ.ಎ., ಪಿ. ಎಚ್. ಡಿ.

"ಕೋಟಿವಿದ್ಯೆಗಳಲ್ಲೆಲ್ಲ ಮೇಟಿವಿದ್ಯೆಯೇ ಮೇಲು" ಎಂದು ನಮ್ಮ ಹಿರಿಯರು ಹೇಳಿದ ಮಾತು ಬರಿ ನಾಣ್ನುಡಿಯಷ್ಟೇ ಆಗಿರದೆ, ಆರ್ಥಿಕ ಸತ್ಯವನ್ನೊಳಗೊಂಡ ನಿಜ ಸಂಗತಿಯಾಗಿದೆ ಎಂಬದನ್ನು ನಾವು ಎರಡನೆಯ ಪಂಚವಾರ್ಷಿಕ ಯೋಜನೆಯ ಹೊಸತಿಲನ್ನು ದಾಟದ ಮೇಲೆ ಪುನರಪಿ ಮನಗಾಣುತ್ತಿದ್ದೇವೆ. ಮೊದಲ ಯೋಜನೆಯಲ್ಲಿ ಒಕ್ಕಲತನದ ಕ್ಷೇತ್ರದಲ್ಲಿಯ ಪ್ರಗತಿಯು ನಿರೀಕ್ಷೆ ಮೀರಿ ಯಶಸ್ವಿಯಾಗಿದ್ದರಿಂದ, ಯೋಜಕರಲ್ಲಿ ಅದರ ಬಗ್ಗೆ ಒಂದು ರೀತಿಯ ಆತ್ಮವಿಶ್ವಾಸ ಉತ್ಪನ್ನವಾಯಿತು. ಅಂತೆಯೇ ಎರಡನೆಯ ಯೋಜನೆಯಲ್ಲಿ ಒಕ್ಕಲತನಕ್ಕೆ ಪ್ರಥಮ ಸ್ಥಾನ ಸಿಕ್ಕದೆ, ಮೂಲ ಉದ್ದಿಮೆಗಳ ಅಭಿವೃದ್ಧಿಗೆ ವಿಶೇಷ ಪ್ರಾತಿನಿಧ್ಯ ಕೊಡಲಾಯಿತು. ಒಕ್ಕಲತನ ಅಭಿವೃದ್ಧಿ ಹಾಗೂ ನೀರಾವರಿ ಯೋಜನೆಗಳಿಗೆ ಮೊದಲ ಯೋಜನೆಯಲ್ಲಿ ಒಟ್ಟು ವೆಚ್ಚದ ೧/೩ ದಷ್ಟು ಹಣವನ್ನು ವಿನಿಯೋಗಿಸಿದ್ದರೆ, ಎರಡನೆಯ ಯೋಜನೆಯಲ್ಲಿ ಕೇವಲ ೧/೫ ದಷ್ಟು ಹಣ ಕಾದಿರಿಸಲಾಗಿದೆ. ತದ್ವಿರುದ್ಧ, ಉದ್ದಿಮೆ, ಖನಿಜ ಹಾಗೂ ಸಾರಿಗೆ ಸಂಪರ್ಕ ಇವುಗಳಿಗೇನೇ ಯೋಜನೆಯ ಒಟ್ಟು ವೆಚ್ಚದ ಅರ್ಧದಷ್ಟು ಭಾಗವನ್ನು ಎರಡನೆಯ ಯೋಜನೆಯಲ್ಲಿ ಕಾಯ್ದಿರಿಸಲಾಗಿದೆ.

ಆದರೆ ಎರಡನೆಯ ಯೋಜನೆಯ ಎರಡು ವರ್ಷಗಳು ಮುಗಿಯುವ ಪೂರ್ವದಲ್ಲಿಯೇ ಆಹಾರ ಧಾನ್ಯಗಳ ಕೊರತೆಯು ದೇಶದಾದ್ಯಂತ ತಲೆದೋರಿ, ಅವುಗಳ ಬೆಲೆಗಳು ಮಿತಿಮೀರಿ ಏರಿದುದು ನಮಗೆಲ್ಲರಿಗೆ ಸುಪರಿಚಿತ ಸಂಗತಿಯಾಗಿದೆ. ಅಂತೆಯೇ ಯೋಜಕರ ದೃಷ್ಟಿಯು ಮತ್ತೆ ಒಕ್ಕಲತನದ ಕಡೆಗೆ ಕೇಂದ್ರೀಕೃತವಾಗಬೇಕಾಗಿದೆ. ಕಬ್ಬಿಣ-ಉಕ್ಕುಗಳ ಕಾರಖಾನೆಗಳನ್ನು ಕಟ್ಟುವ ಹುಮ್ಮಸದಲ್ಲಿ, ಕಬ್ಬಿನ ತೋಟ, ಭತ್ತದ ಗದ್ದೆಗಳನ್ನು ನಾವು ದುರ್ಲಕ್ಷಿಸಲಾರೆವು.

ಈ ವಿಷಯದಲ್ಲಿ ನಾವು ನೆನಪಿಡಬೇಕಾದ ಇನ್ನೊಂದು ಮಹತ್ವದ ಸಂಗತಿಯೆಂದರೆ ಭಾರತದ ಒಕ್ಕಲತನದ ಮೇಲೆ ಮಳೆಯ ಪ್ರಭಾವ. ಇಷ್ಟೆಲ್ಲ ಅಭಿವೃದ್ಧಿ ಯೋಜನೆಗಳು ಮುಗಿದರೂ ಒಟ್ಟು ಸಾಗುವಳಿ ಮಾಡಿದ ಭೂಮಿಯು ೧೮% ದಷ್ಟು ಕ್ಷೇತ್ರ ಮಾತ್ರ ನೀರಾವರಿ ಸೌಲಭ್ಯವುಳ್ಳದ್ದಾಗಿದೆ. ಹೀಗಾಗಿ, ಒಂದು ವರ್ಷ ಮಳೆ ಕೈ-ತಪ್ಪಿಹೋಯಿತೆಂದರೆ, ನಮ್ಮ ದಾಮೋದರ ಮತ್ತು ಭಾಕ್ರಾ-ನಾಂಗಲದಂಥ ಯೋಜನೆಗಳ ಎಲ್ಲ ನೀರು, ಹಾಗೂ ಸಿಂದ್ರಿಯ ಎಲ್ಲ ಕೃತಕ ಗೊಬ್ಬರ, ನಿಸ್ಸಹಾಯಕವಾಗಿ ನಿಲ್ಲಬೇಕಾಗುತ್ತದೆ! ಈ ರೀತಿ ನಮ್ಮ ಒಕ್ಕಲತನವನ್ನು "ಸಾದ" ಮಾಡುವದು ಇಂದಿಗೂ ಅಸಾಧ್ಯವಾಗಿಯೇ ಉಳಿದಿದೆ.

ಈ ಸಂಗತಿಗಳ ಹಿನ್ನೆಲೆಯಲ್ಲಿ ಅಶೋಕ ಮೆಹತಾ ಸಮಿತಿಯ ಸಲಹೆಯು ಸ್ವಲ್ಪ ಆಶ್ಚರ್ಯದಾಯಕವಾಗಿದೆಯೆಂದೇ ಹೇಳಬೇಕು. ವರ್ಷಕ್ಕೆ ೩-೪ ದಶಲಕ್ಷ ಟನ್ನುಗಳಷ್ಟು ಆಹಾರ-ಧಾನ್ಯಗಳನ್ನು ಆಯಾತ ಮಾಡಬೇಕೆಂದು ಈ ವರದಿಯು ಪ್ರತಿಪಾದಿಸಿದೆ. ನಮ್ಮ ದೇಶದಲ್ಲಿ ನೂರಕ್ಕೆ ೭೦ರಷ್ಟು ಜನರು ಒಕ್ಕಲತನದಲ್ಲಿ ಕೆಲಸ ಮಾಡುತ್ತಿದ್ದಾರೆ. ರಾಷ್ಟ್ರೀಯ ಆದಾಯದ ೫೦% ರಷ್ಟು ಭಾಗವನ್ನು ಒಕ್ಕಲತನದಿಂದಲೇ ಪಡೆಯುತ್ತಿದ್ದೇವೆ. ಇಷ್ಟು ಕೃಷಿಪ್ರಧಾನವಾದ ದೇಶವು ದೊಡ್ಡ ಪ್ರಮಾಣದ ಮೇಲೆ ಆಹಾರಧಾನ್ಯಗಳನ್ನೇ ಆಯಾತ ಮಾಡಹತ್ತಿದರೆ, ನಮ್ಮ ಯೋಜನೆಯಿಂದಾದರೂ ಏನು ಪ್ರಯೋಜನ? ಎಂದು ಕೇಳಿದರೆ ಅಪ್ರಸ್ತುತವಾಗಲಾರದು.

## ಕೃಷಿಧೋರಣೆಯ ಅವಶ್ಯಕತೆ

ನಮ್ಮ ಒಕ್ಕಲತನವು ದೇಶಕ್ಕೆ ಅವಶ್ಯವಿದ್ದ ಆಹಾರಧಾನ್ಯಗಳನ್ನು ಉತ್ಪಾದಿಸಲು ಶಕ್ತವಿದೆಯೆಂದು ನಿಃಸಂಶಯವಾಗಿ ಹೇಳಬಹುದು. ಹಾಗಾದರೆ ದೋಷವೆಲ್ಲಿದೆ? ಮೊದಲನೆಯದಾಗಿ ನಮಗೆ ಒಂದು ಸುಸ್ಪಷ್ಟ, ಸುಸಂಗತ ಹಾಗೂ ದೃಢ, ಕೃಷಿಧೋರಣೆಯ ಅವಶ್ಯಕತೆಯಿದೆ. ಔದ್ಯೋಗಿಕ ಬೆಳವಣಿಗೆಯ ವಿಷಯವಾಗಿ ನಾವು ೧೯೪೮ ರಿಂದಲೇ ಒಂದು ನಿರ್ದಿಷ್ಟ ಧೋರಣೆಯನ್ನು ರೂಪಿಸುತ್ತ ಬಂದಿದ್ದರೂ ಒಕ್ಕಲತನದ ವಿಷಯದಲ್ಲಿ ಇಂದಿಗೂ ನಮ್ಮ ಧೋರಣೆ ಅಸ್ಪಷ್ಟ, ಸಂದಿಗ್ಧ, ಅನಿಶ್ಚಿತವಾಗಿಯೇ ಉಳಿದಿದೆ ಎಂದು ಹೇಳಲಡ್ಡಿಯಿಲ್ಲ. ಭೂಸುಧಾರಣೆ, ಗ್ರಾಮೀಣ ಸಾಲದ ಸವಲತ್ತುಗಳು, ಸಮಾಜವಿಕಾಸ ಯೋಜನೆ, ಸಹಕಾರೀ ಆಂದೋಲನ, ಗ್ರಾಮಪಂಚಾಯತಿಗಳ ಬೆಳವಣಿಗೆ— ಇವೇ ಮೊದಲಾದ ವಿವಿಧ ಕಾರ್ಯಕ್ರಮಗಳಲ್ಲಿ ನಾವು ಅರೆಮನಸ್ಸಿನಿಂದ ಮುಂದುವರಿಯುತ್ತಿದ್ದೇವೆ ಎಂಬದು ವಿಶ್ಲೇಷಣಾತ್ಮಕ ದೃಷ್ಟಿಯಿಂದ ನೋಡಿದರೆ, ಸ್ಪಷ್ಟವಾಗುವದು. ವ್ಯಾಪಕ ಹಾಗೂ ದೃಢ ಧೋರಣೆಯಿಲ್ಲದ ಮೂಲಕವೇ ಕೃಷಿ ಅರ್ಥ-ವ್ಯವಸ್ಥೆಯಲ್ಲಿ ಅನೇಕ ಕುಂದು-ಕೊರತೆಗಳು ತಲೆದೋರಿ, ಉತ್ಪಾದನೆ ಹಾಗೂ ಕಾರ್ಯಕ್ಷಮತೆಯನ್ನು ಹೆಚ್ಚಿಸುವದಕ್ಕೆ ಅತಂಕವಾಗುತ್ತಿವೆ; ಅಲ್ಲದೆ ಲಭ್ಯವಿದ್ದ ಸೌಕರ್ಯ ಸಾಧನಗಳ ಸಂಪೂರ್ಣ ಉಪಯೋಗವೂ ಕೆಲವೆಡೆ ಆಗುತ್ತಿಲ್ಲ. ಒಮ್ಮೆಲೆ ಒಡೆದು ಕಾಣುವ ಇಂಥ ಒಂದು ದೃಷ್ಟಾಂತವೆಂದರೆ ನಮ್ಮ ನೀರಾವರಿ ಸೌಕರ್ಯ. 'ಒಕ್ಕಲತನದ ಹುಟ್ಟುವಳಿಯನ್ನು ಸಾಧ್ಯವಿದ್ದಷ್ಟು ಹೆಚ್ಚಿಸಿರಿ' ಎಂಬ ಕೂಗು ಎಲ್ಲೆಡೆಯಲ್ಲಿಯೂ ಕೇಳಿ ಬರುತ್ತಿದ್ದಾಗ, ಇನ್ನೊಂದೆಡೆಗೆ ಲಭ್ಯವಿದ್ದ ನೀರಾವರಿ ಸೌಕರ್ಯಗಳಲ್ಲಿ ನೂರಕ್ಕೆ ೫೦ ರಷ್ಟು ಭಾಗವನ್ನು ಒಕ್ಕಲಿಗರು ಉಪಯೋಗಮಾಡಿಕೊಂಡಿಲ್ಲ ಎಂಬ ಸಂಗತಿಯನ್ನು ನಾವು ಕಾಣುತ್ತೇವೆ! ಇಂಥ ಅಸಂಬದ್ಧ ಪರಿಸ್ಥಿತಿಯನ್ನು ದೂರಮಾಡಿ, ಒಕ್ಕಲತನದ ಪ್ರಗತಿಯ ಗತಿಯನ್ನು ಹೆಚ್ಚಿಸಲು ಹೆಚ್ಚು ಯುಕ್ತವಾದ ಕೃಷಿಧೋರಣೆಯ ಅಗತ್ಯವಿದೆ.

## ಭೂ-ಸುಧಾರಣೆಗಳು

ಒಕ್ಕಲತನದಲ್ಲಿ ಕಾರ್ಯಕ್ಷಮತೆ ಹೆಚ್ಚಿಸುವದು, ಸಾಮಾಜಿಕ ನ್ಯಾಯವನ್ನು ದೊರಕಿಸುವದು ಹಾಗೂ ಸಾಮಾನ್ಯವಾಗಿ ಆರ್ಥಿಕ ಅಭಿ-ವೃದ್ಧಿಗೆ ಅನುವು ಮಾಡಿಕೊಡುವದು ಇವು ನಾವು ಕೈಕೊಳ್ಳುತ್ತಿರುವ ಭೂಸುಧಾರಣೆಗಳ ಮೂಲೋದ್ದೇಶಗಳೆಂದು ಹೇಳಬಹುದು. ಜಮೀನುದಾರಿ ನಿರ್ಮೂಲನವು ಈ ತರಹದ ಭೂಸುಧಾರಣೆಗಳ ನಾಂದಿಯಾಯಿತೆಂದು ಹೇಳಬಹುದು. ತತ್ಪರಿಣಾಮವಾಗಿ ಜಮೀನುದಾರನ ಭೂಮಿಯ ಒಡೆ-ತನದ ಹಕ್ಕನ್ನು ಅವನಿಗೆ ಯೋಗ್ಯ ಪರಿಹಾರ ಧನವನ್ನು ಕೊಟ್ಟು ರಾಜ್ಯ ಸರಕಾರವೇ ವಹಿಸಿಕೊಂಡಿತು; ಹಾಗೂ ಈ ರೀತಿ ರೈತನು ನೇರವಾಗಿ ಸರಕಾರದ ಸಂಪರ್ಕದಲ್ಲಿ ತರಲ್ಪಟ್ಟನು. ಒಟ್ಟು ೧೭೩ ದಶಲಕ್ಷ ಎಕರೆಯಷ್ಟು ಕ್ಷೇತ್ರವು ಜಮೀನುದಾರಿ ನಿರ್ಮೂಲನಕ್ಕೆ ಒಳಪಟ್ಟಿತು ಎಂಬದನ್ನು ನೋಡಿದಾಗ ಈ ಸಮಸ್ಯೆಯ ಗಾತ್ರದ ಕಲ್ಪನೆಯು ಬರಲು ಸಾಕು. ಒಂದು ದೃಷ್ಟಿಯಿಂದ ಜಮೀನ

ದಾರಿ ನಿರ್ಮೂಲನದಿಂದ ರೈತರಿಗೆ ನೇರವಾದ ಆರ್ಥಿಕ ಲಾಭವಾದಂತಿಲ್ಲ. ಏಕೆಂದರೆ ಈ ಮೊದಲು ಜಮೀನುದಾರನಿಗೆ ಕೊಡುತ್ತಿದ್ದಷ್ಟೇ ತೆರಿಗೆಯನ್ನು ಈಗ ಅವನು ಸರಕಾರಕ್ಕೆ ಕೊಡಬೇಕಾಗುವದು. ಆದರೆ ಜಮೀನದಾರಿ ಪದ್ಧತಿಯಲ್ಲಿ ಅಡಕವಾಗಿದ್ದ ಅನೇಕ ವಿಧದ ಶೋಷಣೆಗೆ ಪೂರ್ಣ ವಿರಾಮ ವಿತ್ತಂತಾಯಿತು. ಮೇಲಾಗಿ, ಗೇಣಿದಾರರು ಭೂಮಿಯ ಮಾಲಕೀ ಹಕ್ಕುಗಳನ್ನು, ಯೋಗ್ಯ ಬೆಲೆ ಕೊಟ್ಟು ಪಡೆದುಕೊಳ್ಳಲು ಅನುವು ಮಾಡಿ ಕೊಡಲಾಗಿದೆ.

## ಟೆನನ್ಸಿ ಕಾಯ್ದೆಗಳಿಗೆ ವಿರೋಧ

ಜಮೀನುದಾರಿ ನಿರ್ಮೂಲನಕ್ಕೆ, ಜಮೀನದಾರರನ್ನಷ್ಟು ಬಿಟ್ಟು ಬೇರೆಯವರಿಂದ ಅಷ್ಟೊಂದು ವಿರೋಧವಿರಲಿಲ್ಲ. ಆದರೆ ತದ್ವಿರುದ್ಧ ಅದೇ ಪಂಚವಾರ್ಷಿಕ ಯೋಜನೆಯಲ್ಲಿ ಪ್ರತಿಪಾದಿಸಲಾದ ಟೆನನ್ಸಿ (Tenancy) ಕಾನೂನುಗಳಿಗೆ ಬಹಳಷ್ಟು ವಿರೋಧವು ಕಂಡುಬರುತ್ತಿದೆ. ಇದಕ್ಕೆ ಕಾರಣವೆಂದರೆ ರೈತವಾರೀ ಕ್ಷೇತ್ರದಲ್ಲಿದ್ದ ಭೂಮಿಯೊಡೆಯರನ್ನು ಈ ಕಾನೂನುಗಳು ಬಾಧಿಸುವವು. ಈ ವರ್ಗದ ಜನರು ದೇಶದ ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ಪ್ರತಿಭಾವಂತರಾಗಿದ್ದುದರಿಂದ ಇಂಥ ಕಾನೂನುಗಳಿಗೆ ಪರಿಣಾಮಕಾರಿ ವಿರೋಧ ಮಾಡಲು ಶಕ್ತರಾಗಿದ್ದಾರೆ.

ಮುಖ್ಯವಾಗಿ ಭೂಮಿಯ ಕಂದಾಯವನ್ನು ಕಡಿಮೆ ಮಾಡಿ, ಗೇಣಿದಾರನಿಗೆ ಸುರಕ್ಷಿತ ಸಾಗುವಳಿ ಹಕ್ಕನ್ನು ಕೊಡುವದೇ ಇಂಥ ಕಾನೂನುಗಳ ಉದ್ದೇಶವಾಗಿದೆ. ಈ ಕಾಯದೆಗಳು ಅಸ್ತಿತ್ವದಲ್ಲಿ ಬರುವ ಪೂರ್ವದಲ್ಲಿ, ಸಾಮಾನ್ಯವಾಗಿ, ರೈತನು ಒಟ್ಟು ಹುಟ್ಟುವಳಿಯ ಅರ್ಧದಷ್ಟು ಭಾಗವನ್ನು ಭೂಮಿಯೊಡೆಯನಿಗೆ ಕೊಡಬೇಕಾಗುತ್ತಿತ್ತು. ಕೆಲವೆಡೆ ನೂರಕ್ಕೆ ೭೫ ರಷ್ಟು ಭಾಗವನ್ನು ಕೊಡುವದೂ ರೂಢಿಯಲ್ಲಿತ್ತು. ಈ ಪರಿಮಾಣವನ್ನು ಈಗ ಸಾಕಷ್ಟು ಕಡಿಮೆಮಾಡಿದ್ದಾರೆ. ಮುಂಬಯಿ ರಾಜ್ಯದಲ್ಲಿ ೧/೬ ದಷ್ಟು ಭಾಗವನ್ನು ಕೊಡಬೇಕೆಂದು ನಿರ್ದಿಷ್ಟಪಡಿಸಿದ್ದಾರೆ. ಅದರಂತೆ ಈಗ ರೈತರನ್ನು ಮನಬಂದಂತೆ ಹೊಲ ಬಿಡಿಸಿ ಬೇರೆಯವರಿಗೆ ಕೊಡಬರುವದಿಲ್ಲ. ಈ ತರಹದ ಸಂರಕ್ಷಣೆಯಿಂದ ರೈತರು ಹೊಲದಲ್ಲಿ ಮನಸ್ಸು ಹಾಕಿ ಉತ್ಪಾದನೆಯನ್ನು ಹೆಚ್ಚಿಸಬಹುದೆಂದು ಆಶಿಸಲಾಗಿದೆ. ಇನ್ನೊಂದು ಗಮನಾರ್ಹವಾದ ವಿಷಯವೆಂದರೆ, ಕೆಲ ರಾಜ್ಯ-ಸರಕಾರಗಳು ಯೋಜನಾ ಆಯೋಗದ ಸಲಹೆಗಳನ್ನು ದುರ್ಲಕ್ಷಿಸಿ, ಭೂಮಿಯೊಡೆಯರಿಗೆ ಅನುಕೂಲವಾಗುವಂತೆ ಕಾಯಿದೆಗಳನ್ನು ಪಾಸುಮಾಡಿಕೊಂಡಿವೆ!

ಇದಕ್ಕೂ ಹೆಚ್ಚಿನ ದುರ್ದೈವದ ಸಂಗತಿಯೆಂದರೆ ಇದ್ದ ಕಾಯಿದೆಗಳನ್ನೂ ಬಳಕೆಯಲ್ಲಿ ತರದಿರುವದು. ಉದಾಹರಣೆಗಾಗಿ, ಬಹಳಷ್ಟು ರೈತರು ಕಾನೂನಿನಲ್ಲಿ ನಿರ್ದಿಷ್ಟಪಡಿಸಿದ್ದಕ್ಕಿಂತ ಹೆಚ್ಚು ಲಾವಣಿಯನ್ನು ಕೊಡುತ್ತಿದ್ದಾರೆಂಬ ವಿಷಯವನ್ನು ಎಲ್ಲರೂ ಒಪ್ಪಬೇಕಾಗಿದೆ. ಅದರಂತೆಯೇ ಟೆನನ್ಸಿ ಕಾಯಿದೆಯು ಅಸ್ತಿತ್ವದಲ್ಲಿ ಬಂದ ಮರುವರ್ಷವೇ ರೈತರನ್ನು ಕಿತ್ತೊಗೆಯುವದು, ಬದಲಾಯಿಸುವದು, ಬಹಳಷ್ಟು ದೊಡ್ಡ ಪ್ರಮಾಣದಲ್ಲಿ ನಡೆಯಿತು. ಈ ರೀತಿ ಭೂಮಿಯೊಡೆಯರು ರೈತರಿಗೆ ಕಾಯಿದೆಯ ಮೂಲಕ ಸಿಕ್ಕಬಹುದಾದ ಲಾಭವನ್ನು ಚಾಣಾಕ್ಷರೀತಿಯಿಂದ ಕಸಿದುಕೊಳ್ಳಲು ಯತ್ನಿಸಿದರು. ಈ ಬರಿ ಕಾಯಿದೆಗಳನ್ನು ಪಾಸು ಮಾಡಿವರೆ ಕರ್ತವ್ಯವು ಕೊನೆಗಂಡಂತಾಗಲಿಲ್ಲ; ಅವನ್ನು ಜಾರಿಯಲ್ಲಿ ತರುವದೂ ಅಷ್ಟೇ ಮಹತ್ವದ್ದಾಗಿದೆ — ಎಂಬ ಮಾತನ್ನು ಸರಕಾರಗಳು ಇನ್ನೂ ತಿಳಿದುಕೊಳ್ಳಬೇಕಾಗಿದೆ. ಅದೇ ರೀತಿ ರೈತ ವರ್ಗದಲ್ಲಿಯೂ ಈ ಕಾಯಿದೆಗಳ ಪ್ರಚಾರವಾಗಿ ಅವರಲ್ಲಿ ತಮ್ಮ ಹಕ್ಕುಗಳ ಬಗ್ಗೆ ಜಾಗೃತಿ ಉತ್ಪನ್ನವಾಗುವ ಅವಶ್ಯಕತೆಯಿದೆ.

ನಮ್ಮ ಭೂಸುಧಾರಣೆಗಳ ಅಂತಿಮ ಗುರಿ ಯಾವದು?—ಈ ಪ್ರಶ್ನೆಗೂ ಯೋಜನಾ ಆಯೋಗದಿಂದ ಅಷ್ಟೊಂದು ಸಮಾಧಾನಕರ ಉತ್ತರ ಸಿಕ್ಕುವದಿಲ್ಲವೆಂದೇ ಹೇಳಬೇಕು. ಸಹಕಾರೀ ಗ್ರಾಮೀಣ ಆಡಳಿತೆಯೇ (Co-operative Village Management) ನಮ್ಮ ಕೊನೆಯ ಗುರಿಯೆಂದೇನೋ ಹೇಳಲಾಗಿದೆ. ಆದರೆ ಇದರ ಸಂಪೂರ್ಣ ಅರ್ಥವೇನು? ಮೊದಲನೆಯದಾಗಿ, ಈ ವ್ಯವಸ್ಥೆಯಲ್ಲಿ ಭೂಮಿಯ ಒಡೆತನ ಒಕ್ಕಲಿಗರಿಗೇನೇ ಸೇರಿದೆ. ಆಡಳಿತದ ಮಟ್ಟಿಗೆ ಅಧಿಕಾರವೆಲ್ಲ ಇಡಿಯ ಗ್ರಾಮಕ್ಕೆ ಅಥವಾ ಅದರ ಪ್ರತಿನಿಧಿ ಸಂಸ್ಥೆ ಗ್ರಾಮಪಂಚಾಯತಿಗೆ— ಸೇರಿದೆ, ಎಂದು ವಿವರಿಸಲಾಗಿದೆ. ಹಾಗೆ ನೋಡಿದ್ದರೆ, ಭೂಮಿಯನ್ನು ಸಾಗು ಮಾಡುವವನೇ ಹೊಲದ ಒಡೆಯನಾಗಬೇಕು; ಒಡೆಯನು ತನ್ನ ಹೊಲವನ್ನು ತಾನೇ ಸಾಗು ಮಾಡಬೇಕು — ಎಂಬದು ಭೂಸುಧಾರಣೆಯ ಮೂಲತತ್ವಗಳಲ್ಲೊಂದಾಗಿದೆ. ಹಾಗಿದ್ದರೂ, ಭೂಮಿಯ ಒಡೆಯ ರೈತನೇ ಆದರೂ, ಅದರ ಮೇಲ್ವಿಚಾರಣೆ, ಆಡಳಿತ, ವ್ಯವಸ್ಥೆ ಇವೆಲ್ಲ ಗ್ರಾಮಕ್ಕೆ ಸೇರಿದೆ ಎಂದರೆ ಏನರ್ಥ?

ಒಟ್ಟಾರೆ ಹೇಳಬೇಕೆಂದರೆ ನಮ್ಮ—ಭೂಮಿ ಧೋರಣೆಯ ಅಂತಿಮ ಗುರಿ ಏನೆಂಬುದರ ನಿರ್ದಿಷ್ಟ ನಿಷ್ಕರ್ಷೆ ಇನ್ನೂ ಆದಂತಿಲ್ಲ. "ಸಹಕಾರೀ ಆಡಳಿತ" ಅಥವಾ "ಸಮಗ್ರ ಸಾಮಾಜಿಕ ಹಾಗೂ ಆರ್ಥಿಕ ಸಮಾಜ ರಚನೆ ಇವೇ ಮೊದಲಾದ ಶಬ್ದವೈಡೂರ್ಯವು ಶ್ಲಾಘ್ಯವಾಗಬಹುದು. ಆದರೆ ಅವು ನೈಜ ಕಾರ್ಯಕ್ರಮಗಳ ತಳಹದಿಯಾಗಲಾರವು."

## ಗ್ರಾಮದಾನ ಆಂದೋಲನ

ಇದೇ ತರಹದ ಅನಿಶ್ಚಿತತೆ ಭೂದಾನ-ಗ್ರಾಮದಾನ ಹಾಗೂ ಸಹಕಾರೀ ಒಕ್ಕಲತನ ಕಾರ್ಯಕ್ರಮಗಳಲ್ಲೂ ಕಂಡುಬರುತ್ತದೆ. ಗ್ರಾಮದಾನ ಆಂದೋಲನಕ್ಕೆ ಯೋಜನಾ ಆಯೋಗದ ಆಶೀರ್ವಾದ ದೊರಕಿದಂತಿದೆ. ಆದರೆ ಒಂದು ಸುವ್ಯವಸ್ಥಿತ ಹಾಗೂ ಏಕರೂಪದ ಭೂಮಿ ಧೋರಣೆಯಲ್ಲಿ ಗ್ರಾಮದಾನದ ಸ್ಥಾನವೇನು? ಅಥವಾ ಗ್ರಾಮದಾನದ ಪಶ್ಚಾತ್ ಕಾರ್ಯಕ್ರಮಗಳನ್ನೆಲ್ಲ ಸರಕಾರ ಅಥವಾ ಯೋಜನೆಯ ಅಧಿಕಾರಿ ಏಕೆ ವಹಿಸಬಾರದು?—ಇವೆಲ್ಲ ಪ್ರಶ್ನೆಗಳ ಬಗ್ಗೆ ಪೂರ್ಣ ವಿಚಾರವಾಗಬೇಕು. ಇಂಥ ಆಂದೋಲನಗಳ ತಾತ್ವಿಕ ಇಲ್ಲವೆ ನೈತಿಕ ಮೌಲ್ಯಗಳನ್ನು ಯಾರೂ ಅಲ್ಲಗಳೆಯುವದಿಲ್ಲ; ಆದರೆ ಅವು ದೇಶದಾದ್ಯಂತ ಶರಬೇಕಾದ ಬದಲಾವಣೆಯ ಸುಯೋಜಿತ ಕಾರ್ಯಕ್ರಮಗಳ ಪ್ರತಿಯಾಗಿ ನಿಲ್ಲಲಾರವು.

ಸಹಕಾರಿ ಒಕ್ಕಲತನದ ಕಕ್ಷೆಯಲ್ಲಿ ದೇಶದ ಸಾಕಷ್ಟು ಭೂಮಿಯನ್ನು ತರಬೇಕು ಎಂದು ಎರಡನೆಯ ಪಂಚವಾರ್ಷಿಕ ಯೋಜನೆಯು ಪ್ರತಿಪಾದಿಸುತ್ತಿದೆ. ಆದರೆ ತೀರ ಇತ್ತೀಚಿಗೆ ಇದರ ಬಗ್ಗೆ ಪುನರ್ವಿಚಾರಣೆ ನಡೆದಂತೆ ತೋರುತ್ತದೆ. ಉದಾಹರಣೆಗಾಗಿ ಹೇಳುವದಾದರೆ ದೇಶದಲ್ಲಿಯ ಸುಮಾರು ೨೦೦೦ ಸಹಕಾರೀ ಒಕ್ಕಲತನದ ಸಂಘಗಳನ್ನು ಪರಿಶೀಲಿಸಿದಾಗ, ಒಂದೂ ನಿಜವಾದ ಸಹಕಾರೀ ಸಂಘವಿಲ್ಲದ್ದು ಕಂಡು ಬಂದಿತು! ಸರಕಾರದಿಂದ ಲಭ್ಯವಿದ್ದ ಧನಸಹಾಯವನ್ನಾಗಲೀ ಇತರ ಸವಲತ್ತುಗಳನ್ನಾಗಲೀ ಪಡೆಯಲು ಬಹಳಷ್ಟು ಸಂಘಗಳು ಸಹಕಾರದ ಸೋಗು ಹಾಕಿದ್ದವು! ಅದೇನೇ ಇರಲಿ. ನಮ್ಮ ದೇಶದ ಪರಂಪರೆ ಹಾಗೂ ವಾತಾವರಣದಲ್ಲಿ ಸಹಕಾರಿ ಒಕ್ಕಲತನವು ಅಭಿವೃದ್ಧಿಯಾಗಬಲ್ಲದೇ? ಅಥವಾ ಈಗ ಅಸ್ತಿತ್ವದಲ್ಲಿದ್ದ ವೈಯಕ್ತಿಕ ಒಕ್ಕಲಿಗರೇ, ಕೆಲ ಹೆಚ್ಚಿನ ಸವಲತ್ತುಗಳನ್ನು ಒದಗಿಸಿದರೆ, ಅವಶ್ಯವಿದ್ದ ಸುಧಾರಣೆಗಳನ್ನು ತರಲು ಅರ್ಹರಿರುವರೇ? – ಇವೇ ಮುಂತಾದ ವಿಷಯಗಳನ್ನು ಕೂಲಂಕಷವಾಗಿ ವಿಚಾರಿಸಬೇಕಾಗಿದೆ.

## ಸಹಕಾರಿ ಆಂದೋಲನ

ಒಕ್ಕಲತನದ ಅಭಿವೃದ್ಧಿಗೆ ಬರಿ ಆಂತರಿಕ ಬದಲಾವಣೆಗಳಷ್ಟೇ ಸಾಲದು; ರೈತರಿಗೆ ಧನಸಹಾಯ ಮತ್ತು ಹುಟ್ಟುವಳಿಯ ಮಾರಾಟಕ್ಕೆ ಸೌಲಭ್ಯಗಳು ಇವೂ ಅವಶ್ಯವಿವೆ. ಈ ದೃಷ್ಟಿಯಿಂದಲೇ ಗ್ರಾಮೀಣ ಪತ್ತಿನ ಸಮೀಕ್ಷಣೆ ಮಾಡಲು ರಿಜರ್ವ ಬ್ಯಾಂಕು ಒಂದು ಸಮಿತಿಯನ್ನು ನಿಯಮಿಸಿತ್ತು. ಅವರು "ಸಹಕಾರೀ ಆಂದೋಲನವು ಯಶಸ್ವಿಯಾಗಿಲ್ಲ; ಆದರೆ ಅದು ಯಶಸ್ವಿಯಾಗಲೇ ಬೇಕು" ಎಂಬ ಮೂಲಸೂತ್ರವನ್ನು ದೇಶದೆದುರು ಇಟ್ಟರು. ಅಂತೆಯೇ "ಸರಕಾರ-ಸಂಗಾತಿಯಾದ-ಸಹಕಾರ" ವೆಂಬ ಹೊಸ ರೂಪ ಧರಿಸಿ ಸಹಕಾರೀ ಆಂದೋಲನದ ಪುನರುಜ್ಜೀವನ ಆರಂಭವಾಗಿದೆ. ಇದರರ್ಥವಿಷ್ಟೇ ಸರಕಾರವು ಸಹಾಯಕ್ಕೆ ಬಂದುದಾದರೆ, ಸಹಕಾರೀ ಆಂದೋಲನವು ಗ್ರಾಮೀಣ ಪತ್ತು, ಮಾರಾಟ, ಅಷ್ಟೇ ಏಕೆ ಗ್ರಾಮೀಣ ಪುನರ್ರಚನೆಗೇನೇ ತುಂಬ ಸಹಾಯಮಾಡಲು ಶಕ್ತವಾಗುವದು. ಇಂಥ ವ್ಯವಸ್ಥೆಯಲ್ಲಿ ಸರಕಾರವು ದೇಶದಾದ್ಯಂತ ಸಹಕಾರೀ ಸಂಸ್ಥೆಗಳನ್ನು ನಿರ್ಮಾಣ ಮಾಡುವದರಲ್ಲಿ ಮುಂದಾಗಿ, ಈ ಸಂಸ್ಥೆಗಳಿಗೆ ಧನಸಹಾಯ ಒದಗಿಸಿ ಅವನ್ನು ಬೆಳೆಯಿಸ

ಬೇಕು. ಕೆಲಕಾಲದ ನಂತರ, ಸಹಕಾರೀ ಸಂಸ್ಥೆಗಳು ತಮ್ಮ ಕಾಲಮೇಲೆ ನಿಲ್ಲಲು ಸಮರ್ಥವಾಗುವವು; ಆಗ ಸರಕಾರವು ತನ್ನ ಕೈ ಹಿಂತೆಗೆದುಕೊಳ್ಳಬೇಕು.

ಈ ತತ್ವವನ್ನು ಯೋಜನಾ ಆಯೋಗವು ಸ್ವೀಕರಿಸಿ, ಅದರಂತೆ ಗ್ರಾಮೀಣ ಪತ್ತು ಹಾಗೂ ಹುಟ್ಟುವಳಿಯ ಮಾರಾಟಕ್ಕಾಗಿ ಸಹಕಾರೀ ಸಂಸ್ಥೆಗಳನ್ನು ನಿರ್ಮಿಸುವ ಒಂದು ಮಹತ್ವಾಕಾಂಕ್ಷೆಯ ಕಾರ್ಯಕ್ರಮವನ್ನು ಹಾಕಿಕೊಂಡಿತು. ಆದರೆ ಅಷ್ಟರಲ್ಲಿ ಮತ್ತೆ ಈ ವಿಷಯದ ಮೇಲೆ ಭಿನ್ನಾಭಿಪ್ರಾಯವುಂಟಾಗತೊಡಗಿತು. ಸರ್ ಡಾರ್ಲಿಂಗರು ಇತ್ತೀಚಿನ ಸಹಕಾರೀ ಬೆಳವಣಿಗೆಯನ್ನು ಅಭ್ಯಸಿಸಿ ಒಂದು ವರದಿಯನ್ನೊಪ್ಪಿಸಿದರು. ಅದರಲ್ಲಿ ಅವರು ಮುಖ್ಯವಾಗಿ ಕಾಣಿಸಿದ ಮಾತುಗಳು ಎರಡು; ಮೊದಲನೆಯದಾಗಿ ಹೊಸ ಸಹಕಾರೀ ಸಂಸ್ಥೆಗಳನ್ನು ನಿರ್ಮಿಸುವ ಹುಮ್ಮಸದಲ್ಲಿ ಈಗಿದ್ದ ಸಂಸ್ಥೆಗಳನ್ನು ನಾವು ಅಲಕ್ಷಿಸುತ್ತಿದ್ದೇವೆ. ಆದುದರಿಂದ ಈಗ ಬೇಕಾದುದು ಮಿತಿಮೀರಿದ ವಿಸ್ತಾರವಲ್ಲ, ಆದರೆ ಇದ್ದುದನ್ನೇ ಬಲಪಡಿಸುವದು. ಎರಡನೆಯದಾಗಿ, ಸರಕಾರವು ಸಹಕಾರೀ ಆಂದೋಲನದಲ್ಲಿ ಭಾಗವಹಿಸುವ ಮೂಲತತ್ವವು ಅಷ್ಟೊಂದು ಶುಭಸೂಚಕವಲ್ಲವೆಂದು ಅವರು ಬಗೆದರು. ಸಹಕಾರೀ ಆಂದೋಲನವು ಜನರ ಆಂದೋಲನವು. ಆದುದರಿಂದ ಅದು ಜನರ ಮೂಲಕವೇ ತಂತಾನೇ, ಅವ್ಯಾಹತವಾಗಿ ಹೊರಹೊಮ್ಮಬೇಕೇ ವಿನಾ ಸರಕಾರವು ಹೊರೆಸಿದ ಹೊರೆ ಎಂದೆನಿಸಿಕೊಳ್ಳಬಾರದು.

ಈ ವರದಿಯ ಪರಿಣಾಮವಾಗಿಯೋ ಏನೋ ಎಂಬಂತೆ, ಮುಂದೆ ಕೆಲ ದಿನಗಳ ಮೇಲೆ ಸೇರಿದ ಅಖಿಲಭಾರತ ಸಹಕಾರೀ ಪರಿಷತ್ತಿನಲ್ಲಿ ಭಾರತದ ಪ್ರಧಾನ ಮಂತ್ರಿಗಳು ನಾವು ಈ ತತ್ವವನ್ನು ಸ್ವೀಕರಿಸುವದರಲ್ಲಿ ತಪ್ಪು ಮಾಡಿದ್ದೇವೆ ಎಂದು ಹೇಳಿದರು. ಇಲ್ಲಿ ನಮಗೆ ಮುಖ್ಯವಾಗಿ ಒತ್ತಿ ಹೇಳಬೇಕಾದ ವಿಷಯವೆಂದರೆ, ತಜ್ಞರ ಒಂದು ಸಮಿತಿಯ ವರದಿಯನ್ನು ಕೂಲಂಕಷವಾಗಿ ವಿಚಾರಿಸಿ, ಕೆಲ ಸೂಚನೆಗಳನ್ನು ಅಂಗೀಕರಿಸಿ, ಅದರಂತೆ ಕಾರ್ಯಕ್ರಮಗಳನ್ನು ಹಾಕಿಕೊಂಡು ಮುಂದುವರಿದ ಎರಡು ವರುಷಗಳ ನಂತರ, ನಾವು ಹಿಡಿದ ದಾರಿ ತಪ್ಪು ಎಂದರೆ ಹೇಗೆ? ಯೋಜನೆಯು ಯಾವ ವಿಷಯದಲ್ಲೂ ತಪ್ಪಾಗುವದಿಲ್ಲವೆಂದು ನಾವು ಹೇಳುವದಿಲ್ಲ. ಆದರೆ ಕ್ಷಣಕ್ಷಣಕ್ಕೆ ನಮ್ಮ ಮೂಲಭೂತ ತತ್ವಗಳನ್ನೇ ಬದಲಿಸುತ್ತ ಹೋಗುವದು ನಮ್ಮ ಧೋರಣೆಯ ಅನಿಶ್ಚಿತತೆಯ ಹೆಗ್ಗುರುತಾಗಿದೆಯೆಂದು ಮಾತ್ರ ನಮ್ರತಾಪೂರ್ವಕವಾಗಿ ಸೂಚಿಸಬೇಕಾಗುತ್ತದೆ.

### ಸಮಾಜವಿಕಾಸ ಯೋಜನೆಗಳು

ಗ್ರಾಮೀಣಜೀವನದಲ್ಲಿ ಹೊಸ ಹುಮ್ಮಸವನ್ನು ಹುಟ್ಟಿಸಿ, ಸರ್ವಾಂಗೀಣ ಬೆಳವಣಿಗೆಗೆ ಜನರನ್ನು ಸಿದ್ಧಪಡಿಸುವದಕ್ಕಾಗಿ, ಸಮಾಜ ವಿಕಾಸ ಯೋಜನೆ ಹಾಗೂ ರಾಷ್ಟ್ರೀಯ ವಿಸ್ತರಣ ಸೇವೆ- ಈ ಕಾರ್ಯಕ್ರಮಗಳು ಜನ್ಮವೆತ್ತವು. ಮೊದಲನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಸುಮಾರು ೮೦ ದಶಲಕ್ಷ ಜನಸಂಖ್ಯೆಯುಳ್ಳ ೧೨೨,೯೫೬ ಹಳ್ಳಿಗಳನ್ನು ಈ ಕಾರ್ಯಕ್ರಮಗಳು ಆವರಿಸಿದವು. ಎರಡನೆಯ ಯೋಜನೆಯಲ್ಲಿ ರಾಷ್ಟ್ರೀಯ ವಿಸ್ತರಣ ಸೇವೆಯು ಇಡಿಯ ದೇಶದ ತುಂಬೆಲ್ಲ ಹಬ್ಬಬೇಕೆಂದು ಪ್ರತಿಪಾದಿಸಲಾಗಿದೆ. ಇದಕ್ಕಾಗಿ ೨೦೦ ಕೋಟಿ ರೂಪಾಯಿಯಷ್ಟು ಹಣ ಕಾದಿರಿಸಲಾಗಿದೆ. ಸದ್ಯ ಈ ಕಾರ್ಯಕ್ರಮಗಳಲ್ಲಿ ಸುಮಾರು ೮೦,೦೦೦ ಜನರು ಕೆಲಸಮಾಡುತ್ತಿದ್ದಾರೆ ಹಾಗೂ ಎರಡನೆಯ ಯೋಜನೆಯಲ್ಲಿ ಈ ಸಂಖ್ಯೆ ೨೦೦,೦೦೦ ಕ್ಕೆ ಹೋಗಬಹುದೆಂದು ಅಂದಾಜ ಮಾಡಲಾಗಿದೆ.

ಈ ಕಾರ್ಯಕ್ರಮದ ಯಶಸ್ಸಿನ ಮೇಲೆ ಹಳ್ಳಿಯಲ್ಲಿ ಅವಶ್ಯವಿದ್ದ ಸಾಮಾಜಿಕ, ಮಾನಸಿಕ ಹಾಗೂ ಆರ್ಥಿಕ ಕ್ರಾಂತಿಯು ಅವಲಂಬಿಸಿದೆ ಎಂದು ಹೇಳಲಾಗುತ್ತಿದೆ. ಇದು ಅತಿಶಯೋಕ್ತಿಯ ಮಾತೇ? ಈ ವರೆಗೆ ಎಷ್ಟರ ಮಟ್ಟಿಗೆ ಈ ಕಾರ್ಯಕ್ರಮಗಳು ಯಶಸ್ವಿಯಾಗಿವೆ?

ರಚನಾತ್ಮಕ (Constructive) ಕಾರ್ಯಕ್ರಮಗಳಲ್ಲಿ ಸಾಕಷ್ಟು ಪ್ರಗತಿಯನ್ನು ಈ ಆಂದೋಲನವು ಗಳಿಸಿದೆಯೆಂಬ ಮಾತು ನಿರ್ವಿವಾದವಾಗಿದೆ. ಅಂದರೆ ಕಟ್ಟಡ, ರಹದಾರಿಗಳನ್ನು ಕಟ್ಟುವದರಲ್ಲಾಗಲಿ, ಗೊಬ್ಬರದ ಗುಂಡಿಗಳನ್ನು ಅಗಿಯುವದರಲ್ಲಾಗಲಿ ಅವಶ್ಯವಿದ್ದ ಪ್ರಗತಿ ಕಂಡುಬರುತ್ತಿದೆ. ಆದರೆ ಜನರ ಉತ್ಸಾಹವನ್ನು ಕೆರಳಿಸಿ ಅವರನ್ನು ಅಭಿವೃದ್ಧಿ-ಭಾವನಾ-ಯುಕ್ತರನ್ನಾಗಿ ಮಾಡುವದರಲ್ಲಿ ಇನ್ನೂ ಬಹಳಷ್ಟು ಕಾರ್ಯ ಮಾಡಬೇಕಾಗಿದೆ. ಮೂರು ವರ್ಷಗಳ ಅವಧಿಯ ವರೆಗೆ ಈ ಕಾರ್ಯಕ್ರಮಗಳು ಕೆಲಸ ಮಾಡುತ್ತಿದ್ದು, ೧೫ ವಿಭಾಗಗಳನ್ನು ಮೊನ್ನೆ ಮೊನ್ನೆ ಅಭ್ಯಾಸ ಮಾಡಿದರು. ಇದರಿಂದ ಕಂಡುಬಂದ ಮುಖ್ಯ ಸಂಗತಿಗಳು ಗಮನಾರ್ಹವಾಗಿವೆ. ನೂರಕ್ಕೆ ೫೦ ರಷ್ಟು ಜನರು ಸುಧಾರಿಸಿದ ಬೀಜಗಳ ಬಗ್ಗೆ ಅಜ್ಞಾನದಲ್ಲಿದ್ದರು! ನೂರಕ್ಕೆ ೭೫ ರಷ್ಟು ಜನರು ಕೃತಕ ಗೊಬ್ಬರವನ್ನು ಉಪಯೋಗಿಸುತ್ತಿದ್ದಿಲ್ಲ. ನೂರಕ್ಕೆ ೧೫ ರಷ್ಟೇ ಜನರು ಜಪಾನಿ ಪದ್ಧತಿಯಂತೆ ಭತ್ತವನ್ನು ಬೆಳೆಯಲು ಆರಂಭಿಸಿದ್ದರು. ಒಂದು ಆಶ್ಚರ್ಯದ ಮಾತೆಂದರೆ ಹತ್ತಿಯ ಸುಧಾರಣೆಯ ಕಾರ್ಯಕ್ರಮವು ಒಂದು ಕ್ಷೇತ್ರದಲ್ಲಿ ಮೂರು ವರ್ಷದಿಂದ ಅಸ್ತಿತ್ವದಲ್ಲಿದ್ದರೂ ಅಲ್ಲಿಯ ಯಾರೊಬ್ಬರಿಗೂ ಇಂಥ ಕಾರ್ಯಕ್ರಮವಿದೆಯೆಂಬದರ ಕಲ್ಪನೆಯೇ ಇದ್ದಿಲ್ಲ!

ಹೇಳಬೇಕಾದ ಮಾತು ಇಷ್ಟೇ; ಈ ಕಾರ್ಯಕ್ರಮಗಳು ಗ್ರಾಮೀಣ ಸಮಾಜದ ಎಲ್ಲ ಭಾಗಗಳಿಗೆ ತಲುಪಿಲ್ಲ. ಆದುದರಿಂದ ಸಂಪೂರ್ಣ ಯಶಸ್ಸನ್ನು ಪಡೆಯಬೇಕಾದರೆ ಒಮ್ಮನಸ್ಸಿನ ಹಾಗೂ ಅವಿರತ ಪರಿಶ್ರಮಗಳು ಅವಶ್ಯವಿವೆ. ಅಲ್ಲದೆ, ಬರಿ ಆಡಳಿತದ ಅಧಿಕಾರಿಗಳಿಂದ ನಿರೀಕ್ಷಿಸಿದ ಎಲ್ಲ ಬದಲಾವಣೆಗಳನ್ನೂ ಕಾರ್ಯರೂಪದಲ್ಲಿಳಿಸಲಿಕ್ಕಾಗಲಿಕ್ಕಿಲ್ಲ. ಅದಕ್ಕೆ ಪೂರಕವೆಂದು ಹೊರಗಿನ ಪ್ರಯತ್ನಗಳೂ ಅವಶ್ಯಕವಾಗಿವೆ.

### ಗ್ರಾಮಪಂಚಾಯತಿಗಳು

ಗ್ರಾಮಗಳ ಅಭಿವೃದ್ಧಿ ಕಾರ್ಯದಲ್ಲಿ ಗ್ರಾಮಪಂಚಾಯತಿಯು ಮೂಲ ಸಾಧನ-ಸಂಸ್ಥೆಯಾಗಬೇಕೆಂದು ಪುನಃ ಪುನಃ ಹೇಳಲಾಗುತ್ತಿದೆ. ಹಾಗೆ ನೋಡಿದರೆ ನಮ್ಮ ಸಂವಿಧಾನದ ಮೂಲ ತತ್ವಗಳಲ್ಲಿಯೇ ಪಂಚಾಯತಿಯು ಈ ರೀತಿ ಮಾರ್ಪಡಬೇಕೆಂದು ಹಾಕಿಕೊಟ್ಟಿದ್ದಾರೆ. ಆದರೆ ದೇಶದ ವಿವಿಧ ರಾಜ್ಯಗಳಲ್ಲಿ ಪಂಚಾಯತಿಗಳ ಪ್ರಗತಿಯನ್ನು ಅವಲೋಕಿಸಿದರೆ ಸ್ವಲ್ಪ ಆಶ್ಚರ್ಯವೇ ಆಗುವಂತಿದೆ. ಸಂವಿಧಾನದಲ್ಲಿ ಈ ರೀತಿ ಅಸ್ತಿ-ವಾರು ಹಾಕಿಕೊಟ್ಟಿದ್ದರೂ ಪಶ್ಚಿಮ ಬಂಗಾಲದಂಥ ಕೆಲ ರಾಜ್ಯಗಳು ಪಂಚಾಯತಿಯ ಕಾನೂನುಗಳನ್ನು ತೀರ ಇತ್ತೀಚಿಗೆ-೧೯೫೬-ಪಾಸು ಮಾಡಿಕೊಂಡಿವೆ! ಅಲ್ಲದೆ ಪಂಚಾಯತಿಗಳ ಕಾರ್ಯ-ಕ್ಷೇತ್ರ, ಅವುಗಳ ಆದಾಯ-ವೆಚ್ಚದ ಕಲ್ಪನೆ— ಇವೆಲ್ಲ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ರೂಪ ತಾಳಿವೆ. ಪಂಚಾಯತಿಗಳ ಬಗ್ಗೆ ರಾಜ್ಯಗಳಲ್ಲಿಯ ರಾಜಕಾರಣಿಗಳ ವಿಚಾರಗಳು ತೀರ ಭಿನ್ನವಾಗಿಯೇ ಇದ್ದಂತೆ ತೋರುತ್ತಿದೆ. ಈ ರೀತಿ ಪಂಚಾಯತಿಗಳ ಏಕರೂಪ ಬೆಳವಣಿಗೆಯು ದೇಶದಲ್ಲಿ ಆಗುತ್ತಿಲ್ಲ.

ಇತ್ತೀಚಿಗೆ ಕೈಕೊಂಡ ಒಂದು ಅಭ್ಯಾಸದಿಂದ ದೇಶದಲ್ಲಿಯ ಪಂಚಾಯತಿಯಲ್ಲಿ ನೂರಕ್ಕೆ ೧೫ ರಷ್ಟು ಸಂಸ್ಥೆಗಳು ಮಾತ್ರ ಚನ್ನಾಗಿ ಕಾರ್ಯ ಮಾಡುತ್ತಿವೆ ಎಂದು ಕಂಡುಬಂದಿದೆ. ಪಂಚಾಯತಿಗಳು ಮಾಡಬೇಕಾದ ಕಾರ್ಯಗಳ ಒಂದು ದೀರ್ಘ ಪಟ್ಟಿಯಿದ್ದರೂ ಬಹಳಷ್ಟು ಸಂಸ್ಥೆಗಳು ತೀರ ಅವಶವಿದ್ದ ಕೆಲಸಗಳನ್ನಷ್ಟೇ ಮಾಡುತ್ತಿವೆ. ಅವುಗಳ ಆದಾಯವೂ ಸಹ ಪಂಚಾಯತಿಯ ಕಾರ್ಯದರ್ಶಿಯ ಸಂಬಳವನ್ನು ಕೊಡುವ ಮಟ್ಟಿಗೆ ಮಾತ್ರ ಇರುವದು!

ವಸ್ತುಸ್ಥಿತಿ ಹೀಗಿದ್ದರೂ ಬಳವಂತರಾಯ ಮೆಹತಾ ಸಮಿತಿಯವರು ಪಂಚಾಯತಿಯು ಆರ್ಥಿಕ ಅಭಿವೃದ್ಧಿಯಲ್ಲಿ ಮುಖ್ಯ ಪಾತ್ರ ವಹಿಸಬೇಕೆಂದು ಸೂಚಿಸಿರುತ್ತಾರೆ. ತಾತ್ವಿಕವಾಗಿ ಇದು ಎಲ್ಲರೂ ಒಪ್ಪಬೇಕಾದ ಮಾತೇ ಸೈ. ಆದರೆ ಈಗಾಗಲೇ ಪಂಚಾಯತಿಗೆ ಒಪ್ಪಿಸಲಾದ ಕಾರ್ಯಗಳಲ್ಲಿ ಎಷ್ಟು ಕೆಲಸಗಳನ್ನು ಅವು ಮಾಡುತ್ತಿವೆ? ಗ್ರಾಮದ ಎಲ್ಲ ಜನರು ಪಂಚಾಯತಿಯ ಕಾರ್ಯನಿರ್ವಹಣೆಯಲ್ಲಿ ಭಾಗವಹಿಸುತ್ತಿದ್ದಾರೆಯೇ? ಪಂಚಾಯತಿಯ ಚುನಾವಣೆಯ ಮೂಲಕ ಗ್ರಾಮದಲ್ಲಿ ಬಣಗಳಾಗಿ ಒಳಜಗಳಗಳು ಏಳುವದೇಕೆ? ಇವೆಲ್ಲ ಸಂಗತಿಗಳನ್ನೂ ವಿವರವಾಗಿ ಅಭ್ಯಸಿಸಿ ಅವನ್ನು ಸರಿಪಡಿಸುವ ದಾರಿಯನ್ನು ಕಂಡು ಹಿಡಿದ ಹೊರತು ಬೆಳವಣಿಗೆಯು ನಾವು ಅಪೇಕ್ಷಿಸಿದ ದಿಶೆಯಲ್ಲಿ ಸಾಗಲಿಕ್ಕಿಲ್ಲ. ಅಲ್ಲದೆ ಗ್ರಾಮದ ಆರ್ಥಿಕ ಅಭಿವೃದ್ಧಿಯ ಹೊಣೆಯನ್ನೆಲ್ಲ ಪಂಚಾಯತಿಯೇ ಹೊರಲು ಶಕ್ತವಿದೆಯೇ ಎಂಬದೂ ಸಂಶಯದ ಮಾತೇ ಆಗಿದೆ.

### ಬೆಲೆಗಳ ಧೋರಣೆ

ಒಕ್ಕಲತನದ ಹುಟ್ಟುವಳಿಗಳ ಬೆಲೆಗಳು ಬಹಳ

ತೀಕ್ಷ್ಣವಾಗಿ ಹೊಯ್ದಾಡುತ್ತಿರುವದನ್ನು ನಾವು ಕಳೆದ ನಾಲ್ಕೈದು ವರ್ಷಗಳಲ್ಲಿ ಕಂಡುಂಡಿದ್ದೇವೆ. ಈ ಬೆಲೆಗಳ ಮಟ್ಟವನ್ನು ಒಂದು ಸ್ತಿಮಿತಕ್ಕೆ ತರುವಂತೆ ನನ್ನ ಹುಟ್ಟುವಳಿಗಳ ಬೆಲೆಗಳ ಧೋರಣೆಯನ್ನು ನಿರೂಪಿಸಬೇಕಾಗಿದೆ. ಏಕೆಂದರೆ ಬೆಳೆಗಳ ಬೆಲೆಗಳು ಹೊಯ್ದಾಡಿದಂತೆ ರೈತನ ಉತ್ಪಾದನೆಯಲ್ಲೂ ಹೆಚ್ಚು ಕಡಿಮೆಯಾಗುವದು ಸ್ವಾಭಾವಿಕವಾಗಿದೆ. ಅಲ್ಲದೆ ಜೀವನಾವಶ್ಯಕ ಆಹಾರ ಧಾನ್ಯಗಳ ಬೆಲೆಗಳನ್ನಂತೂ ಒಂದು ಸೀಮಿತ ಮಟ್ಟಕ್ಕೆ ಇಟ್ಟುಕೊಳ್ಳದಿದ್ದರೆ ಬಹಳಷ್ಟು ಜನರು ಕಷ್ಟಕ್ಕೀಡಾಗುವರು. ಆದರೆ ಹತ್ತಿಯ ಬೆಲೆಯ ಧೋರಣೆಯನ್ನೊಂದನ್ನು ಬಿಟ್ಟು, ಉಳಿದ ಹುಟ್ಟುವಳಿಗಳ ವಿಷಯದಲ್ಲಿ ಒಂದು ನಿರ್ದಿಷ್ಟ ಧೋರಣೆಯೇ ಇದ್ದಂತೆ ಕಾಣುವದಿಲ್ಲ. ಕೆಲವು ಸಲ ಯಾವದಾದರೂ ಒಂದೆರಡು ಧಾನ್ಯಗಳ ಬೆಲೆಗಳು ಮಿತಿಮೀರಿ ಏರಿದರೆ ಅಥವಾ ಇಳಿದರೆ, ಅಷ್ಟರಮಟ್ಟಿಗೆ ತತ್ಕಾಲೀನ ಉಪಾಯಗಳನ್ನು ಕೈಕೊಳ್ಳುತ್ತಿದ್ದಾರೆ. ಇದರಿಂದ ಆ ಕಾಲದ ಮಟ್ಟಿಗೇನೋ ಸಮಸ್ಯೆಯು ಪರಿಹಾರವಾಗಬಹುದು. ಆದರೆ ದೇಶದ ಸರ್ವಾಂಗೀಣ ಅಭಿವೃದ್ಧಿಯು ಸುಯೋಜಿತ ರೀತಿಯಿಂದ ಸಾಗಬೇಕಾದರೆ ಒಕ್ಕಲತನದ ಎಲ್ಲ ಪ್ರಮುಖ ಹುಟ್ಟುವಳಿಗಳನ್ನು ವ್ಯಾಪಿಸಿರುವ ಬೆಲೆಯ ಧೋರಣೆಯು ಅವಶ್ಯವಿದೆ.

## ಕೊನೆಯ ಮಾತು

'ಕೃಷಿಧೋರಣೆ' ಯೆಂಬ ತಲೆಬರಹವಿದ್ದರೂ ಇಲ್ಲಿ ಸಮೀಕ್ಷಿಸಿದ ವಿಷಯಗಳನ್ನು ಹೆಚ್ಚು ವ್ಯಾಪಕ ದೃಷ್ಟಿಯಿಂದ ಆಯಲಾಗಿದೆ. ಒಂದು ದೃಷ್ಟಿಯಿಂದ ಗ್ರಾಮೀಣ ಜೀವನಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳೂ ಕೃಷಿ ಧೋರಣೆಗೆ ಸಂಬಂಧಿಸಿದ ವಿಷಯಗಳೆಂದೇ ಹೇಳಲಡ್ಡಿಯಿಲ್ಲ.

ಒಕ್ಕಲತನದ ಅಭಿವೃದ್ಧಿಯು ಈಗಂತೂ ನಮಗೆ ಅಕ್ಷರಶಃ ಜೀವನಮರಣದ ಪ್ರಶ್ನೆಯಾಗಿದೆ. ಅಂತೆಯೇ ಔದ್ಯೋಗಿಕ ಧೋರಣೆಯಂತೆಯೇ, ಒಂದು ವ್ಯಾಪಕವಾದ ಕೃಷಿ ಧೋರಣೆಯನ್ನು ರೂಪಿಸುವದು ಅತ್ಯಾವಶ್ಯಕವಾಗಿದೆ. ಈ ವರೆಗೆ ಏನೂ ಪ್ರಗತಿಯಾಗಿಲ್ಲವೆಂದು ಯಾರೂ ಸೂಚಿಸುವದಿಲ್ಲ. ಆದರೆ ಇಂಥಪ್ರಗತಿ ಅಸ್ತವ್ಯಸ್ತಗತಿಯಿಂದ ಹಾಗೂ ನಿಶ್ಚಿತ ಗುರಿಯಿಲ್ಲದೆ ಸಾಗುತ್ತಿದೆ. ದೃಷ್ಟಾಂತವಾಗಿ ಭೂ-ಸುಧಾರಣೆಯ ಪ್ರಗತಿಯನ್ನು ಅವಲೋಕಿಸಿ ನೋಡಿದ್ದೇವೆ. ಭೂ-ಸುಧಾರಣೆಯ ಅರ್ಥ ಅವುಗಳ ಅಂತಿಮ ಗುರಿ ಇವನ್ನು ಸ್ಪಷ್ಟವಾಗಿ ನಿರ್ದಿಷ್ಟಪಡಿಸಿಲ್ಲ ವಷ್ಟೇ ಅಲ್ಲ, ಅವನ್ನು ಕಾರ್ಯರಂಗಕ್ಕಿಳಿಸುವಾಗಲೂ ಅರೆಮನಸ್ಸಿನಿಂದ ಮುಂದುವರೆಯುತ್ತಿದ್ದೇವೆ. ಆದ್ದರಿಂದ ಭೂ-ಸುಧಾರಣೆ, ಸಹಕಾರೀ ಆಂದೋಲನ, ಸಮಾಜವಿಕಾಸ ಯೋಜನೆಗಳು, ಗ್ರಾಮಪಂಚಾಯತಿಗಳು, ಹುಟ್ಟುವಳಿಯ ಬೆಲೆ ಹಾಗೂ ಮಾರಾಟ, ಗ್ರಾಮೀಣ ಉದ್ಯೋಗಗಳು, ಶಿಕ್ಷಣ— ಇವೇ ಮೊದಲಾದ ವಿಷಯಗಳನ್ನು ಕೂಲಂಕಷವಾಗಿ ಅಭ್ಯಸಿಸಿ, ಒಂದು ಸುಸ್ಪಷ್ಟ ಧೋರಣೆಯನ್ನು ಹಾಕಿಕೊಂಡು, ಅದನ್ನು ಕಾರ್ಯರೂಪದಲ್ಲಿಳಿಸಲು ಮನಸಾರೆ ಮುಂದುವರೆಯಬೇಕಾಗಿದೆ. ಈ ದಿಶೆಯಲ್ಲಿ ನಾವು ದೃಢನಿಶ್ಚಯದಿಂದ ಸಾಗಹತ್ತಿದೆವೆಂದರೆ, ದೇಶಕ್ಕೆ ಅವಶ್ಯವಿದ್ದ ಆಹಾರ ಧಾನ್ಯಗಳನ್ನು ಉತ್ಪಾದಿಸಲು ನಮ್ಮ ಒಕ್ಕಲಿಗರು ಶಕ್ತರಾಗುವರೆಂದು ನಿಸ್ಸಂಶಯವಾಗಿಯೂ ಆತ್ಮವಿಶ್ವಾಸದಿಂದಲೂ ಹೇಳಬಹುದು.

---

ಸರ್ ವಿನ್‌ಸ್ಟನ್ ಚರ್ಚಿಲ್ಲರು ೧೯೦೮ರಲ್ಲಿ ಡಂಡೀ ಚುನಾವಣೆ ಹೋರಾಟದಲ್ಲಿದ್ದಾಗ ಪ್ರಥಮತಃ ತಮ್ಮ ಭಾವೀ ಪತ್ನಿ ಕ್ಲೆಮೆಂಟೈನಳನ್ನು ಭೆಟ್ಟಿಯಾದರು. ಚುನಾವಣೆ ಪ್ರಚಾರದ ಗೊಂದಲದಲ್ಲಿದ್ದ ಅವರು ಅವಳನ್ನು ಗಮನಿಸಿರಲಿಲ್ಲ. ಆದರೆ ಅವರ ತಾಯಿಗೆ ಕ್ಲೆಮೆಂಟೈನ್ ಹೋಜೀರ್ ತಮ್ಮ ಸೊಸೆಯಾದರಾಗಬಹುದೆಂದೆನಿಸಿತು. ಅವರು ಇಬ್ಬರೂ ಔತಣವೊಂದರಲ್ಲಿ ಪಕ್ಕದಲ್ಲಿಯೇ ಕುಳಿತುಕೊಳ್ಳುವಂತೆ ಆಕೆ ಏರ್ಪಡಿಸಿದರು. ಒಬ್ಬ ಪ್ರಾಯಸ್ಥ ಮಹಿಳೆಯೊಡನೆ ಊಟಕ್ಕೆ ಬಂದಿದ್ದ ಚರ್ಚಿಲ್ಲರ ಗಮನ ಪಕ್ಕದಲ್ಲಿ ಕುಳಿತ ತರುಣಿಯತ್ತ ಹರಿದದ್ದು ಅವಳಿಂದ ಅಗಲಲಿಲ್ಲ.




ಬರೆದವರು : ಶ್ರೀಮತಿ ಸರೋಜಿನಿ ಮಹಿಷಿ, ಎಂ. ಎ. ಎಲೆಲ್. ಬಿ.

> ಪುರುಷನ ಆಸರೆಯಲ್ಲಿರುವ ಮಹಿಳೆ ರಾಜಕಾರಣ ಪ್ರವೇಶಿಸುವದೆಂದರೇನು ಎಂದೆನ್ನುವ ಕಾಲವೊಂದಿತ್ತು. ಆದರೆ ಇಂದು ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಅವಳ ಸ್ಥಾನಮಾನಗಳೂ ಬದಲಾಗಿರುವವು. ಅದಕ್ಕನುಗುಣವಾಗಿ ಅವಳು ಆಡಳಿತ, ರಾಜಕಾರಣಗಳಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸುವಂತಾಗಿರುವದು.

ರಾಜಕಾರಣದ ನೀತಿ, ಸಾಮಾನ್ಯ ನೀತಿಗಿಂತ ಭಿನ್ನವಾಗಿ ಕಂಡುಬರುವದರಿಂದ, 'ರಾಜಕಾರಣ'ಕ್ಕೆ ಅರ್ಥವ್ಯಾಪ್ತಿ ಬಂದಿದೆ. ಸಾಮಾನ್ಯರು, ನೀತಿಯ ರೂಢಿ, ಮೂಲ ಕಲ್ಪನೆಗೆ ಅಂಟಿಕೊಂಡವರು, ರಾಜಕಾರಣವನ್ನು ಅರಿಯುವದು, ಆಡುವದು ಹೆಚ್ಚಾಗಿ ಕಂಡುಬಾರದ್ದರಿಂದ, ಅವರಿಗೂ ರಾಜಕಾರಣಿಗಳಿಗೂ ಇರುವ ಅಂತರ ಇನ್ನೂ ಸ್ಪಷ್ಟವಾಗುತ್ತಿದೆ. ರಾಜಕಾರಣ ತಮಗೆ ಎಟುಕದ ಇನ್ನು ಕೆಲವರು ಅನ್ಯಾಯವಾಗಿ ಅದನ್ನು ತೆಗಳುವ ಸಾಹಸಕ್ಕೂ ಕೈಯಿಕ್ಕುತ್ತಾರೆ. ರಾಜಕಾರಣದ ಆಟವನ್ನಾಡುವವರು ಗಟ್ಟಿಗರು ಎಂದು ನಂಬಿದವರು, ಮಹಿಳೆಯರು ಅಷ್ಟು ಗಟ್ಟಿಗರೇ? ಎಂದು ಸಂಶಯವನ್ನೂ ವ್ಯಕ್ತಪಡಿಸಬಹುದು— ಅದೂ ಮಹಿಳೆಯರ ಹಿತಚಿಂತನೆಯ ದೃಷ್ಟಿಯಿಂದ!

## ಮನುವಿನ ಉಕ್ತಿ

ನಿಸರ್ಗ ಹೊರಿಸಿದ ಗುರುತರವಾದ ಹೊಣೆಯನ್ನು ಹೊತ್ತ ಮಹಿಳೆ ಪುರುಷನೊಡನೆ ಸ್ಪರ್ಧಿಸಲಿಲ್ಲ; ಈಗಲೂ ಸ್ಪರ್ಧಿಸುತ್ತಿಲ್ಲ. ಆದರೆ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಶಕ್ತಿಯನ್ನು ಅಭಿವ್ಯಕ್ತಗೊಳಿಸುತ್ತಿದ್ದಾರೆ. ಅಷ್ಟೇ! ಅದನ್ನೇ ಅರಿಯದವರು ಸ್ಪರ್ಧೆ ಎಂದು ಕರೆಯಬಹುದೇನೊ! ರಾಜಕೀಯ ಹಕ್ಕು ಬಾಧ್ಯತೆಗಳನ್ನು ಅರಿತು ಯೋಗ್ಯವಾಗಿ ದೊರೆತ ಅಧಿಕಾರವನ್ನು ನಿರ್ವಹಿಸುವ ಶಕ್ತಿ ಮಹಿಳೆಯರಿಗುಂಟೇ ಎಂಬ ಶಂಕೆ, ಮತದಾನದಿಂದ ಪ್ರಾರಂಭವಾಗಿದ್ದು ಮಂತ್ರಿಪದವಿಯ ವರೆಗೂ ಇದ್ದೇ ಇತ್ತು; ಸಾಮಾಜಿಕ ಸ್ಥಾನ, ಶೈಕ್ಷಣಿಕ ಅರ್ಹತೆ, ಆರ್ಥಿಕ ಬಲ ಇವೆಲ್ಲವುಗಳೂ ಒಟ್ಟಿಗೇ ವ್ಯಕ್ತಿಯ ರಾಜಕೀಯ ಸ್ಥಾನಮಾನಗಳನ್ನು ನಿರ್ಧರಿಸಲು ಸಹಕಾರಿಯಾಗುತ್ತವೆ. "ಮಾತೃದೇವೋ ಭವ", ಎಂದು ವೇದಗಳುಗ್ಗಡಿಸಿದರೂ ಕೃತಿಯಲ್ಲಿ ಅದು ಸೀಮಿತವಾಗಿತ್ತು. "ಕನ್ಯೆ ಹೆರರ ಒಡವೆ", ಎಂಬ ಭಾವನೆ, ಅವಳ ಹುಟ್ಟಿನಿಂದಲೇ ಪ್ರಾರಂಭವಾದದ್ದು ಅವಳ ಶಿಕ್ಷಣ ಸಂಸ್ಕೃತಿಗಳ ಮೇಲೆಯೂ ಬಲವಾದ ಪರಿಣಾಮವನ್ನುಂಟು ಮಾಡಿತು. ಯಾವುದೇ ಅರ್ಹತೆಯಿಲ್ಲದೆ, ಆಸ್ತಿಯ ಭಾಗವನ್ನು ಪಡೆಯಲು, ಪಡೆದ ಆಸ್ತಿಯ ಹೊಣೆಯನ್ನು ನಿರ್ವಹಿಸಲು ಅವರು ಅಸಮರ್ಥರಾದ್ದರಿಂದ ಅವರಿಗೆ ಆಸ್ತಿ ಸಲ್ಲದು ಎಂಬ ಮಾತನ್ನು ಸ್ಮೃತಿಗಳು ಹೇಳಿದವು. ಆರ್ಥಿಕ, ಸಾಮಾಜಿಕ ಸ್ಥಾನವಿಲ್ಲದ ಅವಳು, ಜೀವಮಾನದಲ್ಲಿ ವಿವಾಹಸಂಸ್ಕಾರವೊಂದನ್ನೇ ಉಳಿಸಿಕೊಂಡು, ತಾನೇ ಕ್ರಮೇಣ ಪುರುಷನ ಆಸ್ತಿಯಾದಳು. ಪುರುಷನ ಆಸರೆ ಪಡೆದು ಭಯಭಕ್ತಿಯಿಂದ ಅವನಿಗೆ ಸೇವೆ ಸಲ್ಲಿಸಿ, ತನ್ನ ಮುಕ್ತಿಯನ್ನು ಕಂಡುಕೊಳ್ಳಬೇಕಾದ ಅವಳು ರಾಜಕಾರಣದಲ್ಲಿ ಪ್ರವೇಶಿಸುವದೆಂದರೇನು?

ಭಾರತದ ಮಧ್ಯಯುಗೀನ ಮಹಿಳೆಯರ ಇತಿಹಾಸ ಇದಾದರೆ, ಪ್ರಪಂಚದ ಇತರ ಭಾಗಗಳಲ್ಲೂ ಹೆಚ್ಚು ಕಡಿಮೆ ನಾವು ಇದನ್ನೇ ಕಾಣುತ್ತೇವೆ. ರಶಿಯದ ಇಂದಿನ ಪ್ರಗತಿಯ ಬಗ್ಗೆ ಕೇಳಿದವರು, ಒಂದು ಕಾಲಕ್ಕೆ ಅಲ್ಲಿ "A hen is not a bird; a woman is not a human-being" ಎಂಬ ಗಾದೆ ಇತ್ತೆಂದು ನಂಬಲಾರರು.

## ಇತಿಹಾಸ ಕಾಲದಲ್ಲಿ

ಅನಿವಾರ್ಯವಾಗಿ ರಾಜಕಾರಣವನ್ನು ಪ್ರವೇಶಿಸಿ, ಹೊಣೆ ಹೊರಬೇಕಾದ ಪ್ರಸಂಗಗಳು ಮಹಿಳೆಯರಿಗೆ ಬಂದ ಉದಾಹರಣೆಗಳು ಇತಿಹಾಸದಲ್ಲಿವೆ. ಅಂತಹ ಪ್ರಸಂಗದಲ್ಲಿ ಕಾರ್ಯಕ್ಷಮತೆಯನ್ನೂ ಅವರು ತೋರಿಸಿದ್ದಾರೆ. ಶತಮಾನಗಳ ಇತಿಹಾಸದ ಹಿರಿಮೆಯನ್ನು ಹೆಮ್ಮೆಯಿಂದ ಹೇಳಿಕೊಳ್ಳಬಹುದಾದರೂ ಆ ಇತಿಹಾಸ ಇಂದಿನ ಪೀಳಿಗೆಯನ್ನು ಎಷ್ಟು ಮಟ್ಟಿಗೆ ಬಲಗೊಳಿಸಿದೆಯೆಂಬದು ಭಿನ್ನಾಭಿಪ್ರಾಯಗಳಿಗೆ ಎಡೆಗೊಡುವಂಥ ವಿಷಯ! ಝಾಂಸೀ ಲಕ್ಷ್ಮೀಬಾಯಿ ೧೮೫೭ರ ಕ್ರಾಂತಿಯಲ್ಲಿ ಹೋರಾಡಿದ ಯೋಧೆ, ಅಹಲ್ಯಾಬಾಯಿ ಹೋಳಕರ ಪತಿಯ ಮರಣಾನಂತರ ರಾಜ್ಯಸೂತ್ರಗಳನ್ನು ವಹಿಸಿಕೊಂಡಳು. ಚಾಂದಬೀಬಿ ರಾಜಕೀಯ ಇತಿಹಾಸದಲ್ಲಿ ಹೆಸರುಗಳಿಸಿದಳು. ಕನ್ನಡ ನಾಡಿನ ರಾಜಕೀಯ ಇತಿಹಾಸದಲ್ಲೂ ಪ್ರಜೆಗಳನ್ನು ಮಕ್ಕಳಂತೆ ಕಾಣುತ್ತ ರಾಜ್ಯವಾಳಿದ ಮಹಿಳೆಯರಿದ್ದಾರೆ. ಕದಂಬ ಕುಲದ ಅಕ್ಕಾದೇವಿ ರಣಭೈರವಿಯಾಗಿ ರಾಜ್ಯವನ್ನು ರಕ್ಷಿಸಿದಳು. ಕಿತ್ತೂರಿನ ಚೆನ್ನಮ್ಮ ಸಂಸ್ಥಾನಕ್ಕಾದ ಅನ್ಯಾಯವನ್ನು ಸಹಿಸದೆ, ಬ್ರಿಟಿಶರೊಡನೆ ಕಾದಾಡಿದಳು. ಇಂತಹ ರಾಜಕೀಯ ವೈಭವದ ಹಿನ್ನೆಲೆ ಇದ್ದರೂ ಇಪ್ಪತ್ತನೆಯ ಶತಮಾನದ ವರೆಗೆ ಅದು ಮರೆಯಾಗಿತ್ತು, ಹೊರಬರಲು ಆಸ್ಪದವು ದೊರೆತಿರಲಿಲ್ಲ. ಚಿಕ್ಕಪುಟ್ಟ ಸಂಸ್ಥಾನಗಳಲ್ಲಿ ಮಹಿಳೆಯರು ರಾಜಕೀಯದಲ್ಲಿ ಭಾಗವಹಿಸಿದರು.

ಆದರೆ ಅಪ್ರತ್ಯಕ್ಷವಾಗಿ ಮಾತ್ರ. ಇಂಗ್ಲೆಂಡಿನ ರಾಜಕೀಯ ಇತಿಹಾಸ ಮಾತ್ರ ಅನೇಕ ಸಮ್ರಾಜ್ಞಿಯರನ್ನು ಕಂಡಿದೆ.

### ಭಾರತದ ಮಹಿಳೆಯರು

ಇಪ್ಪತ್ತನೆಯ ಶತಮಾನದ ಪ್ರಾರಂಭದ ವರೆಗೂ ಭಾರತದ ಮಹಿಳೆಯರು ಸಾಮಾಜಿಕ ರಾಜಕೀಯ ದಾಸ್ಯಗಳೆರಡರಲ್ಲೂ ಬಂಧಿತರು. ಆದರೆ ಕೇವಲ ಅರ್ಧ ಶತಮಾನದ ಅವಧಿಯಲ್ಲಿ ಶೈಕ್ಷಣಿಕ, ಸಾಮಾಜಿಕ, ರಾಜಕೀಯ ರಂಗಗಳಲ್ಲಿ ಅವರು ಸಾಧಿಸಿದ ಪ್ರಗತಿಯನ್ನು ನೋಡಿದರೆ ಭಾರತವು ಹಿಂದುಳಿದ ರಾಷ್ಟ್ರವೆಂದು ಯಾರೂ ಹೇಳಲಾರರು! ಯಾವುದೇ ರಾಷ್ಟ್ರದ ಪ್ರಗತಿಯನ್ನರಿಯಬೇಕಾದರೆ, ಆ ರಾಷ್ಟ್ರದ ಸ್ತ್ರೀಯರ ಸಾಮಾಜಿಕ, ರಾಜಕೀಯ ಸ್ಥಾನಮಾನಗಳನ್ನು ತಿಳಿಯಬೇಕಂತೆ. ಆದರೆ ೧೯೫೦ ರಲ್ಲಿ ನೋಡಿದರೆ 'ಸ್ತ್ರೀಯರು ಸಾಮಾಜಿಕ, ರಾಜಕೀಯ ರಂಗಗಳಲ್ಲಿ ಹೆಚ್ಚು ಅಧಿಕಾರ ಸಂಪಾದಿಸಿದ ರಾಷ್ಟ್ರದಲ್ಲಿ' ಭಾರತವು ಮೂರನೆಯದು! ವಿವಿಧ ಪ್ರಾಂತಗಳ ಮತ್ತು ಸಂಸ್ಥಾನದ ಕಾರ್ಯಕಾರೀ ಮಂಡಳಗಳಲ್ಲಿ ಭಾರತದಲ್ಲಿ ಆಗ ಒಟ್ಟಿಗೆ ಎಂಬತ್ತು ಜನ ಸದಸ್ಯೆಯರಿದ್ದರು!

### ರಾಜಕೀಯದಲ್ಲಿ ಪ್ರವೇಶ

ಪಾಶವೀಬಲದ ಪ್ರಾಧಾನ್ಯ ಕಡಿಮೆಯಾಗಿ ಸಂಯುಕ್ತ ರಾಷ್ಟ್ರಸಂಘದಂತಹ ಸಂಸ್ಥೆಗಳು ಅಸ್ತಿತ್ವದಲ್ಲಿ ಬರುತ್ತಿರುವಾಗಲೂ ಮಹಿಳೆಗೆ ರಾಜಕಾರಣದಲ್ಲಿ ಸ್ಥಾನ ಬೇಡವೆ? ಪ್ರಜಾಶಕ್ತಿಯಲ್ಲಿ, ಜನತೆಯ ಶಕ್ತಿಯೇ ಆಧಾರವಾಗಿರುವಾಗ ಮಹಿಳೆಯ ಶಕ್ತಿ-ಸಲಹೆಗಳಿಗೂ ಅವಕಾಶವಿರಲೇಬೇಕು. ಮನೆಯ ಆಡಳಿತವನ್ನು ವ್ಯವಸ್ಥಿತವಾಗಿ ನೋಡಿಕೊಳ್ಳುವ ಅವಳು ಸಾರ್ವಜನಿಕ ಆರೋಗ್ಯ, ಶಿಕ್ಷಣ, ಸಮಾಜ ಕಲ್ಯಾಣಗಳ ವಿಷಯದಲ್ಲಿ ಅಧಿಕಾರದಿಂದ ಅಭಿಪ್ರಾಯ ಕೊಡಬಲ್ಲಳು. ಕಳೆದ ಶತಮಾನದ ಕೊನೆಯವರೆಗೂ ರಾಷ್ಟ್ರಗಳು ಇದರ ಮಹತ್ವವನ್ನರಿತಿರಲಿಲ್ಲವೇನೊ! ೧೮೭೦ ರ ಚಳವಳಿ, ಫ್ರೆಂಚ ಕ್ರಾಂತಿಯ ಧ್ವನಿ ಅದನ್ನು ಜಗತ್ತಿಗೇ ತಿಳಿಸಿಕೊಟ್ಟವು. ಔದ್ಯೋಗಿಕ ಕ್ರಾಂತಿ ಮಹಿಳೆಯರ ಮನೆಯಾಡಳಿತದಲ್ಲಿಯೂ ಬೇರೆ ಒಂದು ವ್ಯವಸ್ಥೆಯನ್ನು ತಂದಿತು. "ಪ್ರಾತಿನಿಧ್ಯವಿಲ್ಲದೆ ಕರಭಾರವಿಲ್ಲ", ಎಂಬುದರ ಜೊತೆಗೆ ರಾಜಕೀಯ ಸಮಾನತೆಯ ಕೂಗೂ ಎಲ್ಲೆಡೆಯಲ್ಲೆದ್ದಿತು! ಅಮೇರಿಕಾ ಹಾಗೂ ಫ್ರಾನ್ಸದ ಕ್ರಾಂತಿಗಳಿಂದಾಗಿ ಮಧ್ಯಮ ವರ್ಗಕ್ಕೆ ರಾಜಕೀಯಧಲ್ಲಿ ಪ್ರವೇಶ ದೊರೆಯಿತು. ಮಹಿಳೆಯರಿಗೆ ಪ್ರವೇಶ ದೊರೆತದ್ದು ಇದರ ಮುಂದಿನ ಮೆಟ್ಟಲು, ಅಷ್ಟೇ! ಜಾಗತಿಕ ಯುದ್ಧ ಬಹುಜನ ಮಹಿಳೆಯರಿಗೆ ರಾಜಕೀಯದಲ್ಲಿ ಬರಲು ಅವಕಾಶ ಕೊಟ್ಟಿತು. ಅಮೇರಿಕೆಯಲ್ಲಿ ರಾಜ್ಯಘಟನೆಯ ೧೯ನೆಯ ತಿದ್ದುಪಡಿ ಮಹಿಳೆಯರಿಗೆ ಮತದಾನದ ಅಧಿಕಾರವನ್ನು ಕೊಟ್ಟಿತು. ೧೯೧೭ ರ ರಶಿಯಾದ ಕ್ರಾಂತಿ ಮೇಧಾವಿಗಳಾದ ಸಮರ್ಥ ಮಹಿಳೆಯರಿಗೆ ರಾಜಕೀಯ ಕ್ಷೇತ್ರದಲ್ಲಿ ಉನ್ನತ ಅಧಿಕಾರವನ್ನೂ ವಹಿಸಿಕೊಟ್ಟಿತು. ಇಂಗ್ಲಂಡಿನಲ್ಲಿಯೂ ೧೯೧೮ ರ ಪಾರ್ಲಿಮೆಂಟರಿ ಕಾನೂನು ಮತದಾನದ ಅಧಿಕಾರವನ್ನು ಕೊಟ್ಟಿತು. ಆ ಕೂಡಲೆ ೧೯೧೯ ರಲ್ಲಿ ಒಬ್ಬಳು ಪಾರ್ಲಿಮೆಂಟ ಸದಸ್ಯೆಯಾಗಿಯೂ ಚುನಾಯಿಸಲ್ಪಟ್ಟಳು. ಇಟಲಿ ಮತ್ತು ಜರ್ಮನಿಯಲ್ಲಿ ಮಾತ್ರ ಇದರ ಗಾಳಿ ಸೋಂಕಲಿಲ್ಲ. ಅಲ್ಲಿಯ ಮಹಿಳೆಯರ ಕಾರ್ಯಕ್ಷೇತ್ರ ಇನ್ನೂ ಸೀಮಿತವಾಗಿಯೇ ಇತ್ತು! ಮಹಮ್ಮದೀಯ ಸಂಸ್ಕೃತಿಯ ರಾಜ್ಯಗಳಾದ ಪರ್ಶಿಯಾ, ತುರ್ಕಸ್ಥಾನಗಳಲ್ಲೂ ಮಹಿಳೆಯರ ರಾಜಕೀಯ ಪ್ರಾತಿನಿಧ್ಯದ ಬೇಡಿಕೆ ಬಲವಾಗಿ ಬೆಳೆಯುತ್ತ ಬಂತು.

### ಕ್ರಾಂತಿ-ಯುದ್ಧಗಳ ಪರಿಣಾಮ

ಅನ್ಯ ರಾಷ್ಟ್ರಗಳಲ್ಲಿ ನಡೆದ ಕ್ರಾಂತಿಯ ಪರಿಣಾಮ ಜಾಗತಿಕ ಯುದ್ಧದ ತೀವ್ರತೆಯ ಅರಿವು ಭಾರತೀಯ ಮಹಿಳಾ ವರ್ಗದ ಮೇಲೂ ಆಯ್ತು! ೧೯೧೪ ರಲ್ಲಿ ಶ್ರೀಮತಿ ಆನಿಬೆಸಂಟ ಕಾಂಗ್ರೆಸ್ಸನ್ನು ಸೇರಿದಾಗ ದೇಶದಲ್ಲಿಯೇ ಹೊಸ ಚೈತನ್ಯ ತುಂಬಿತು. ಅಲ್ಲಿಯ ವರೆಗೆ ಕಾಂಗ್ರೆಸ್ ಸದಸ್ಯೆಯರು ಸ್ವಂತ ಹೊಣೆಯಿಂದ ಯಾವ ವಿಶೇಷ ಕಾರ್ಯಭಾರವನ್ನೂ ಹೊರುತ್ತಿರಲಿಲ್ಲವೆಂದೇ ಹೇಳಬೇಕು. ಯುದ್ಧದ ಸಮಯದಲ್ಲಿ, ಆನಿಬೆಸಂಟರ

ಬಂಧನ ದೇಶದ ಮಹಿಳೆಯರನ್ನು ಕೆಣಕಿತು. ಪುರುಷರೊಡನೆ ಅವರೂ ಅಸಹಕಾರ ಚಳವಳಿಯಲ್ಲಿ ಭಾಗವಹಿಸಲು ಮುಂದೆಬಂದರು. ಅನಿಬೆಸಂಟ ಬಂಧನದಿಂದೀಚೆಗೆ ಬಂದಾಗ, ಜನತೆ ಪ್ರಚಂಡ ಸ್ವಾಗತವನ್ನಿತ್ತಿತು. ಅನೇಕ ಮಹಿಳೆಯರು ಅನಿಬೆಸಂಟರ ಅನುಯಾಯಿಗಳಾದರು. ಅನೇಕರು ಭಾರತದ 'ಗೃಹ ರಕ್ಷಕ ದಲ' ವನ್ನು ಸೇರಿದರು!

ಕಾಂಗ್ರೆಸ್ಸಿನ ಇತಿಹಾಸದಲ್ಲಿ ಅಧ್ಯಕ್ಷಿಣಿಯಾದ ಪ್ರಥಮ ಮಹಿಳೆಯೆಂದರೆ ಅನಿಬೆಸಂಟರೇ! ಅದು ೧೯೧೭ ರಲ್ಲಿ ಕಲಕತ್ತೆಯಲ್ಲಿ ಕಾಂಗ್ರೆಸ್ ಅಧಿವೇಶನ ಸೇರಿದಾಗ: ಬೆಸಂಟರು, ತೆರಪಿಲ್ಲದೆ ಭಾರತದ ಮೂಲೆಮೂಲೆಯವರೆಗೂ ಅಡ್ಡಾಡಿ, ಯುವಕರಲ್ಲಿಯ ಕೆಚ್ಚನ್ನು ಜಾಗೃತಗೊಳಿಸಿದರು! ಅವರ ಕಾರ್ಯಶಕ್ತಿ ಅಗಾಧ! ಹಾಗೆ ಅವರ ಅಧ್ಯಾತ್ಮಿಕ ಶಕ್ತಿ ಕೂಡ! ಕಲಕತ್ತೆಯ ಕಾಂಗ್ರೆಸ್ಸಿನಲ್ಲಿ ಪ್ರಾಮುಖ್ಯವಾಗಿ ಕಂಡುಬಂದ ಮೂವರು ಮಹಿಳೆಯರೆಂದರೆ ಅನಿಬೆಸಂಟ, ಸರೋಜಿನಿ ನಾಯಡು, ಬೇಗಂ ಅಮ್ಮನಬೀಬಿ — (ಮಹಮ್ಮದ ಮತ್ತು ಶೌಕತಅಲಿಯವರ ಮಾತೆ) ಕಾಂಗ್ರೆಸ್ಸಿನಲ್ಲಿ ಇವರು ಪಡೆದ ಸ್ಥಾನ, ಭಾರತೀಯ ಮಹಿಳೆಯರು ರಾಜಕೀಯ ರಂಗವನ್ನು ಪ್ರವೇಶಿಸಿದ ಹೊಸ ಮನ್ವಂತರದ ಹೆಗ್ಗುರುತು! ಅಲ್ಲಿಂದೀಚೆ ಎರಡು ವರ್ಷಗಳಲ್ಲೆಂದರೆ ಶ್ರೀಮತಿ ಸರೋಜಿನಿ ನಾಯಡು ರಾಜಕಾರಣದ ಸೂತ್ರಧಾರಿ! ಅವರ ಅಸ್ಖಲಿತ ವಾಗ್ಧಾರೆ, ಕಾವ್ಯವಾಣಿ, ರಾಜಕಾರಣ ಜ್ಞಾನ — ಎಲ್ಲವೂ ಅವರಿಗೆ ಭಾರತದ ಮುಂದಾಳುತನದ ಪಟ್ಟವನ್ನು ಕೊಟ್ಟವು. ಪರರಾಷ್ಟ್ರದಲ್ಲಿ ಭಾರತದ ಸಂಸ್ಕೃತಿ, ಸಾಹಿತ್ಯವನ್ನು ಕುರಿತು ಅರುಹುವ ರಾಯಭಾರಿ—ಜನತೆಯ ಪ್ರತಿನಿಧಿಯವರು!

### ಚಳವಳಿಯಲ್ಲಿ ಪ್ರತ್ಯಕ್ಷ ಭಾಗ

೧೯೨೧-೨೨ರ ಅಸಹಕಾರ ಚಳವಳಿಯಲ್ಲಿ ಸ್ತ್ರೀಯರು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಭಾಗ ವಹಿಸಿದರು! ಜನಸಾಮಾನ್ಯರಿಗನ್ವಯಿಸುವಂತೆ ಅಂದು ಆಗಬೇಕಾದ ರಾಜಕೀಯ ಕಾರ್ಯವೆಂದರೆ, ಸ್ತ್ರೀಯರು ತಮ್ಮ ಹೆಸರುಗಳನ್ನೂ ಮತದಾರ ಯಾದಿಯಲ್ಲಿ ಸೇರಿಸುವದು. ೧೯೨೨ರ ಯಾದಿಯಲ್ಲಿ ಹೆಸರು ಸೇರಿದರೆ ಮರುವರ್ಷವಾದರೂ ಮತದಾನ ಮಾಡಬಹುದಾಗಿತ್ತು! ಮತದಾನದ ಅಧಿಕಾರವುಳ್ಳ ಸ್ತ್ರೀ ಮನೆಮನೆಗೆ ಹೋಗಿ ಪ್ರಚಾರ ಮಾಡಿ ಬರುವದೂ ಆಗ ಮಹತ್ವದ ಕಾರ್ಯವೇ! ೧೯೨೩ ರಲ್ಲಿ ಬಹುಸಂಖ್ಯೆಯಲ್ಲಿ ಮಹಿಳೆಯರು ಮತದಾನ ಮಾಡಿದರು. ಭಾರತೀಯ ಮಹಿಳೆಯರ ವಿವಿಧ ಸಂಸ್ಥೆಗಳ ಪ್ರತಿನಿಧಿಗಳು ಮದರಾಸಿನಲ್ಲಿ ಮಿ. ಮೊಂಟೆಗರನ್ನು ಕಂಡು ಮಹಿಳೆಯರನ್ನೂ ಹೊಣೆಗಾರ ವ್ಯಕ್ತಿಗಳೆಂದು ಪರಿಗಣಿಸಿ ಅವರಿಗಿರುವ ರಾಜಕೀಯ ದೌರ್ಬಲ್ಯವನ್ನು ಕಿತ್ತಿಹಾಕಬೇಕೆಂದು ಬೇಡಿದ್ದರ ಪರಿಣಾಮವೋ ಇದು! ೧೯೨೭ ರ ಸೈಮನ್ ಕಮಿಟಿಯೂ "ಭಾರತದಲ್ಲಿಯ ಮಹಿಳಾ ಆಂದೋಲನವು ಪ್ರಗತಿಯ ಮುಂಚೂಣೆಯನ್ನು ಹಿಡಿದಿದೆ. ಅದು ಸಾಧಿಸುವ ಪರಿಣಾಮಗಳು ಅದ್ಭುತ. ಜಗತ್ತಿನಲ್ಲಿ ಭಾರತಕ್ಕೆ ಅಪೇಕ್ಷಿತ ಸ್ಥಾನ, ಭಾರತದ ಮಹಿಳೆಯರು ಸುಶಿಕ್ಷಿತ ನಾಗರಿಕರೆಂದು ತಮ್ಮ ಪಾತ್ರವನ್ನು ಸರಿಯಾಗಿ ನಿರ್ವಹಿಸುವ ವರೆಗೆ ದೊರೆಯದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು" ಎಂಬ ವರದಿಯನ್ನಿತ್ತಿತು!

ಅಷ್ಟರಲ್ಲಿಯೇ ೧೯೩೦ ರಲ್ಲಿ ಗಾಂಧೀಜಿಯವರ ದಾಂಡೀಯಾತ್ರೆ ಪ್ರಾರಂಭವಾಯ್ತು. ನ್ಯಾಯಿಸರಾಯರು ತಮ್ಮ ಅಧಿಕಾರದಲ್ಲಿ ಹೆಚ್ಚಿಸಿದ್ದ ಉಪ್ಪಿನ ಮೇಲಿನ ಕರವನ್ನು ಪ್ರತಿಭಟಿಸುವದಿತ್ತು. ಕಾಲ್ನಡಿಗೆಯಿಂದ ಹೊರಟ ಗಾಂಧೀಜಿಯನ್ನು ಸರೋಜಿನಿ ನಾಯಡು ಕೂಡಿಕೊಂಡರು. ಅದರಿಂದ ಸೆರೆಮನೆಯನ್ನೂ ಕಂಡರು. ಅಮೇರಿಕೆಯ ಸ್ವಾತಂತ್ರ್ಯ ಯುದ್ಧ ಚಹಾದಿಂದ ಪ್ರಾರಂಭವಾದರೆ, ಭಾರತದ ಸ್ವಾತಂತ್ರ್ಯ ಯುದ್ಧ ಉಪ್ಪಿನಿಂದ ಪ್ರಾರಂಭವಾಗಿದೆ. ಮೂರು ಸಾವಿರಕ್ಕಿಂತ ಹೆಚ್ಚು ಮಹಿಳೆಯರು ಈ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿ ಲಾಠೀ ಪೆಟ್ಟನ್ನು ತಿಂದರು! ಮದ್ಯಪಾನ ಪ್ರತಿಬಂಧ, ಸ್ವದೇಶೀ ಬಟ್ಟೆಯ ಪ್ರಚಾರದಲ್ಲಿ ಗಾಯಗೊಂಡರು. ಸ್ವಾತಂತ್ರ್ಯ ಸಿದ್ಧಿಯ ಪಥದಲ್ಲಿ, ಸೆರೆಮನೆಯ ಅಂಧಕಾರದಲ್ಲಿ, ಜಾತಿ-ಮತದ ಅಂಧಶ್ರದ್ಧೆಗಳು ಅಳಿದುಹೋಗಿ, 'ಮಾನವ ಜಾತಿಯೊಂದು', ಎಂಬ ಭಾವನೆ ಕ್ರಮೇಣ ಮೂಡುತ್ತ ಬಂತು! ರಾಷ್ಟ್ರ ಸೇವೆಯ ಕರೆಗೆ ಓಗೊಟ್ಟ ಸ್ತ್ರೀಯರಿಗೆ ಒಂದು ಬಗೆಯ ಸಮಾಧಾನ ದೊರೆಯಿತು! ತಮ್ಮ ಶಕ್ತಿಯ ಬಗ್ಗೆ ವಿಶ್ವಾಸ ಮೂಡಿತು!

### ಮಹಿಳಾ ಪರಿಷತ್ತಿನ ಬೇಡಿಕೆಗಳು

೧೯೩೩ ರ ದುಂಡುಮೇಜಿನ ಪರಿಷತ್ತು ಅಸಹಕಾರ ಚಳವಳಿಯನ್ನು ಹಿಂಬಾಲಿಸಿತು. ಅಖಿಲ ಭಾರತ ಮಹಿಳಾ ಪರಿಷತ್ತು ಹಾಗೂ ಇನ್ನಿತರ, ರಾಷ್ಟ್ರೀಯ ಮಹಿಳಾ ಸಂಸ್ಥೆಗಳು ಒಟ್ಟಿಗೇ ಸೇರಿ ಕೆಲವೊಂದು ಗೊತ್ತುವಳಿಗಳನ್ನು ಪಾಸುಮಾಡಿ ಆ ಪರಿಷತ್ತಿನೆದುರು ಇಡುವದಾಗಿ ನಿರ್ಧರಿಸಿದವು.

೧. ಕೇವಲ ಸ್ತ್ರೀ-ಪುರುಷರೆಂಬ ಭೇದದಿಂದ ನಾಗರಿಕರ ಹಕ್ಕು-ಕರ್ತವ್ಯಗಳಲ್ಲಿ ವ್ಯತ್ಯಾಸ ವಿರಕೂಡದು.
೨. ಯಾವುದೇ ಹುದ್ದೆಗೆ ಮಹಿಳೆಯರು ಸಮಾನ ಅಧಿಕಾರಿಗಳಾಗಬಲ್ಲರು.
೩. ಪ್ರೌಢ ಮತದಾನ ಬಳಕೆಯಲ್ಲಿ ಬರಬೇಕು.
೪. ಸಾರ್ವತ್ರಿಕ ಚುನಾವಣೆಯಲ್ಲಿ ಮಹಿಳೆಯರೂ ಸ್ಪರ್ಧಿಸಬಲ್ಲರು!

ಮಹಿಳಾ ಪರಿಷತ್ತಿನ ಈ ಧ್ವನಿಗೆ ಸಾಕಷ್ಟು ಅವಕಾಶ ದೊರೆಯಲಿಲ್ಲ! ಆದರೆ ಒಟ್ಟಿನಲ್ಲೇ ಮಹಿಳೆಯರಲ್ಲಿ ರಾಜಕೀಯ ಜಾಗೃತಿ ತಲೆದೋರಿತ್ತು! ಭಾರತದಲ್ಲಷ್ಟೇ ಅಲ್ಲದೆ, ವಿದೇಶಗಳಲ್ಲೂ ತಮ್ಮ ಸ್ವಾತಂತ್ರ್ಯಕಹಳೆಯನ್ನೂದಿದ ಮಹಿಳೆಯರು ಈ ಜಾಗೃತಿಗೆ ಕಾರಣರಾಗಿದ್ದಾರೆ. ಸರೋಜಿನಿ ನಾಯಡು ಭಾರತದ ಪ್ರತಿನಿಧಿಯಾದರೆ ಕಮಲಾದೇವಿ, ಯುವಕರ ಮುಂದಾಳು! ಅವರ ವಾಗ್ಧಾರೆ, ಬುದ್ಧಿಮತ್ತೆ, ಧೈರ್ಯ, ವ್ಯಕ್ತಿತ್ವ ಎಲ್ಲವೂ ಹೊಸ ಪೀಳಿಗೆಯನ್ನಾಕರ್ಷಿಸಿದವು. ಅದರಂತೆ ಕಸ್ತೂರಬಾ ಗಾಂಧಿ, ಶ್ರೀಮತಿ ರುಕ್ಮಿಣೀ ಲಕ್ಷ್ಮೀಪತಿ (ಮದ್ರಾಸ), ಶ್ರೀಮತಿ ಹಂಸಾ ಮೆಹತಾ (ಮುಂಬೈ), ಶ್ರೀಮತಿ ಸೇನಗುಪ್ತ (ಕಲಕತ್ತಾ), ಶ್ರೀಮತಿ ದುರ್ಗಾಬಾಯಿ (ಆಂಧ್ರ) ಕುಟ್ಟಿಮಾಳ ಅಮ್ಮಾ (ಮಲಬಾರ) ಇವರೆಲ್ಲ ಸಾಮಾಜಿಕ, ರಾಜಕೀಯ ಚಳವಳಿಯಲ್ಲಿ ಅಗ್ರಭಾಗ ವಹಿಸಿದವರು! ಅಂದು ಅಜ್ಜಿ, ಮಗಳು, ಮೊಮ್ಮಗಳು ಮೂವರೂ ಸೆರೆಮನೆಯಲ್ಲಿದ್ದುದನ್ನು ನೋಡಿದರೆ, ಅಸಹಕಾರ ಚಳವಳಿಯು ಜನತೆಯಿಂದ ಪಡೆದ ಪ್ರತಿಕ್ರಿಯೆಯ ಅರಿವಾಗಬಹುದು. ತೆರೆಯ ಮರೆಯಿಂದ ಚಳವಳಿಗೆ ಸಹಕಾರ ದೊರಕಿತು.

೧೯೩೫ ರ ಇಂಡಿಯಾ ಬಿಲ್ಲು ಸಾರ್ವತ್ರಿಕ ಚುನಾವಣೆಯ ತಳಹದಿಯನ್ನು ತಯಾರಿಸಿತು. ಸ್ತ್ರೀ ಮತದಾರರ ಸಂಖ್ಯೆ ಆಗಲೇ ೫೦,೦೦೦ ವನ್ನು ಮುಟ್ಟಿತ್ತು. ಫೆಡರಲ್ ಅಸೆಂಬ್ಲಿಯಲ್ಲಿ ಹಾಗೂ ರಾಜ್ಯಸಭೆಯಲ್ಲಿ ಮಹಿಳೆಯರಿಗಾಗಿ ಸ್ಥಳಗಳನ್ನು ಕಾಯ್ದಿಟ್ಟಿದ್ದರೂ ಇವುಗಳಲ್ಲಿ ಜಾತಿ-ಧರ್ಮದ ತಳಹದಿಯ ಮೇಲೆ ಮಹಿಳೆಯರಿಗೆ ಪ್ರಾತಿನಿಧ್ಯ ಬೇಕಾಗಿತ್ತು. ಪ್ರಾಂತಗಳ ವಿಧಾನ ಪರಿಷತ್ತುಗಳಲ್ಲೂ ಇದೇ ಕ್ರಮ ನಡೆಯಿತು. ಆದರೂ ೧೯೪೧ ರ ಸುಮಾರಿಗೆಂದರೆ ಎಂಭತ್ತಕ್ಕೆ ಮಿಕ್ಕಿ ಸ್ತ್ರೀಯರು ಕಾಯದೆ ಮಂಡಲಗಳಿಗೆ ಬಹುಮತದಿಂದ ಆರಿಸಲ್ಪಟ್ಟ ಸದಸ್ಯೆಯರಾಗಿದ್ದರು.

ಆಡಳಿತದಲ್ಲೂ ಪಾಲು

ಸ್ವಾತಂತ್ರ್ಯ ಸಮರ ಭಾರತೀಯ ಮಹಿಳೆಯರ ಕಾರ್ಯಕ್ಷಮತೆಯ ಅರಿವನ್ನು ಜಗತ್ತಿಗೇ ಮಾಡಿ ಕೊಟ್ಟಿದೆ. ಸ್ವತಂತ್ರ ಭಾರತದಲ್ಲಿ ಸರೋಜಿನಿ ನಾಯಿಡು ಸಂಯುಕ್ತಪ್ರಾಂತದ ಲೋಕಪ್ರಿಯ ಗವ್ಹರ್ನರರಾಗಿ ಆಡಳಿತವನ್ನು ಸಾಗಿಸಿದರು. ಕೇಂದ್ರ ಸರಕಾರದಲ್ಲಿ ರಾಜಕುಮಾರಿ ಅಮೃತ-ಕೌರರು ಆರೋಗ್ಯ ಮಂತ್ರಿಯಾಗಿ ಕಾರ್ಯ ನಿರ್ವಹಿಸಿದರು. ಶ್ರೀಮತಿ ಲಕ್ಷ್ಮೀ ಮೆನನ್ ವಿದೇಶ ವ್ಯವಹಾರ ಶಾಖೆಯ ಉಪಮಂತ್ರಿಯಾಗಿದ್ದಾರೆ. ಇವರಲ್ಲದೆ ಪ್ರಾಂತೀಯ ಸರಕಾರಗಳಲ್ಲೂ ಅನೇಕ ಮಹಿಳೆಯರು ಹೊಣೆಹೊತ್ತು ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಆದರೆ ವಿಜಯಲಕ್ಷ್ಮಿ ಪಂಡಿತರಂತಹ ದೂರದರ್ಶಿತ್ವ, ಬುದ್ಧಿಮತ್ತೆ, ಮುತ್ಸದ್ದಿತನಗಳುಳ್ಳ ವ್ಯಕ್ತಿಯ ಮಾತು ಬೇರೆ! ಸಾಮಾನ್ಯ ಸ್ತ್ರೀಯಲ್ಲಿ ಈ ಜಾಗೃತಿ ಸಾಮಾರ್ಥ್ಯ ಮೂಡಿದೆಯೇ? ಇದೀಗ ಗ್ರಾಮಪಂಚಾಯತಿಗಳಲ್ಲಿ, ಸ್ತ್ರೀಯರ ಸೇರ್ಪಡೆ, ಕಾನೂನಿಗನುಸರಿಸಿ ಆಗುತ್ತಿದೆ. ಸ್ಥಾನಿಕ ಆಡಳಿತೆಯ ಸಂಸ್ಥೆಗಳಲ್ಲಿ ಶ್ರಮಜೀವಿವರ್ಗದ ಮಹಿಳೆಯರಿಗಾಗಿ ಕಾಯ್ದಿಟ್ಟ ಸ್ಥಳಗಳಿವೆ; ಅವುಗಳ ಮೂಲಕವಾಗಿ ಅವರೂ ಆಡಳಿತದ ತಂತ್ರದಲ್ಲಿ ಭಾಗವಹಿಸುತ್ತಿದ್ದಾರೆ. ಕಾಯ್ದಿಟ್ಟ ಸ್ಥಳಗಳಲ್ಲಿಯೂ ಮಹಿಳೆಯರಲ್ಲಿ ಸ್ಪರ್ಧೆ ನಡೆಯುತ್ತಿದ್ದುದು ಸಾಮಾಜಿಕರಲ್ಲುಂಟಾದ ರಾಜಕೀಯ ಜಾಗೃತಿಯ ಲಕ್ಷಣ!

ಇತರ ದೇಶಗಳಲ್ಲಿ

ಜಗತ್ತಿನ ನಾಗರಿಕ ರಾಷ್ಟ್ರಗಳೆಲ್ಲವೂ ಇಂದು ಪ್ರಜಾಸತ್ತಾತ್ಮಕ ಪ್ರಾತಿನಿಧಿಕ, ಆಡಳಿತದ ತಂತ್ರವನ್ನು ರೂಪಿಸುವಲ್ಲಿ ತೊಡಗಿವೆ. ಬಳಿಕ ಜನತೆಯ ಅರ್ಧ ಭಾಗವು ಯೋಗ್ಯ ಪ್ರಾತಿನಿಧ್ಯವಿಲ್ಲದೆ ಹೋದರೆ, ಆಡಳಿತವು ನಿರ್ವಿಘ್ನವಾಗುವದೆಂತು? ೧೯೩೦ರಲ್ಲಿಯೇ ದಕ್ಷಿಣ ಆಫ್ರಿಕೆಯು ಪ್ರೌಢ ಮಹಿಳೆಯರಿಗೆಲ್ಲ ಮತದಾನದ ಅಧಿಕಾರವನ್ನಿತ್ತಿತು! ಕಾನಡಾದ ಮಹಿಳೆಯರಿಗೆ ಮತದಾನ ಹಾಗೂ ಉನ್ನತ ರಾಜಕೀಯ ಪದಸ್ವೀಕಾರದ ಹಕ್ಕುಗಳೆರಡೂ ಇವೆ. ಸದ್ಯ ಅನೇಕ ಜನ ಕಾನಡಾ ಪಾರ್ಲಿಮೆಂಟಿನ ಸದಸ್ಯೆಯರಾಗಿದ್ದಾರಲ್ಲದೆ ಶ್ರೀಮತಿ ಎಲೆನ್ ಫೇಅರ್‌ಕ್ಲೊ, ಮಂತ್ರಿ ಪದವಿಯನ್ನೂ ಪಡೆದಿದ್ದಾರೆ. ಆಸ್ಟ್ರೇಲಿಯಾದಲ್ಲಿಯೂ ಪ್ರೌಢ ಮತದಾನ ಬಳಕೆಯಲ್ಲಿದೆ.

ಭಾರತೀಯ ರಾಜ್ಯಘಟನೆಯ ಮೇರೆಗೆ ಇಪ್ಪತ್ತೊಂದು ವಯಸ್ಸನ್ನು ಮುಟ್ಟಿದ ಎಲ್ಲ ವ್ಯಕ್ತಿಗಳಿಗೂ ಮತದಾನದ ಅಧಿಕಾರವಿದೆ. ಇಷ್ಟೇ ಅಲ್ಲ ಕೇವಲ ಜಾತಿ-ಮತ, ಜನ್ಮಸ್ಥಳ, ಸ್ತ್ರೀ-ಪುರುಷ ಭೇದ ಇವುಗಳ ಮೂಲಕವಾಗಿ ಯಾವುದೇ ಅಧಿಕಾರಕ್ಕೆ ಯಾವ ವ್ಯಕ್ತಿಯೂ ಅನರ್ಹತೆಯನ್ನು ಪಡೆಯದಿರುವ ಇಂದಿನ ಕಾಲದಲ್ಲಿ ಮಹಿಳೆಯರ ವ್ಯಕ್ತಿತ್ವದ ವಿಕಾಸಕ್ಕೂ ಸಾಕಷ್ಟು ಅವಕಾಶ ದೊರೆಯುತ್ತಿದೆ. ರಾಜ್ಯಘಟನೆ ಕೊಟ್ಟ ಆಶ್ವಾಸನವೂ ಕೃತಿಯಲ್ಲುಂಟಾಗಬೇಕಾದರೆ ದಶಕಗಳುರುಳಬೇಕೇನೊ! ರಾಜ್ಯಘಟನೆಯನ್ನು ರಚಿಸಿ, ತಂತ್ರವನ್ನು ರೂಪಿಸಿದ ಜನತೆ, ಅದರ ಯಶಸ್ವೀ ಮುನ್ನಡೆಗೆ ಅವ್ಯಾಹತನಾದ ಜನತಾ-ಶಕ್ತಿಬೇಕೆಂಬುದನ್ನೂ ಮರೆಯುವಂತಿಲ್ಲ! ಶಕ್ತಿಯ ಪ್ರತೀಕವಾದ ಮಹಿಳೆ ಜನತಾ-ಶಕ್ತಿಯ ಮುಖ್ಯ ಆಧಾರವೆಂಬುದೂ ನಿರ್ವಿವಾದ!!

ಜೀವನದಲ್ಲಿ ಪವಿತ್ರ ಹಾಗೂ ಧಾರ್ಮಿಕ ಎಂಬುದೆಲ್ಲದರ ತವರುಮನೆ ಸ್ತ್ರೀಯರಲ್ಲಿಯೇ ಇದೆ. ಹಳೆಯದನ್ನು ಬಿಡದೇ ಇರುವ ಸ್ವಭಾವ ಅವರದು. ಅಂಧಶ್ರದ್ಧೆಗಳನ್ನು ಅವರು ಬೇಗ ಬಿಡಲರಿಯರು. ಅದೇ ಕಾಲಕ್ಕೆ ಜೀವನದಲ್ಲಿ ಶುದ್ಧ, ಪವಿತ್ರ, ಶ್ರೇಷ್ಠ ಎಂಬುದನ್ನು ಅವರು ಬಿಡಲರಿಯರು. —ಮಹಾತ್ಮಾ ಗಾಂಧಿ

# ಸಾಮಾಜಿಕ ಪರಿಸರ - ಸ್ವಾಸ್ಥ್ಯ ಪ್ರಶ್ನೆ

ಲೇಖಿಕೆಯರು : **ಡಾ. ಅನುಪಮಾ ನಿರಂಜನ,** ಎಂ. ಬಿ., ಬಿ. ಎಸ್., ಧಾರವಾಡ

ಆರೋಗ್ಯವು ಒಂದು ಭಾಗ್ಯವೆಂದು ಪರಿಗಣಿಸುವರು. ಮಕ್ಕಳು ಆರೋಗ್ಯವಂತರಾಗಿ ಬೆಳೆಯುವುದು ತಂದೆ-ತಾಯಿಗಳ ಕರ್ತವ್ಯವನ್ನೇ ಅವಲಂಬಿಸಿದೆ. ಅದರಲ್ಲಿಯೂ ಮಕ್ಕಳನ್ನು ಲಾಲಿಸಿ ಪಾಲಿಸುವ ಮಹಿಳೆ—ತಾಯಿಯ ಆರೋಗ್ಯ ಭಾಗ್ಯದ ಕಡೆಗೆ ಲಕ್ಷ್ಯಕೊಡಬೇಕಾದುದು ಅತ್ಯಗತ್ಯ. ಸಾಮಾಜಿಕ ಪರಿಸರದಲ್ಲಿ ಇದು ಎಂತು ಹೇಗೆ ಸಾಧ್ಯ ಎಂಬುದನ್ನು ಲೇಖಿಕೆಯರು ಇಲ್ಲಿ ತಿಳಿಸಿದ್ದಾರೆ.

ಜೀವನದಲ್ಲಿ ಆರೋಗ್ಯಕ್ಕಿಂತ ಮಿಗಿಲಾದ ಭಾಗ್ಯವಿಲ್ಲ—ಎಂದು ಹೇಳುವ ವಾಡಿಕೆಯಿದೆ. ಸಂಸಾರದಲ್ಲಿ ಎಳೆಯ ಮಕ್ಕಳೆಲ್ಲಾ ಹೃಷ್ಟಪುಷ್ಟರಾಗಿ ನಗುನಗುತ್ತಾ ಬೆಳೆಯುತ್ತಿದ್ದರೆ, ತಂದೆ-ತಾಯಿಗಳ ಪಾಲಿಗೆ ಅದೇ ಅನಂದಾಮೃತ. ಈ ಸಂತೋಷಕ್ಕೆ ಕಾರಣೀಭೂತಳು ಮನೆಯಲ್ಲಿ ಮಕ್ಕಳನ್ನು ಪಾಲಿಸುವ ಮಹಿಳೆ—ತಾಯಿ. ತಾನು ಆರೋಗ್ಯವಂತಳಾಗಿ, ದೃಢಕಾಯಳಾಗಿ ಇದ್ದರೆ ಮಾತ್ರ ಈ ಹಿರಿಹೊಣೆಯನ್ನು ನಿರ್ವಹಿಸುವುದು ಅವಳಿಂದ ಸಾಧ್ಯ. ಎಂತಲೇ, ಸಮಾಜಜೀವನದಲ್ಲಿ ಮಹಿಳೆಯ ಮಾನಸಿಕ, ಶಾರೀರಿಕ ಆರೋಗ್ಯಕ್ಕೆ ವಿಶೇಷ ಸ್ಥಾನ ಕೊಡುವುದು ಅಗತ್ಯ.

### ವಾತಾವರಣ—ಮಹಿಳೆ

ಮಣ್ಣು ಫಲವತ್ತಾಗಿದ್ದರೆ, ಕಾಲಕಾಲಕ್ಕೆ ನೀರೆರೆದು ಗೊಬ್ಬರ ಹಾಕಿ ಪೋಷಣೆ ಮಾಡಿದರೆ, ಭೂಮಿಯಲ್ಲಿ ನೆಟ್ಟ ಗಿಡ ಹೆಮ್ಮರವಾಗಿ ಬೆಳೆದು ಫಲ ಕೊಡುತ್ತದೆ; ನೋಡುವವರ ಕಣ್ಣಿಗೆ ಹಬ್ಬವಾಗುತ್ತದೆ. ಮಹಿಳೆ ಜೀವಿಸುವ ವಾತಾವರಣಕ್ಕೂ ಅನ್ವಯಿಸುವ ಮಾತು ಇದು. ವಾತಾವರಣ ಹೆಚ್ಚಿನ ಪರಿಣಾಮ ಬೀರುವುದು, ಮನೆಯಲ್ಲಿಯೇ ಉಳಿದು ಬಾಳಿ ಬದುಕುವ ಸ್ತ್ರೀಯ ಮೇಲೆ. ಅದು ಹಿತಕರವಾಗಿದ್ದರೆ ಆಕೆಯ ಬಾಳು ಸುಂದರವಾಗುತ್ತದೆ. ಇಲ್ಲದಿದ್ದರೆ ಮಹಿಳೆಯ ಆರೋಗ್ಯ ಕೆಡವುದೊಂದೇ ಅಲ್ಲದೆ, ಮುಂದಿನ ಪೀಳಿಗೆಯ ಮೇಲೂ ಅದರ ನೆರಳು ಬೀಳುತ್ತದೆ.

### ಎರಡು ಮುಖಗಳು

ಮಹಿಳೆಯರ ಪ್ರತಿಯೊಂದು ಕಾಯಿಲೆಯ ಹಿಂದೆ ಈ ವಾತಾವರಣದ ಕೈವಾಡವಿದ್ದೇ ಇದೆ. ಆದುದರಿಂದ, ಯಾವುದಾದರೂ ಕಾಯಿಲೆಯ ರೋಗನಿದಾನ ಮಾಡುವ ಮುನ್ನ, ಸಾಮಾಜಿಕ ಹಿನ್ನೆಲೆಯ ಸೂಕ್ಷ್ಮ ಪರಿಚಯದ ಅರಿವು ಅಗತ್ಯ. ರೋಗಿಯಾದ ಮಹಿಳೆ ಜೀವಿಸುತ್ತಿರುವುದು ಎಂತಹ ವಾತಾವರಣದಲ್ಲಿ? ಸಂಸಾರದ ಸ್ಥಿತಿಗತಿಗಳು ಎಂತಹವು? ಎಷ್ಟು ಮಕ್ಕಳ ತಾಯಿ ಆಕೆ? ಈ ಎಲ್ಲ ಪ್ರಶ್ನೆಗಳಿಗೆ ಸರಿಯಾದ ಉತ್ತರ ಬಂದ ಮೇಲೆಯೇ ಶಾರೀರಿಕ ಪರೀಕ್ಷೆಯ ಕ್ರಮಕ್ಕೆ ಆರಂಭ. ಎಂತಹ ರೋಗವೇ ಆಗಲಿ, ಅದಕ್ಕೆ ಎರಡು ಮುಖಗಳಿವೆ: ಶಾರೀರಿಕ ಮತ್ತು ಮಾನಸಿಕ. ಔಷಧ ಸೇವನೆಯಿಂದ ಶಾರೀರಿಕ ತೊಂದರೆ ಗುಣವಾಗಬಹುದು. ಆದರೆ ಅದಕ್ಕಿಂತ ಬಹು ಮುಖ್ಯವಾದ ಮಾನಸಿಕ ಮುಖದ ಚಿಕಿತ್ಸೆಯೂ ಆಗದಿದ್ದರೆ ರೋಗ ಮತ್ತೆ ತಲೆದೋರುತ್ತದೆ.

ಸಾಮಾನ್ಯವಾಗಿ ಮಹಿಳೆಯರಲ್ಲಿ ಕಾಣುವ ರೋಗಗಳನ್ನು ವಿವೇಚಿಸುವಾಗ, ವಿವಿಧ ಬಗೆಯ ಜೀವನಮಟ್ಟಗಳಲ್ಲಿ ಬೇರೆಬೇರೆ ಬಗೆಯ ಕಾಯಿಲೆಗಳನ್ನು ಕಾಣಬಹುದು.

ನಮ್ಮ ಸಮಾಜವನ್ನು ಸಾಧಾರಣವಾಗಿ—ಕೆಳವರ್ಗ, ಮಧ್ಯಮವರ್ಗ ಮತ್ತು ಮೇಲಣ ವರ್ಗ—ಎಂದು ಮೂರು ವರ್ಗಗಳಾಗಿ ವಿಂಗಡಿಸುವುದುಂಟು.

ಕಡು ಬಡವರು, ದಿನಗೂಲಿಗಾಗಿ ದುಡಿಯುವ ಮಹಿಳೆಯರು ಮೊದಲಿನ ವರ್ಗಕ್ಕೆ ಸೇರಿದರೆ, ಸದಾ ಮನೆಯಲ್ಲಿಯೇ ಉಳಿದು ಮಕ್ಕಳ ಲಾಲನೆ ಪಾಲನೆ ಮಾಡುತ್ತಾ ಬದುಕುವವರು ಎರಡನೆಯ ವರ್ಗದವರು. ತಿನ್ನಲುಣ್ಣಲು ಕೊರತೆಯಿಲ್ಲದೆ, ಹೆಚ್ಚಿನ ದೇಹಶ್ರಮವಿಲ್ಲದೆ ಬೆಳೆಯುವ ಮಂದಿ ಮೂರನೆಯ ವರ್ಗದವರು. ಈ ಮೂರು ವರ್ಗಗಳಲ್ಲೂ ಅವರವರ ಜೀವನಕ್ರಮವನ್ನವಲಂಬಿಸಿ ವಿವಿಧ ಬಗೆಯ ರೋಗಗಳು ತಲೆದೋರುತ್ತವೆ.

### ಹಲವಾರು ಮಕ್ಕಳ ತಾಯಿ

ಅಧಿಕ ಸಂತಾನದ ಪ್ರಶ್ನೆ ಹೆಚ್ಚಾಗಿ ಕಾಡುವುದು ಮಧ್ಯಮವರ್ಗದ ಮಹಿಳೆಯನ್ನೇ. ಅವಳ ಪ್ರಪಂಚ ಚಿಕ್ಕದು. ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳುವ ರೀತಿ, ಎಷ್ಟು ಬೇಕೋ ಅಷ್ಟೇ ಮಕ್ಕಳನ್ನು ಪಡೆಯಲು ಕೈಗೊಳ್ಳಬೇಕಾದ ಕ್ರಮಗಳು ಈ ಬಗೆಗೆ ಅವಳು ಪೂರ್ಣ ಅಜ್ಞಾನಿ. ಓದಿ ತಿಳಿಯಬಲ್ಲ ಶಕ್ತಿಯಿರುವವರಿಗೆ ಓದಲು ತಾತ್ಸಾರ ಅಥವಾ ಬೇಸರ. ಅಕ್ಷರ ಪರಿಚಯವಿಲ್ಲದಿರುವವರಿಗಂತೂ ಇಂತಹ ಜ್ಞಾನ ಗಗನಕುಸುಮವೇ.

ಈ ಮಹಿಳೆ ವಾಸಿಸುವ ಮನೆಯೋ ಪುಟ್ಟದು. ಸಾಕಷ್ಟು ಗಾಳಿ—ಬೆಳಕುಗಳ ಸಂಚಾರವಿಲ್ಲದ್ದು. ತಾಯಿಗಂತೂ ಬೆಳಗಿನಿಂದ ರಾತ್ರಿಯ ವರೆಗೆ ಅಡುಗೆಮನೆಯಲ್ಲಿಯೇ ಕೆಲಸ. ಅಲ್ಲಿನ ಹೊಗೆ ಕುಡಿದು ಅವಳು ಆಜೀವಪರ್ಯಂತ ದಿನಗಳೆಯುತ್ತಾಳೆ. ಆರೋಗ್ಯ ಕಾಪಾಡಿಕೊಳ್ಳಲು ಅತ್ಯವಶ್ಯಕವಾದ ಆಹಾರದ ವಿಷಯದಲ್ಲಿ ಶ್ರದ್ಧೆ ಸೊನ್ನೆ. ಮಿತಸಂಪಾದನೆಯ ಕಾರಣದಿಂದ ದೇಹಕ್ಕೆ ಅಗತ್ಯವಾದ, ಆರೋಗ್ಯವನ್ನು ವೃದ್ಧಿಗೊಳಿಸುವ, ಹಾಲು—ಹಣ್ಣು—ತರಕಾರಿ—ಸೊಪ್ಪು ಇತ್ಯಾದಿಗಳ ಸೇವನೆ ಅವಳ ಕೈಗೆ ಮೀರಿದ್ದು. ಹೀಗಾಗಿ ದೇಹಕ್ಕೆ ಬೇಕಾದ ಅನ್ನಾಂಗಗಳು, ರಕ್ತವೃದ್ಧಿಗೊಳಿಸುವ ಸಾಧನಗಳು, ಕಡಿಮೆಯಾಗುತ್ತವೆ. ತತ್ಪರಿಣಾಮವಾಗಿ ರೋಗನಿರೋಧಕ ಶಕ್ತಿಯೇ ಅವಳಲ್ಲಿ ಕುಂಠಿತವಾಗುತ್ತದೆ.

### ಕೊನೆಯೇ ಇಲ್ಲದ ಕಾಯಿಲೆ ಪಟ್ಟಿ

ಮಧ್ಯಮ ವರ್ಗದ ಗೃಹಿಣಿಯಲ್ಲಿ ಹೆಚ್ಚಾಗಿ ಕಾಣಬರುವ ಕಾಯಿಲೆ ಬಲಹೀನತೆ, ರಕ್ತಹೀನತೆ ಅನ್ನಾಂಗಗಳ ಕೊರತೆಯಿಂದ ಪ್ರಾರಂಭವಾಗುವ ಈ ಬಲಹೀನತೆ, ಮುಂದೆ ವಿವಿಧ ಬಗೆಯ ಉಗ್ರ ರೋಗಗಳಲ್ಲಿ ಪರ್ಯವಸಾನವಾಗುವುದುಂಟು. ಆ ಬಗೆಯ ರೋಗಗಳಲ್ಲಿ ಕ್ಷಯವೂ ಒಂದು. ಸಾಕಷ್ಟು ಗಾಳಿ-ಬೆಳಕುಗಳಿಲ್ಲದ ವಾತಾವರಣ ಈ ಕಾಯಿಲೆಗೆ ಹಿನ್ನೆಲೆಯಾಗುತ್ತದೆ. ತನಗೆ ಕ್ಷಯವಿರುವುದೆಂಬ ಅರಿವಿಲ್ಲದ ತಾಯಿ, ತಾನು ಸಂಕಟಪಡುವುದು ಮಾತ್ರವಲ್ಲದೆ ಮನೆ ಮಕ್ಕಳಿಗೂ ಆ ರೋಗವನ್ನು ಹಂಚುತ್ತಾಳೆ. ಇದರ ಪರಿಣಾಮ—ಇಡಿಯ ಸಂಸಾರಕ್ಕೆ ಒದಗಿಬರುವ ನಿರಂತರ ನರಳಾಟ.

ಹೊಟ್ಟೆನೋವು, ಮಲಬದ್ಧತೆ ಇಂತಹ ಕಾಯಿಲೆಗಳು ಗೃಹಿಣಿಯ ದಿನನಿತ್ಯದ ಜೊತೆಗಾರ್ತಿಯರು.

ಇವಿಷ್ಟಲ್ಲದೆ, ಹೆಚ್ಚು ಕಡಿಮೆ ವರ್ಷವರ್ಷವೂ ಆಗುವ ಹೆರಿಗೆಗಳಿಂದ ಅವಳ ದೇಹಸ್ಥಿತಿ ಕೆಟ್ಟು, ಆಕೆ ಅತಿ ದುರ್ಬಲಳಾಗುತ್ತಾಳೆ. ಗರ್ಭಿಣಿಯಾದಾಗ ಸಹ ಪುಷ್ಟಿಯುತವಾದ ಆಹಾರವಿಲ್ಲದೆ, ಬಿಸಿಲಿನ ಸ್ಪರ್ಶವಿಲ್ಲದೆ, ಆಕೆ ಹೆರಿಗೆಗೆ ಮುಂಚೆಯೂ ಹೆರಿಗೆಯ ವೇಳೆಯಲ್ಲೂ, ತದನಂತರವೂ ಎಷ್ಟೋ ತೊಂದರೆಗಳಿಗೆ ಸಿಲುಕುತ್ತಾಳೆ. ಹೆರಿಗೆಗೆ ಮುನ್ನ ಅತಿಯಾದ ಆಯಾಸ, ವಾಂತಿ, ತಲೆಶೂಲೆ, ಎದೆನೋವು, ಹೆಚ್ಚು ರಕ್ತದ ಒತ್ತಡ ಮುಂತಾದುವು ತಲೆದೋರಬಹುದು. ದೇಹದಲ್ಲಿ ಕ್ಯಾಲ್ಸಿಯಂ ಕಡಿಮೆಯಾಗುವುದರಿಂದ ನಡುವಿನ ಮೂಳೆ ಸೆಟ್ಟಗಾಗಿ ಹೆರಿಗೆಯ ಸಮಯದಲ್ಲಿ ಶಸ್ತ್ರಚಿಕಿತ್ಸೆ ಮಾಡಿ ಮಗುವನ್ನು ಹೊರಗೆ ತೆಗೆಯಬೇಕಾದ ಪ್ರಸಂಗಗಳು ಬಾರದಿಲ್ಲ. ಪ್ರಸವದ ಬಳಿಕವೂ

ಅತಿಯಾದ ರಕ್ತಸ್ರಾವ, ಬೆನ್ನುನೋವು ಮಾನಸಿಕ ದೌರ್ಬಲ್ಯ ಕಾಣಿಸಿಕೊಂಡು, ಗೃಹಿಣಿಯನ್ನು ಅತ್ಯಂತ ಬಲಹೀನಳನ್ನಾಗಿ ಮಾಡುತ್ತವೆ.

### ಮನೋವಿಕಾರ

ಸುತ್ತಲ ಸಮಾಜದ ಒತ್ತಡ ಮಹಿಳೆಯ ಮೇಲೆ ಅಧಿಕವಾಗಿರುತ್ತದೆ. ತಾನು ಬಡವೆ ಗತಿಯಿಲ್ಲದವಳು— ಎಂದು ನಾಲ್ಕು ಮಂದಿಯ ಮುಂದೆ ಒಪ್ಪಲಾಗದ ಮನಸ್ಸು ಅವಳದು. ಆದರೆ ಸಿರಿವಂತರೆಂದು ಸೋಗು ಹಾಕಲು ಬೇಕಾದ ಅನು-ಕೂಲತೆಯೂ ಇಲ್ಲ. ಈ ತೊಳಲಾಟದಲ್ಲಿ ಅವಳ ಮನಸ್ಸು ಹಿಪ್ಪೆಯಾಗುತ್ತದೆ. ಮಾನವನಿಗೆ ಸಹಜವಾದ ಆಶೆಗಳೆಲ್ಲ ಬಡತನದ ಪರಿಣಾಮವಾಗಿ, ಈಡೇರದ ಬಯಕೆಗಳಾಗಿಯೇ ಉಳಿಯುತ್ತವೆ. ಕೊನೆಗಾಣದ ಕಷ್ಟಕಾರ್ಪಣ್ಯಗಳು, ಬಿಡುವಿಲ್ಲದ ದುಡಿತ, ಅವಳ ಮನಸ್ಸಿನ ಮೇಲೆ ಬಲು ಕ್ರೂರವಾದ ಪರಿಣಾಮವನ್ನುಂಟು ಮಾಡುವುದು ಸಹಜ. ಬಹಳ ದಿಟ್ಟೆಯಾದ ಹೆಣ್ಣು ಮಾತ್ರ ಇದನ್ನೆಲ್ಲ ಸಹಿಸಿಕೊಂಡು ಹೋಗಬಲ್ಲಳು. ಸಾಮಾನ್ಯ ಸ್ತ್ರೀಯ ಪಾಲಿಗೆ ಇದು ಬಿಗಿಯುತ್ತಲೇ ಇರುವ ಉರುಳು. ಒಂದಲ್ಲ ಒಂದು ದಿನ ಈ ಒತ್ತಡಕ್ಕೆ ಸಿಲುಕಿ ಅವಳು ಮನೋವಿಕಾರಕ್ಕೆ ಒಳಗಾಗಬಹುದು.

### ದೇಹ ಮತ್ತು ದುಡಿಮೆದೇವರು

ಕೆಳಗಿನ ವರ್ಗದ ಮಹಿಳೆಯರಲ್ಲಿ ಹೆಚ್ಚು ಜನ, ದಿನಗೂಲಿಗಾಗಿ ದುಡಿಯಲು ಹೋಗುವವರು. ವಿಶ್ರಾಂತಿಕಾಣದ ಆ ದೇಹ ರೋಗಗಳ ಆವಾಸಸ್ಥಾನವಾಗುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಕ್ರೂರ ಬಡತನದಿಂದಾಗಿ ಸಾಕಷ್ಟು ತಿನ್ನಲು ಸಹ ಇಲ್ಲದಿರುವಾಗ, ಒಳ್ಳೆಯ ಆಹಾರ, ಆರೋಗ್ಯಗಳನ್ನು ಕುರಿತು ಮಾತನಾಡುವುದೇ ಹಾಸ್ಯಾಸ್ಪದ ಎನಿಸುತ್ತದೆ.

ಅನ್ನಾಂಗಗಳ ಅಭಾವ, ರಕ್ತಹೀನತೆ, ಬಲಹೀನತೆ ಇವರಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಕಂಡುಬರುತ್ತವೆ. ದಿನವೂ ಸ್ನಾನಮಾಡುತ್ತಾ ಶುಚಿಯಾಗಿರಲು ಸಾಧ್ಯವಿಲ್ಲದುದರಿಂದ ವಿವಿಧ ಬಗೆಯ ಚರ್ಮರೋಗಗಳೂ ಕಾಣಿಸಿಕೊಳ್ಳುತ್ತವೆ.

ದೇಹದ ಶ್ರಮವನ್ನು ಮತ್ತು ಹಸಿವೆಯನ್ನು ಮರೆಯಲು ಸಂಜೆಯ ವೇಳೆ ಮಾದಕ ಪಾನೀಯಗಳನ್ನು ಸೇವಿಸುವ ಅಭ್ಯಾಸ ಈ ವರ್ಗದ ಸ್ತ್ರೀಯರಲ್ಲಿ ಅತಿ ಹೆಚ್ಚು. ಆ ಅಮಲಿನಲ್ಲಿ ತುಸು ಸಮಯವಾದರೂ ವಾಸ್ತವತೆಯನ್ನು ಮರೆತು, ಅವರು ಸಂತೋಷದಿಂದಿರುತ್ತಾರೆ. ಆದರೆ ದೇಹದ ಮೇಲೆ ಮಾತ್ರ ಅದು ವಿಪರೀತ ಪರಿಣಾಮವನ್ನುಂಟು ಮಾಡುತ್ತದೆ. ಕರುಳಿನ ಕಾಯಿಲೆಗಳು, ಹೊಟ್ಟೆ ಹುಣ್ಣಾಗುವಿಕೆ, ಪಿತ್ತಜನಕಾಂಗದ— ಮೂತ್ರಜನಕಾಂಗದ ರೋಗಗಳು ಕಾಣಿಸಿಕೊಳ್ಳುತ್ತವೆ. ಹೃದಯದೌರ್ಬಲ್ಯ—ಕಡೆಗೆ ಮನೋವಿಕಲತೆ ಕೂಡಾ ಉಂಟಾಗುವ ಸಂಭವ ಹೆಚ್ಚು. ಪಾನನಿಷೇಧವಿದ್ದು, ಕದ್ದುಕುಡಿಯುವ ಸ್ಥಳಗಳಲ್ಲಂತೂ ಅಶಾಸ್ತ್ರೀಯವಾಗಿ ತಯಾರಿಸಿದ ಪಾನೀಯ ದೇಹಕ್ಕೆ ವಿಷವಾಗಿಯೇ ಪರಿಣಮಿಸುತ್ತದೆ.

### ಎಳೆಯರ ಮೇಲೆ ಪರಿಣಾಮ

ಈ ಜನರ ಸಮಾಜಜೀವನದಲ್ಲಿ, ಗೌಪ್ಯಕ್ಕೆ ಅವಕಾಶವಿಲ್ಲದೆ ಎಳೆಯರಲ್ಲಿ ಗಂಡು-ಹೆಣ್ಣಿನ ಸಂಬಂಧದ ಬಗ್ಗೆ ವಿಚಿತ್ರವಾದ ಪ್ರತಿಕ್ರಿಯೆ ಉಂಟಾಗುತ್ತದೆ. ಇದರಿಂದಾಗಿ ಅಸ್ವಾಭಾವಿಕವಾದ ಅನೈತಿಕವೆನ್ನಿಸುವ ಸಂಪರ್ಕಗಳು ಅತಿ ಹೆಚ್ಚಿನ ಪ್ರಮಾಣದಲ್ಲಿ ಏರ್ಪಡುತ್ತವೆ. ಈ ವರ್ಗದಲ್ಲೇ ಹೆಚ್ಚಿನ ಜನರು ಮೇಹರೋಗ ಮುಂತಾದ ಗುಹ್ಯರೋಗಗಳಿಂದ ನರಳುತ್ತಾರೆ. ತಾವು ನರಳುವುದು ಮಾತ್ರವಲ್ಲದೆ, ವಿಕೃತ ಸಂತಾನದ ಉತ್ಪ-ತ್ತಿಗೂ ಕಾರಣರಾಗುತ್ತಾರೆ.

ಈ ವರ್ಗದ ಸ್ತ್ರೀಯರು ಎಷ್ಟೋ ವೇಳೆ ಬಡತನದ ಕಾರಣದಿಂದಾಗಿ ತಮ್ಮ ದೇಹ ಮಾರಿ ಬದುಕಬೇಕಾದ ಪ್ರಸಂಗಗಳು ಒದಗುವುದೂ ಉಂಟು. ಈ ಅನೈತಿಕ ಜೀವನದ ಕಲೆ, ವಿವಿಧ ಕಾಯಿಲೆಗಳ ಉಡುಗೊರೆಗಳನ್ನು ಅವರಿಗೆ ನೀಡುತ್ತದೆ.



### ಯಾರಿಗೂ ತಪ್ಪದು !

ಸಮೃದ್ಧವಾಗಿ ಹಾಲು, ಹಣ್ಣು-ಹಂಪಲು, ಬಗೆ ಬಗೆಯ ಭಕ್ಷ್ಯ-ಭೋಜ್ಯಗಳನ್ನು ತಿಂದು, ಹಂಸತೂಲಿಕಾತಲ್ಪದಲ್ಲಿ ಪವಡಿಸಿದರೂ ಹೆಣ್ಣು ಕಾಯಿಲೆಯ ಒಡನಾಟದಿಂದ ಹೊರಗಾಗಲಾರಳು. ಒಳ್ಳೆಯ ಹವೆ ಓಡಾಡುವ, ಚೆನ್ನಾಗಿ ಬಿಸಿಲು ಬೀಳುವ ಬಂಗಲೆಗಳಲ್ಲಿ ವಾಸಮಾಡುವುದೇನೋ ಸರಿಯೇ. ಆದರೆ ಸಾಕಷ್ಟು ವ್ಯಾಯಾಮ ದೊರೆಯದೆ ಹೋದರೆ ಕಾಯಿಲೆ ಬೀಳುವುದು ಕಷ್ಟವಾಗುವುದಿಲ್ಲ. ಮನೆಗೆಲಸವಿಲ್ಲದೆ, ಹೊರಗೆ ಓಡಾಡುವಾಗಲೂ ಕಾರಿನಲ್ಲೇ ಸುತ್ತಾಡುವುದರಿಂದ ಇಂತಹ ಮಹಿಳೆಯರಿಗೆ ಬಲು ಸುಲಭವಾಗಿ ‘ ಮೈ ಬರುತ್ತದೆ. ’ ಅವರು ಸೇವಿಸುವ ಆಹಾರದಲ್ಲಿ ಪಿಷ್ಟಪದಾರ್ಥದ ಅಂಶ ಹೆಚ್ಚಾಗಿರುವುದರಿಂದ, ದೇಹದಲ್ಲಿ ಕೊಬ್ಬು ಸೇರಲು ಅನುವಾಗುತ್ತದೆ. ಬಲಹೀನತೆ, ರಕ್ತಹೀನತೆ, ಅನ್ನಾಂಗಗಳ ಕೊರತೆ ಮುಂತಾದ ‘ ಬಡತನ ರೋಗಗಳು ’ ಈ ವರ್ಗದ ಮಹಿಳೆಯರಲ್ಲಿ ಸಾಧಾರಣವಾಗಿ ಇರುವುದಿಲ್ಲ. ಅವುಗಳಿಗೆ ಬದಲು, ಬೇರೆ ಬಗೆಯ, ‘ ಸಿರಿವಂತಿಕೆಯ ರೋಗಗಳು ’ ತಲೆದೋರುತ್ತವೆ.

### ‘ ಸಿರಿವಂತಿಕೆಯ ರೋಗಗಳು ’

ದೇಹಕ್ಕೆ ವ್ಯಾಯಾಮವು ಇಲ್ಲದಿರುವುದರಿಂದ ಅಜೀರ್ಣ, ಭೇದಿ ಮುಂತಾದವು ಬಲು ಸಾಮಾನ್ಯವಾಗಿ ಉಂಟಾಗುತ್ತವೆ. ದೇಹದಲ್ಲಿ ಕೊಬ್ಬು ದಿನದಿನಕ್ಕೆ ವೃದ್ಧಿಯಾಗುತ್ತಿರುವುದರಿಂದ ಮಿತಿಮೀರಿ ದಪ್ಪಗಾಗಿ ಕಡೆಗೆ ಏಳಲು ಕೂಡಲು ಸಹ ಕಷ್ಟವಾಗುತ್ತವೆ. ಇದರಿಂದಾಗಿ ಹಸಿವು ಕಡಿಮೆಯಾಗುತ್ತದೆ ; ನಾಲಿಗೆಯ ರುಚಿ ಕೆಡುತ್ತದೆ.

ಕೊಬ್ಬು ಹೃದಯದ ಮಾಂಸಖಂಡಗಳ ಮೇಲೆ ಶೇಖರವಾಗುವುದರಿಂದ, ಹೃದಯ ದೌರ್ಬಲ್ಯ ಸಹಜವಾಗಿ ಉಂಟಾಗುತ್ತದೆ. ಹೃದಯದ ಸಣ್ಣ ರಕ್ತನಾಳಗಳಲ್ಲಿ ಶೇಖರವಾಗುವ ಕೊಬ್ಬಿನಂತಿರುವ ಪದಾರ್ಥದಿಂದ, ಹೃದಯಕ್ಕೆ ಸಾಕಾಗುವಷ್ಟು ರಕ್ತ ಒದಗುವುದಿಲ್ಲ. ಈ ಕಾರಣದಿಂದಾಗಿ ಹಿಂದಿನ ದಿವಸ ಪೂರ್ಣ ಆರೋಗ್ಯವಂತಳಾಗಿ, ಕಂಡ ಮಹಿಳೆಗೆ ಇದ್ದಕ್ಕಿದ್ದಂತೆ ಹೃದಯದ ನೋವುಂಟಾಗಿ, ಎಷ್ಟೋವೇಳೆ ಹೃದಯದ ಚಲನಕ್ರಿಯೆಯೇ ನಿಂತು ಹೋಗುತ್ತದೆ.

ಹೃದಯದ ರಕ್ತನಾಳಗಳಲ್ಲಿ ಮಾತ್ರವಲ್ಲದೆ ಈ ಕೊಬ್ಬು ಮೂತ್ರಜನಕಾಂಗದ ಸಣ್ಣ ರಕ್ತನಾಳಗಳಲ್ಲೂ ಸೇರಿ ರಕ್ತದ ಒತ್ತಡವನ್ನು ಅತಿ ಜಾಸ್ತಿಯಾಗುವ ಹಾಗೆ ಮಾಡುತ್ತದೆ. ಇದರಿಂ-ದಾಗಿ ವಿಪರೀತ ತಲೆನೋವು, ವಾಂತಿ, ಎದೆಯಲ್ಲಿ ನೋವು, ಪ್ರಜ್ಞೆತಪ್ಪುವಿಕೆ ಉಂಟಾಗಬಹುದು. ಇದರ ಚಿಕಿತ್ಸೆಗೆ ಗಮನಕೊಡದೆ ಇದ್ದರೆ, ಮೆದುಳಿನಲ್ಲಿ ರಕ್ತ ಹೆಪ್ಪುಗಟ್ಟಿಯೋ ರಕ್ತ ಸ್ರಾವವಾಗಿಯೋ ಕೈಕಾಲುಗಳು ಬಿದ್ದುಹೋಗ

ಬಹುದು. ರಕ್ತಸ್ರಾವ ಹೆಚ್ಚಾಗಿದ್ದರೆ ಸಾವು ಒದಗಿದರೂ ಆಶ್ಚರ್ಯವಿಲ್ಲ.

ಸಿಹಿಮೂತ್ರರೋಗ ಸಹ ಶ್ರೀಮಂತರಲ್ಲೇ ಹೆಚ್ಚಾಗಿ ಕಾಣಬರುತ್ತದೆ. ಇದಕ್ಕೆ ಕಾರಣ ಅವರ ಶರೀರದಲ್ಲಿರುವ ಕೊಬ್ಬು ಮತ್ತು ಅತಿಯಾದ ಪಿಷ್ಟಸೇವನೆ, ಸರಿಯಾದ ಆರೈಕೆ ಇಲ್ಲದಿದ್ದರೆ ಈ ರೋಗದಿಂದಾಗಿ ಬೆನ್ನುಹುಣ್ಣು, ಹೆಚ್ಚು ರಕ್ತದ ಒತ್ತಡ, ಕಣ್ಣಿನಪರೆ, ದೇಹದ ವಿವಿಧ ಭಾಗಗಳು ಕೊಳೆತುಹೋಗುವಿಕೆ ಇತ್ಯಾದಿಗಳು ಆಗುತ್ತವೆ.

## ಸಮಗ್ರ ನೋಟ

ಹೀಗೆ ಸಮಾಜದ ವಿವಿಧ ಹಂತಗಳ ಪರಿಚಯ ಮಾಡಿಕೊಳ್ಳುವಾಗ, ಮಹಿಳೆಯ ಆರೋಗ್ಯ ಎಷ್ಟು ಸೂಕ್ಷ್ಮವಾದ ತಂತಿಯ ಮೇಲೆ ನಿಂತಿದೆ ಎಂಬ ಅನುಭವವಾಗುತ್ತದೆ. ಒಂದು ಕಡೆ ಆಹಾರಾಭಾವದಿಂದ ರೋಗವುಂಟಾದರೆ, ಇನ್ನೊಂದು ಕಡೆ ಅತಿ ಆಹಾರ ಸೇವನೆಯಿಂದಲೂ ನರಳುವ ಪ್ರಸಂಗಗಳಿವೆ.

ಹೀಗಾದರೆ ಮಹಿಳೆ ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳುವ ಬಗೆ ಹೇಗೆ? ಒಳ್ಳೆಯ ದೇಹಾರೋಗ್ಯಕ್ಕೆ ಯಾವುದು ಬೇಕು? ಯಾವುದು ಬೇಡ? ಇದ್ದುದರಲ್ಲಿಯೇ ದೃಢಕಾಯರಾಗಿ ಇರುವುದೆಂತು? ವಾತಾವರಣದ ದೋಷಗಳಿಗೆ ಚಿಕಿತ್ಸೆ ಮಾಡುವುದು ಹೇಗೆ? ಎಂಬಿವೇ ಪ್ರಶ್ನೆಗಳು ಕಣ್ಣಮುಂದೆ ನಿಲ್ಲುವುದು ಸಹಜ. ಯಾವುದೇ ಕಾಯಿಲೆಯಾಗಲಿ, ಸಮಗ್ರ ನೋಟದಿಂದ ಕಂಡಾಗ ಅದರ ಚಿಕಿತ್ಸೆ ಸುಲಭವಾಗುತ್ತದೆ.

ಮಧ್ಯಮವರ್ಗದ ಮಹಿಳೆ ತನ್ನ ಸಂಸಾರವನ್ನು ಸುಂದರಗೊಳಿಸಬೇಕಾದರೆ ಮಿತಸಂತಾನದ ಯೋಚನೆ ಮಾಡುವುದೊಳಿತು. ಇದರಿಂದ ಮನೆಯಲ್ಲಿನ ಬಡತನವೂ ಕಡಮೆಯಾಗುತ್ತದೆ. ಇರುವ ಮೂರು ನಾಲ್ಕು ಮಕ್ಕಳನ್ನು ಒಳ್ಳೆಯ ಆರೋಗ್ಯವಂತರನ್ನಾಗಿ ಬೆಳೆಸಬಹುದು, ಸಾಕಷ್ಟು ವಿದ್ಯಾಭ್ಯಾಸ ಕೊಡಿಸಬಹುದು. ಇದರಿಂದ ಹೆಚ್ಚು ಬಾರಿ ಆಗುವ ಹೆರಿಗೆಯ ತೊಂದರೆಗಳು ತಪ್ಪಿ ತಾಯಿಯ ಆರೋಗ್ಯವೂ ಸುಧಾರಿಸುತ್ತದೆ.

ದುಡಿಯುವ ಮಹಿಳೆಯ ಕಾಯಿಲೆಗಳು ನಿವಾರಣೆಯಾಗಬೇಕಾದರೆ ಬಡತನದ, ಅಜ್ಞಾನದ ಉಚ್ಚಾಟನೆಯಾಗಬೇಕು. ಹಾದಿ ತಪ್ಪಿದ ಹುಡುಗಿಯರಿಗೆ ನೀತಿವಂತರಾಗಿ ಬಾಳಲು, ಅತಿ ಹೆಚ್ಚಿನ ಸಂಖ್ಯೆಯಲ್ಲಿ ವನಿತಾಗೃಹಗಳು ನಿರ್ಮಿತವಾಗಬೇಕು.

ವಿದ್ಯಾವಂತಳಾದ ಶ್ರೀಮಂತ ಮಹಿಳೆ ತನ್ನ ಜ್ಞಾನದ ಯೋಗ್ಯ ಉಪಯೋಗ ಮಾಡಿಕೊಳ್ಳಬೇಕು. ದಿನದಿನವೂ ಸಾಕಷ್ಟು ವ್ಯಾಯಾಮ, ಮಿತವಾದ—ಒಳ್ಳೆಯ ಆಹಾರ ಸೇವನೆ, ಈ ಪರಿಪಾಠವನ್ನಿಟ್ಟುಕೊಳ್ಳುವುದು ಉತ್ತಮ.

## ಸಂಸಾರಶಿಲ್ಪಿ

ಇಂದು ನಾವು ಕಾಣುವ ಎಷ್ಟೋ ಕಾಯಿಲೆಗಳು ಬಡತನದಿಂದಾಗಿ ಹುಟ್ಟಬಂದವುಗಳು. ಆದರೆ ಬಡತನ ಒಂದರ ನಿವಾರಣೆಯಿಂದಲೇ ಎಲ್ಲ ರೋಗಗಳೂ ಮಾಯವಾಗುವವು ಎಂದು ಯೋಚಿಸುವುದು ಸರಿಯಾಗಲಾರದು. ರೋಗಗಳ ಬಗೆಗೆ ಸಾಮಾನ್ಯ ಮಹಿಳೆಗಿರುವ ಅಜ್ಞಾನದ ಪರೆಯೂ ಕಳಚಬೇಕು. ತಾನು ಆರೋಗ್ಯವಂತೆಯಾಗಿದ್ದು, ಉತ್ತಮ ಜನಾಂಗದ ಬೆಳವಣಿಗೆಗೆ ಹೇಗೆ ಕಾರಣಳಾಗಬೇಕು ಎನ್ನುವ ತಿಳಿವಳಿಕೆ ಎಂದು ನಮ್ಮ ಮಹಿಳೆಯರಲ್ಲಿ ಮೂಡುವುದೋ, ಅಂದು ದಿನನಿತ್ಯ ಕಾಡುವ ರೋಗಗಳಿಂದ ವಿಮುಕ್ತಳಾಗಿ, ಸುಂದರ ಸಂಸಾರವನ್ನು ಆಕೆ ಕಟ್ಟಬಲ್ಲಳು.

# ಕರ್ನಾಟಕ ಸಂಸ್ಕೃತಿ ಮತ್ತು ಮಹಿಳೆಯರು

ಲೇಖಿಕೆಯರು : ಶ್ರೀಮತಿ ಗುರುದೇವಿ ವೀ. ಹಿರೇಮಠ, ಧಾರವಾಡ

ಉಜ್ವಲ ಪರಂಪರೆಯಿರುವ ಕರ್ನಾಟಕದ ಸಂಸ್ಕೃತಿ ಉನ್ನತ ಮಟ್ಟದ್ದು. ಮಹಿಳೆಯರೇ ಅದಕ್ಕೆ ಮುಖ್ಯವಾಗಿ ಕಾರಣರು. ಸಂಸ್ಕೃತಿಶಿಶುವನ್ನು ಅವರು ಪೋಷಿಸಿ ಬೆಳೆಸಿಕೊಂಡು ಬರುವ ಬಗೆಯನ್ನು ಇಲ್ಲಿ ಲೇಖಿಕೆಯರು ನಿರೂಪಿಸಿದ್ದಾರೆ.

ಹೊಂದಾಣಿಕೆ, ಹೆಚ್ಚುತನ ಹಾಗೂ ಹಿರಿತನಗಳು ಸೇರಿ ಮುಪ್ಪುರಿಗೊಂಡ ಮನೋಭಾವ ಸಂಸ್ಕೃತಿ ಎಂದು ಶ್ರೀ ದೇವುಡು ನರಸಿಂಹ ಶಾಸ್ತ್ರಿಗಳು ಹೇಳಿದ್ದಾರೆ. ಯಾವದೊಂದು ನಾಡಿನ ಸಂಸ್ಕೃತಿ ಈ ಮೂರು ಗುಣಗಳ ಸಂಗಮ. ಒಂದು ಮಾತಿನಲ್ಲಿ ಹೇಳುವುದಾದರೆ, ತುಂಬು ಜೀವನ ಸಂಸ್ಕೃತಿ. ಎಲ್ಲರನ್ನು ಆಕರ್ಷಿಸುವ ಮನೋಭಾವ ಅದರಿಂದ ಮೂಡಿ ಪ್ರೇರಿತವಾದ ನಡೆ ಇಲ್ಲವೆ ಆಚರಣೆಯು ಸಂಸ್ಕೃತಿಯ ಕುರುಹು. ಈ ಮನೋಭಾವ ಪ್ರಕಟವಾಗುತ್ತಿರುವುದು ಅನೇಕ ಪ್ರಕಾರವಾಗಿಯಾದರೂ ಧರ್ಮಗ್ರಂಥ, ಪುರಾಣ, ಕಾವ್ಯ, ಶಿಲ್ಪ, ನೃತ್ಯ, ಚಿತ್ರಲೇಖನಗಳಲ್ಲಿ ಅದು ಹೆಚ್ಚು ಸ್ಫುಟವಾಗಿ ಗೋಚರವಾಗುತ್ತಿದೆ. ಭಾರತಭೂಮಿ ಅಧ್ಯಾತ್ಮದ ಬೀಡು ; ನಾಗರಿಕತೆಯ ನೆಲೆ; ಸಂಸ್ಕೃತಿಯ ಸೆಲೆ; ಅದರ ಅಂಗವಾದ ಕರ್ನಾಟಕವೂ ಈ ಸಂಸ್ಕೃತಿಗಳ ಸಂಗಮವೆನಿಸಿ ಕಾಲಕಾಲಕ್ಕೆ ತನ್ನ ಪಾಲಿನ ಕಾಣಿಕೆ ಸಲ್ಲಿಸುತ್ತ ಬಂದಿದೆ. ಕರ್ನಾಟಕವು ಎಂದಿನಿಂದಲೂ ಸುಸಂಸ್ಕೃತ ನಾಡೆಂದು ಹೆಸರಾಗಿದೆ.

## ಉಜ್ವಲ ಪರಂಪರೆ

ಪ್ರಾಚೀನ ಕನ್ನಡ ನಾಡಿನ ಪರಂಪರೆ ಎಲ್ಲ ವಿಧದಲ್ಲಿಯೂ ಜಾಜ್ವಲ್ಯಮಾನವಾಗಿದೆ. ಕನ್ನಡ ಜನರು, ಉದಾರಿಗಳೂ ಸತ್ಯವಂತರೂ ಶೂರರೂ ಕೃತಜ್ಞತಾಸಂಪನ್ನರೂ ಜ್ಞಾನಿಗಳೂ ರಸಿಕರೂ ಎಂದು ಹೆಸರಾಗಿದ್ದಾರೆ. ಕನ್ನಡ ನಾಡು ಭಾರತದಲ್ಲೆಲ್ಲ ಖ್ಯಾತಿ ಪಡೆದಿತ್ತು. ವಿದೇಶೀಯರೂ ಆಗಾಗ್ಗೆ ಈ ಭೂಮಿಗೆ ಬಂದು ಇಲ್ಲಿಯ ನೆಲದ ಮಹಿಮೆ ತಿಳಿದು ಮನಸಾರೆ ಹೊಗಳಿದ್ದುಂಟು.

ಸಹಸ್ರಾರು ವರುಷಗಳಿಂದ ಕನ್ನಡನಾಡಿನಲ್ಲಿ ಪ್ರತಿಭಾನ್ವಿತರಾದ ಅರಸುಮನೆತನದವರು ರಾಜ್ಯ ಮಾಡಿದ್ದಾರೆ. ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಕಲಚೂರ್ಯರು, ಹೊಯಿಸಳರು, ವಿಜಯನಗರರಾಯರು, ವಿಜಾಪುರದ ಅಲ್ಲಿ ಆದಿಲ ಶಾಹಿಗಳು ಆದಿಯಾಗಿ ಹಲವಾರು ಸಮ್ರಾಟರು ಸಾಮ್ರಾಜ್ಯ ಕಟ್ಟಿ ಸಾರ್ವಭೌಮರಾಗಿ ಆಳಿ ಮೆರೆದರು. 'ಸತ್ಯಾಶ್ರಯ', 'ತ್ರಿಭುವನಮಲ್ಲ', 'ರಾಯರಾಯರ ಗಂಡ', ಮೊದಲಾದ ಹೆಮ್ಮೆಯ ಬಿರುದಾಂಕಿತ ಚಕ್ರವರ್ತಿಗಳು ಮಹಾವೈಭವ ಅಟ್ಟಹಾಸಗಳಿಂದ ರಾಜ್ಯವಾಳಿದರು. ಜನ ಆಗ ಸಕಲಸಂಪತ್ತನ್ನುಪಡೆದು ಸುಖಿಯಾಗಿ ಬಾಳಿತ್ತು. ಮನೆಗಳಿಗೆ ಬೀಗವನ್ನೇ ಹಾಕುವ ಪರಿಪಾಠವಿರಲಿಲ್ಲ— ಬೈಲ ಅಂಗಡಿಗಳಲ್ಲಿ ಮುತ್ತು ರತ್ನಗಳನ್ನಿಟ್ಟು ಮಾರುತ್ತಿದ್ದರು.— ರತ್ನಹೊಂದೊಡಿಗೆಗಳನ್ನು ಮೈತುಂಬ ಇಟ್ಟುಕೊಂಡು ಏಕಾಕಿನಿಯರಾಗಿ ತರುಣಿಯರು ತಿರುಗಾಡುತ್ತಿದ್ದರು. –ರಾಜಧಾನಿಗಳು ಸಕಲ ಸೌಕರ್ಯಗಳಿಂದ ಕೂಡಿದ್ದವು. ಹೊಲಗದ್ದೆಗಳು ಹಸುರಿನಿಂದ ಮೆರೆಯುತ್ತಿದ್ದವು. ಕೆರೆ ಕಟ್ಟೆಗಳು ತುಂಬಿ ಸೂಸುತ್ತಿದ್ದವು. ಪ್ರವಾಸಿಗಳ ಈ ಕೆಲವು ಹೇಳಿಕೆಗಳು ಅಂದಿನ ಜನಜೀವನದ ಚಿತ್ರವನ್ನು ಸ್ಪಷ್ಟಪಡಿಸುತ್ತವಲ್ಲವೆ?

ಪಂಪ, ರನ್ನ, ಹರಿಹರ, ಷಡಕ್ಷರಿ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶರೇ ಮೊದಲಾದ ಹಲವಾರು ಉದ್ದಾಮ ಕವಿಗಳು ಮಹಾನ್ ಕಾವ್ಯ ರಚಿಸಿದರು. ಬಸವೇಶ, ಶಂಕರಾಚಾರ್ಯ, ಮಧ್ವಾಚಾರ್ಯರೇ ಆದಿಯಾಗಿ ಮಹಾನ್ ಮತೋದ್ಧಾರಕರು ಹಾಗೂ ದಾರ್ಶನಿಕರು ಈ ನೆಲದಲ್ಲಿ ಅವತರಿಸಿ ಮಾನವಕೋಟಿಯನ್ನು ಉದ್ಧರಿಸಿದರು. ಹಂಪೆ, ಹಳೆಬೀಡು, ಬೇಲೂರು, ಪಟ್ಟದಕಲ್ಲು, ಐಹೊಳೆ ಮೊದಲಾದ ಕನ್ನಡ ನಾಡಿನ ಮೂಲೆಮೂಲೆಗಳಲ್ಲಿ ಕಂಗೊಳಿಸುವ ದೇವಾಲಯಗಳು ಬಾದಾಮಿಯಲ್ಲಿಯ ಗುಹೆಗಳು, ವಿಜಾಪುರ ಕಲಬುರ್ಗಿಗಳಲ್ಲಿಯ ಗುಮ್ಮಟಗಳು, ಶ್ರವಣಬೆಳಗೊಳ ಹಾಗೂ ಕಾರ್ಕಳಗಳಲ್ಲಿಯ ಗೋಮಟೇಶ್ವರನ ಉನ್ನತ ಮೂರ್ತಿಗಳು ನಾಡಿನ ಶಿಲ್ಪಕಲೆಯ ಪತಾಕೆಯನ್ನು ಮೆರೆಯಿಸುತ್ತ ನಿಂತಿವೆ. ಜಕ್ಕಣಾಚಾರಿಯಂತಹ ದೇವಶಿಲ್ಪಿ ಕಲ್ಲಿನಲ್ಲಿ ಏನೆಲ್ಲ ಸೃಷ್ಟಿಸಿದ! ಹಳ್ಳಿಹಳ್ಳಿಗಳಲ್ಲಿ ದೊರೆಯುವ ಶಿಲಾಶಾಸನ, ವೀರಗಲ್ಲು, ಮಹಾಸತಿಕಲ್ಲು, ತಾಳೆಯೋಲೆ ಗ್ರಂಥ, ತಾಮ್ರಪಟ ಸಂಸ್ಕೃತಿಯ ಹಿರಿಮೆಯನ್ನು ಉಗ್ಗಡಿಸುತ್ತ ನಿಂತಿವೆ. ಮಠ ಮಾನ್ಯತೆಗಳು ಸಂಸ್ಕೃತಿಯ ಸೊಡರಿಗೆ ಆಲಯಗಳೆನಿಸಿವೆ. ಕರ್ನಾಟಕ ಸಂಗೀತವೆಂದೇ ಅಭಿಧಾನ ಪಡೆದ ಸಂಗೀತ ಪ್ರಕಾರ ನಮ್ಮ ನಾಡವರ ನಾದಪ್ರಿಯತೆಯ ಸಂಕೇತ. ಹೆಜ್ಜೆಹೆಜ್ಜೆಗೆ ಕರ್ಣಾನಂದವಾಗಿ ಕೇಳಬರುವ ಜಾನಪದ ಸಾಹಿತ್ಯ, ಸಂಗೀತವಿಪುಲವಾಗಿ ನೋಡಲು ಸಿಗುವ ನೃತ್ಯ, ಯಕ್ಷಗಾನ, ಸುಗ್ಗಿಯ ಕುಣಿತ, ಕೋಲಾಟಗಳು ಜನಸಾಮಾನ್ಯದಲ್ಲಿಯ ಸಂಸ್ಕೃತಿಯ ಮೊಳಕೆಯನ್ನು ಪ್ರದರ್ಶಿಸುತ್ತವೆ. ಇಂದಿಗೂ ಕೂಡ ಮಹಾನ್ ಲೇಖಕರು, ಮಹಾಕವಿಗಳು ನಮ್ಮ ನಾಡಿನಲ್ಲಿ ನೆಲೆಯಿಸಿ ಸಾಹಿತ್ಯ ಸೇವೆ ಅವ್ಯಾಹತವಾಗಿ ಅನವರತವಾಗಿ ನಡೆಯಿಸಿದ್ದಾರೆ. ದೊಡ್ಡ ದೊಡ್ಡ ರಾಜಕಾರಣಿಗಳು ರಾಷ್ಟ್ರದ ಚುಕ್ಕಾಣಿ ಹಿಡಿದಿದ್ದಾರೆ. ಊರುಗಳಲ್ಲಿಯ ವಿದ್ಯಾಮಂದಿರ, ದೇವಾಲಯಗಳಲ್ಲಿ ನಡೆಯುತ್ತಿರುವ ದೇವತಾರ್ಚನೆ, ಹಬ್ಬಹುಣ್ಣಿಮೆ, ಯಾತ್ರಾ ಸಮಾರಂಭಗಳಲ್ಲಿ ನಡೆಯುತ್ತಿರುವ ವೈಭವ, ಅಟ್ಟಹಾಸ, ಸಂಸ್ಕೃತಿಯ ಸಜೀವತೆಯನ್ನು ತೋರಿಸುತ್ತವೆ. ಇತ್ತೀಚೆಗೆ ನಿರ್ಮಿತವಾದವುಗಳಾದರೂ ಮೈಸೂರಿನ ಅರಮನೆ, ಅತಿಥಿಶಾಲೆ, ಬೆಂಗಳೂರಿನ ವಿಧಾನಸೌಧ ನಮ್ಮ ವಿಕಸಿತವಾದ ಶಿಲ್ಪದ ನೆನಪನ್ನು ತಂದುಕೊಡುವದಿಲ್ಲವೇ? ಕಾವೇರಿ, ತುಂಗಭದ್ರೆ, ಘಟಪ್ರಭೆಗಳಿಗೆ ಕಟ್ಟಿದ ಭಾರೀ ಅಣೆಕಟ್ಟುಗಳು, ವೃಂದಾವನ, ವೈಕುಂಠ, ಕೈಲಾಸಗಳಂತಹ ಸುಂದರತಮ ಉಪವನಗಳು ನಮ್ಮ ಘನತೆ ಹಾಗೂ ಕಲಾಪ್ರಿಯತೆಗಳ ನಿದರ್ಶನಗಳಾಗಿವೆ. ಬೆಂಗಳೂರು, ಮೈಸೂರು, ಭದ್ರಾವತಿ ಹರಿಹರ, ಬಾಗಿಲಕೋಟೆ, ಕೋಲಾರಗಳಲ್ಲಿಯ ಭಾರೀ ಉದ್ದಿಮೆಗಳು ನಾಡಿನ ಭದ್ರತೆಯಲ್ಲಿಯ ಭಾರೀ ಸ್ತಂಭಗಳೆಂದು ಹೇಳಬೇಕು.

## ಮಹಿಳೆಯರ ಅಸಾಧಾರಣ ಕಾಣಿಕೆ

ನಾಡಿನ ಸಂಸ್ಕೃತಿಯನ್ನು ಬೆಳೆಯಿಸಿ, ಹರಡುವದರಲ್ಲಿ ಪುರುಷರಂತೆ ಸ್ತ್ರೀಯರೂ ಕನ್ನಡನಾಡಿನಲ್ಲಿ ಪರಿತಪಿಸಿದ್ದಾರೆ. ಈ ದಿಶೆಯಲ್ಲಿ ಮಹಿಳೆಯರು ಸಲ್ಲಿಸಿದ ಸೇವೆಯು ಅಸಾಧಾರಣವಾಗಿದೆ ; ಉಜ್ವಲವಾಗಿದೆ; ದೇದೀಪ್ಯಮಾನವಾಗಿದೆ. ಹೆಣ್ಣು ಸ್ವಭಾವತಃ ಮೃದು ; ದೈಹಿಕವಾಗಿ ಅಬಲಳು. ಆದರೆ ಪ್ರಸಂಗ ಬಂದಾಗ್ಗೆ ಕನ್ನಡತಿ ಎಂದೂ ಹಿಂದೆ ಬಿದ್ದಿಲ್ಲ. ವೀರತನದಿಂದ ಕಾದಿ ಸ್ವರ್ಗವೇರಿದ ಉದಾಹರಣೆಗಳೂ ಹಲವಾರಿವೆ. ಕದಂಬ, ರಾಜಶ್ರೀ, ಅಕ್ಕಾದೇವಿ, ಕಿತ್ತೂರಿನ ವೀರರಾಣಿ ಚನ್ನಮ್ಮಾ, ಬೆಳವಡಿಯ ಮಹಾಮಾತೆ ಮಲ್ಲಮ್ಮ; ಕೆಳದಿಯ ಸಂಪಲ್ಲಕ್ಷ್ಮಿ, ಚನ್ನಮ್ಮಾಜಿ, ಚಿತ್ರದುರ್ಗದ ರಣಮಾರಿ, ಒನಕೆಯ ಓಬವ್ವರು ಐತಿಹಾಸಿಕ ವೀರವನಿತೆಯರು, ಸ್ವಾತಂತ್ರ್ಯ ಸಮರಗಳಲ್ಲಿ ನಮ್ಮ ಸಹೋದರಿಯರು ಬಂಧುಗಳ ಹೆಗಲಿಗೆ ಹೆಗಲು ಹಚ್ಚಿ ನಾಡಿನ ಬಂಧಮುಕ್ತತೆಗೆ ಸಹಾಯ ಮಾಡಿದರು. ಅದರಲ್ಲಿ ಶಾಲಾ ಬಾಲಕಿಯರಿದ್ದಾರೆ. ನವವಧುಗಳಿದ್ದಾರೆ. ಮಕ್ಕಳನ್ನು ಕಂಕುಳಲ್ಲಿ ಎತ್ತಿಕೊಂಡಿದ್ದ ಮಾತೆಯರಿದ್ದಾರೆ – ದಿನಹೋದ ಅಜ್ಜಿಯರೂ ಸೇರಿದ್ದಾರೆ. ಕನ್ನಡದ ಧೀರ ಪರಂ-

ಹರೆಯಲ್ಲಿ ಮಹಿಳೆಯರು ಸ್ಫೂರ್ತಿದಾಯಕ ಪಾತ್ರ ವಹಿಸಿದ್ದಾರೆ.

ಕನ್ನಡನಾಡಿನ ಶಿಲ್ಪಕಲೆಯ ಬೆಳವಣಿಗೆಯಲ್ಲಿಯೂ ಮಹಿಳೆಯರು ಮಹತ್ವದ ಪಾತ್ರವಾಡಿದ್ದಾರೆ. ಚಾಲುಕ್ಯರ ರಾಣಿ ಕುಂಕುಮ ಮಹಾದೇವಿ ವಿರೂಪಾಕ್ಷದೇವರ, ಹಾಗೂ ಅವಳ ತಂಗಿ ತ್ರೈಲೋಕ್ಯ ಮಹಾದೇವಿ ಮಲ್ಲಿಕಾರ್ಜುನನ ಗುಡಿಗಳನ್ನೂ ಪಟ್ಟದಕಲ್ಲಿನಲ್ಲಿ ಕಟ್ಟಿಸಿದ್ದಾರೆ. ಹೊಯಿಸಳರ ರಾಜ್ಯಲಕ್ಷ್ಮಿ ಶಾಂತಲೆ ಚೆನ್ನಕೇಶವ ಹಾಗೂ ವಿಜಯನಾರಾಯಣರ ದೇವಾಲಯಗಳನ್ನು ಬೇಲೂರಿನಲ್ಲಿ ಕಟ್ಟಿಸಿದಳು. ಚೆನ್ನಕೇಶವ ದೇವಾಲಯ ಶಿಲ್ಪಕಲೆಯಲ್ಲಿ ಅತ್ಯುನ್ನತ ಮಟ್ಟವನ್ನೇ ಮುಟ್ಟಿದೆ ಎಂದು ಹೇಳಬೇಕು. ಅಲ್ಲಿಯ ಶಿಲಾಬಾಲಿಕೆಯರು ಶಿಲ್ಪಕಲೆಯನ್ನಷ್ಟೇ ಅಲ್ಲದೆ ನಾಟ್ಯಕಲೆಯ ಬೆಳವಣಿಗೆಯನ್ನೂ ಪ್ರತಿನಿಧಿಕರಿಸುತ್ತಿದ್ದಾರೆ. ಇಂದಿನ ಕಾಲದಲ್ಲಿಯಂತೂ ಮಹಿಳೆಯರು ಶಾಲೆ, ಹೆರಿಗೆ ಆಸ್ಪತ್ರೆ, ಕುಡಿಯುವ ನೀರಿನ ಕೆರೆಗಳನ್ನು ಕಟ್ಟಿಸಲಿಕ್ಕೆ ನಾ ಮುಂದೆ ನೀ ಮುಂದೆ ಎಂದು ಬರುತ್ತಿದ್ದಾರೆ.

### ಸಾಹಿತ್ಯಕ್ಷೇತ್ರದಲ್ಲಿ

ಸಾಹಿತ್ಯಕ್ಷೇತ್ರದಲ್ಲಿಯೂ ಕನ್ನಡತಿಯರು ಅಪಾರ ಸೇವೆ ಸಲ್ಲಿಸಿದ್ದಾರೆ. ಭಾಸ್ಕರಾಚಾರ್ಯರ ಮಗಳು ಲೀಲಾವತಿ ಜೋತಿಷ್ಯ ಹಾಗೂ ಗಣಿತ ಶಾಸ್ತ್ರಗಳಲ್ಲಿ ಪ್ರವೀಣತೆ ಪಡೆದಿದ್ದಳು, ವಿಜಯನಗರರಾಯರ ರಾಣಿ ಗಂಗಾದೇವಿ ಸಂಸ್ಕೃತದಲ್ಲಿಯೂ ಕಾವ್ಯರಚಿಸುವಷ್ಟು ಜ್ಞಾನವಂತೆಯಾಗಿದ್ದಳು. ಕಂತಿ ಆಶುಕವಿಯಿತ್ರಿ ಎಂದು ಖ್ಯಾತಿಪಡೆದಿದ್ದಳು. ಅರಮನೆಯಲ್ಲಿ ಊಳಿಗದವಳಾದ ಹೊನ್ನಮ್ಮ ತಾಯಿತನದ ಮೇಲ್ಮೆಯನ್ನು ಮೆರೆಯಿಸುವ ಶ್ರೇಷ್ಠ ಕಾವ್ಯ ರಚಿಸಿದ್ದಾಳೆ. ಇನ್ನೂ ಅನೇಕ ಮಹಿಳೆಯರು ಸಾಹಿತ್ಯ ರಚನೆಯೊಂದಿಗೆ ಮುಕ್ತಿಯ ಮಾರ್ಗದಲ್ಲಿ ಮುನ್ನಡೆದು ಮಹಾತ್ಮೆಯರೆನಿಸಿದ್ದಾರೆ. ಹೆಳವನಕಟ್ಟೆ ಗಿರಿಯಮ್ಮ, ಉಡುತಡಿಯ ಮಹಾದೇವಿಯಕ್ಕ—ಮಹಾಸತಿ ನೀಲಮ್ಮ, ಮುಕ್ತಾಯಕ್ಕ, ನೀಲಾಂಬಿಕೆಯರೇ ಮೊದಲಾದ ಕನ್ನಡತಿಯರು ತಮ್ಮ ವಚನಗಳಲ್ಲಿ ಇನ್ನೂ ಬದುಕಿದ್ದಾರೆ. ಆಧುನಿಕ ಸಾಹಿತ್ಯಚರಿತ್ರೆಯಲ್ಲಿ ಕೂಡ ಮಹಿಳೆಯರು ಕೈಯಾಡಿಸದೆ ಉಳಿದ ವಿಭಾಗವಿಲ್ಲ. ಕಥೆ ಬರೆದಿದ್ದಾರೆ. ಕವನ ಕಟ್ಟಿದ್ದಾರೆ. ಪ್ರಬಂಧ ಬರೆದಿದ್ದಾರೆ. ಕಾದಂಬರಿ ಹೆಣೆದಿದ್ದಾರೆ.

ಚಿತ್ರಸಂಗೀತ, ನೃತ್ಯ, ಶಿಲ್ಪ, ಕಸೂತಿ, ಹೊಲಿಗೆ ಮೊದಲಾದ ರಂಗಗಳಲ್ಲಿ ಸ್ತ್ರೀಯರದೇ ಪ್ರಾಧಾನ್ಯವೆನಿಸಿದೆ. ಮನೆ ಮನೆಗಳಲ್ಲಿ ಈ ಲಲಿತಕಲೆಗಳು ಮೂಡಿ ಮಾಗುತ್ತಿರುತ್ತವೆ. ಊರೂರಿಗೆ ಮಹಿಳಾ ಮಂಡಲ, ಭಗಿನೀ ಮಂಡಲ, ಅಕ್ಕನ ಬಳಗಗಳು ನಿರ್ಮಾಣಗೊಂಡು ಮಹಿಳೆಯರು ಜಾಗೃತರಾಗಿ ಉತ್ತಮ ಬಾಳಿನ ವಿವಿಧ ಸೋಪಾನಗಳನ್ನು ನಿರ್ಮಿಸುತ್ತಿದ್ದಾರೆ. ರಾಜಕೀಯ ರಂಗದಲ್ಲಿಯೂ ಮಹಿಳೆಯರು ಮುಂದೆ ಬರುತ್ತಿದ್ದಾರೆ. ಶಿಕ್ಷಕಿಯರಾಗಿ, ಸಮಾಜ ಸುಧಾರಕರಾಗಿ, ದಾಯಿಗಳಾಗಿ, ಸಮಾಜ ಸುಧಾರಣೆಯ ರಕ್ಷಣೆಯನ್ನೇ ಬೆನ್ನಿಗೆ ಕಟ್ಟನಿಂತಿದ್ದಾರೆ. ಶಿಕ್ಷಣದಲ್ಲಿಯೂ ವಿಶೇಷ ಪ್ರಗತಿ ಮಹಿಳೆಯರಲ್ಲಿ ಕಂಡುಬರುತ್ತಿದೆ. ಇದು ನಿಜವಾಗಿಯೂ ನಾಡಿನ ಭಾಗ್ಯ. ಸಮಾಜದ ಗೌರವ. ಸಂಸ್ಕೃತಿಯ ಹೆಚ್ಚಳ.

ಸ್ವತಂತ್ರ ಭಾರತವು ಭರದಿಂದ ತನ್ನ ಅಭಿವೃದ್ಧಿ ಸಾಧಿಸಲು ಬಹುವಿಧವಾಗಿ ಹೆಣಗುತ್ತಿದೆ. ಕನ್ನಡನಾಡು ಕೂಡ ಇಂದು ಒಂದಾಗಿ ಸರ್ವಾಂಗ ಸುಂದರವಾಗುವದರಲ್ಲಿ ತೊಡಗಿದೆ. ಮಹಿಳೆಯರ ಹಾಗೂ ಮಕ್ಕಳ ಬಗೆಬಗೆಯ ಕಲ್ಯಾಣ ಯೋಜನೆಗಳು ದಿನಕ್ಕೊಂದು ಚಂದವಾಗಿ ಪ್ರಗತಿಹೊಂದುತ್ತಲಿವೆ. ಸಂಸ್ಕೃತಿಯ ಬೆಳಗೆಯಾಗುತ್ತಿದೆ ಎಂಬುದಕ್ಕೆ ಇದಕ್ಕಿಂತ ಹೆಚ್ಚಿನ ನಿದರ್ಶನವಿನ್ನೇನು ಬೇಕು? ಮಾತೆ ಮಗುವನ್ನು ಬೆಳೆಯಿಸಬಲ್ಲಳು. ಅದಕ್ಕಿಂತ ಹೆಚ್ಚಿನ ಹೊಣೆಹೊತ್ತು ಸಂಸ್ಕೃತಿಶಿಶುವನ್ನೂ ಬಲಪಡಿಸಬಲ್ಲಳು.

# ಇಂದಿನ ಹಿಂದು ಸಮಾಜ

ಲೇಖಕರು: ಶ್ರೀ ಸಿ. ಎಸ್. ಪಟ್ಟಾಭಿರಾಮಯ್ಯ, ಬಿ.ಕಾಮ್. ಮೈಸೂರು

ಉತ್ತಮ ಸಾಂಸ್ಕೃತಿಕ ಹಿನ್ನೆಲೆಯನ್ನು ಪಡೆದಿರುವ ಹಿಂದು ಸಮಾಜ ಇಂದು ಹಳೆ-ಹೊಸತುಗಳ ತಿಕ್ಕಾಟದಲ್ಲಿ ಸಿಲುಕಿದೆ. ಹಳೆಯ ಜಾತಿ ಪರಂಪರೆಯಲ್ಲಿ ಸಿಕ್ಕು ನುಗ್ಗಾದ ಈ ಸಮಾಜ ಇಂದು ಅದನ್ನು ತೊಡೆದು ಹಾಕಿ ಚೇತರಿಸಿಕೊಳ್ಳಬಯಸುತ್ತಿದೆ. ಹಿಂದು ಸಮಾಜದ ಪರಿಸ್ಥಿತಿಯ ಒಂದು ನೋಟವನ್ನು ಲೇಖಕರು ಇಲ್ಲಿ ಒದಗಿಸಿರುವರು.

ಹಾವೆಲ್ ಒಂದೆಡೆ "ಭಾರತೀಯರಲ್ಲಿ ಧರ್ಮವು ಕೇವಲ ಒಂದು ತತ್ತ್ವವಲ್ಲ. ವಿವಿಧ ಜೀವನಮಟ್ಟಕ್ಕೆ ವಿವಿಧ ಧಾರ್ಮಿಕ ಮನೋಭಾವನೆಗೆ ಅನುಗುಣವಾಗಿ ರಚಿಸಿದ ಜನಜೀವನದ ಒಂದು ರೀತಿಯ ಒಂದು ಮಾರ್ಗಸೂಚಿ'' ಎಂದು ಹೇಳಿದ್ದಾನೆ. ಇಂದಿನ ಹಿಂದೂ ಧರ್ಮಾವಲಂಬಿತ ಸಮಾಜವನ್ನು ನೋಡಿದರೆ ಭಾರತೀಯರ ದೃಷ್ಟಿ ಭವಿತವ್ಯದ ಕಡೆಯಿದ್ದರೂ ಗತಕಾಲ ಜೀವನಕ್ಕೂ ಅವರ ಇಂದಿನ ಜೀವನಕ್ಕೂ ಇರುವ ಬಾಂಧವ್ಯದ ಎಳೆಯನ್ನು ಪ್ರತಿಯೆಡೆಯೂ ಮೈಸೂರಾಗಲಿ, ಬಂಗಾಲವಾಗಲಿ, ಗುಜರಾತಾಗಲಿ, ಗಡಿನಾಡಾಗಲಿ, ಮದರಾಸಾಗಲಿ ಕಾಣಬಹುದು. ಎಲ್ಲೆಲ್ಲೂ ಜೀವನದ ಮೇಲೆ ಮಹಾ ಪರಿಣಾಮ ಮಾಡಿದ ಒಂದು ಸಾಂಸ್ಕೃತಿಕ ಹಿನ್ನೆಲೆ ಕಂಡುಬರುವುದು. ಜನತೆಯ ದರ್ಶನ, ಸಂಪ್ರದಾಯ, ಇತಿಹಾಸ, ಪುರಾಣ ಇವೆಲ್ಲವುಗಳ ಸಮರಸಮಿಶ್ರಣವೇ ಈ ಹಿನ್ನೆಲೆ. ಇಂದಿನ ನಮ್ಮ ಸಮಾಜದ ನಿಜಸ್ವರೂಪವನ್ನರಿಯಬೇಕಾದರೆ ಅದನ್ನು ಈ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕಾಣಬೇಕು. ಇಂದಿನ ಜಾತೀಯತೆ, ಅದರ ವಿಷಫಲಗಳು, ಆರ್ಥಿಕ ವೈಷಮ್ಯ, ಅಂಧಶ್ರದ್ಧೆ ಮುಂತಾದ ವಿಷಬೀಜಗಳ ಮೂಲವನ್ನರಿಯಬೇಕೆಂದರೆ ಇಂದಿನ ಸಮಾಜವನ್ನು ಅದು ಹುಟ್ಟಿ ಬಂದ ದಿಕ್ಕಿನಿಂದ ಅನುಸರಿಸಿ ಬರುವುದು ಅನಿವಾರ್ಯ.

ಅತಿ ಪ್ರಾಚೀನ ಕಾಲದಲ್ಲಿ ಅವ್ಯಕ್ತವಾಗಿ ಆರಂಭವಾದ ನಮ್ಮ ಸಂಸ್ಕೃತಿಯು ಮಹಾನದಿಯಂತೆ ಮುಂದೆ ಮುಂದೆ ಹೋದಂತೆ ಪಾತ್ರ ವೈಶಾಲ್ಯವನ್ನು, ತುಂಬು ಜೀವನವನ್ನು ಪಡೆದು ಅನೇಕ ವೇಳೆ ಉಕ್ಕೇರಿ, ಕೆಲವು ವೇಳೆ ತನ್ನ ಮಾರ್ಗವನ್ನೇ ಬದಲಾಯಿಸಿದೆ, ಕೆಲ ಸಾರಿ ಬತ್ತಿದಂತೆ ಭಾಸವಾದರೂ ತನ್ನ ಮೂಲ ವೈಶಿಷ್ಟ್ಯವನ್ನುಳಿಸಿಕೊಂಡು ಬಂದಿದೆ. ಅದರೂ ಕಾಲಾನುಕ್ರಮವಾಗಿ ಅನೇಕ ಸಂಸ್ಕೃತಿಗಳ ಪ್ರಭಾವ ಕಂಡು ಬರುತ್ತದೆ. ಮಹಮ್ಮದೀಯ ಸಂಸ್ಕೃತಿಯ ಕುರುಹನ್ನೂ ಕಾಣಬಹುದು. ಆಂಗ್ಲ ಸಂಸ್ಕೃತಿಯಂತೂ ಗುರುತು ಕಾಣದಷ್ಟು ಪ್ರಭಾವಬೀರಿದೆ. ಈ ಮಹಾನದಿಯಿಂದು ಮುಂದೆ ಹರಿಯಲಾರದೆ ಇಷ್ಟು ಕಾಲವೂ ತನ್ನ ಜೊತೆಯಲ್ಲಿ ತಂದ ಕಲ್ಲು ಮಣ್ಣು ಬಂಡೆಗಳಿಂದ ತಡೆಯಲ್ಪಟ್ಟು ಪಾಚಿಗಟ್ಟಿ ಅನೇಕ ವಿಷಫಲಗಳಿಗೆಡೆಯಿತ್ತಿದೆ. ಈ ಹಳೆ ಹೊಸ ತಿಕ್ಕಾಟದಲ್ಲಿ ಇಂದಿನ ಸಮಾಜರಚನೆ ಸ್ಥಿರವಾಗಿ ಉಳಿಯಲಾಗದೆ ಬುಡಮೇಲಾಗದೆ ಉಳಿದಿದೆ. ನಮ್ಮ ಕುಟುಂಬಪದ್ಧತಿ ಆರ್ಥಿಕನಿಯಮ, ಶಿಕ್ಷಣ ಪ್ರಣಾಳಿಕೆ ಇಂದು ಒಂದು ರೂಪದಲ್ಲಿದ್ದರೂ ಅವು ಒಂದು ಕಾಲ ಪರಿಸರದಲ್ಲಿ ರೂಪಗೊಂಡವು.

ನಮ್ಮ ಜನತೆಯ ದೃಷ್ಟಿ ಇಂದು ಸಂಕುಚಿತವಾಗಿ ನಮ್ಮ ಪುರಾತನ ಸಂಸ್ಕೃತಿಯಲ್ಲಿ, ಗತ ವೈಭವದಲ್ಲಿ ಬಹಳ ಹೆಮ್ಮೆ ಪಡುತ್ತಿರುವುದು ಕಂಡುಬರುತ್ತದೆ. ಅದನ್ನು ಉಳಿಸಿಕೊಳ್ಳಲು ಅನೇಕ ಅಡ್ಡ ಗೋಡೆಗಳನ್ನು ಕಟ್ಟಿ ಒಂದು ಚಕ್ರವ್ಯೂಹವನ್ನು ರಚಿಸಿಕೊಂಡಿದ್ದೇವೆ. ಕುಲದ ಭಾವನೆಗಳು ದಿನದಿನಕ್ಕೂ ಬಿಗಿಯಾಗುತ್ತಿದ್ದು ಜಾತಿಮತಗಳ ಕಟ್ಟು ಬಲವಾಗುತ್ತಿದ್ದರೂ ಇತರರಂತೆ ನಮ್ಮ ಕುಲಗೋತ್ರಗಳ ಪರಿಶುದ್ಧತೆಯಲ್ಲಿ ಹೆಮ್ಮೆಗೊಳ್ಳುತ್ತಿದ್ದೇವೆ. ಸಹಸ್ರಾರು ವರುಷಗಳು ಉರುಳಿದರೂ ಇಂದು ಜೀವಂತವಾಗಿರುವುದಕ್ಕೆ ಅದರಲ್ಲಡಗಿರುವ ಒಂದು ಶಕ್ತಿ ಕಾರಣ. ಈ ಶಕ್ತಿಯ ಉಪಯುಕ್ತತೆ ಅನೇಕ ವರುಷಗಳ ಹಿಂದೆಯೇ ಕ್ಷೀಣಿಸಿದ್ದು ಈಗ ಒಂದು ಹೊರೆಯಾಗಿ ಪ್ರಗತಿಗೆ ಆತಂಕವಾಗಿದೆ.

## ಜನತೆಗೆ ಭದ್ರತೆಯೊದಗಿಸಿದ ಪದ್ಧತಿಗಳು

ಜಾತಿಪದ್ಧತಿ, ಅವಿಭಕ್ತ ಕುಟುಂಬ ಪದ್ಧತಿಯ ಮೇಲೆ ರಚಿಸಲ್ಪಟ್ಟ ನಮ್ಮ ಸಮಾಜವು ಜನತೆಗೆ ಒಂದು ರೀತಿಯ ಭದ್ರತೆಯನ್ನೊದಗಿಸಿತ್ತು. ಹಿಂದೆ ವ್ಯಕ್ತಿಸ್ವಾತಂತ್ರ್ಯವಿತ್ತು. ಆದರೆ ಸಮಾಜ ರಚನೆ ಮಾತ್ರ ಜಾತಿವಾರವಿದ್ದು ಜಾತಿ ಪಂಗಡಗಳಿಗೆ ಮಾತ್ರ ಪ್ರಾಮುಖ್ಯ ಕೊಟ್ಟಿತ್ತು. ಒಂದು ಸಾಮಾನ್ಯ ಸಂಸ್ಕೃತಿ ಹಿನ್ನೆಲೆ ಭಾರತಕ್ಕೆ ರೂಪು ಕೊಟ್ಟಿತ್ತು. ಎಷ್ಟೇ ಅನೈಕ್ಯವಿದ್ದರೂ ಐಕ್ಯವಿತ್ತು. ಸಿ. ಇ. ಎಂ. ಜೋಡ್ ಹೇಳುವಂತೆ "ಭಿನ್ನತೆಯಲ್ಲಿ ಏಕೆ ಅನೇಕ ಭಿನ್ನ ಭಾವನೆಗಳಲ್ಲಿ ಮತ್ತು ಜನರಲ್ಲಿ ಒಂದು ಸಮರಸತೆಯನ್ನುಂಟುಮಾಡುವ ಶಕ್ತಿ, ಇಚ್ಚೆ ಭಾರತೀಯರ ವೈಶಿಷ್ಟ್ಯವೇ ಮಾನವ ಕುಲಕ್ಕೆ ಕೊಟ್ಟ ಕಾಣಿಕೆ.''

ಪರಕೀಯರ ದಾಳಿಯಿಂದ ಯುದ್ಧ ಮತ್ತು ವಿನಾಶಕೃತ್ಯಗಳಾದವು. ದಂಗೆಗಳಾದವು. ಕ್ರೂರ ದಬ್ಬಾಳಿಕೆಗಳಾದವು. ದೇಶದಲ್ಲಿ ಅನೇಕ ಪರಿವರ್ತನೆಗಳಾಗಿ ಪ್ರಜಾಸ್ವಾತಂತ್ರ್ಯಕ್ಕೆ ಧಕ್ಕೆ ಬಂದಿತು. ಕಾಲ ಪರಿವರ್ತನೆ ಸಂಘರ್ಷಣೆಗಳ ಮತ್ತು ಕೇಂದ್ರ ಅಧಿಕಾರಪ್ರಾಪ್ತಿಯ ಹೆಚ್ಚಳದಿಂದ ಸಂಪ್ರದಾಯನಿಯಮಕ್ಕೆ ಮನ್ನಣೆ ಕಡಿಮೆಯಾಯಿತು. ಫಲವಾಗಿ ಭಿನ್ನತೆಯಲ್ಲಿ ಏಕತೆಯಿದ್ದುದು ಏಕತೆಯಲ್ಲಿ ಭಿನ್ನತೆಗಳು ಕಂಡು ಬಂದವು. ಅಂತೇ ಭಾಷಾವಾರು, ಕೋಮುವಾರು ಭಾವನೆ ಇಂದು ನಲಿದಾಡುತ್ತಿದೆ.

ನಮ್ಮ ಸಮಾಜರಚನೆಯ ಮೂಲಸ್ತಂಭ ಮತ್ತು ವೈಶಿಷ್ಟ್ಯವೆಂದರೆ ಜಾತೀಯತೆ. ಅಂದು ಪ್ರತಿ ಜಾತಿಗೂ ಪ್ರತ್ಯೇಕ ಧರ್ಮವಿತ್ತು. ಇಂದು ಭಾರತದ ಏಕತೆಗೆ ಧಕ್ಕೆ ತರುತ್ತಿರುವ ನೂರಾರು ಕೋಮುಗಳು ಅದರಿಂದುಂಟಾದ ಅಧಿಕಾರ ಲಾಲಸೆ, ಸ್ವಾರ್ಥಪರತೆ ಮೇಲು ಕೀಳೆಂಬ ಭಾವನೆಯಿಂದ ವ್ಯಭಿಚಾರ, ಅನಕ್ಷರತೆ, ಮೂಢ ನಂಬಿಕೆ, ಬಡತನ ಎಲ್ಲವೂ ಇದರ ವಿಷಬೀಜಗಳು ಇಂದು ಪ್ರಗತಿಯ ಹಾದಿಯಲ್ಲಿ ಮುಳ್ಳಾಗಿ ನಿಂತಿವೆ. ಉತ್ತಮ ವರ್ಣದವರು ಈ ಪದ್ಧತಿಯ ವಿನಾಶಕಾರಕ ಪರಿಣಾಮಗಳನ್ನರಿತು ಅದನ್ನು ಬಿಡಲು ಸಿದ್ಧರಾದರೂ ಕೆಳವರ್ಣದವರು ಮಾತ್ರ ಈ ಬದಲಾವಣೆಗಳನ್ನೊಪ್ಪುವುದಿಲ್ಲ. ತನ್ನ ಒಳ್ಳೆಯದಕ್ಕೆಂದೇ ರೈತನು ಯಂತ್ರೋಪಕರಣಗಳನ್ನು ಉಪಯೋಗಿಸಲು ಅವು ತನ್ನ ತಾತ ಮುತ್ತಜ್ಜರು ಉಪಯೋಗಿಸಲಿಲ್ಲವೆಂದು—ಹಿಂಜರಿಯುತ್ತಾನೆ. ಜಾತಿಗೆ ಹೆದರಿ ಉತ್ತಮ ಕೃತಕ ಮೂಳೆ ಮೀನು ಗೊಬ್ಬರಗಳನ್ನು ಉಪಯೋಗಿಸಿ ಬೆಳೆ ತೆಗೆಯಲು ಹಿಮ್ಮೆಟ್ಟುತ್ತಾನೆ. ಈ ಬಡತನಕ್ಕೆ ಮೂಲವಾದ ಅನಕ್ಷರತೆ: ಆಹಾರಾಭಾವಕ್ಕೆ ಹಿರಿಯರೇ ಶಿಕ್ಷಣಕ್ಕೆ ಪ್ರೋತ್ಸಾಹಿಸಲು ಇಂದು ಹಿಂಜರಿಯುತ್ತಾರೆ. ಸಸ್ಯಾಹಾರದ ಜೊತೆಗೆ ಮಾಂಸ, ಮೀನನ್ನೂ ಉಪಯೋಗಿಸಿದರೆ ಸಮತೋಲ ಆಹಾರವನ್ನು ಪಡೆದು ಆಹಾರದ ಕೊರತೆಯೂ ಬಹು ಪಾಲು ನೀಗಿ ಆರೋಗ್ಯವೂ ಸಾಕಷ್ಟು ಸುಧಾರಿಸುತ್ತದೆ. ಆದರೆ ಜನರಲ್ಲಿ ನಂಬಿಕೆಗಳನ್ನಿಂದು ಮುರಿಯಲೆಂತು? ಜಾತೀಯತೆ ಭಾರತೀಯನ ಪ್ರತಿ ರಂಗದಲ್ಲೂ ಅತಿ ಆಳವಾಗಿ ಬೇರು ಬಿಟ್ಟಿದೆ.

## ಜಾತೀಯ ಪದ್ಧತಿ

ನಮ್ಮಲ್ಲಿ ಜಾತೀಯತೆ ಪ್ರಥಮವಾಗಿ ಕರ್ತವ್ಯ, ಕರ್ಮ ಮತ್ತು ಉದ್ಯೋಗವನ್ನವಲಂಬಿಸಿ ಹುಟ್ಟಿದುದು. ಐಶ್ವರ್ಯಕ್ಕಿಂತಲೂ ಆಗ ಮಾನವ ಜೀವನದ ಪರಿಪೂರ್ಣತೆ, ಸದ್ಗುಣಗಳ ಸತ ಮತ್ತು ಸೌಂದರ್ಯಗಳಿಗೆ ಪ್ರಾಧಾನ್ಯವಿತ್ತು. ಆದರೆ ಕ್ರಮೇಣ ಅವುಗಳ ಪ್ರಸರಣಶಕ್ತಿ, ಬುದ್ಧಿ ವಿಕಾಸಶಕ್ತಿ ಕುಂದಿ ಪ್ರತಿಷ್ಠಿತರು ಅಧಿಕಾರಲಾಲಸೆಯಿಂದ ಯಾರ ಪ್ರಗತಿಗೂ ಅವಕಾಶ ಕೊಡದೆ ವಿದ್ಯೆಯು ಸಾಮಾನ್ಯರಲ್ಲಿ ಹರಡದಂತೆ ಅಡ್ಡಿ ಬಂದರು. ಉತ್ತಮ ಮಾರ್ಗದವರನೇಕರಿಗೆ ಮೂಢ ನಂಬಿಕೆಗಳೆಂದು ಗೊತ್ತಿದ್ದರೂ ಅವು

ಗಳನ್ನು ಪ್ರೋತ್ಸಾಹಿಸಿದುದಲ್ಲದೆ ಹೊಸ ಮೂಢ ಭಾವನೆಗಳು ಬೆಳೆಯಲು ಪ್ರೋತ್ಸಾಹಿಸಿದರು. ರಾಷ್ಟ್ರದ ಆರ್ಥಿಕ ಸ್ಥಿತಿ ಮಾತ್ರವಲ್ಲದೆ ಭಾವನೆಗಳೂ ನಿಂತಲ್ಲೇ ನಿಂತು ಪಾಚಿಗಟ್ಟಿ, ಸಂಕುಚಿತವೂ ಕಠಿಣವೂ ಆದವು. ಜಾತಿಕಲ್ಪನೆ ಮತ್ತು ಆಚರಣೆಯಲ್ಲೇ ಅಧಿಕಾರದರ್ಪವಿದ್ದು ಪ್ರಜಾಪ್ರಭುತ್ವಕ್ಕೆ ವಿರುದ್ಧವಾಗಿದ್ದು ಇಂದು ಘರ್ಷಣೆಗೆ ಗುರಿಯಾಗುತ್ತಿದೆ. ಉತ್ತಮ ವರ್ಣದವರು ಬಹುಸಂಖ್ಯಾಕರಿದ್ದು ಅಲ್ಪಸಂಖ್ಯಾಕರನ್ನು ಕೀಳುಮಟ್ಟದಲ್ಲಿಟ್ಟು ಅವರ ವಿದ್ಯೆ, ಸಂಸ್ಕೃತಿ, ಆರ್ಥಿಕ ಉನ್ನತಿಗೆ ಯಾವ ಅವಕಾಶವನ್ನೂ ಕೊಡದೆ ಅಂಧಃಕಾರದಲ್ಲಿ ತಳ್ಳಿದುದೇ ಭಾರತೀಯ ಸಮಾಜ ರಚನೆಯ ದೊಡ್ಡ ನ್ಯೂನತೆಯಾಯಿತು. ಇಂದು ಜಾತೀಯತೆಯೂ ಅದರ ವೈಶಿಷ್ಟ್ಯಗಳೂ ಅಸಂಬದ್ಧವೂ ಸಂಕುಚಿತವೂ ಪ್ರತಿಗಾಮಿಯೂ ಆಗಿ ಪ್ರಗತಿಗೆ ವಿರುದ್ಧವಾಗಿವೆ. ಅದರ ಚೌಕಟ್ಟಿನಲ್ಲಿ ಸಮಾನತೆಯಾಗಲಿ, ಅವಕಾಶವಾಗಲಿ ದೊರೆಯಲಾರದು. ರಾಜಕೀಯದಲ್ಲಾಗಲಿ, ಆರ್ಥಿಕ ನೀತಿಯಲ್ಲಾಗಲಿ ಪ್ರಜಾಸತ್ತೆಯು ದೊರೆಯುವಂತಿಲ್ಲ. ನಾವು ಇಂದಿನದನ್ನು ಅಸಡ್ಡೆ ಮಾಡಿ ಎಲ್ಲದಕ್ಕೂ ಹಿಂದಿನದನ್ನೇ ನೆಚ್ಚಿ ಕುಳಿತಿದ್ದೇವೆ. ಸಂಕುಚಿತ ದೃಷ್ಟಿ ನಿಸರ್ಗಾತೀತ ಕಲ್ಪನಾತೀತ ಮೂಢ ನಂಬಿಕೆಗಳು ನಮ್ಮನ್ನು ಮತ್ತು ಪ್ರಪಂಚವನ್ನು ಅರ್ಥ ಮಾಡಿಕೊಳ್ಳಲು ಅಡ್ಡ ನಿಂತಿರುವುವು. ಮತೀಯ ಕಾರ್ಯಾಚರಣೆಗೂ ಗೂಢ ತಾತ್ವಿಕಭಾವ ಪರವಶತೆಗಳಲ್ಲಿ ಮನಸ್ಸು ಓಡಿಸುವ ಅಭ್ಯಾಸ ಬಿಡಬೇಕು.

ಇಂದು ಕೆಲವರು ವೇದಕಾಲಕ್ಕೇ ಹೋಗೋಣವೆನ್ನುತ್ತಾರೆ. ಆದರೆ ಈ ಭ್ರಮೆಗಳು ಕಾಲಚಕ್ರವನ್ನು ಹಿಂತಿರುಗಿಸಲಾರವು. ಭಾರತ ತನ್ನ ಮತೀಯತೆಯನ್ನು ಕಡಿಮೆಮಾಡಿ ವಿಜ್ಞಾನದೆಡೆಗೆ ತಿರುಗಬೇಕು. ತನ್ನ ಅತ್ಮವನ್ನು ಹಿಸುಕಿ ಪ್ರಗತಿಗೆ ಅಡ್ಡ ಬಂದು ಸೆರೆಯಾಗಿರುವ ವಿಚಾರಪರತೆ, ಸಮಾಜ ವ್ಯವಹಾರಗಳ ಮೇಲಿನ ಬಹಿಷ್ಕಾರ ಮನೋವೃತ್ತಿ ಬಿಡಬೇಕು. ಇಂದು ಕರ್ಮಾನುಚರಣೆಯ ಪಾವಿತ್ರ್ಯತೆಯು ಸಾಮಾಜಿಕ ವ್ಯವಹಾರಕ್ಕೆ ಅಡ್ಡಗೋಡೆ ಕಟ್ಟಿದೆ. ಸಾಮಾಜಿಕ ಕಾರ್ಯಕ್ಷೇತ್ರವನ್ನು ಸಂಕುಚಿತಗೊಳಿಸಿದೆ. ನೆಹರುರವರು ಹೇಳುವಂತೆ "ಸಂಪ್ರದಾಯಶೀಲ ಹಿಂದುವಿನ ಇಂದಿನ ಧರ್ಮವೆಲ್ಲ ಏನು ಊಟಮಾಡಲಿ, ಏನು ಬಿಡಲಿ; ಯಾರೊಂದಿಗೆಊಟಮಾಡಲಿ, ಯಾರಿಂದ ದೂರವಿರಲಿ ಎಂಬುದೆ ಆಗಿದೆ. ತಾತ್ತ್ವಿಕ ಮೌಲ್ಯವೆಲ್ಲ ದೂರವಾಗಿ ಅಡಿಗೆಮನೆ ನಿಯಮ ನಿಬಂಧನೆಗಳು ಆತನ ಸಾಮಾಜಿಕ ಜೀವನದ ಮೇಲೆ ಅಧಿಕಾರ ನಡೆಸುತ್ತಿವೆ. ಇಂದಿನ ಸಾಮಾನ್ಯ ಹಿಂದು ಅನೇಕ ರೀತಿ ಜೀವನಶ್ರೀಯನ್ನು ವೃದ್ಧಿಗೊಳಿಸುವ ಹಿನ್ನೆಲೆ ಮತ್ತು ಭಾವನಾಸ್ವಾತಂತ್ರ್ಯವನ್ನು ಕಳೆದುಕೊಂಡಿದ್ದಾನೆ.''

## ಐತಿಹಾಸಿಕ ದೃಷ್ಟಿಕೋನ

ಇತಿಹಾಸ ದೃಷ್ಟಿಯಿಂದ ಜಾತೀಯ ಬೆಳವಣಿಗೆಗೆ ಸ್ವಲ್ಪ ಬೆಲೆಯಿದೆ. ಆದರೆ ಜಾತಿ ಪದ್ಧತಿ ಹುಟ್ಟಿದ ಯುಗಕ್ಕೆ ಮತ್ತೊಮ್ಮೆ ಹಿಂದಿರುಗಲಾರದು. ಇಂದಿನ ಸಮಾಜರಚನೆಯಲ್ಲಿ ಅದಕ್ಕೆ ಸ್ಥಾನವಿಲ್ಲ. ಇಂದು ಅದು ತಾತ್ತ್ವಿಕ ಮತ್ತು ಪಾಂಡಿತ್ಯ, ಜ್ಞಾನ, ಉದ್ಯೋಗಧರ್ಮದಿಂದ ದೂರವಾಗಿದೆ. ನಿರುದ್ಯೋಗಕ್ಕಂಟಿಕೊಂಡಿದ್ದರೂ ಈ ಕೆಲಸ ಮಾನಕ್ಕೆ ಹಿರಿದು; ಇದು ಕಿರಿದು ಎಂಬ ಭಾವನೆ ರೂಢಿ ತಿಳಿವಳಿಕೆ ಸಮಾಜದಲ್ಲಿ ಬೆಳೆದು ಬಂದಿದೆ. ದರ್ಶನಶಾಸ್ತ್ರಕ್ಕೂ ಪ್ರಸಕ್ತ ಜೀವನ ಮತ್ತು ಅದರ ಸಮಸ್ಯೆಗಳಿಗೂ ಸಂಬಂಧ ಕಡಿದು ಹೋಗಿ ಇಂದು ಅದೊಂದು ಕೇವಲ ಸಂಪ್ರದಾಯ ಶರಣ ತಳಹದಿಯನ್ನೇ ಅವಲಂಬಿಸಿರುವ ಕುಲೀನ ಪಂಗಡವಾಗಿದೆ. "ಆಧುನಿಕ ಸ್ಥಿತಿಗತಿಗೆ ಪ್ರಜಾಪ್ರಭುತ್ವ ದೃಷ್ಟಿಗೆ ಇದು ಸಂಪೂರ ವಿರುದ್ಧವಾಗಿರುವುದರಿಂದ ಈ ದೃಷ್ಟಿ ಇಂದು ಸಂಪೂರ್ಣ ತೊಲಗಬೇಕೆಂದು'' ನೆಹರು ಹೇಳುತ್ತಾರೆ.

ಬ್ರಿಟಿಶರ ಆಳಿಕೆಯಲ್ಲಿ ಸರಕಾರವು ವಿದ್ಯಾಭ್ಯಾಸದ ಪ್ರಗತಿಗೆ ಎಷ್ಟೇ ವಿರುದ್ಧವಾಗಿದ್ದರೂ ದೊಡ್ಡದಾಗಿ ಬೆಳೆಯುತಿದ್ದ ತಮ್ಮ ಕಚೇರಿಗಳಿಗೆ ಗುಮಾಸ್ತರನ್ನು ತಯಾರು ಮಾಡಲು ಶಿಕ್ಷಣಕೊಡಬೇಕಾದುದು ಅನಿವಾರ್ಯವಾಯಿತು. ಇದೇ ಶಿಕ್ಷಣ ಇಂದೂ ಮುಂದುವರಿದು ಜೀವನದಲ್ಲಿ ನಿರುಪಯೋಗಿ ವ್ಯಕ್ತಿವಿಕಾಸಕ್ಕವಕಾಶವಿಲ್ಲದ ಗುಮಾಸ್ತರನ್ನು ತಯಾರು ಮಾಡುತ್ತಿದೆ. ಅಂದು ಈ ವಿದ್ಯಾಭ್ಯಾಸ ಎಷ್ಟೇ ಸಂಕುಚಿತ, ಅಯೋಗ್ಯವಾಗಿದ್ದರೂ ಭಾರತೀಯರ ಮನಸ್ಸಿನ ಕಿಟಕಿಗಳನ್ನು ತೆರೆದು ನೂತನ ಯೋಚನೆ, ಪ್ರಗತಿಪರ ಭಾವನೆಗಳಿಗೆ ಎಡೆಕೊಟ್ಟಿತು. ಈ ಪರಿವರ್ತನೆಗಳು ಭಾರತೀಯನ ಮನಸ್ಸಿನ ಮೇಲೆ ಕಂಡೂ ಕಾಣದಂತೆ ನಿಧಾನವಾಗಿ ಪರಿಣಾಮ ಮಾಡಿ ಪ್ರಗತಿಪರವಾದ ಪಾಶ್ಚಿಮಾತ್ಯ ಸಂಸ್ಕೃತಿ ಅಪ್ರತ್ಯಕ್ಷವಾಗಿ ಭಾರತೀಯ ಸಮಾಜಕ್ಕೆ ವಿರುದ್ಧವಾಗಿ ನಿಂತು ಜನರ ಮನಸ್ಸಿನಲ್ಲಿ ವಿರೋಧ ಬೆಳೆಯುವಂತೆ ಮಾಡಿತು. ಹಿಂದಿನ ಭೂಸ್ವಾಮ್ಯ ಪದ್ಧತಿ ಹಾಳಾಗಿ ಜಮೀನುದಾರಿಪದ್ಧತಿ ಬಂದು ರಕ್ತಹೀರಿ ಮತ್ತಷ್ಟು ತಿಮಿರಕೂಪದಲ್ಲಿ ರೈತರನ್ನು ನೂಕಿತು. ದುಡ್ಡಿನ ಪ್ರಭಾವದಿಂದ ಸಹಸ್ರಾರು ವರುಷಗಳಿಂದ ನಡೆದು ಬಂದ ಸಂಪ್ರದಾಯ ನುಚ್ಚುನೂರಾಯಿತು.

## ಆರ್ಥಿಕ ಅಸಮಾನತೆ

ಇನ್ನು ಆರ್ಥಿಕ ಅಸಮಾನತೆ ಇಂದಿನ ಸಮಾಜದ ಮತ್ತೊಂದು ದೊಡ್ಡ ಊನ. ಇಂದಿನ ಮಧ್ಯಮ ವರ್ಗ, ಕೀಳು ವರ್ಗ ಮೊದಲು ಇರಲೇ ಇಲ್ಲ. ಇದ್ದ ಪನುಷ್ಯಿಪದ್ಧತಿ ನಾಶವಾಗಿ ಭಾರತೀಯರ ಸ್ವತಂತ್ರ ಭಾವನೆ ಲೋಪವಾಯಿತು, ಇಂದು ಭಾರತೀಯರು ನೂರೈವತ್ತು ವರುಷಗಳ ದಾಸ್ಯದಿಂದ ಸ್ವತಂತ್ರರಾದಾಗ್ಯೂ ಇನ್ನೂ ದಾಸ್ಯ ಭಾವನೆ ಹೋಗಿ ಹೊಣೆಗಾರಿಕೆ ಭಾವನೆ ಬಂದಿಲ್ಲ. ನೆಹರೂರವರು ಒಂದೆಡೆ "ಆರ್ಥಿಕ ಅಸಮಾನತೆಯೇ ಸರ್ವಾಧಿಕಾರದ ಮೂಲ. ಜೀವನದ ಎಲ್ಲಾ ಕಾರ್ಯರಂಗಗಳಲ್ಲಿ ಅದನ್ನು ಶಾಶ್ವತಗೊಳಿಸುತ್ತದೆ. ಜವಾಬ್ದಾರಿ ಮನೋವೃತ್ತಿಗೆ ಅಡ್ಡಿಮಾಡಿ ಅದರ ದೌಷ್ಟ್ಯಕ್ಕೆ ಸಿಕ್ಕಿದವರಲ್ಲಿ ಆತ್ಮಗೌರವವೂ ಆತ್ಮಾವಲಂಬನೆಯೂ ನಾಶವಾಗುತ್ತದೆ'' ಎನ್ನುತ್ತಾರೆ. ಈ ಪಾಶವೀ ಶಕ್ತಿಯನ್ನು ನಾಶಮಾಡಲು ಸರಕಾರದ ನೀತಿಯಾದ ಸಮಾಜವಾದೀ ಸಮಾಜದ ಬಗ್ಗೆ ಮಾತನಾಡುತ್ತ ಅವರೇ ಮತ್ತೊಂದೆಡೆ ಸಮಾಜವಾದಿ ಸಮಾಜವೆಂದರೆ "ವೈಯಕ್ತಿಕ ಅಸ್ತಿಯೇ ಇರಬಾರದೆಂದಲ್ಲ. ಆದರೆ ದೊಡ್ಡ ದೊಡ್ಡ ಮೂಲ ಕೈಗಾರಿಕೆಗಳೆಲ್ಲಾ ಸಾರ್ವಜನಿಕ ಸೊತ್ತಾಗಿರಬೇಕು. ಭೂ ಅಸ್ತಿಯೆಲ್ಲ ಸಾಮೂಹಿಕವಾಗಿ ರೂಢಿಸಬೇಕು. ರಾಷ್ಟ್ರದ ಸಶ್ರಮ ಶಕ್ತಿಯನ್ನು ಉಪಯೋಗಿಸಿಕೊಂಡು ನಿರುದ್ಯೋಗವನ್ನು ನಾಶಮಾಡಿ ಸರ್ವತೋಮುಖ ರಾಷ್ಟ್ರನಿರ್ಮಾಣ ಶಕ್ತಿಯನ್ನು ವೃದ್ಧಿಗೊಳಿಸುವುದೇ ಅದರ ಗುರಿ'' ಎಂದಿದ್ದಾರೆ. ಈ ಹೊಸ ಸಮಾಜರಚನೆಯಲ್ಲಿ ಪ್ರತಿಯೊಬ್ಬನಿಗೂ ತನ್ನಿಷ್ಟವಾದ ಉದ್ಯೋಗವನ್ನು ಅವ ಲಂಬಿಸುವ

ಸ್ವಾತಂತ್ರ್ಯವಿದ್ದರೆ ಇಂದಿನ ಲಾಭಬಡಕ ಸಮಾಜ ಬುಡಮೇಲಾಗುವುದು.

ಇಂದಿನ ಸಮಾಜಜೀವನದ ಮತ್ತೊಂದು ಬಿರುಕೆಂದರೆ ಸ್ತ್ರೀಯರಿಗೆ ಸಮಾನಾವಕಾಶ ಕೊಡದಿರುವುದು; ವೇದಿಕೆಗಳ ಭಾಷಣದಿಂದ, ಸಂಸತ್ತಿನಲ್ಲಿಯ ವಿಧೇಯಕದಿಂದ ಇಂದು ಸ್ತ್ರೀಯರ ನಿರಕ್ಷರತೆ, ವಿಧವಾ ವಿವಾಹ ನಿಷೇಧ, ಬಾಲ್ಯ ವಿವಾಹ, ಕನ್ಯಾಶುಲ್ಕ, ವರದಕ್ಷಿಣೆ ಮುಂತಾದ ದುಷ್ಕಾರ್ಯಗಳನ್ನು ನಿರ್ಮೂಲ ಮಾಡಲು ಪೂರ್ಣ ಸಾಧ್ಯವಿಲ್ಲ. ಗಾಂಧೀಜಿಯವರು ಹೇಳುವಂತೆ ಇಂದು ಸ್ತ್ರೀಯರಿಗೆ "ಮನುಷ್ಯರಿಗಿರುವಷ್ಟೇ ಸ್ವಾತಂತ್ರ್ಯ ಮತ್ತು ಆತ್ಮವಿಕಾಸಕ್ಕೆ ಅವಕಾಶವಿರಬೇಕು. ಆದರೆ ಇಂದು ಎಚ್ಚೆತ್ತ ಸ್ತ್ರೀಯರು ಶಿಕ್ಷಣವನ್ನಾಶ್ರಯಿಸಿದರೆ ಸಂಪ್ರದಾಯವಾದಿಗಳಿಂದ ದೂರಾಗಿರಬೇಕಾಗುತ್ತದೆ. ಇಂತಹ ಮಹಿಳೆಯರ ವಿವಾಹ ಸಮಸ್ಯೆಯು ರೂಪತಾಳಿ ಅದರ ಹಿಂದೆಯೇ ಸಾಮಾಜಿಕ ಪ್ರಶ್ನೆಯೂ ಆರ್ಥಿಕ ಹೊಣೆಯೂ ತಲೆದೋರುತ್ತದೆ. ಹೀಗೆ ಇಂದು ಸ್ತ್ರೀ ಶಿಕ್ಷಣದ, ಸ್ವಾತಂತ್ರ್ಯದ ಪ್ರಗತಿಪರ ವಿಚಾರಗಳು ಬಳಕೆಗೆ ಬಂದರೂ ಇಂದಿನ ವಿಭಕ್ತ ಕುಟುಂಬದ ಆರ್ಥಿಕ ಸಂಪಾದನೆಯು ಗೃಹನಿರ್ವಹಣೆಗಳೊಂದನ್ನೂ ಸಾಧಿಸಲಾಗದ ಸುಶಿಕ್ಷಿತ ಮಹಿಳೆಯರ ತಂಡವೊಂದು ನಿರ್ಮಾಣವಾಗುತ್ತಿದೆ. ಇಂದಿನ ಸಮಾನ ಶಿಕ್ಷಣಕ್ಕಿಂತಲೂ ಅವರಿಗೆ ಉಪಯೋಗಕರವಾದ ಶಿಕ್ಷಣದ ಆವಶ್ಯಕತೆ ಹೆಚ್ಚಾಗಿದೆ. ಎಲ್ಲಕ್ಕೂ ಮೇಲಾಗಿ ಅವರ ಮೇಲಿನ ಸಾಮಾಜಿಕ ದಿಗ್ಬಂಧನಗಳನ್ನು ಕಿತ್ತೊಗೆಯಬೇಕಾಗಿದೆ.

### ಅವಿಭಕ್ತ ಕುಟುಂಬ–ವಿಭಕ್ತ ಕುಟುಂಬ

ಇಂದಿನ ಹಿಂದುಸಮಾಜದ ಗತ ವೈಶಿಷ್ಟ್ಯ ಮತ್ತೊಂದೆಂದರೆ ಅವಿಭಕ್ತ ಕುಟುಂಬ. ಹಿಂದ ಇದರಲ್ಲಿ ಒಂದು ಬಗೆಯ ಸಮಾಜರಕ್ಷಣೆಯಿದ್ದರೂ ವ್ಯಕ್ತಿಜೀವನದ ಮಟ್ಟ ಕಡಿಮೆಯಾಗಿ ಜೀವನ ವಿಕಾಸವಾಗಲಾರದೆ ಸಾಮಾಜಿಕ ಜೀವನ ಮೇಲೆಂಬ ಭಾವನೆ ಬೆಳೆಯಿತು. ಇಂದು ಅವಿಭಕ್ತ ಕುಟುಂಬ ಸಡಿಲಾಗಿ ವಿಭಕ್ತ ಕುಟುಂಬ ಅದರ ಸ್ಥಳವನ್ನಾವರಿಸುತ್ತಿದೆ. ಆದರೂ ಇಂದು ಅದರ ಅವಶೇಷ ಉಳಿದು ವಿಭಕ್ತ ಕುಟುಂಬ ಪೂರ್ಣ ಪ್ರಚಾರಕ್ಕೆ ಬಾರದೆ ಕುಟುಂಬ ಪದ್ಧತಿಯೇ ಮುಗ್ಗರಿಸುತ್ತಿದೆ. ವ್ಯಕ್ತಿ ಜೀವನ ಬೆಳೆದು ಜನಜೀವನದ ಆರ್ಥಿಕ ಹಿನ್ನೆಲೆಯಲ್ಲಿ ವಿಶೇಷ ಮಾರ್ಪಾಟಾಗಿ ಹೊಸ ಸಂಪ್ರದಾಯಗಳ ಸಮಸ್ಯೆಗಳೂ ಏಳುತ್ತಿವೆ.

ಒಟ್ಟಿನಲ್ಲಿ ಭಾರತ ಹಿಂದೂ ಸಮಾಜ ಇಂದು ಪೂರ್ವಾಚಾರಗಳ ಅಂಧ ಶ್ರದ್ಧೆ ಮತ್ತು ಪಾಶ್ಚಾತ್ಯ ಪದ್ಧತಿಗಳ ಕುರುಡು ಅನುಕರಣಗಳ ಮಧ್ಯೆ ತೊನೆದಾಡುತ್ತಿದೆ. ಇವೆರಡರಲ್ಲಿ ಹರ್ಷವಾಗಲಿ ಪ್ರಗತಿಯಾಗಲಿ ಜೀವನವಾಗಲಿ ದೊರೆಯುವುದಿಲ್ಲ. ಈ ತೊನೆದಾಟ ಸಂಘರ್ಷಣೆಯಲ್ಲಿ ಹಿಂದೆ ಸಮಾಜದ ಅಷ್ಟದಿಗ್ಗಜಗಳಂತಿದ್ದ ಅವಿಭಕ್ತ ಕುಟುಂಬ, ಗ್ರಾಮಪಂಚಾಯತಿ, ಜಾತೀಯತೆ, ಸಂಸ್ಕೃತಿ ಕಾಲಗತಿಯನ್ನನುಸರಿಸಿ ಇಂದು ಕುಸಿಯುತ್ತಿದೆ. ಇದರ ಕರಾಳದಂಷ್ಟ್ರಗಳಿಂದ ಆರ್ಥಿಕ ವೈಮನಸ್ಯ ಅನುಶಾಸನಹೀನತೆ, ಜಾತೀಯತೆ, ಪ್ರಾಂತೀಯತೆ, ಭಾಷಾವಾದ, ಪಕ್ಷಪಾತ ಅಂಧವಿಶ್ವಾಸ, ಅಂಧಾನುಕರಣೆ, ವ್ಯಭಿಚಾರ, ಭಿಕ್ಷಾವೃತ್ತಿ, ಬಡತನ, ಸ್ವಾರ್ಥ ಎಲ್ಲೆಲ್ಲೂ ತನ್ನ ನಾಲಿಗೆಯನ್ನು ಚಾಚಿದೆ. ಸ್ವಾತಂತ್ರ್ಯಾನಂತರ ನವಭಾರತವನ್ನು ರಾಜಕೀಯವಾಗಿ, ಆರ್ಥಿಕವಾಗಿ ಕಟ್ಟಲಾರಂಭಿಸಿರುವ ಇಂದು ಅದರ ಪರಿಪೂರ್ಣತೆಗಾಗಿ ಕುಸಿಯುತ್ತಿರುವ ಇಂದಿನ ಸಮಾಜವನ್ನೂ ಆಧುನಿಕ ಕಾಲಗತಿಯನ್ನನುಸರಿಸಿ ಪುನಃ ನಿರ್ಮಾಣ ಮಾಡುವ ಕಾಲ ಹಣ್ಣಾಗಿದೆ.



# ಮಾತು - ಅರ್ಥ

ಬರೆದವರು : **ಬೀChi,**

**ಮಾತು ಮಾತಿಗೆ ಸೇರಿ ಅರ್ಥ ಅನರ್ಥವಾಗುವದೆಂದು ಸಾಮಾನ್ಯವಾಗಿ ಹೇಳುವದುಂಟು. ಆದರೆ ಅರ್ಥ ಮಾತನಾಡುವ ರೀತಿಯಲ್ಲಿಯೇ ಹೇಗೆ ಅನರ್ಥ ತಾಳುವದೆಂಬುದನ್ನು ಬೀಚಿಯವರು ಇಲ್ಲಿ ಸೋದಾಹರಣವಾಗಿ ತೋರಿಸಿದ್ದಾರೆ.**

ಅಪ್ಪಾ, ತೇರಿಗೆ ಒಂದು ಹೊಸ ಅಂಗಿ ಹೊಲಿಸಪ್ಪಾ " ತಿಂಮು ತನ್ನ ತಂದೆಯನ್ನು ಕೇಳಿದ ನಾಲ್ಕಾರು ಬಾರಿ.

ಈ ಮಾತಿನ ಅರ್ಥ ತಿಂಮುನಿಗೆ ಗೊತ್ತಿಲ್ಲವೆ? ತಿಂಮುನ ತಂದೆಗೆ ಆಗಲಿಲ್ಲವೆ? ಆಯಿತು, ಯಾರಿಗಾದರೂ ಆಗುವಂತೆ. ತೇರಿಗೆ ಎಂದರೆ ತೇರಿನ ಸಮಯಕ್ಕೆ ಎಂದಷ್ಟೆ ಅರ್ಥ. ಇದರಲ್ಲೇನು ತಪ್ಪು?

ಒಬ್ಬ ವ್ಯಾಕರಣಪಂಡಿತ ನೂರೆಂಟು ಕೋಶಗಳನ್ನು ಹುಡುಕಿ, ಪ್ರತ್ಯಯಗಳು ಪ್ರಯೋಗಗಳನ್ನು ನೆನಪಿಸಿಕೊಂಡು, ಶಬ್ದಾರ್ಥವನ್ನು ಗ್ರಹಿಸಿ-ಮುಖ್ಯವಾಗಿ ಭಾವಾರ್ಥವನ್ನು ತ್ಯಜಿಸಿ— ಕೇಳಿಯೆಬಿಟ್ಟ; ನಕ್ಕುಬಿಟ್ಟ ಕೂಡ ಅನ್ನಿ.

" ತೇರಿಗೆ ಅಂಗಿ! ಯಾರಾದರೂ ತೇರಿಗೆ ಅಂಗಿ ತೊಡಿಸುತ್ತಾರೆಯೆ? ಎಷ್ಟು ಥಾನುಗಳ ಬಟ್ಟೆ ಬೇಕಾಯಿತು? ಇದು ಹುಚ್ಚರು ಮಾಡಬೇಕಾದ ಕೆಲಸ, ತಿಂಮಾ ನಿನ್ನನ್ನು ಹುಚ್ಚಾಸ್ಪತ್ರೆಗೆ ಸೇರಿಸಬೇಕು. ಅಷ್ಟೆ. ಏನು ನಿನ್ನ ತಲೆ, ಹಾಗೆಂದರೆ? "

ಇದಕ್ಕೆ ಜವಾಬು ಇಲ್ಲವೆ, ತಿಂಮುನ ತಲೆಯಲ್ಲಿ,

" ಹುಚ್ಚಾಸ್ಪತ್ರೆ! ಹುಚ್ಚಾಸ್ಪತ್ರೆ ಎಂದರೇನು? ಹುಚ್ಚ ನಾಯಿ ಎಂದರೇನು ಪಂಡಿತರೇ? ಹುಚ್ಚು ಹಿಡಿದಿರುವ ನಾಯಿಗೆ ಹುಚ್ಚು ನಾಯಿ ಎನ್ನುವದುಂಟು. ಹಾಗಾದರೆ ಹುಚ್ಚಾಸ್ಪತ್ರೆ ಎಂದರೆ ಹುಚ್ಚು ಹಿಡಿದ ಆಸ್ಪತ್ರೆ ಎಂದು ಹೇಳಬೇಕಾಯಿತು. ಅಲ್ಲವೇನು ಸ್ವಾಮೀ? ಆಸ್ಪತ್ರೆಯ ಕಟ್ಟಡ, ಗೋಡೆ, ಕಂಬ, ಮಾಳಿಗೆ, ಬಂಡೆಗಳಿಗೆ ಹುಚ್ಚು ಹಿಡಿಯುವದುಂಟೆ? 'ಹುಚ್ಚಾಸ್ಪತ್ರೆ' ಎನ್ನುವದನ್ನು ತಿದಿಕೊಂಡು 'ಹುಚ್ಚರ ಆಸ್ಪತ್ರೆ' ಎನ್ನಬಹುದು, ನೀವು. ಹಾಗಾದರೆ ಅಲ್ಲಿರುವವರೆಲ್ಲರೂ—ಡಾಕ್ಟರುಗಳು, ನರಸಮ್ಮಗಳು—ಎಲ್ಲರೂ ಹುಚ್ಚರೇ ಏನು!

ಇನ್ನೊಂದು ಮಾತೂ ಇದೆ. ಹುಚ್ಚಾಸ್ಪತ್ರೆಯ ಒಳಗಿರುವವರು ಹುಚ್ಚರು ಎಂದಮಾತ್ರಕ್ಕೆ ಅದರ ಹೊರಗಿರುವ ನಾವು ನೀವೆಲ್ಲರೂ—ಅತಿ ಮುಖ್ಯವಾಗಿ ಪಂಡಿತರುಗಳು—ಹುಚ್ಚರಲ್ಲ ಎಂದು ಹೇಳಲು ಸಾಧ್ಯವೆ? ಹಾಗೆ ಹೇಳಿದರೆ ಶುದ್ಧ ತಪ್ಪು ಆದೀತು. ಸಾಮಾನ್ಯ ಜ್ಞಾನದ 'ರ ಠ' ಸಹ ನಿಮಗೆ ತಿಳಿಯದು ಎಂಬುದು ಶತಸ್ಸಿದ್ಧವಾಗಿಬಿಡುತ್ತದೆ. ಛೆ! ಉಂಟೆ ಎಲ್ಲಿಯಾದರೂ? ಕೇವಲ ಗುಣವಾಗಬಹುದಂತಹ ಹುಚ್ಚರನ್ನಷ್ಟೆ ಆ ಆಸ್ಪತ್ರೆಯಲ್ಲಿಟ್ಟುಕೊಳ್ಳುತ್ತಾರೆ. ಗುಣವಾಗಲಾರದಂತಹ ಹುಚ್ಚರೆಲ್ಲರೂ ಹೊರಗೇ ಇರುತ್ತಾರೆ. ಅವರಲ್ಲಿ ಕೆಲವರು ಮಾತ್ರವೇ ಚುನಾವಣೆಗೆ ನಿಲ್ಲುತ್ತಾರೆ; ಕೆಲವರು ಪಂಡಿತರಾಗುತ್ತಾರೆ, ಉಳಿದವರಿಗೆಲ್ಲ ಬೇರೆ ಬೇರೆ ಜಾತಿಯ ಹುಚ್ಚು ಗಂಟು ಬಿದ್ದಿರುತ್ತದೆ. . . ."

" ಹೋಗಲಿ ಬಿಡೋ ತಿಂಮಾ. ಪಂಡಿತನಾದ ನನಗೆ ವ್ಯಾಕರಣದ ಹುಚ್ಚು, ಪಾಮರನಾದ ನಿನಗೆ ಭಾಷಣದ ಹುಚ್ಚು. ನೀನು ಇಷ್ಟುದ್ದ ಮಾತನಾಡುವದನ್ನು ನೋಡಿ ನನ್ನ ನಾಲಿಗೆ ಒಣಗಿತು. ಹೋಗು, ಒಂದು ಲೋಟ ಕುಡಿಯುವ ನೀರನ್ನು ತಾ."

ತಿಂಮು ತಿರುಮಂತ್ರ ಆರಂಭಮಾಡಿದ.

" ಕುಡಿಯುವ ನೀರು! ಅಯ್ಯೊ, ದೇವರೆ! ಸ್ವಾಮೀ ಪಂಡಿತರೆ! ಆಡುವ ಮಗು, ಓಡುವ ಕುದುರೆ, ನೋಡುವ ಕಂಣು ಎಂಬ ಪದಗಳ ಅರ್ಥ ಗೊತ್ತು ತಾನೆ ತಮಗೆ? ಹಾಗೆಯೆ ಏನು, ಕುಡಿಯುವ ನೀರು ಎಂದರೂ, ನೀರು ಕುಡಿಯುತ್ತದೆಯೆ? ಒಂದು ಲೋಟ ಕುಡಿಯಲ್ಪಡುವ ನೀರನ್ನು ತಾ ಎನ್ನಬೇಕಿತ್ತು ತಾವು."

ಆ ಮಾತು ಈ ಮಾತು ಆಡಿ ತಿಂಮು ಪಂಡಿತರನ್ನು ವಿಷಯದಿಂದ ದೂರ ತಂದು ಅದೆಲ್ಲಿಯೊ ಕೈಬಿಟ್ಟ. ಲೋಕಾಭಿರಾಮವಾಗಿ ಮಾತನಾಡಿ ಕ್ಷೇಮಸಮಾಚಾರಕ್ಕೆ ಬಂದ.

" ನಿಮ್ಮ ಮಕ್ಕಳು ಎಲ್ಲಿ ಸ್ವಾಮೀ, ಕಾಣುವುದೇ ಇಲ್ಲವಲ್ಲ."

" ಮಗನು ಓದಲು ಕಾಶಿಗೆ ಹೋಗಿದ್ದಾನೆ. ಮಗಳ ಲಗ್ನವಾಯಿತು, ಗಂಡನ ಮನೆಯಲ್ಲಿದ್ದಾಳೆ."

" ಅಹುದಾ? ನನಗೆ ಗೊತ್ತೇ ಇಲ್ಲ, ನಿಮ್ಮ ಮಗಳ ಮದುವೆ ಆದುದು."

" ಹೋದ ವರ್ಷವೇ ಆಯಿತಲ್ಲ. ಆಕೆಯನ್ನು ಬೆಂಗಳೂರಿಗೆ ಕೊಟ್ಟು ಮದುವೆ ಮಾಡಿದೆ"

ತಿಂಮು ಗಾಬರಿಯಾದ; ಹಣೆ ಹಣೆ ಬಡಿದುಕೊಂಡ.

" ಏನೋ ತಿಂಮಾ, ಏನಾಯಿತೋ?"

" ಥೆ! ತಾವು ಇಂತಹ ಮಾತನಾಡಬಾರದು, ರಾಮ ರಾಮಾ"

" ಏಕೋ, ನಾನೇನು ಆಡಿದೇನೋ? ನನ್ನ ಮಗಳನ್ನು ಬೆಂಗಳೂರಿಗೆ ಕೊಟ್ಟಿದ್ದೇನೆ ಎಂದೆ . . . ."

ಕಿವಿಯ ಮೇಲೆ ಕೈ ಇಕ್ಕಿಕೊಂಡ ತಿಂಮು.

"ಅನ್ನಬೇಡಿ ಪಂಡಿತರೆ, ಆ ಮಾತನ್ನು. ಬೆಂಗಳೂರಲ್ಲಿರುವ ಒಬ್ಬ ವರನಿಗೆ ಕೊಟ್ಟಿದ್ದೀರಿ. ಇಡೀ ಬೆಂಗಳೂರಿಗೇ . . . . ."

" ಥೂ, ಅವಿವೇಕ "

ಪಂಡಿತರು ಹೇಳದೆ ಕೇಳದೆ ಕಾಲುಕಿತ್ತಿದರು.

* * *

ಆ ಆದಿ ಕವಿ, ಮಹಾ ಕವಿ, ವರಕವಿ, ವಾಲ್ಮೀಕಿ ಆಗಲೇ ಸತ್ತುದೇ ಒಳಿತಾಯಿತು; ಬದುಕಿದ್ದರೆ ಏನು ಗತಿ? ಆತ್ಮಹತ್ಯ ಮಾಡಿಕೊಳ್ಳಬೇಕಿತ್ತು ಅಷ್ಟೆ, ಈ ಸಂಭಾಷಣೆಯನ್ನು ಕೇಳಿದ್ದರೆ; ಸಮಯಕ್ಕೆ ಸರಿಯಾಗಿ ಹಗ್ಗವೂ ಸಿಗದಿದ್ದಲ್ಲಿ, ಹೇಗೂ ಇದ್ದಿತಲ್ಲ ತನ್ನ ಕೈಯಲ್ಲಿಯೇ ಹನುಮನ ಬಾಲ.

" ಬಂದನಯ್ಯ ಪುಣ್ಯಾತ್ಮ, ನಾವು ಮನೆ ಕಂಡಂತೆಯೆ ಇದೆ ಇವತ್ತು. ಸಾವೇ ಇಲ್ಲಿಂದ ಗಾಡಿ ಬಿಡೋಣ ನಡೆ."

" ಅವನು ಬಂದರೆ ನಿನಗೇನಯ್ಯ ಅಂಜಿಕೆ? ಬಂದರೆ ಬರಲಿ. ಅವನೇನು ಮಾಡುತ್ತಾನೆ?"

" ಏನು ಮಾಡುತ್ತಾನೇ? ಮಹಾ ಭೈರಗಿಯಯಾ ಅವನು. ರಾಮಾಯಣವನ್ನು ಸುರು ಮಾಡಿದನೆಂದರೆ ಮುಗಿಯಿತು, ಒಂದು ಡಜನ್ ಅಮೃತಾಂಜನದ ಡಬ್ಬಿಗಳಾದರೂ ಸಾಲದು."

" ಆ ದಶರಥಪುತ್ರ, ಪುಣ್ಯಚರಿತ್ರ, ಶ್ರೀರಾಮನ ಕತೆಯಾದ ರಾಮಾಯಣಕ್ಕೆ ಈ ಅರ್ಥವು ಬರಬೇಕೆ! ಯಾರ ದುರ್ದೈವ— ಬರೆದ ವಾಲ್ಮೀಕಿಯದೋ, ಬರೆಯಿಸಿಕೊಂಡ ಶ್ರೀರಾಮನದೋ?

" ಇನ್ನೂ ಸಂಬಳ ಬಂದಿಲ್ಲವೇ? ಮುಂದಿನ ವಾರದ ವರೆಗೂ ಬರುವಂತೆಯೂ ಇಲ್ಲ. ನಾಲ್ಕು ದಿನಗಳು ತಡೆದು ಬಾ ಎಂದು ಹೇಳು ಮನೆ ಬಾಡಿಗೆಯವನಿಗೆ"

ನನ್ನ ಮಕ್ಕಳ ಮಾತೆಯಲ್ಲಿ ಮನವಿ ಮಾಡಿಕೊಂಡೆ ದೈನ್ಯದಿಂದ.

ಮುಖ ಗಂಟು ಹಾಕಿ, ಹುಬ್ಬೇರಿಸಿ ಉತ್ತರಿಸಿಯೇ ಬಿಟ್ಟಳು ಹಿಂದೆಯೆ.

" ನನ್ನ ಕೈಯಿಂದ ಸಾಧ್ಯವಿಲ್ಲ, ಅವನಿಗೆ ಹೇಳುವುದು. . . ."

ಪುನಃ ಸುರುವಾಯಿತಲ್ಲ ಮಾತು — ಅರ್ಥ! ನಡುವೆಯೇ ಬಾಯಿ ಹಾಕಿದೆ.

" ಕೈಯಿಂದ ಹೇಳಬೇಡವೆ, ಬಾಯಿಂದ ಹೇಳು"

" ಹೇಗೆ ಹೇಳಿದರೂ ಅವನು ಕೇಳುವದಿಲ್ಲರೀ· ನಡುರಸ್ತೆಯಲ್ಲಿ ನಿಂತು ಬಾಯಿ ಮಾಡುತ್ತಾನೆ, ಆ ಮುಟ್ಠಾಳ. ಅವನ ರಾಮಾಯಣ ಯಾರು ಕೇಳಬೇಕು?"

ರಾಮಾಯಣ! ಅಯ್ಯೊ, ರಾಮಯಣವೇ!! ನಿನಗೂ ಈ ಗತಿಯೇ !!!

ಕುಂಭಕೋಣಂ ಎಂಬ ಊರಿನ ಹೆಸರಿಗೆ ರೂಢ್ಯಿಯಲ್ಲಿ ಎಂತಹ ಅರ್ಥವು ಬಂದಿದೆ ನೋಡಿ!

" ಅಲ್ಲವಯ್ಯಾ, ನೀನು ಕೆಲಸಕ್ಕೆ ಸೇರಿ ಈಗಾಗಲೆ ಹತ್ತು ವರ್ಷಗಳಾದುವು; ಇನ್ನೂ ಇಲ್ಲಿಯೇ ಅಳುತ್ತ ಕೂತಿರುವಿ. ಆ ರಾಜಗೋಪಾಲನನ್ನು ನೋಡು; ಮೂರೇ ವರ್ಷಗಳಲ್ಲಿ ಹೇಗೆ ಮೇಲೆ ಹೋದ? ನೀನು ಬಿ. ಎ ಪಾಸು ಮಾಡಿರುವಿ, ಅದೂ ಫರ್ಸ್ಟ್ ಕ್ಲಾಸಿನಲ್ಲಿ. ಅವನು ಇಂಟರ ಸಹ ಆಗಿಲ್ಲ. ಕತ್ತೆಯಂತೆ ದುಡಿಯುತ್ತಿ ರಾತ್ರಿಯವರೆಗೂ ಆಫೀಸಿನಲ್ಲಿ. ಏನು ಪ್ರಯೋಜನ?"

ತಂದೆ ಒಂದು ಸಲ ಮಗನನ್ನು ಥರಾಡಿಗೆ ತೆಗೆದುಕೊಂಡರು.

ಒಂದೇ ಮಾತಿನಲ್ಲಿ ಮುತ್ತಿನಂತಹ ಉತ್ತರವನ್ನಿತ್ತು ತನ್ನ ದಾ'ಯನ್ನು ತಾನು ಹಿಡಿದ ಆ ಹುಡುಗ.

"ಸರಿ, ಚನ್ನಾಗಿಯೆ ಹೇಳಿದಿರಿ. ಆ ರಾಜಗೋ-ಪಾಲ ಮಾಡುವ ಕುಂಭಕೋಣಗಳನ್ನೆಲ್ಲ ನನ್ನನ್ನೂ ಮಾಡು ಎಂದಿರೇನು?"

ದಕ್ಷಿಣ ಭಾರತದ ಅಂತಹ ಒಂದು ಉಚ್ಚ ಮಟ್ಟದ ಕ್ಷೇತ್ರಾಸ್ಥಳದ ಹೆಸರಿಗೆ ಇಂತಹ ಕೆಳಮಟ್ಟದ ಅರ್ಥ ಬರಲು ಏನಾದರೂ ಕಾರಣ ಇದೆಯೆ? ಇಲ್ಲದಿರಲು ಸಾಧ್ಯವೆ? 'ಕುಂಭಕೋಣ ಮಾಡುತ್ತಾನೆ' ಎನ್ನುವ ಬದಲು 'ಬಳ್ಳಾರಿ ಮಾಡುತ್ತಾನೆ' ಇಲ್ಲವೆ 'ಹುಬ್ಬಳ್ಳಿ ಮಾಡುತ್ತಾನೆ' ಎನ್ನಬಹುದಿತ್ತಲ್ಲ? ಊಹುಂ, ಸಾಧ್ಯವೇ ಇಲ್ಲ, ಕುಂಬಕೋಣಂ ಎಂದರೆ ಕುಂಭಕೋಣಂ, ಅಷ್ಟೆ. ಬೇರಿನ್ನಾವ ಊರಿಗೂ ಈ ಅದ್ವಿತೀಯ ಗೌರವ ಸಲ್ಲಲು ಸಾಧ್ಯವೆ ಇಲ್ಲ. ಭಾರತದಲ್ಲಿ (ಆಗ ಇದು ಇನ್ನೂ ಇಂಡಿಯಾ) ಮೊಟ್ಟ ಮೊದಲು ಫೋರ್ಜರಿ ಆದುದೇ ಕೊಯಂಬತ್ತೂರಿನಲ್ಲಿ ಎಂದು ಹೇಳು-ತ್ತಾರೆ. ಕೊಯಕ ಎಂದರೆ ಕುಹಕ ಅಥವಾ ಕಪಟ ಎಂದು ಅರ್ಥಕೋಶ ಹೇಳುತ್ತಿದೆ. ಕೊಯಕ ಎಂಬ ಶಬ್ದಕ್ಕೆ ಈ ಅರ್ಥವು ಬರುವುದಕ್ಕೆ ಕೊಯಂಬತ್ತೂರೇ ಕಾರಣವೆಂದು ಹೇಳಿದರೆ ಕುದುರೆಯ ಮುಂದೆ ಗಾಡಿಯನ್ನು ತಂದಾಗುವುದಲ್ಲವೆ?

ಇಬ್ಬರು ಹಳ್ಳಿಗರ ಮಧ್ಯೆಸಾಗಿದ್ದ ಸಂಭಾಷಣೆಯೊಂದು ಅಕಾಸ್ಮಾತ್ತಾಗಿ ಕಿವಿಗೆ ಬಿದ್ದಿತು. ಒಬ್ಬ ಕೊಂಚ ಕೋಪದಲ್ಲಿದ್ದ, ಹಿರಿಯ. ಇನ್ನೊಬ್ಬ ತಪ್ಪಿತನಂತೆ ಮುಖಮಾಡಿದ್ದ' ಕಿರಿಯ?

"ನಿನಗೆ ಭುದ್ಧಿ ಬರಾಕಿಲ್ಲಲೇ. ಒಂದು ಸಾವಿರ ಬಾರಿ ಏಳಿನ್ನಿ ನಿಂಗೆ, ಆ ಖದೀಮನ್ನ ಮನಾಗೆ ಬಿಟುಗೊಳ್ಳಬ್ಯಾಡ ಅಂತ. ಮತ್ತೆ ತಂದು ತಂದು ಜಗಲೀಮ್ಯಾಗೆ ಕುಂಡ್ರಿಸಿಗೋಳ್ತಿ. ನನ್ನ ಮಾತು ಅಂದರೆ ನಿನಗೆ ಆಟು ತಾಕ್ಸಾರಾನೇ? . . . ."

"ಅಲ್ಲ ತಿಂಮಣ್ಣಾ, ನಾನೇನು ಕರೀತೀನ್ನೆ ಆಯಪ್ಪನ್ನ, ಬಾರಪ್ಪಾ ಅಂತ? ಅವನಾಗಿ ಬಂದ್ರೇನು ಮಾಡಾಕಿ ಆಯ್ತತ್ತೆ? ಕುಂಡ್ರಥೆನ್ನಿ, ಓಗ್ಥವ್ನೆ ಅವನೇನು ಮಾಡೋದ್ಯೆತಿ ನನಗೆ?"

"ಅವನೇನು ಮಾಡ್ತವ್ನೆ! ಏನು ತಿಳಿದೀ ಕಣೋ, ಅವನೂ ಅಂದ್ರೆ? ಪಕ್ಕಾ ಚಾಂಡಾಳ, ಖದೀಮ ಅವ್ನ ಒಳಗೇ, ಏನಾರೆ ಕಾಂಗ್ರೆಸ್ಸು ಮಾಡೋ ಮಗ ಅವನು. ಇದರ ಮ್ಯಾಗೆ ಏನಾದರೂ ಮಾಡಿಕೊ, ನಿನ್ನ ಇಷ್ಟ. ಇರೋ ವಿಸಯ ಏಳಿನ್ನಿ."

ಮಂಣಿನಿಂದ ಮಾನವರನ್ನು ಮಾಡಿ, ಮೂರು ಶತಮಾನಗಳಿಂದ ದಾಸ್ಯದಲ್ಲಿ ನರಳುತ್ತಿದ್ದ ರಾಷ್ಟ್ರವನ್ನು ಸ್ವತಂತ್ರವನ್ನಾಗಿ ಮಾಡಿ, ನಮಗೂ ಒಂದು ಧ್ವಜವನ್ನು ಇತ್ತು, ಆತ್ಮ ಗೌರವದ ಅರಿವನ್ನು ಇತ್ತು, ಬಾಳು ಸಾರ್ಥಕ ಮಾಡಿಕೊಟ್ಟ ಆ ಪೂಜ್ಯ ಬಾಪೂಜಿಯ ಕೈಕೂಸಾಗಿದ್ದ ಪವಿತ್ರ 'ಕಾಂಗ್ರೆಸ್' ಎಂಬ ಶಬ್ದಕ್ಕೆ ಈ ಅರ್ಥವೇ? ನಿಜವಾಗಿಯೂ ದುರ್ದೈವ —ಯಾರದು?

ಹಳೆಯ ಮೈಸೂರಿನಲ್ಲಿ ಮಗನು ತಂದೆಯನ್ನು ಅಣ್ಣ ಎಂದು ಸಂಬೋಧಿಸುವ ವಾಡಿಕೆ ಹೆಚ್ಚು ಇದೆ-ಹೊಸ ಮೈಸೂರಿನ ಹಲವು ಭಾಗಗಳಲ್ಲಿಯೂ ಇರಬಹುದು ಈ ದುರಭ್ಯಾಸ. ಲವ-ಕುಶರಿಗೆ ರಾಮ ಅಂಣನಾದರೆ, ಈ ಇಬ್ಬರು ಮಕ್ಕಳ ತಾಯಿಯಾದ ಸೀತಮ್ಮನಿಗೆ ಆ ರಾಮ ಏನಾಗಬೇಕಾಯಿತು? ಹಿರಿಮಗ! ತನ್ನತಾಯಿಯ ಗಂಡನೇನು ರಾಮ? ಅಯ್ಯೋ ತಾಯಿಗ್ಗಂಡ!

'ಸೀತಾರಾಂ' ಅಂದರೇನು, ಬಲ್ಲಿರಾ?

"ಎಷ್ಟು ನಿಜವೋ. ಎಷ್ಟು ಸುಳ್ಳೋ ಬಲ್ಲವ-ರಯ್ಯ? ಊರತುಂಬವಂತೂ ಅದೇ ಸುದ್ದಿ ಹರಡಿದೆ."

"ಯಾವ ಸುದ್ದಿ?"

"ಇನ್ನಾವ ಸುದ್ದಿ, ಅದೇ. ಆ ಪುಣ್ಯಾತ್ಮ ಇವ-ನನ್ನೂ ಚಹಾ ಪಾರ್ಟಿಗೆ ಕರೆದಿದ್ದನಂತೆ. ಇವನು ಅಲ್ಲಿಗೆ ಹೋಗಿದ್ದುದಂತೂ ನಿಜ. ಇವರೀರ್ವರ ಮಧ್ಯೆ ಹಳೆಯ ದ್ವೇಷವಿರುವದಂತೂ ಲೋಕಕ್ಕೇ ಗೊತ್ತು. ಚಹಾದಲ್ಲಿ ಒಂದೆರಡು ತೊಟ್ಟು ಅದೇನೋ ಬೆರೆಸಿ ಅವನೇ ಇವನನ್ನು ಸೀತಾರಾಂ ಮಾಡಿಬಿಟ್ಟ ಎಂಬ ಗುಜಗುಜ ಊರಲ್ಲೆಲ್ಲ ಹಬ್ಬಿಬಿಟ್ಟಿದೆ"

"ಅವನು ಅಂದೇ ಸತ್ತನೇನು?"

"ಅಂದೇ ಏನು ಬಂತು. ಆಸ್ಪತ್ರೆಗೆ ಸಾಗಿಸುವ ಒಳಗಾಗಿಯೇ ಸೀತಾರಾಂ ಆಗಿಬಿಟ್ಟಿದ್ದ ಅಂದರೆ"

ಈ ಅರ್ಥ ಹುಟ್ಟಿದೆ ಸೀತಾರಾಂ ಎಂಬ ಶಬ್ದಕ್ಕೆ ಅದಾವ ಮಹಾನುಭಾವನ ಸೃಷ್ಟಿಯೋ ಇದು; ಅವನನ್ನು ಹೆತ್ತ ತಾಯಿಯ ಹೊಟ್ಟೆ ತಣ್ಣಗಿರಲಿ, ಸಾಧ್ಯವಿದ್ದರೆ.

*     *     *

"ನಾನಿನ್ನೂ ಹಾಸಿಗೆಯಲ್ಲಿ ಇದ್ದೆ, ಸಾರ್. ಆಗಲೇ ಬಂದು ಗಂಟೇ ಬಿದ್ದ ಆ ಒಂಬತ್ತು."

"ಒಂಬತ್ತು! ಒಂಬತ್ತು ಅಂದರೆ ಯಾರಯ್ಯ? ಅದು ಒಬ್ಬ ಮನುಷ್ಯನ ಹೆಸರೇ?"

"ನೀವು ಈಗ ಹೇಳಿದಿರಲ್ಲ, ನಿನ್ನೆ ನಿಮ್ಮ ಮನೆಗೂ ಬಂದಿದ್ದನೆಂದು."

"ಯಾರು ಚನ್ನಬಸಪ್ಪನೇ? ಅವನಿಗೆ ನಾವು ಮಹಾ ಭೈರಗಿ ಎನ್ನುತ್ತೇವೆ. ಒಂಬತ್ತು ಎಂದರೆ?"

"ಒಂಬತ್ತರ ವಿಷಯ ತಮಗೆ ಗೊತ್ತಿಲ್ಲವೆಂದು ಕಾಣುತ್ತದೆ. ಒಂದು ಬಾರಿ ಅದು ಗಂಟು ಬಿದ್ದರೆ ಮುಗಿಯಿತು, ಅದು ಬಿಡುವುದೇ ಇಲ್ಲ ಈಗ ನೋಡಿ ಸಾರ್, ಒಂಬತ್ತನ್ನು ಯಾವ ಸಂಖ್ಯೆಯಿಂದಲಾದರೂ ಗುಣಿಸಿನೋಡಿ. ಬಂದ ಗುಣಲಬ್ಧದ ಅಂಕೆಗಳನ್ನು ಕೂಡಿಸಿ; ಮೊತ್ತ ಮತ್ತೆ ಒಂಬತ್ತೆ.

೯ × ೩ = ೨೭ ; ೨ + ೭ = ೯
೯ × ೯ = ೮೧ ; ೮ + ೧ = ೯
೯ × ೨೦ = ೧೮೦ ; ೧ + ೮ + ೦ = ೯
೯ × ೧೦೨ = ೯೧೮ ; ೯ + ೧ + ೮ = ೧೮ ;
೧ + ೮ = ೯

ಅಂತೂ ಒಂಬತ್ತು ಎಂಬ ಶಬ್ದಕ್ಕೆ ನಮ್ಮ ಚೆನ್ನಬಸಪ್ಪನಂತಹ ಮಹಾಭೈರಗಿ ಎಂಬ ಅರ್ಥವು ಬಂದಿದೆ. ಸಕಾರಣವಾಗಿದೆಯಲ್ಲವೆ?

ಕೆಲವು ಶಬ್ದಗಳಿಗೆ ಪ್ರಾದೇಶಿಕವಾಗಿ ಬೇರೆ ಬೇರೆ ವಿಶಿಷ್ಟ ಅರ್ಥಗಳಿರುವುದೂ ಉಂಟು. ತಮಿಳುನಾಡಿನಲ್ಲಿ ಮಾತ್ರವೇ 'ಕಾಕಾಪುಡಿ' ಎಂಬ ಮಾತು ಪ್ರಯೋಗದಲ್ಲಿದೆ— ಅಲ್ಲಿ ಅದು ಹೆಚ್ಚು ಇದೆ ಏನೋ ಯಾರು ಬಲ್ಲರು?

"ಅವನಿಗೆ ಮಾತ್ರವೇ ಸಾಧ್ಯ ಸಾರ್, ಅದು. ನಮ್ಮಂತಹರಿಗೆ ಸ್ವಪ್ನದಲ್ಲಿಯೂ ಆಗದು."

"ಅವನಿಗೆ ಸಾಧ್ಯವಾದರೆ ನಿನಗೇಕಯ್ಯಾ ಸಾಧ್ಯವಿಲ್ಲ? ನೀನೂ ಶ್ರಮಪಟ್ಟು ದುಡಿ. ನಿನಗೂ ಪ್ರಮೋಶನ್ ಬರುತ್ತದೆ"



"ಆ ಕಾಲ ಹೋಯಿತು, ಸಾರ್. ನಿಮ್ಮ ದುಡಿತ, ನಿಮ್ಮ ಶ್ರದ್ಧೆ ಯಾರಿಗೆ ಬೇಕು? ಈಗ ಬೇಕಾದುದು ಒಂದೇ— ಕಾಕಾಪುಡಿ"

ಈ 'ಕಾಕಾಪುಡಿ' ಎಂಬ ತಮಿಳು ಶಬ್ದವನ್ನು ಕನ್ನಡದಲ್ಲಿ ಹೇಗೆ ಭಾಷಾಂತರಿಸಿದರೂ ತೃಪ್ತಿಯೇ ಆಗುವುದಿಲ್ಲ. ಮರ್ಜಿ ಹಿಡಿಯುವದು ಎನ್ನಬೇಕು–ಮರ್ಜಿಯೂ ಕನ್ನಡವಲ್ಲ–ಅದೂ ಸಪ್ಪೆಯೇ. ಹಲ್ಲು ಕಿರಿಯುವುದು, ಮುಂಗೈ ತಿಕ್ಕಿಕೊಳ್ಳುವುದು, ಅವರ ಹಿಂದೆಯೇ ಸುತ್ತಾಡುವದು, ಅವರು ನಕ್ಕಾಗ ತಾನೂ ನಕ್ಕು, ಅವರು ಅತ್ತಾಗ ತಾನೂ ಅತ್ತು, ಆನೆ ಇರಿಬಿಯಕ್ಕಿಂತ ಬಹು ಚಿಕ್ಕದು ಎಂದು ಅವರು ಅಂದರೆ, ಅಹುದು ಸಾರ್ ವಿಪರೀತ ಚಿಕ್ಕದು ಎಂದು, ಈ ಬೆಳದಿಂಗಳು ಚೆನ್ನಾಗಿದೆ ಎಂದು ಅವರು ಮಟ ಮಟ ಮಧ್ಯಾಹ್ನದಲ್ಲಿ ಹೇಳಿದರೆ, ಅಹುದು ಸಾರ್ ಹಿಟ್ಟು ಚೆಲ್ಲಿದ ಹಾಗಿದೆ ಎಂದು ತಾನೂ ಅಂದು. ಇತ್ಯಾದಿ ಇತ್ಯಾದಿಗಳನ್ನು ಕಾರ್ಯಸಾಧನೆಗಾಗಿ ಮಾಡುವುದಕ್ಕೆ 'ಕಾಕಾಪುಡಿ' ಎನ್ನುವ ಅರ್ಥ ಬಂದಿದೆ. ಕನ್ನಡದಲ್ಲಿ ಈ ಮಹಾ ತಪಸ್ಸಿಗೆ ಒಂದೇ ಒಂದು ಶಬ್ದವಿಲ್ಲ– ಕನ್ನಡಿಗರಲ್ಲಿ ಈ 'ಕಾಕಾಪುಡಿ'ಯೇ ಕಡಿಮೆ ಎಂದು ಕಾಣುತ್ತದೆ. ಇದರ ಶಬ್ದಾರ್ಥವಂತೂ ಬಹು ಸ್ವಾರಸ್ಯವಾಗಿದೆ.

ಕಾಕಾ ಅಂದರೆ ಕಾಗೆ, ಪುಡಿ ಎಂದರೆ ಹಿಡಿ. ಕಾಗೆ ಹಿಡಿಯುವದು ಎಂದರೇನು? ಎಂದಾದರೂ ತಾವು (ಕ್ಷಮಿಸಿ ದಯವಿಟ್ಟು) ಕಾಗೆ ಹಿಡಿದಿದ್ದೀರಾ? ಇಲ್ಲವೆ? ಯಾರಾದರೂ ಹಿಡಿಯುವುದನ್ನು ನೋಡಿದ್ದೀರಾ? ಅದೂ ಇಲ್ಲವೆ? ಹಾಗಾದರೆ ಈ ಮಾತಿನ ಅರ್ಥವಾಗುವುದು ಬಹು ಕಷ್ಟ.

ಕಾಲಿನ ಸದ್ದು ಆಗದಂತೆ, ಮೆಲ್ಲನೆ ಹೆಜ್ಜೆಯ ಮೇಲೆ ಹೆಜ್ಜೆ ಇಕ್ಕುತ್ತ, ಹಾಗೆಯೆ ಅದನ್ನು ಹಿಂಬಾಲಿಸಬೇಕು. ಅದು ಥಟ್ಟನೆ ಹಾರಿದಂತೆ ಮಾಡಿ, ಕುಣಿಯುತ್ತ, ಗೋಣು ಹೊರಳಿಸಿ ಸೋಗು ಮಾಡುತ್ತ ಮುಂದೆ ಹೋಗಿ ಮತ್ತೆ ಕೂಡುತ್ತದೆ. ಅದನ್ನು ಪುನಃ ಬೆನ್ನು ಹತ್ತಬೇಕು, ಹಾಗೆಯೆ. ಈ ಮಹಾ ಕಾರ್ಯವೇನು ಅಷ್ಟು ಸುಲಭವೆ? ಎಲ್ಲರಿಗೂ ಸಾಧ್ಯವೆ? ಶ್ರದ್ಧೆಯಿಂದ, ದಕ್ಷತೆಯಿಂದ, ಶ್ರಮವಹಿಸಿ ದುಡಿಯಲಾರದವನಿಗೂ ದೊರೆಯಲಾರದ ಪ್ರಮೋಶನ್ (ಬಡತಿ), ತನ್ನ ಮೇಲಧಿಕಾರಿಗಳಿಗೆ 'ಕಾಕಾಪುಡಿ' ಮಾಡಿದರೆ ದೊರೆಯುತ್ತದೆ ಎಂದು ಅವನ ಅರ್ಥ. ಇದು ಕಾಕಾಪುಡಿ!

ಮಾತಿಗೂ ಅರ್ಥಕ್ಕೂ ಸಂಬಂಧವು ಅದೆಷ್ಟೂ ಇರದಿರುವುದು ಬೈಗಳಲ್ಲಿ. ಬೈಯುವಾಗ ಶಬ್ದಾರ್ಥ ಮಾಡಿಕೊಳ್ಳುತ್ತ ಕೂಡಲು ಯಾರಿಗೆ ತಾನೆ ಸಾಧ್ಯ?

"ಹತ್ತು ಗಂಟೆಯಾದರೂ ಇನ್ನೂ ನಿದ್ರೆ, ಏನೋ, ತಿಂಮಾ. ರಾತ್ರಿ ಉಂಡ ಕೂಡಲೆ ಎಂಟುಗಂಟೆಗೇ ಮಲಗಿದೆಯಲ್ಲವೋ. ಇದೇನು ನಿದ್ರೆಯೋ, ಕುಂಭಕರ್ಣನ ಮಗ ನೀನು."

ತಾಯಿ ಒಟಗುಟ್ಟಿದಳು.

"ತಿಂಮನ ತಂದೆ ಕಣ್ಣು ಕಿಸಿದ, ಕೋಪದಿಂದ.

"ಏನೇ, ನನ್ನನ್ನು ಕುಂಭಕರ್ಣ ಎಂದು ಬೈಯುತ್ತೀಯಾ? ಇಡೀ ರಾತ್ರಿಯಲ್ಲಿ ಮೂರು ಗಂಟೆ ಸಹ ನಾನು ಮಲಗಿಲ್ಲ ನಾನು. . . ."

ತಿಂಮನ ತಂದೆಗೆ ಬುದ್ಧಿ ಇದೆ ಎನ್ನಬೇಕೆ?

ಹಾಗಾದರೆ ಕುಂಭಕರ್ಣನ ಮಗನಾರು? ಯಾರಿಗೆ ಗೊತ್ತು, ಯಾವನೋ ಲಂಬಕರ್ಣ.

ನನ್ನ "ಏಕೋದರರು" ಎಂಬೊಂದು ರೇಡಿಯೋ ಪ್ರಹಸನ ಹೀಗೆ ಆರಂಭವಾಗುತ್ತದೆ. ತಮ್ಮ ಅಣ್ಣನನ್ನು ಬೈಯುತ್ತಾನೆ.

"ನನ್ನ ತಾಯಿಯನ್ನು ಕತ್ತೆಯೆಂದು ಬಯ್ಯುತ್ತೀಯಾ, ಕತ್ತೇಮಗನೆ.."

ಇಂತಹ ಸುಪುತ್ರರಿಗೆ ಜನ್ಮವಿತ್ತ ತಾಯಿಯನ್ನು ಕತ್ತೆ ಎಂದರೆ ಯಾರನ್ನು ಬೈದಂತಾಯಿತು—ಆ ತಾಯಿಯನ್ನೋ, ಕತ್ತೆಯನ್ನೋ!

ಬೈಯುವ ಮಾತಿಗೆಲ್ಲ ಶಬ್ದಾರ್ಥ ಹುಡುಕುವದುಂಟೆ? ಜಗತ್ತಿನಲ್ಲಿರುವ ಎಲ್ಲ ಬೈಗಳಿಗೂ ಇರುವುದು ಒಂದೇ ಒಂದು ಅರ್ಥ ಬೈ = ಬೈ!

ತಿಂಮನ ಪರಿಚಿತರಲ್ಲಿ ಒಬ್ಬ ಸುಸಂಸ್ಕೃತ ಸತ್ಪುರುಷರಿದ್ದರು. ಕಾಶಿಯಲ್ಲಿ ವಿದ್ಯಾಭ್ಯಾಸ ಮಾಡಿದ್ದ ಆ ಶಾಸ್ತ್ರಿಗಳು ಜಾಣರೂ ಅಹುದು; ಆದರೆ ಬೈಗಳೆಲ್ಲ ಶಬ್ದಾರ್ಥವನ್ನು ಮಾಡಿಕೊಂಡು ತುಂಬ ಪೇಚಿನಲ್ಲಿ ಬೀಳುತ್ತಿದ್ದರು. ಅದು ಅವರ ಸ್ವಭಾವ. ಕೊಂಚ ಶೀಘ್ರ ಕೋಪಿಗಳು ಕೂಡ ಅಹುದು ಅವರು. ದಿನಕ್ಕೆ ಇಪ್ಪತ್ತು ಸಲ ಮಡದಿಯ ಮೇಲೆ ರೇಗಿಕೊಳ್ಳುತ್ತಿದ್ದರು. ಆದರೆ ಏನೆಂದು ಬೈಯುವದು? ನಿಜವಾದ ಧರ್ಮಸಂಕಟ. ಬೈಯದಲೆಯೆ ಕುಳಿತರೆ ಕೋಪವು ಶಮನವಾಗುವದೆಂತು? ಅಹುದು ಬೈಯಲೇ ಬೇಕು— ಆದರೆ ಏನೆಂದು?

ಮತ್ತೆ ಅದೇ, ಕತ್ತೆ ಎನ್ನಬೇಕು. ಆಗ ತಾವು? ಬರೀ ಪಶುಪತಿಯಷ್ಟೇ ಅಲ್ಲ— ಗಾರ್ದಭಪತಿ! ಬೇರಿನ್ನೇನು ಇದೆ? ಕೀಳುಮಟ್ಟದವರಂತೆ ರಂಡೆ, ಮುಂಡೆ ಎನ್ನಬೇಕು. ಆಗ ತಾವೇ, ಥಂ.

"ನಿನ್ನ ಮುಖಕ್ಕೆ ಬೆಂಕಿ ಇಕ್ಕ"

ಮರುದಿನದಿಂದ ತಾವೇ ಅಡುಗೆ ಒಲೆಯ ಮುಂದೆ ಬಗ್ಗಬೇಕಾಗುತ್ತದೆ. ಇನ್ನೊಂದು ಲಗ್ನವಾಗುವ ವಯಸ್ಸೂ ದಾಟಿದನಂತರ ಇದ್ದೊಬ್ಬೇ ಹೆಂಡತಿಯನ್ನೂ ಕಳೆದುಕೊಂಡು ಮಾಡುವುದೇನಿದೆ? ಇದಾವುದೂ ಬೇಡವೇ ಬೇಡ ಎಂದು ಬರೀ 'ನಿನ್ನ ಮುಖ, ನಿನ್ನ ಮುಖ' ಎಂದಿಷ್ಟೆ ಅನ್ನುತ್ತ ಕೂಡುತ್ತಿದ್ದರು, ಕೋಪವು ಇಳಿಯುವವರೆಗೂ.

ಮಾಮೂಲು ಮಾತುಗಳ ಟೀಕಲಾಟವೇ ಹೀಗಿರುವಾಗ ಇನ್ನು ಸಂಕೇತಶಬ್ದಗಳ (Code-words) ಸ್ವಾರಸ್ಯ ಹೇಗಿರಬೇಡ? ಇದರ ಮಾದರಿಯನ್ನು ನೋಡೋಣ.

"ಬಹು ದಿನಗಳಿಂದ ಕರೆಯುತ್ತಲಿರುವಿ, ಶಾರ್ಲೀ! ನಾಳೆ ಹೇಗೂ ರಜೆ; ನಿನ್ನ ಊರಿಗೆ ಬರುತ್ತೇನೆ. ಏನು ಅಡಿಗೆ ಮಾಡಿಸುತ್ತಿ, ಹೇಳು."

"ತಾವು ಏನು ಅಪ್ಪಣೆ ಕೊಡಿಸಿದರೆ ಅದು, ಸ್ವಾಮಿ. ಆದರೆ ಸೈಕಲ್ ಮಾತ್ರ ಬಿಟ್ಟು—ಅದು ಒಂದು ನಮ್ಮಲ್ಲಿ ದೊರೆಯುವದಿಲ್ಲ."

"ಅರೆ! ನಿನ್ನ ಮನೆಯಲ್ಲಿಯೇ ಇದ್ದುವಲ್ಲ?"

"ಆ ಕತೆ ಬೇರೆ ಬಿಡಿ. ಒಂದಕ್ಕೆ ರೋಗ ಬಂದರೆ ಮುಗಿಯಿತು; ಎಲ್ಲವೂ ಪಿನ್ಸಲ್. ಒಂದೂ ಉಳಿಯದಂತೆ ಸತ್ತುಹೋದವು."

ಸೈಕಲ್ ಸಾಯುವುದೆಂದರೇನು? ಈ ಸಂಕೇತ ಭಾಷೆ ಅರಿಯದವರು ಕಕ್ಕಾಬಿಕ್ಕಿಯಾಗುತ್ತಾರೆ.

"ಮೋಟಾರ್ ಮಾತ್ರ ಅನುಗಾಲವೂ ರೆಡಿ, ಸ್ವಾಮೀ."

"ಮೋಟಾರ್ ಎಂದು ಹೇಳಿ, ಮತ್ತೆ ಲಾರಿ ತರಿಸಬೇಡಯ್ಯ."

"ಛೆ! ಉಂಟೆ ಎಲ್ಲಿಯಾದರೂ? ನಮ್ಮ ಮನೆಯ ಕಂಪೌಂಡಿನಲ್ಲಿಯ ಲಾರಿ ಬರುವಂತಿಲ್ಲವಲ್ಲ?"

"ಅಲ್ಲವಯ್ಯಾ, ಇಷ್ಟು ಊರುಗಳನ್ನು ಸುತ್ತುತ್ತಿ, ಒಂದು ಹಡಗವನ್ನು ತರಲಾರೆಯಾ?"

"ನಿಮ್ಮದು ಚೆನ್ನಾಗಿದೆ, ಸ್ವಾಮೀ. ಅದೇನೊ ಹೇಳುತ್ತಾರಲ್ಲ ಹಾಗಿವೆ ನಿಮ್ಮ ಮಾತು, ಕುಡಿಯಲು ನೀರು ಸಿಗುವಂತಿಲ್ಲ ಸುತ್ತುಮುತ್ತಲೂ ಇನ್ನು ಹಡಗ ಎಲ್ಲಿಂದ ಬಂದೀತು, ಅಲ್ಲಿ ಸ್ವಾಮೀ, ನಿಮಗೆ ಏರೋಪ್ಲೇನ್ ಇಷ್ಟವೆ?"

ಹುಟ್ಟಿನಿಂದಲೂ ಜುಟ್ಟಿನಿಂದಲೂ ಸಸ್ಯಾಹಾರಿಗಳಾದರೂ ಸತ್ಸಹವಾಸದಿಂದಲೋ ಸ್ವಂತ ಅಭಿರುಚಿಯಿಂದಲೋ ಮಾಂಸಾಹಾರಿಗಳಾದ ಹಲ ಕೆಲವು ಬ್ರಾಹ್ಮಣ, ವೀರಶೈವ ಮತ್ತಿತರ ಪುಣ್ಯಾತ್ಮರು ತಮ್ಮ ಅನುಕೂಲಕ್ಕಾಗಿ ಸೃಷ್ಟಿಸಿದ ಸಂಕೇತ ಭಾಷೆ ಇದು. ಬಲ್ಲವನೇ ಬಲ್ಲ ಈ ಮರಕೋಶವನ್ನು!

ಸೈಕಲ್ಲು, ಮೋಟಾರು, ಲಾರಿ, ಹಡಗ, ಏರೋಪ್ಲೇನು ಎಂದರೆ ಕ್ರಮವಾಗಿ ಕೋಳಿ, ಕುರಿ, ದನ, ಮೀನು, ಹಕ್ಕಿ ಎಂದರ್ಥ.

ಪಾನಪ್ರತಿಬಂಧ ಕಾಯದೆ ಇರುವಲ್ಲಿಯೂ ಇದರಂತೆಯೇ ಒಂದು ಭಾಷ್ಯ ಇದೆ ಪ್ರೈವೇಟ್ ಕುಡುಕರ ಕೋಶದಲ್ಲಿ.

ವಿಷ್ಣು, ಬ್ರಾಹ್ಮಣ, ಮಹಾಬ್ರಾಹ್ಮಣ, ಜನಾರ್ದನ, ವಿನಾಯಕ, ಬೃಹಸ್ಪತಿ, ರಾಮಂಣ. ಇನ್ನೂ ಒಂದಿದೆ ಗಾಂಧಿ—ಇದನ್ನು ಘಾಂದಿ ಎಂದು ಉಚ್ಚರಿಸುವವರೇ ಹೆಚ್ಚು. ಆ ದೇಶೀ ಭಕ್ತರುಗಳಲ್ಲಿ. ವ್ಹಿಸ್ಕಿ, ಬ್ರಾಂಡಿ, ದೊಡ್ಡ ಬಾಟಲ್ ಬ್ರಾಂಡಿ, ಜಿನ್ನು, ವೈನ್, ಬೀರು, ರಂ ಮತ್ತು ಭಟ್ಟಿ ಸರಾಯಿ ಎಂದು ಇದ್ದಕ್ಕಿದ್ದಂತೆ ಸ್ಪಷ್ಟವಾಗಿ ಮಾತನಾಡಿದರೆ ಅಧಿಕಾರಿಗಳು ಬಿಟ್ಟಾರೆಯೆ—ಹಿಡಿದೇ ಬಿಡುತ್ತಾರೆ, ನಮಗೂ ಕೊಂಚ ಕೊಡಿ ಎಂದು?

* * *

ಶಬ್ದಕ್ಕೂ ಅರ್ಥಕ್ಕೂ ಇರುವ ಈ ಸಂಬಂಧದಲ್ಲಿ ಇನ್ನು ಶಬ್ದದ ಬರೆವಣಿಗೆಯಲ್ಲಿ ತಪ್ಪುಗಳಾದರೆ ಕೇಳುವದೇನು?

ಒಂದು ವೃತ್ತಪತ್ರಿಕೆಯಲ್ಲಿ ಈ ಜಾಹೀರಾತು.

"ನಿಮಗೆ ಸುಖ ಮತ್ತು ಶಾಂತಿ ಬೇಕೋ? ಹಾಗಾದರೆ ಕಾಂಗ್ರೆಸ್ ಬಿಡಿ"

ಏನಿರಬಹುದು ಇದರ ಅರ್ಥ ಎಂದು ಅರ್ಧ ಗಂಟೆ ಯೋಚಿಸಿದೆ. ಸುಖ ಮತ್ತು ಶಾಂತಿ ಇಂದು ದೊರೆಯುತ್ತಿರುವುದೇ ಕಾಂಗ್ರೆಸ್ಸಿನಿಂದ, ಅನೇಕರಿಗೆ. ಕಾಂಗ್ರೆಸ್ ಬಿಡಿ ಎಂದೇಕೆ ಹೇಳುತ್ತಿದೆ ಈ ಜಾಹೀರಾತು? ಒಂದೇ ಒಂದು ದೀರ್ಘ ಬಿಟ್ಟು ಹೋದುದದರಿಂದ ಈ ಪ್ರಮಾದ— ಕಾಂಗ್ರೆಸ್ ಬಿಡಿ ಅಲ್ಲ ಅದು, ಕಾಂಗ್ರೆಸ್ ಬೀಡಿ!

ಅಷ್ಟೇಕೆ? ಮೊನ್ನೆ ಮೊನ್ನೆ ಒಬ್ಬ ಮಹಾನುಭಾವರು ಚುನಾವಣೆಯಲ್ಲಿ ಸ್ಪರ್ಧಿಸಿ, ಹುರಿಯಾಳಾಗಿ ನಿಂತು ಒಂದು ಮಾದರಿಯ ಕರಪತ್ರವನ್ನು ಹಂಚಿದರು. ಅದರಲ್ಲಿಯ ಕಡೆಯ ವಾಕ್ಯವು ಇಷ್ಟೇ— "ಪವಿತ್ರವಾದ ನಿಮ್ಮ ಎರಡೂ ಮಗಳನ್ನು ನನಗೇ ಕೊಡಿ; ನನ್ನದು ಕಾಡುಕೋಣದ ಗುರುತು."

ಎಷ್ಟು ಸಂತೋಷದಿಂದ ಕೊಡಬೇಕು ಮಗಳನ್ನು, ಇವನ ಗುರುತನ್ನು ಗುರುತಿಸಿದ ಮೇಲಂತು!

'ಮತಗಳನ್ನು' ಎಂಬಲ್ಲಿಯ 'ತ' ಇಲ್ಲದಾಗಿದೆ.

ನಮ್ಮೂರಲ್ಲಿಯ ಪೇಟೆಯಲ್ಲಿ ಒಂದು ಅಂಗಡಿಯ ಮುಂದೆ ಹಳೆಯದೊಂದು ಬೋರ್ಡು ನೇತಾಡುತ್ತಿದ್ದಿತು; ದೊಡ್ಡ ಅಕ್ಷರಗಳು.

"ಖಾದೀ ಭಂಡರು"

ಕನ್ನಡ ಬಾರದ ತೆಲುಗು ಮನುಷ್ಯ ಬರೆದಿದ್ದನಂತೆ 'ಖಾದೀ ಭಾಂಡಾರ'ದ ಬೋರ್ಡನ್ನು!

ಇಷ್ಟು ಮಾತು ಆಯಿತು, ಅರ್ಥ? ದೇವನೇ ಬಲ್ಲ ಎನ್ನುತ್ತೇವೆ. ಅವನಾದರೂ ಬಲ್ಲನೋ ಇಲ್ಲವೋ ಯಾರಿಗೆ ಗೊತ್ತು? ಅಂತೂ ಮಾತಿಗೆ ಮಾತು— ಅರ್ಥಕ್ಕೆ ಅರ್ಥ, ಅನರ್ಥ!

# ದಿವಾಳಿ ಬಂತು!



ಲೇಖಕರು : ಶ್ರೀ ಜಿ. ಜಿ. ಹೆಗಡೆ

ದಿವಾಳಿ ಮಾಡುವ ದೀಪಾವಳಿ ಬಂದಾಗ ಎಲ್ಲರಿಗೂ ಅದರಲ್ಲೂ ಹುಡುಗರು, ಹೆಣ್ಣುಮಕ್ಕಳಿಗೂ ಇನ್ನಿಲ್ಲದ ಹಿಗ್ಗು. ಆದರೆ ಯಜಮಾನನ ಗತಿ ? ಅದೇ ಈ ನಾಟಕದ ಕಥಾವಸ್ತು.

[ಬಾಲಕೃಷ್ಣರಾಯರ ಮನೆ. ಅವರ ಮಕ್ಕಳು ೧೨ ವರ್ಷದ ಕಮಲು, ೧೦ ವರ್ಷದ ಶಂಕರ ಜೋಡಿಯಾಗಿ ಹಾಡುತ್ತಿದ್ದಾರೆ. ಒಬ್ಬರೊಬ್ಬರ ಸ್ವರಕ್ಕೆ ತಾಳಮೇಳವಿರುವದಿಲ್ಲ. ನಡುವೆ ಕಮಲುವೊಮ್ಮೆ "ಏ ಸರಿ ಹೇಳೋ" ಎನ್ನುತ್ತಾಳೆ. ಒಂದೆರಡು ನಿಮಿಷದ ನಂತರ "ನೀ ಸರಿ ಹೇಳಲಾ" ಎಂದು ಶಂಕರ ಅನ್ನುತ್ತಾನೆ.]

**ಕಮಲು:–** ಏ ಶಂಕರ್ಯಾ, ಹಾಂಗ ಕ್ವಾಣನ್ಹಾಂಗ ಒದರಬ್ಯಾಡೋ. ಸರಿಯಾಗಿ ನಾ ಹೇಳಿದಾಂಗs ಛಂದಾಗಿ ಹೇಳು, ಹುಂ.

ದಿವಾಳಿ ದಿವಾಳಿ ಬಂತು । ಕುಣಿಯುತ
ನಲಿಯುತ ಹಾಡುತ ಬಂತು ॥

**ಶಂಕರ:–** ನಾ ಹೇಳೂದಿಲ್ಲ ಹೋಗು. ನೀ ಯಾರು ನನಗ ಕಲಸೂವಾಕಿ? ನಮ್ಮ ಕ್ಲಾಸಿನಾಗ ನಾನೇ ಛಂದ ಪದಾ ಹೇಳ್ತೇನಿ ಅಂತ ನಮ್ಮ ಮಾಸ್ತರ ಹೇಳ್ಯಾರ.

**ಕಮಲು:–** ನಿನ್ನ ಮಾಸ್ತರ ಏನ ಹೇಳ್ತಾರ ಬಿಡು ? ಅವರಿಗೆ ಪದಾನೇ ಕಲಿಸಲಿಕ್ಕೆ ಬರೂದಿಲ್ಲ ಅಂತ ನಮ್ಮ ಮಾಸ್ತರರು ಹೇಳತಿದ್ದರು.

**ಶಂಕರ :–** ಹೂಂ. ಗೊತ್ತದ ಬಿಡು. ನಾಯೇನ ನೀ ಹೇಳಿಕೊಟ್ಟಾಂಗ ಅನ್ನಾವನ ಅಲ್ಲ. ನಾ ಈಗ ಆಡಲಿಕ್ಕೆ ಹೋಗ್ತೇನಿ.

**ಕಮಲು:–** ಹಾಂಗ ಮಾಡಬ್ಯಾಡೊ ಶಂಕರಾ. ಈ ಪದಾ ಛಂದಾಗಿ ಕಲ್ತು ಅಪ್ಪನ ಮುಂದೆ ಹಾಡೋಣು. "ವ್ಹಾ ! ವ್ಹಾ ! ಏನ ಛೇಷಾಗಿ ಅಂತೀರಿ" ಅಂತ ಅಪ್ಪ ಅಂದೇ ಅಂತಾನ. ಆಗ ಇಬ್ಬರೂ ಕೂಡಿ ಸಾಯಕಲ್ ತಂದ ಕೊಡಪಾ ಅಂತ ಹಟ ಹಿಡಿಯೋಣು.

**ಶಂಕರ:–** ಖರೇ.

**ಕಮಲು:–** ಖರೇನೋ. ಹುಂ. ಹೇಳು ಹಂಗಾದರ.

ದಿವಾಳಿ ದಿವಾಳಿ ಬಂತು । ಕುಣಿಯುತ
ನಲಿಯುತ ಹಾಡುತ ಬಂತು ॥

(ಶಂಕರ ಹೇಳತೊಡಗುವನು. ಅವನನ್ನು ಕಮಲು ಒಂದೆರಡು ಸಲ ತಿದ್ದುವಳು. ನಂತರ ಇಬ್ಬರೂ ಕೂಡಿ ಗಟ್ಟಿಯಾಗಿ ಹಾಡುತ್ತ ಕುಣಿಯ ತೊಡಗುವರು. ಅವರ ತಂದೆ ಬಾಲಕೃಷ್ಣರಾಯ ಬರುವನು.)

**ಬಾಲ :–** ಏ ಏ ಏನ್ರೋ ಅದು ? ಯಾಕ ಥಾಂದಲೆ ಹಾಕಲಿಕ್ಕ ಹತ್ತೀರಿ ?

**ಶಂಕರ :–** (ಹಾಡುವನು)

ದಿವಾಳಿ ದಿವಾಳಿ ಬಂತು । ಕುಣಿಯುತ
ನಲಿಯುತ ಹಾಡುತ ಬಂತು ॥

**ಬಾಲ:–** ತಡಿಯೋ ಮಾರಾಯಾ. ಹೀಂಗ ಬೇಸೂರದಾಗ ಹಾಡಿದರ ಕುಣೀತ ಬರೂದರ ಬದಲು ದಿವಾಳಿ ಅತಕೋತ ಬಂದೀತು.

**ಕಮಲು :–** ಅಂವಗ ಹಾಡಲಿಕ್ಕೇ ಬರೂದಿಲ್ಲಪ್ಪಾ.

**ಶಂಕರ :–** ನೋಡಪಾ ಈಕೀ.

**ಬಾಲ :–** ಇರಲಿ ಬಿಡ್ರಿ. ಶಂಕರಾ, ಒಳಗೇನಾರ ಚಾ ತಯಾರಾಗ್ಯೇದೇನು ನೋಡಿ ಬಾ. ಆಗಿರದಿದ್ದರ ಲಗೂನ ಮಾಡಿಕೊಂಡಬಾ ಅಂತ ನಿಮ್ಮವ್ವಗ ಹೇಳಿಬಾ. ನಾ ಹೇಳಿಕೊಡ್ತೇನಿ ಸರಿಯಾಗಿ. ಇಬ್ಬರೂ ಕಲ್ತೀರಂತೆ. ಈ ಸಲ ದೀಪಾವಳಿ ಹಬ್ಬದಾಗ ನಮ್ಮ ಆಫೀಸಿನ ಮಂದಿ ಎಲ್ಲ ವನಭೋಜನಕ್ಕೆ ಹೋಗೋಣ ಅಂದಾರ. ನಿಮ್ಮನ್ನೂ ಕರಕೊಂಡು ಹೋಗ್ತೇನಿ. ಅಲ್ಲಿ ಈ ಪದಾ ಛಂದಾಗಿ ಅಂದೀರಂತೆ. ವ್ಹಾ! ಭೇಷ್ ಇದ್ದಾರೆ ಹುಡುಗ್ರು ಅಂತ ನಿಮಗೆ ಶಾಬ್ಬಾಸಕಿ ಬರ್‍ತದ. ಹುಶಾರ ಹುಡುಗರನ್ನ ಹಡದೀರಿ ಬಿಡ್ರಿ ಅಂತ ನನಗೂ ಶಾಬ್ಬಾಸಕಿ ಬರ್‍ತದ. । (ಶಂಕರ ಒಳಗೆ ಹೋಗುವನು)

**ಕಮಲು :–** ವನಭೋಜನ ಅಂದ್ರ ಏನಪಾ ?

**ಬಾಲ :–** ಅಂದರೆ, ವನ ಅಂದರೆ ಅಡವಿ, ಭೋಜನ ಅಂದ್ರ ಊಟಾ.

**ಕಮಲು :–** ಅಂದರ ಅಡವಿಗೆ ಹೋಗಿ ಊಟಾ ಮಾಡೂದೇನು ? ಶ್ಯಾ, ನಾ ಒಲ್ಲೆ.

**ಬಾಲ :–** ಹುಚ್ಚೀ, ವನ ಅಂದ್ರೆ ಅಡವಿ ಅಂತ ಅರ್ಥ ಇದ್ದರೂ ಊಟಕ್ಕೆ ಹೋಗೋದೂ ಅಡವಿಗಲ್ಲಾ. ಯಾವದಾದರೂ ಯಾರದಾದರೂ ತೋಟಕ್ಕೆ. ತಿಳೀತೇನು ?

**ಶಂಕರ :–** ನೀರಿಟ್ಟಾಳಂತ, ಈಗ ಮಾಡಿ ಕೊಡ್ತಾಳಂತ.

**ಬಾಲ :–** ಹುಂ, ಈಗ ಅನ್ರಿ. "ದಿವಾಳಿ ದಿವಾಳಿ ದಿವಾಳಿ . . . . ಮುಂದೇನು ?

**ಶಂಕರ :–** ದಿವಾಳಿ ದಿವಾಳಿ ದಿವಾಳಿ ಅಂತ ಮೂರು ಸಲ ಅಲ್ಲಪ್ಪಾ.

ದಿವಾಳಿ ದಿವಾಳಿ ಬಂತು । ಕುಣಿಯುತ
ನಲಿಯುತ ಹಾಡುತ ಬಂತು ॥

**ಬಾಲ :–** ಹಾಂ. ಅನ್ರಿ,

ದಿವಾಳಿ ದಿವಾಳಿ ಬಂತು । ಕುಣಿಯುತ
ನಲಿಯುತ ಹಾಡುತ ಬಂತು ॥

**ರಾಧಾಬಾಯಿ :–** (ಬಂದು) ತಗೀರಿ. ನೀವೂ ಸಣ್ಣ ಮಕ್ಕಳ್ಹಾಂಗ ಆಗಿಬಿಟ್ರೇನು !

**ಬಾಲ :–** ಹೌದು. ದೊಡ್ಡವರಾಗಿ ಜವಾಬ್ದಾರಿ ಹೊರೂದು ಯಾವಾಗ್ಲೂ ಇದ್ದದ್ದೇ. ಬ್ಯಾಡಾ ಅಂದ್ರೂ ಬಿಡೂಹಾಂಗಿಲ್ಲ. ಈ ಸಲ ದೀಪಾವಳಿ ಹಬ್ಬದಾಗ ಎಲ್ಲಾರೂ ಕೂಡಿ ಗೆರಸಪ್ಪಾ ಜೋಗ ನೋಡಕೊಂಡು ಬರೋಣ ಅಂತ ವಿಚಾರ ಇತ್ತು. ಒಂದು ನಾಲ್ಕು ದಿನಾ ರಜಾ ಕೊಡ್ರಿ ಅಂತ ಕೇಳಿದ್ರ, ಕೆಲಸ ರಾಶಿಯಾಗಿ ಬಿದ್ದದೆ. ಮುಂದಿನ ವರ್ಷ ಹೋಗೀರಂತೆ ಅಂತ ಮ್ಯಾನೇಜರು ಹೇಳಿದ್ರು.

**ರಾಧಾ :–** ಗೊತ್ತಾತು ಬಿಡ್ರಿ. ನಾ ಎಲ್ಯಾದ್ರೂ ಇಂಥಾ ಮಾತು

ಎತ್ತೇನೆಂತ ಹೊತ್ತು ಸಾಧಿಸಿ ನೆಪ ಹೇಳಬಟ್ರಿ.ಹೌದಲ್ಲೊ? ತಗೋರಿ ಚಾ. ನನಗೆ ಗೊತ್ತದ ನನ್ನ ನಶೀಬ. ನನಗೆ ಗೊತ್ತದ ನನ್ನ ದೇವರ ಗುಣಾ. (ಒಳಗೆ ಹೋಗುವಳು.)

**ಬಾಲ** :- ಏ, ಏ, ಹೀಂಗ ಸರಕ್ಕನೆ ಸಿಟ್ಟುಮಾಡಿಕೊಂಡು ಹೋದರ ನಾನಾದ್ರೂ ಏನ ಮಾಡ್ಲಿ? ಕಮಲೂ, ಶಂಕರಾ, ಆಗಲೇ ಎಲ್ಲಿ ಹೊದರ್ರೋ. ಬರ್ರಿ ಇಲ್ಲಿ. ಒಂದು ಪದಾ ಕಲೀಲಿಕ್ಕೆ ಹುರುಪು ಇಲ್ಲದವ್ರು ಅಭ್ಯಾಸಾ ಏನು ಮನಸಗೊಟ್ಟು ಮಾಡ್ತೀರಿ. ಬರ್ರಿ ಇಲ್ಲಿ. ನಿಲ್ರಿ ಸರಿಯಾಗಿ. ಹೇಳ್ರಿ—

ದಿವಾಳಿ ದಿವಾಳಿ ಬಂತು—ಕುಣಿಯುತ
ನಲಿಯುತ ಹಾಡುತ ಬಂತು ॥

(ಹುಡುಗರಿಬ್ಬರೂ ಹಾಡುವರು)

ಛಿ! ಎತ್ತು ಏರಿಗೆ, ಕೋಣ ಕೆರೀಗೆ ಎಳೆದ್ಹಾಂಗ ಕಮಲು ಗಟ್ಟಿಯಾಗಿ, ನೀ ಮೆಲ್ಲಗೆ ಹೇಳಿದರೆ ಹ್ಯಾಂಗ ಸ್ವರಾ ಕೂಡ್ಯಾವು? ಸರಿ ಅನ್ರಿ.

ದಿವಾಳಿ ದಿವಾಳಿ ಬಂತು.

**ರಾಧಾ** :- (ಒಳಗಿಂದಲೇ) ಮೊದಲಿಗೆ ನೀವು ಒಂದಿಷ್ಟು ಸ್ವರದಾಗ ಅನ್ರಿ. ಆಂದರ ಅವರು ಅಂದಾರು?

**ಬಾಲ**:- ಏನಂಧಿ? ನಾ ಸ್ವರದಾಗ ಅನ್ನಲಿಲ್ಲ? ನಿನಗೇನು ಗೊತ್ತು ರಾಗ, ಸ್ವರ, ತಾಳ ಎಲ್ಲಾ.

**ರಾಧಾ** :- (ಹೊರಗೆ ಬಂದು) ನಿಮಗಿಂತ್ಲೂ ಹೆಚ್ಚ ಗೊತ್ತದ. ಒಂದಾರು ತಿಂಗಳ ಮನೀಗೆ ಬಂದು ಮಾಸ್ತರು ನನಗೆ ಹಾಡಲಿಕ್ಕೆ ಹೇಳಿ ಕೊಟ್ಟಿದ್ರೂ ಅಂದೆ. ಹೆಣ್ಣಾಗಿ ಹುಟ್ಟಿದ ಮ್ಯಾಲೆ ಯಾರಾದ್ರೂ



ನಿಮ್ಮಂಥವರನ್ನ ಗಂಡ ಅಂತ ಪಡೀಬೇಕಾದ್ರೆ ಓದೂದೂ ಅಡಗೀ ಮಾಡೂದು ಹಾಡೂದೂ ಎಲ್ಲಾ ಕಲೀದಿದ್ರ ಹ್ಯಾಂಗಾಗ್ತದ?

**ಬಾಲ** :- ನೀ ಸಂಗೀತ ಕಲ್ತದ್ದು ಗೊತ್ತದ ಬಿಡು. ನಿನ್ನ ನೋಡ್ಲಿಕ್ಕೆ ಬಂದ ದಿನಾ ನೀ ಹಾಡಿದ್ದಿಯಲ್ಲ—ಯಾವದು ಅದು—ಸುಂದರಾಂಗ ಗೋಪಾಲ ಬಾಲಕೃಷ್ಣಾ ಅನ್ನೂ ಪದಾನ.

**ರಾಧಾ** :- ಅಂದಿದ್ದೆ. ನೀವದನ್ನ ಕೇಳಿ ಭೇಷ್ ಹಾಡ್ತಾಳೆ ಅಂದಿದ್ದಿರಲ್ಲ!

**ಬಾಲ** :- ಅಂದಿದ್ದೆ ಖರೇ. ಆದ್ರ ಲಗ್ನ ಆದ ಈ ೧೫ ವರ್ಷದ ತನಕಾ ಮುಚ್ಚಿಟ್ಟುಕೊಂಡ ಗುಪ್ತಮಾತು ಈಗ ಹೇಳ್ತೇನ ಕೇಳು. ನಾ ಕನ್ಯಾ ನೋಡ್ಲಿಕ್ಕೆ ಬಂದೆ. ನಿನ್ನ ನೋಡಿದೆ. ನೋಡಲಿಕ್ಕೆ ಸಾಧಾರಣ ಇದ್ದಾಳೆ ಅಂತ ಅನಿಸ್ತು. ಲಗ್ನ ಆಗೂ ಹುರುಪಿನಲ್ಲಿ, ಗುರುತಿಲ್ಲದ ಹುಡುಗಿ ಮತ್ತೆ ಬ್ಯಾರೇ ಜನರ ಎದುರಿನಲ್ಲಿ ಆದ ಸಂಕೋಚದಲ್ಲಿ ನಾ ಏನು ಮಾತಾಡ್ತಿದ್ದೆನೊ ನನಗೆ ತಿಳೀತಿರಲಿಲ್ಲ. ಒಮ್ಮಿಂದೊಮ್ಮೆ ನೀ ಬಾಯಿ ತೆರೆದು ಹಾಡಲಿಕ್ಕೆ ಸುರು ಮಾಡಿದ ಮೇಲೆ ಕಿವಿ ನಿಚ್ಚ ಳಾತು. 'ಸುಂದರಾಂಗ ಬಾಲಕೃಷ್ಣಾ' ಅಂದದ್ದು ಕೇಳಿಸಿತು. ಎಲಾ! ಚುರುಕು ಇದ್ದಾಳ ಹುಡುಗಿ, ಧಿಟ್ಟೆ ಇದ್ದಾಳ, ನನ್ನ ಹೆಸರ ಮೊದಲೇ ತಿಳಕೊಂಡು ನನ್ನನ್ನೇ ಉದ್ದೇಶಿಸಿ ಹಾಡ್ತಾಳ, ಪಾಸ ಮಾಡಿಬಿಡೋಣ ಇವಳನ್ನ ಅಂತ ಪಾಸ ಮಾಡ್ಬಿಟ್ಟೆ.

**ರಾಧಾ** :- ಹುಂ.

**ಬಾಲ** :- ಮುಂದಿಂದು ನೆನಪದನೊ ಇಲ್ಲೊ? ಲಗ್ನ ಆದ ಮ್ಯಾಲೆ ಒಂದಿನಾ ಅದೇ ಹಾಡು ಹಾಡು ಅಂತ ನಾ ನಿನಗ ಅಂದದ್ದು. ನೀ ಹಾಡಿದಿ. ಆ ಮ್ಯಾಲೆ ಮತ್ತೆ ಒಂದಿನಾ ಆದ್ರೂ ಹಾಡು ಅಂತ ನಿನಗ ಹೇಳೇನೇನು? ಇಲ್ಲ. ಯಾಕ?

**ರಾಧಾ**:- ನಿಮ್ಮ ಕಾರಣ ನನಗ ಹ್ಯಾಂಗ ಗೊತ್ತಾಗಬೇಕು?

**ಬಾಲ**:- ಕೇಳು. ಎರಡನೇ ಸಲ ನೀ ಹಾಡಿದಿಯಲ್ಲ, ಆಗ ನೀ ಎಷ್ಟು ಬೇಸೂರ ಹಾಡ್ತಿ ಅನ್ನೂದು ತಿಳೀತು. ಇಂಥ ಹಾಡು ದಿನಾ ಕೇಳಿದ್ರ ಕಿವಿ ಪಡದೆ ಹರದು ಹೋದೀತೂ ಅಂತ.

**ರಾಧಾ**:- ಸಾಕು ಬಿಡ್ರಿ. ಬಾಯಿಗೆ ಬಂದಹಾಂಗ ಮಾತಾಡಬ್ಯಾಡ್ರಿ. ಬೇಕಾದರೆ ಈಗಲೂ ಪರೀಕ್ಷೆ ಮಾಡೋಣ. ಕರಸ್ರಿ ಯಾರಾದರೂ ಸಂಗೀತ ಮಾಸ್ತರ್ರನ್ನ. ನಾ ಹಾಡ್ತೇನಿ. ಬೇಸೂರ ಅಂತ ಅವರು ಅಂದ್ರೆ—

**ಬಾಲ**:- ಹುಂ. ಮಾಸ್ತರು ಯಾಕ ಬೇಕು? ಹೇಳಲ್ಲ ದಿವಾಳಿ ಬಂತು ಬಂತು ಅನ್ನೂ ಹಾಡನ್ನ. ನಿನ್ನ ಸ್ವರ ಎಲ್ಲಿ ಬೇಸೂರ ಆಗ್ತದ ಅನ್ನೂದನ್ನ ನಾನೇ ತೋರಿಸಿ ಕೊಡ್ತೇನಿ.

**ಕಮಲು**:-
**ಶಂಕರ** :- } ಹೇಳವ್ವಾ.

**ರಾಧಾ**:- (ಅಣಕಿಸಿ) ಹೇಳವ್ವಾ! ಏನು ಹೇಳ್ತಾರ ತಲೀ? ಇವರೊಬ್ರು ಹೇಳುವ್ರು, ನೀವು ಕುಣಿಯುವ್ರು. ನಿಮ್ಮನ್ನ ಆಫೀಸನವ್ರ ಮುಂದ ಪ್ರದರ್ಶನ ಮಾಡಿ ಇವರಿಗೆ ಶಾಬ್ಬಾಸಕಿ ಪಡೀಬೇಕಾಗೇದ. ಅಂದ ಮ್ಯಾಲೆ ಇವರೇ ಕಲಿಸಿಕೊಳ್ಳಲಿ. ನನಗೇನು?

**ಬಾಲ**:- ಹೌದs? ಪರೀಕ್ಷಾಕ್ಕs ಬಂತೂ ಅಂತ.

**ರಾಧಾ**:- ನಾ ಪಾಸಾದ್ರೂ ಅಷ್ಟೇ, ಬಿಟ್ರೂ ಅಷ್ಟೇ.

**ಬಾಲ**:- ಹೋಗ್ಲಿ ಬಿಡು. ಸುಳ್ಳೇ ಯಾಕ ವಾದ ಹಾಕೋಣ. ನಾ ಹೇಳಿ ಕೊಡ್ತೇನಿ ಬರ್ರ್ಯೋ.

ದಿವಾಳಿ ದಿವಾಳಿ ಬಂತು
(ರಾಧಾ ಕಿಸಕ್ಕನೆ ನಗುವಳು.)

**ರಾಧಾ:–** ಯಾಕ, ಮತ್ತೆ, ಬೇಸೂರಾತೇನು ? ಅಲ್ಲಾ, ಕಾಲೇಜಿನಾಗಿದ್ದಾಗ ಲೇಖ ಬರೀತಿದ್ದೆ, ಸಾಹಿತ್ಯ ಓದ್ತಿದ್ದೆ ಅಂತಿದ್ದಿರಿ ಈಗೆಲ್ಲಾ ಮತ್ತ ಹೋತೇನು ?

**ಬಾಲ:–** ಮರೀಲಿಕ್ಕೆ ಅದು ಕಲ್ತ ಬಂದ ವಿದ್ಯೆಯಲ್ಲ.

**ರಾಧಾ :–** ಅಂದ್ರ ಆಗ್ಲೂ ಅರ್ಥ ಗೊತ್ತಿಲ್ಲದೆ ಏನಾರs ಬರಿಯೂದು ಪರಿಯೂಡು ಮಾಡ್ತಿದ್ದಿರೇನು ?

**ಬಾಲ :–** ಏನ ಹಾಂಗಂದ್ರ ?

**ರಾಧಾ :–** ಅಲ್ರಿ, ಮೊದಲು ದಿವಾಳಿ ದಿವಾಳಿ ಬಂತು ಅಂತ ಹುಡುಗರಿಗೆ ಹೇಳಿ ಕೊಡ್ತೀರಿ. ಆಮ್ಯಾಲೆ ಹಾಡುತ ಬಂತು, ಕುಣಿಯುತ ಬಂತು ಅಂತೀರಿ. ಅಲ್ರಿ ದಿವಾಳಿ ಅಂದ್ರೇನು ?

**ಬಾಲ :–** ವರ್ಷಕ್ಕೊಂದು ಸಲ ಬರೋ ಹಬ್ಬ, ಏನು ಹುಡುಗಾಟಕೆ ನಡಸೀದಿ ?

**ರಾಧಾ :–** ವರ್ಷಕ್ಕೊಂದು ಸಲ ಬರುವ ಹಬ್ಬ! ದೀಪಾವಳಿ. ದಿವಾಳಿ ಅಂದ್ರೆ ( ನಗುವಳು )

**ಬಾಲ :–** ಅಂ ?

**ರಾಧಾ :–** ದಿವಾಳಿ ಅಂದ್ರೆ ಆ ಸಾಹುಕಾರ ದಿವಾಳಿ ತೆಗೆದ; ಈ ಅಂಗಡಿ ದಿವಾಳಿಯಾತು ಅಂತ.

**ಬಾಲ :–** ಎಲಾ ! ಅಂತೂ ನೀ . . . . ಹೋಗ್ಲಿ ಬಿಡು. ದೀಪಾವಳಿಗೆ ದಿವಾಳಿ ಅಂತ ರೂಢಿಯೊಳಗ ಅಂತಾರ. ಹಾಂಗ ಯಾವದಕ್ಕೂ ಸೂಕ್ಷ್ಮ ಅರ್ಥ ಹಚ್ಚಿದ್ರೆ ಸಂಸಾರ ಸಾಗೂದು ಕಠಿಣ ಆದೀತು. ಇನ್ನ ನಿನ್ನ ಕೆಲಸಕ್ಕ ಹೋಗು. ಅಂದಹಾಂಗ ಹಬ್ಬಕ್ಕ ಇನ್ನ ಮೂರೇ ದಿನ ಉಳೀತು. ನಾವು ಆಫೀಸಿನ ಮಂದಿ ಅಂದು ವನಭೋಜನಕ್ಕ ಹೋಗವ್ರು. ಉಂಡಿ, ಶೇವು, ಚಕ್ಕುಲಿ, ಮಾಡ್ಸಿಕೊಂಡು ಬರವ್ರು ನೀವು ಅಂತ ಅಂದಾರ, ಒಂದು ೧೫–೨೦ ಮಂದಿ.

**ರಾಧಾ :–** ಸರಿ. ಯಜಮಾನ್ರ ಅಪ್ಪಣೆ ಅಂದಮ್ಯಾಲೆ ನೌಕರ ಮಾಡಲೇಬೇಕಲ್ಲ. ಆದ್ರೆ ಸಾಮಾನು, ಸಕ್ಕರಿ ಎಲ್ಲಾ ತಂದೇ ಆಗ್ಬೇಕು. ರವಾ, ಕಡ್ಲೀಹಿಟ್ಟು, ತುಪ್ಪ ಎಲ್ಲಾ ಬೇಕು.

**ಬಾಲ :–** ಆತು ತರ್ತೇನಿ.

**ರಾಧಾ :–** ಮತ್ತೆ ನನಗ ಹೊಸ ಪತ್ತಲಾ ಬೇಕು ಅಂತ ಹೇಳ್ಳಿಕ್ಕೆ ಹತ್ತಿ ಈಗ ಮೂರು ತಿಂಗಳಾತು. ನಾಳೆ ನಾಳೆ ಅನ್ನೂದು ಕೇಳಿ ಸಾಕಾತು. ಪತ್ತಲ ಬಂದಮ್ಯಾಲೇ ನಿಮ್ಮ ಸಾಮಾನು ತಯಾರಾಗೂದು.

**ಕಮಲು :–** ಹೌದು ಅಪ್ಪಾ. ನನಗೂ ಹೊಸ ಪತ್ತಲಾ, ಜಂಪರು ಹಬ್ಬಕ್ಕ ಬೇಕು. ಇಲ್ಲಾಂದ್ರ ನಾ ಏನ ಕೇಳೂಆಕಿ ಅಲ್ಲಾ.

**ಶಂಕರ :–** ಮತ್ತ ನನಗ ಪ್ಯಾಂಟು, ಬುಶ್‌ಕೋಟು, ಬೂಟು ಬೇಕು.

**ಬಾಲ :–** ಹುಂ! ಹುಂ ! ಅಂದ್ರೆ ಏನ ಮಾಡಂತೀರಿ ನನಗ ? ಇಷ್ಟೆಲ್ಲಾ ಒಮ್ಮೆಲೇ ಹ್ಯಾಂಗ (ರಾಯರು, ರಾಯರು ಅಂತ ಕೂಗಿದ್ದು ಕೇಳಿಸುವದು.) ಯಾರು ! ಹಾಲಿನವನೇನು ? ಯಾಕ ?

**ಹಾಲ :–** ಹಬ್ಬ ಬಂತ್ರಿ. ನಾಳೆ ಮುಂಜಾನೆ ಬಂದಾಗ ಹೋದ ತಿಂಗಳದ್ದೂ ಈ ತಿಂಗಳದ್ದೂ ಲೆಕ್ಕ ಚುಕ್ತಾ ಕೊಡಾಕs ಬೇಕ್ರಿ.




**ಬಾಲ :–** ಆತು. ಆತು ಕೊಡ್ತೇನಂತ ಹೋಗು.

**ರಾಧಾ :–** ಮತ್ತ ಅಗಸರವನೂ ನಾಳೆಗೆ ರೊಕ್ಕ ಬೇಕು ಅಂದಾನ. ಕೆಲಸದಾಕೀಗೂ ನಾಳೆಗೇನೇ ಬೇಕಂತ.

**ಬಾಲ :–** ಹೌದು. ನಿಮಗೂ ನಾಳೆಗೇ ಹೊಸ ಅರಿವೆ ಬೇಕಲ್ಲ. ಸೊಸಾಯಿಟಿ ಸಾಲ ತಲೀ ಮ್ಯಾಲೆ ಕೂತಿದ್ದನ್ನೇ ತೀರಸಲಿಕ್ಕೆ ಆಗವಲ್ದು. ಇನ್ನ ಏನಾದ್ರೂ ಸುಳ್ಳು ಹೇಳಿ ಪ್ರಾವಿಡಂಟ ಫಂಡ ಸಾಲಾ ತಗೀಬೇಕು. ಅದರ ಕಂತು, ಇದರ ಕಂತು ಅಂತ ಮತ್ತೆ....ಒಟ್ಟಿನಲ್ಲಿ ಏನು ಅಂತಂದ್ರ ಸಾಲ ಇಲ್ದೆ ನಮ್ಮ ಸಂಸಾರಸಾಗರ ಹ್ಯಾಂಗ ಆಗೂದು? ಆಗ್ಲಿ. ಈ ಸಾಲದ ಸಂಸಾರ ದಿವಾಳಿ ಆಗೂ ತನಕಾನೂ —ಅಲ್ರೋ, ಕಮಲೂ, ಶಂಕರ, ನಿಮ್ಮನ್ನ ಹಡದದ್ದಕ್ಕೂ ಸಾರ್ಥಕ ಆತು. ಇಲ್ಲದಿದ್ರ ನಾ ಬಂದಾಗ ಆರ್ಸಿ ಆ ಪದಾ ಅಂತಿದ್ದಿರೇನು ? ದಿವಾಳಿ ದಿವಾಳಿ ಬಂತು. ಅಲ್ಲೀವರೆಗೇ ಬರೋಬರಿ ಆತು. ಮುಂದಿಂದು ಹೀಂಗ ಇರ್ಬೇಕಿತ್ತು. ಬರ್ರಿ. ಹಾಡ್ರಿ ನನ್ನಗೂಡ.

**ಕಮಲು :–** ನಾ ಒಲ್ಲೆಪಾ.

**ಬಾಲ :–** ಬಡದೇನ ಹಿಡ್ದು. ಅನ್ರಿ.

ದಿವಾಳಿ ದಿವಾಳಿ ಬಂತು!
ಸಾಲವ ಮಾಡಿಸಿ ಗೋಳನು ತಂತು.

ಹೇಳ್ರಿ. ಏನ ಹೇಳ್ತೀರೋ, ಬಡೀಲ್ಯೋ.

( ಹುಡುಗರು ಅಳು ಸ್ವರದಲ್ಲಿ ಹೇಳುವಾಗ ಪಡದೆ ಬೀಳುವದು. )



ನಿಮ್ಮ ಮುಖದ
ಅಂದವೇ
ನಿಮ್ಮ ಸೌಭಾಗ್ಯ



ಶುಭ ಸಂದರ್ಭಗಳಲ್ಲಿ
ನಿಮ್ಮ ಪ್ರೀತಿಪಾತ್ರರಾದವರಿಗೆ
ಅಂಗಕಾಂತಿಯು ಹೊಳಪಿನಿಂದ
ಪ್ರಜ್ವಲಿಸಲು ಸುಗಂಧಯುಕ್ತವಾ-
ದುದನ್ನು ಬಹುಮಾನಿಸಿ.

ವೈಸೂರು ಸ್ಯಾಂಡಲ್ ಸೋಪ್

★ ಪ್ರಸಿದ್ಧವಾದ ರಸಾಯನ ಶಾಸ್ತ್ರಜ್ಞರ ನೇತೃತ್ವದಲ್ಲಿ ತಯಾರಿಸಲ್ಪಟ್ಟಿದೆ.
★ ಸೌಂದರ್ಯೋಪಾಸಕರಿಗೆ ಅತ್ಯುತ್ತಮ ಸಹಕಾರಿ.
★ ಶುದ್ಧವಾದ ಸುಗಂಧ ದ್ರವ್ಯಗಳಿಂದ ತಯಾರಿಸಲ್ಪಟ್ಟಿದೆ.




# ಮೈಸೂರು ಸ್ಯಾಂಡಲ್ ಸೋಪ್

ತಯಾರಿಸುವವರು :

## ಗವರ್ನಮೆಂಟ್ ಸೋಪ್ ಫ್ಯಾಕ್ಟರಿ, ರಾಜಾಜಿನಗರ, ಬೆಂಗಳೂರು-೨

# ಪ್ರಥಮ ಆಂಗ್ಲ ಕವಯಿತ್ರಿ-ತರು ದತ್ತ

ಲೇಖಕರು : ಶ್ರೀ ಶ್ರೀನಿವಾಸ ಹಾವನೂರ

ಇಂಗ್ಲೀಷ ಭಾಷೆ ಭಾರತೀಯರಾದ ನಮಗೆಲ್ಲ ವಿದೇಶಿ ಭಾಷೆ. ಮಾತೃಭಾಷೆಯಷ್ಟು ಸುಲಭಸಾಧ್ಯವಾಗಿ ಅದರ ಪ್ರಭುತ್ವ ಗಳಿಸುವಂತಿಲ್ಲ. ಕಳೆದ ಶತಕದಲ್ಲಿ ಅದೇ ಆಗ ಇಂಗ್ಲೀಷ ಭಾಷೆಯ ಪರಿಚಯ ಜನತೆಗಾಗಿತ್ತು. ಅದೇ ಸಮಯದಲ್ಲಿ ಆಂಗ್ಲ ಭಾಷೆಯಲ್ಲಿ ಕವನಗಳನ್ನು ಬರೆದು ಭಾರತೀಯರನ್ನು ಅದೇಕೆ ವಿದೇಶೀಯರನ್ನು ಸಹ ದಂಗುಬಡೆಸಿದವಳು ಇಪ್ಪತ್ತೊಂದರ ಯುವತಿ ತರು ದತ್ತ. ಅವಳ ಜೀವನದ ಪರಿಯನ್ನೇ ಲೇಖಕರು ಇಲ್ಲಿ ಬಿಡಿಸಿ ತೋರಿಸಿದ್ದಾರೆ.

*The fairest gift that life can give is to die young*

*—Taru Dutt*

ಭಾರತೀಯರಾಗಿ ಹುಟ್ಟಿ, ಮಾತೃಭಾಷೆಯಲ್ಲದ ಇಂಗ್ಲೀಷನ್ನು ಮಾಧ್ಯಮವಾಗಿಟ್ಟುಕೊಂಡು ಸಾಹಿತ್ಯ ಸೃಷ್ಟಿಯನ್ನು ಮಾಡುವುದು ಎಲ್ಲರಿಗೂ ಸಾಧಿಸುವ ಮಾತಲ್ಲ. ಹಾಗೆ ಮಾಡಿದವರಲ್ಲಿ ಸರೋಜಿನಿ ನಾಯಡು, ಹರೀಂದ್ರನಾಥ ಚಟ್ಟೋಪಾಧ್ಯಾಯ, ಆರ್. ಕೆ. ನಾರಾಯಣ, ಮುಲ್ಕರಾಜ ಆನಂದ ಹೀಗೆ ಕೆಲವೇ ಹೆಸರುಗಳು ಈ ಶತಮಾನದಲ್ಲಿ ಕೇಳಬರುತ್ತವೆ. ಆದರೆ ಇವರೆಲ್ಲರಿಗಿಂತ ಮೊದಲಿಗೆ ಇಂಗ್ಲಿಷಿನಲ್ಲಿಯೆ ಕಾವ್ಯ ರಚನೆ ಮಾಡಿ ಖ್ಯಾತಿ ಹೊಂದಿದವಳೆಂದರೆ ತರು ದತ್ತ ಎಂಬವಳು. ಆಕೆ ಬರೆದುದೆಲ್ಲ ೨-೩ ಗ್ರಂಥಗಳಿಗೆ ಮಾತ್ರ ಸೀಮಿತವಾಗಿದೆಯಾದರೂ ಅದರಿಂದ ಅವಳಿಗೆ ದೊರೆತ ಸನ್ಮಾನ ಮಾತ್ರ ಬಹು ಕಾಲ ಉಳಿಯುವ ಮಾತಾಗಿ ಪರಿಣಮಿಸಿತು. ಉಜ್ವಲ ಪ್ರತಿಭಾವಂತೆಯಾದ ಆಕೆಯು, ವಿಶೇಷ ಶಿಕ್ಷಣವನ್ನೇನೂ ಪಡೆದಿರಲಿಲ್ಲ. ಮೇಲಾಗಿ ಅಶಕ್ತ ಪ್ರಕೃತಿಯೊಡನೆ ಹೋರಾಡಿ, ತನ್ನ ೨೧ ನೆಯ ವಯಸ್ಸಿನಲ್ಲಿಯೇ ತೀರಿಕೊಳ್ಳಬೇಕಾದ ದೈವ ದುರ್ವಿಪಾಕದ ಈ ಸ್ಥಿತಿಯಲ್ಲಿಯೂ 'ಇಂಗ್ಲಿಶ್ ಸಾಹಿತ್ಯ ಚರಿತ್ರೆಯಲ್ಲಿ ಆಕೆಗಾಗಿ ಒಂದು ಪುಟವನ್ನು ತೆಗೆದಿರಿಸುವ' ಪ್ರಸಂಗವಿದ್ದುದು ನಮಗೆಲ್ಲ ಅಭಿಮಾನಾಸ್ಪದವಾಗಿದೆ.

ತರು ದತ್ತಳ ತಂದೆ ಗೋವಿಂದಚಂದ್ರ ದತ್ತರು ಕಲಕತ್ತೆಯಲ್ಲಿ ಹಿರಿಯ ಮ್ಯಾಜಿಸ್ಟ್ರೇಟರಾಗಿದ್ದರು. ಸಂಸ್ಕೃತ, ಇಂಗ್ಲಿಷಗಳಲ್ಲಿಯ ವಿವಿಧ ಗ್ರಂಥಗಳನ್ನು ಅಭ್ಯಾಸಮಾಡಿ ವಿದ್ವಾಂಸರೆಂಬ ಖ್ಯಾತಿಯನ್ನು ಪಡೆದಿದ್ದರು. ಜತೆಗೆ ಕ್ರೈಸ್ತ ಮತೀಯರಾದುದರಿಂದ, ಅವರಿಗೆ ಕಲಕತ್ತೆಯ ಅನೇಕ ಆಂಗ್ಲೇಯರ ನಿಕಟ ಪರಿಚಯವೂ ಇದ್ದಿತು.

ಕ್ರಿ. ಶ, ೧೮೫೬ರ ಮಾರ್ಚ ತಿಂಗಳಲ್ಲಿ ತರು ಕಲಕತ್ತೆಯಲ್ಲಿ ಜನಿಸಿದಳು. ಗೋವಿಂದ ಚಂದ್ರರಿಗೆ ಆಕೆ ಮೂರನೆಯ ಹಾಗೂ ಕೊನೆಯ ಮಗಳಾಗಿದ್ದಳು. ಅರುಲತೆಯ ಅಕ್ಕ—ಆಕೆಯ ಆಜೀವ ಸಂಗಾತಿ ಅರುಣಾ, ಅವಳಿಗಿಂತ ಎರಡು ವರ್ಷಕ್ಕೆ ಹಿರಿಯಳಿದ್ದಳು. ಆಕೆಯೂ ಸಾಹಿತ್ಯ ಹಾಗೂ ಲಲಿತಕಲೆಗಳಲ್ಲಿ ಅನನ್ಯ ಆಸ್ಥೆಯುಳ್ಳವಳಾಗಿದ್ದಳು.

ಈ ಸೋದರಿಯರಿಗೆ ಅಬ್ಜಯನೆಂಬ ಅಣ್ಣನಿದ್ದನು. ಅವನಿಗೆ ಪಾಠ ಹೇಳುವುದಕ್ಕೆ ಮನೆಗೆ ಒಬ್ಬ ಉಪಾಧ್ಯಾಯರು ಬರುತ್ತಿದ್ದರು. ಅವನೊಟ್ಟಿಗೆ ಇವರೂ ಕಲಿಯುತ್ತಿದ್ದರು. ತಂದೆಗೂ ಮಕ್ಕಳಿಗೆ ವಿವಿಧ ವಿಷಯಗಳನ್ನು ಹೇಳಿಕೊಡುವದರಲ್ಲಿ ವಿಶೇಷ ಆಸಕ್ತಿ. ಈ ಸೋದರಿಯರ ತೀಕ್ಷ್ಣ ಗ್ರಹಣಶಕ್ತಿಯೂ ವಯೋಮಾನಕ್ಕೆ ಮೀರಿ ಇರುವ ವಾಚನಪ್ರಿಯತೆಯೂ ತಂದೆತಾಯಿಗಳನ್ನೂ ಇತರ ಪರಿಚಯಸ್ಥರನ್ನೂ ದಂಗುಬಡಿಸಿದ್ದಿತು.

ಈ ಸುಸಂಸ್ಕೃತ ಹಾಗೂ ಸುಪ್ರೀತ ಸಂಸಾರದಲ್ಲಿ ವಿಷಮ ಘಟನೆಯೊಂದು ಜರುಗಿತು. ಕ್ರಿ.ಶ. ೧೮೬೫ರಲ್ಲಿ ಅಬ್ಜಯನು ಅಕಸ್ಮಾತ್ತಾಗಿ ತೀರಿಕೊಂಡನು. ಏಕಮಾತ್ರ ಪುತ್ರನ ಅಕಾಲಮರಣದಿಂದ ಗೋವಿಂದಚಂದ್ರ ಮತ್ತು ಅವರ ಹೆಂಡತಿಗೆ ದೊಡ್ಡ ಆಘಾತವುಂಟಾಯಿತು. ಅದೇ ಚಿಂತೆಯಲ್ಲಿ, ಅವರು ತಮ್ಮಿಬ್ಬರು ಹೆಣ್ಣುಮಕ್ಕಳು ಪ್ರಕೃತಿಯೂ ಅದೃಢನೆಂಬುದನ್ನು ಕಂಡುಕೊಂಡರು. ಅಬ್ಜಯನ ಕಟುವಾದ ನೆನಪನ್ನು ಮರೆಯುವುದಕ್ಕೆಯೂ ಹೆಣ್ಣುಮಕ್ಕಳ ದೈಹಿಕ ಮತ್ತು ಮಾನಸಿಕ ಬೆಳವಣಿಗೆಗಾಗಿಯೂ ಗೋವಿಂದಚಂದ್ರರು ಸಂಸಾರಸಮೇತ ವಿದೇಶಕ್ಕೆ ಹೋಗುವ ನಿರ್ಧಾರವನ್ನು ಮಾಡಿದರು. ಪರದೇಶಕ್ಕೆ ಪ್ರಯಾಣಮಾಡಿದ ಭಾರತೀಯ ಮಹಿಳೆಯರಲ್ಲಿ ದತ್ತ ಕುಟುಂಬದವರೇ ಮೊದಲಿಗರೆಂಬ ಮಾತನ್ನು ಇಲ್ಲಿ ನೆನೆಯುವ ಹಾಗಿದೆ.



ತರು ದತ್ತ

## ವಿದೇಶ ವಾಸ

೧೮೬೯ರಲ್ಲಿ ಇವರು ಈ ಪ್ರಯಾಣವನ್ನು ಕೈಕೊಂಡಾಗ, ತರೂಗೆ ಕೇವಲ ೧೩ ವರ್ಷ. ಗೋವಿಂದಚಂದ್ರರು ಮೊದಲಿಗೆ ಕಲಕತ್ತೆಯಲ್ಲಿದ್ದ ತನ್ನ ಯುರೋಪಿಯನ್ ಸ್ನೇಹಿತರ ಸಲಹೆಯ ಮೇರೆಗೆ, ಫ್ರಾನ್ಸದಲ್ಲಿಯ ನೀಸ್‌ದಲ್ಲಿ ಕೆಲ ತಿಂಗಳುಗಳನ್ನು ಕಳೆದರು. ಭಾರತ ಅದೇಕೆ ಕಲಕತ್ತೆಯ ನಗರವನ್ನು ಬಿಟ್ಟಮೇಲೆ, ತರೂ ಕಂಡ ಹೊರಜಗತ್ತು ಎಂದರೆ ಅದೇ ಆಗಿದ್ದಿತು. ತರೂಳ ಮುಗ್ಧ ಆದರೆ ತೀಕ್ಷ್ಣ ಮನಸ್ಸಿನ ಮೇಲೆ ಫ್ರಾನ್ಸದೇಶವು ತುಂಬಾ ಪರಿಣಾಮವನ್ನುಂಟು ಮಾಡಿತು. ಅಲ್ಲಿ ಇದ್ದ ಕೆಲವೇ ತಿಂಗಳುಗಳಲ್ಲಿ ಈ ದತ್ತ ಸೋದರಿಯರು ಫ್ರೆಂಚ್ ಭಾಷೆಯನ್ನು ಬಹು ಚೆನ್ನಾಗಿ ಅರಗಿಸಿಕೊಂಡು, ಆ ಭಾಷೆಯ ಪ್ರಮುಖ ಗ್ರಂಥಗಳನ್ನು ಓದುವಷ್ಟು ಪ್ರಾವೀಣ್ಯವನ್ನು ಪಡೆದರು.

ಮರುವರ್ಷ ೧೮೭೦ ರಿಂದ ಮೂರು ವರ್ಷಗಳ ಕಾಲದ ವರೆಗೆ ಲಂಡನ್ನಿನಲ್ಲಿ ಮನೆಹಿಡಿದು ವಾಸವಾಗಿದ್ದರು ಕೂಡ, ತರೂಗೆ ಇಂಗ್ಲಂಡಿಗಿಂತ ಫ್ರಾನ್ಸದೇಶವೇ ಹೆಚ್ಚು ಆಕರ್ಷಕವಾಗಿ ಆತ್ಮೀಯವಾಗಿ ಕಂಡಿತು. ಇಂಗ್ಲಿಷ, ಫ್ರೆಂಚ್ ಈ ಎರಡೂ ಭಾಷೆಗಳ ಸಾಹಿತ್ಯಕ ಕೃತಿಗಳನ್ನು ಇಬ್ಬರೂ ಸೋದರಿಯರು ತಿರುವಿಹಾಕಿದರು. ಈ ಓದುವ ಹುಚ್ಚಿನ ಜೊತೆಗೆ, ಇಬ್ಬರೂ ಕಾವ್ಯಪ್ರಿಯರಾಗಿದ್ದರು. ಸಂಗೀತ ಹಾಗೂ ಚಿತ್ರಕಲೆಗಳಲ್ಲಿಯೂ ಅವರಿಗೆ ಗತಿ ಇದ್ದಿತು. ಹೀಗೆ ೧೯ ನೆಯ ಶತಕದ ಇಂಗ್ಲಂಡಿನ ರಮ್ಯ ವಾತಾವರಣದಲ್ಲಿ, ಇಬ್ಬರೂ ಕಲಾತ್ಮಕವಾದ ಜೀವನವನ್ನು ನಡೆಸುವವರಾಗಿ

ದ್ದರು. ಗೋವಿಂದಚಂದ್ರರ ಲಂಡನ್ನಿನ ಆ ವಾಸವು ವೈಚಾರಿಕ ಮಂಟಪದಂತೆ ಇದ್ದಿತು, ಹತ್ತಾರು ಜನ ಭಾರತೀಯ ಪ್ರೇಮಿಗಳಾದ ಆಂಗ್ಲರು ಅಲ್ಲಿಗೆ ಬರುತ್ತಿದ್ದರು. ಬರುವಾಗ ತಮ್ಮ ಸ್ನೇಹಿತರನ್ನೂ ಕರತರುತ್ತಿದ್ದರು. ಬಂದವರೆಲ್ಲ ಈ ಅಕ್ಕತಂಗಿಯರ ಅನ್ಯೋನ್ಯವನ್ನೂ ವಯಸ್ಸಿಗೆ ಮೀರಿದ ಬೌದ್ಧಿಕ ಸಂಸ್ಕಾರವನೂ ಥಟ್ಟನೆ ನೆನಪಿಟ್ಟುಕೊಳ್ಳುವಂತಾಗುತ್ತಿದ್ದಿತು. ಅಗೆಲ್ಲ ತರುಲತೆಯೆ ಮಾತಿನ ಧೈರ್ಯವನ್ನು ತೋರುವಳು. ಬಂದವರೆಲ್ಲ ಅವಳ ಗ್ರಹಣಶಕ್ತಿ ಹಾಗೂ ಮಾತಿನ ಚುಚ್ಚುಗಾರಿಕೆಗೆ ಬೆರಗಾಗುತ್ತಿದ್ದರು.

ಇಂಗ್ಲಂಡಿನಿಂದ ಹಿಂತಿರುಗಿದ ಮೇಲೆ ಇಬ್ಬರೂ ಕವಿತೆಗಳನ್ನು ಬರೆಯತೊಡಗಿದರು. ಆದರೆ ಲೇಖನಿಯು ತರುಲತೆಗೇ ಹೆಚ್ಚು ಒಗ್ಗಿತು. ಅರುಣಾ ಚಿತ್ರಕಲೆ, ಸಂಗೀತಗಳತ್ತ ತನ್ನ ಪ್ರತಿಭೆಯನ್ನು ಬೆಳೆಯಿಸಿದಳು. ವಿದೇಶ ಯಾತ್ರೆಯನ್ನು ಮಾಡಿ ಬಂದರೂ ಅರುಣಾಳ ಪ್ರಕೃತಿಯಲ್ಲಿ ವಿಶೇಷ ಸುಧಾರಣೆಯಾಗಿರಲಿಲ್ಲ. ಕ್ಷಯರೋಗದಿಂದ ಆಕೆ ೧೮೭೪ ರಲ್ಲಿ ತೀರಿಕೊಂಡಳು. ಬಾಲ್ಯದಾರಭ್ಯ ಒಂದು ದಿನವೂ ತನ್ನನ್ನು ಬಿಟ್ಟಗಲದೆ, ತ್ರಿಕರಣ ಪೂರ್ವಕವಾಗಿ ಒಡನಾಡಿಯಾಗಿದ್ದ ಅಕ್ಕನನ್ನು ಕಳೆದುಕೊಂಡ, ತರುಲತೆಗೆ ತನ್ನ ಸಮಸ್ತ ಚೇತನವೇ ಉಡುಗಿದಂತಾಯ್ತು. ಆ ಕಾಲಕ್ಕೆ ಗೋವಿಂದಚಂದ್ರರು ಮಗಳಿಗೆ ಸಂಸ್ಕೃತವನ್ನು ಹೇಳಿಕೊಡಲು ಅರಂಭಮಾಡಿದ್ದುದರಿಂದ, ಆಕೆ ಮಾನಸಿಕವಾಗಿ ತನ್ನ ತಂದೆಯನ್ನು ಹೆಚ್ಚೆಚ್ಚಾಗಿ ನೆಚ್ಚುವಂತಾಯಿತು.

ತರು ದತ್ತಳ ಫ್ರೆಂಚ್ ಪ್ರೇಮವು ಆಳವಾಗಿದ್ದಿತಷ್ಟೆ. ಅವಳ ಮೊದಲ ಗದ್ಯಲೇಖವು ಕೌಂಟ್ ಡಿಲಾಯಿಸನ ಕವಿತೆಯ ಮೇಲಿನ ವಿಮರ್ಶೆಯಾಗಿದ್ದಿತು. ಅದು ಪ್ರಕಟವಾದಾಗ ಓರ್ವ ಭಾರತೀಯ ಹುಡಿಗೆಯು ಬರೆದಿದ್ದಾಳೆಂಬ ಕಲ್ಪನೆ ಬರದೆ, ಇಂಗ್ಲೀಷ ವಿಮರ್ಶಕರೊಬ್ಬರು ' ತರು ದತ್ತ ' ಎಂಬ ಗುಪ್ತನಾಮದಿಂದ ಬರೆದಿದ್ದಾರೆಂದು ಭಾವಿಸಿದರು !

೧೮೭೬ ರಲ್ಲಿ ತರು ದತ್ತಳ ಪ್ರಥಮ ಕವನ ಸಂಗ್ರಹವು ಪ್ರಕಟವಾಯಿತು. ಹೆಸರು ' A sheaf gleaned in French fields.' ಒಂದು ನೂರೆಪ್ಪತ್ತು ಫ್ರೆಂಚ ಕವಿಗಳ ಇಂಗ್ಲೀಷ ಅನುವಾದಗಳನ್ನೊಳಗೊಂಡ ಆ ಪುಸ್ತಕದಲ್ಲಿ ಅರುಣಾಳ ಕೆಲವು ಅನುವಾದಗಳೂ ಇದ್ದವು. ೨೦೦ ಪುಟಗಳ ಆಗಿನ ಕಾಲದ ಮುದ್ರಣದ ಆ ಪುಸ್ತಕವು ಹೊರನೋಟಕ್ಕೆ ಏನೂ ಚೆನ್ನಾಗಿರಲಿಲ್ಲ. ವಿಮರ್ಶೆಗೆ ಒಳ್ಳೆಯ ಪುಸ್ತಕಗಳು ಬರುವುದೇ ಇಲ್ಲ ಎಂಬ ಸ್ಥಿತಿಯಿರುವಾಗ Examiner ಪತ್ರಿಕೆಯ ಸಂಪಾದಕರು ಎಡ್ಮಂಡ್ ಗಾಸ್ ಎಂಬವರ ಕೈಯಲ್ಲಿ ಪುಸ್ತಕವನ್ನು ಕೊಟ್ಟರು. ಅವರೇ ಅದರ ಯೋಗ್ಯತೆಯನ್ನು ಮೊದಲಿಗೆ ಕಂಡುಹಿಡಿದವರು. ಮುಂದೆ ಫ್ರೆಂಚ್ ವಿಮರ್ಶಕರ ಕೈಗೂ ಈ ಗ್ರಂಥವು ಹೋಗಿ, ಎರಡೂ ಭಾಷೆಗಳ ಪತ್ರಿಕೆಗಳಲ್ಲಿ ಎಣಿಕೆ ಮೀರಿ ಉತ್ತಮ ವಿಮರ್ಶೆಗಳು ಬಂದವು. ಸಾಹಿತ್ಯ ಲೋಕದಲ್ಲಿ ತರುದತ್ತ ಎಂಬ ಹೆಸರಿನ ಸ್ಥಾಪನೆಯಾಯಿತು. ಮೂಲ ಕೃತಿಗಳ ಅನುವಾದದ ಜೊತೆಗೆ ಆ ಗ್ರಂಥವು, ಮೂಲ ಕವಿಗಳ ಪರಿಚಯ, ಟಿಪ್ಪಣಿಗಳನ್ನೂ ಒಳಗೊಂಡು, ಅವಳ ವಿಮರ್ಶನ ಶಕ್ತಿಗೆ ಹಿರಿಯ ನಿದರ್ಶನವಾಗಿದ್ದಿತು.

### ಕಾದಂಬರಿ ಪ್ರಿಯಳೆ

ಕವಿತೆಯಷ್ಟೆ ಕಾದಂಬರಿಗಳನ್ನು ಇಬ್ಬರೂ ಸೋದರಿಯರು ಮೆಚ್ಚಿಕೊಂಡಿದ್ದರು. ಇಂಗ್ಲಂಡಿನಲ್ಲಿದ್ದಾಗ ಒಮ್ಮೆ ಇವರ ಮನೆಗೆ, ಭಾರತದ ಗವರ್ನರ ಜನರಲ್‌ರಾಗಿದ್ದ ಲಾರ್ಡ ಲಾರೆನ್ಸರು ಬಂದಿದ್ದರು. ಅಗ ಅವರು ಹಿರಿಯಳಾದ ಅರುಣಳ ಕೈಯಲ್ಲಿ 'ಜಾನ್ ಹ್ಯಾಲಿಫಾಕ್ಸ' ಎಂಬ ಕಾದಂಬರಿಯನ್ನು ಕಂಡು " ಅದು ಕಾದಂಬರಿಯೇನು? ನೀವು ಕಾದಂಬರಿಗಳನ್ನು ಬಹಳಷ್ಟು ಓದಬಾರದು. ಇತಿಹಾಸವನ್ನು ಓದಬೇಕು '' ಎಂದರಂತೆ. ಅರುಣಾ ಅದಕ್ಕೆ ಉತ್ತರ ಕೊಡದೆ ಸುಮ್ಮನುಳಿದಳು. ಅಲ್ಲಿಯೆ ಇದ್ದ ತರೂ ಕೂಡಲೇ ಹೇಳಿದಳು. "ಇಲ್ಲ. ನೀರಸ ಇತಿಹಾಸಕ್ಕಿಂತ ನಮಗೆ ಕಾದಂಬರಿಗಳೇ ಹೆಚ್ಚು ಸೇರುತ್ತವೆ. ರಾಜರ, ಯುದ್ಧದ ವಿವರಗಳನ್ನು ಕೊಡುವ ಇತಿಹಾಸಗಳಿಗಿಂತ, ಜೀವನವನ್ನು ವಿಶಾಲವಾಗಿ ನಿರೂಪಿಸುವ ಕಾದಂಬರಿಗಳೇ ಸತ್ಯ. ಇತಿಹಾಸವೇ ಅಪೂರ್ಣ ಹಾಗು ಅಸತ್ಯವಾದುದು'' ಎಂಬರ್ಥದ ಉತ್ತರ ಕೊಟ್ಟಳಂತೆ.

ತರುಲತೆಯೇ ಒಂದು ಕಾದಂಬರಿಯನ್ನು ಬರೆದಳು. ತಂಗಿಯು ಅದನ್ನು ಬರೆಯಬೇಕೆಂದೂ ಅಕ್ಕ ಅರುಣಾ ಅದಕ್ಕೆ ಚಿತ್ರಗಳನ್ನು ತೆಗೆಯಬೇಕೆಂದೂ ಅವರೊಳಗಿನ ಬಹು ದಿನದ ಹಂಬಲವಾಗಿದ್ದಿತು. ಕಾದಂಬರಿಯ ಹೆಸರು " LeJournal demdle D'Arvers" ಕಾದಂಬರಿಯು ಓರ್ವ ಫ್ರೆಂಚ ಕನ್ಯೆಯ ದಿನಚರಿಯ ರೂಪದಲ್ಲಿದ್ದು, ಅದರ ಕಥಾವಸ್ತುವನ್ನು ನೋಡುವ ಹಾಗಿದೆ.

ನಾಯಕಿಯು ಕಾನ್ವೆಂಟ ಶಾಲೆಯ ಶಿಕ್ಷಣವನ್ನು ಮುಗಿಸಿ, ಮನೆಗೆ ಬಂದಂದಿನಿಂದ ಈ ದಿನಚರಿ ಆರಂಭವಾಗುತ್ತದೆ. ತಂದೆ ತಾಯಿಗಳು ಅವಳಿಗೆ ಒಬ್ಬ ವರನನ್ನು ಗೊತ್ತುಮಾಡುತ್ತಾರೆ. ಇವಳಿಗೆ ಅವನ ಮೇಲೆ ಪ್ರೀತಿಯಿಲ್ಲ. ಈಕೆ ಪ್ರೀತಿಸುವುದು ಮತ್ತೋರ್ವನನ್ನು. ತಂದೆತಾಯಿಗಳು ಅವಳ ಕೋಮಲ ಭಾವನೆಗಳನ್ನು ಗಾಸಿಗೊಳಿಸಲಿಚ್ಛಿಸದೆಯೆ ಅವಳ ಪ್ರೀತಿಪಾತ್ರನೊಡನೆಯೇ ಅವಳ ಮದುವೆ ಮಾಡುತ್ತಾರೆ. ತನ್ನ ಗಂಡನ ಮನೆಯಲ್ಲಿ ಕೆಲ ದಿನ ಸುಖವಾಗಿ ಕಾಲಕಳೆಯುತ್ತಿದ್ದಾಗ, ತನ್ನ ಮೈದುನನೂ ತನ್ನನ್ನು ಅತ್ಯಂತ ಗಾಢವಾಗಿ ಪ್ರೇಮಿಸುತ್ತಿದ್ದಾನೆ ಎಂಬುದರ ಅರಿವಾಗುತ್ತದೆ. ಇತ್ತ ಅವಳ ಗಂಡನಿಗೆ ಈ ವಿಷಯ ಗೊತ್ತಾಗಿ ಆ ಕಾವಿನಲ್ಲಿ ತಮ್ಮನನ್ನು ಆತ ಕೊಂದು ಹಾಕುತ್ತಾನೆ. ಮುಂದೆ ತನ್ನ ಘೋರ ಅಪರಾಧಕ್ಕೆ ಪಶ್ಚಾತ್ತಾಪಪಟ್ಟು ಆತ್ಮಹತ್ಯ ಮಾಡಿಕೊಳ್ಳುವನು. ನಿಷ್ಕಾರಣವಾಗಿ ಇಬ್ಬರ ಮರಣಕ್ಕೆ ತಾನು ಕಾರಣಳಾದೆನಲ್ಲ ಎಂದು ಅವಳು ದುಃಖಿಸುತ್ತಿರುವಾಗ ಅವಳ ತಾಯಿ ಮೂರನೆಯವನನ್ನೂ (ಅಂದರೆ ಅವಳ ಮೊದಲ ವರ) ಕೊಲ್ಲಬೇಡ ಎಂದು ಹೇಳುತ್ತಾಳೆ, ಹೀಗಾಗಿ, ಅವಳ ಮೊದಲ ವರನ ಸಂಗಡ ಮದುವೆ ನಿಶ್ಚಯವಾಗುತ್ತದೆ. ಆದರೆ ಆಕೆಯಿನ್ನೂ ತನ್ನ ಗಂಡನ ಮನೆಯಲ್ಲಿಯ

ದಾರುಣ ಸನ್ನಿವೇಶಗಳಿಂದ ಹೊರಬಂದಿರಲಿಲ್ಲ. ಅದರಲ್ಲಿಯೇ ಆಕೆ ತೀರಿಕೊಳ್ಳುತ್ತಾಳೆ.

ಕಥಾವಸ್ತುವು ಸ್ವಲ್ಪ ಒರಟೆಂದು ಕಂಡುಬಂದರೂ, ಒಂದು ಎಳೆಯ ಹಾಗೂ ಮುಗ್ಧ ಹೆಣ್ಣಿನ ಅಂತರಿಕ ಭಾವನೆಗಳ ವಿನ್ಯಾಸವನ್ನೂ ಪ್ರೇಮ ಜೀವನದ ಆಶೆ—ಆಕಾಂಕ್ಷೆಗಳನ್ನೂ, ಮಾನಸಿಕ ಹೋರಾಟ—ತೊಳಲಾಟಗಳನ್ನೂ ಬಹು ಸೂಕ್ಷ್ಮವಾಗಿ, ಮಾರ್ಮಿಕವಾಗಿ ಈ ಕಾದಂಬರಿ ಚಿತ್ರಿಸುತ್ತದೆ—ಎಂದು ಅದರ ಪ್ರಸಿದ್ಧಿ ಇದೆ.

ಇದಲ್ಲದೆ ಅಕ್ಕನು ಜೀವಿಸಿದ್ದಾಗ ಇಬ್ಬರೂ ಸೋದರಿಯರು ಕೂಡಿ, ಮಿಸೆಸ್ ಬೇಡರ್ ಎಂಬವಳ ಒಂದು ಫ್ರೆಂಚ್ ಕಾದಂಬರಿಯ ಅನುವಾದದಲ್ಲಿಯೂ ತೊಡಗಿದ್ದರು. ಆದರೆ ಅದು ಪೂರ್ಣವಾಗಲಿಲ್ಲ. ಈ ಅನುವಾದ ಕಾರ್ಯದ ನಿಮಿತ್ತದಿಂದ ಮಿಸೆಸ್ ಬೇಡರ್ ಮತ್ತು ತರು ದತ್ತ ಇವರಲ್ಲಿ ಅನ್ಯೋನ್ಯವು ಬೆಳೆದುಬಂದಿತ್ತು. ಆ ಫ್ರೆಂಚ್ ಹೆಣ್ಣುಮಗಳೇ ಮುಂದೆ ಈ ಕಾದಂಬರಿಗೊಂದು ಒಪ್ಪವನ್ನು ಕೊಟ್ಟು ಪ್ರಸಿದ್ಧಿಸಿದಳು.

ಇದೇ ಕಾಲಕ್ಕೆ, ತರೂನ ಪ್ರಕೃತಿಯೂ ಕುಸಿಯಿತು. ಪರೀಕ್ಷಿಸಿ ನೋಡಿದಾಗ, ಅಕ್ಕನಿಗೆ ಅಂಟಿದ್ದ ಕ್ಷಯ ಬೇನೆಯು ಇವಳನ್ನೂ ಕಬಳಿಸ ತೊಡಗಿದ್ದುದು ಕಂಡುಬಂದಿತು. ಇದೇ ಬೇನೆಯಿಂದ ಎರಡು ಮಕ್ಕಳನ್ನು ಕಳೆದುಕೊಂಡಿದ್ದ ತಂದೆಯು ಅವಳ ಪ್ರಕೃತಿಯ ಬಗ್ಗೆ ಎಷ್ಟೆಲ್ಲ ಎಚ್ಚರ ವಹಿಸಿದರು. ಆದರೆ ಬೇನೆಯು ಮಾತ್ರ ಬೆಳೆಯುತ್ತಲೆ ಹೋಯಿತು. ತಾನಿನ್ನು ಬಹುಕಾಲ ಈ ಜಗತ್ತಿನಲ್ಲಿ ಬದುಕೆನೆಂಬ ಭಾವನೆ ಬಂದಾಗ ತರುಲತೆಯು ಬರವಣಿಗೆಗೆ ಹೆಚ್ಚೆಚ್ಚು ಅಂಟಿಕೊಂಡಳು. ಅವಳ ಕಾರ್ಯೋತ್ಸಾಹ ಹಾಗೂ ಮಾನಸಿಕ ಶಕ್ತಿಗಳು ಹುರಿಗೊಂಡವು. ಹೊಸ ಪದ್ಯ ರಚನೆಗೆ ಕೈಯಿಕ್ಕಿದಳು. It is only physical pain which makes me cry. My spirit is in peace ಎಂಬುದಾಗಿ ಆಗಿನ ದಿನಗಳ ತನ್ನ ಬದುಕಿನ ಹೋರಾಟದ ಒಂದು ದಿನಚರಿಯಲ್ಲಿ ತರು ಯಥಾರ್ಥವಿದ್ದುದನ್ನೆ ಹೇಳಿದ್ದಾಳೆ.

### ಅಕಾಲ ಮರಣ

ಮುಂದೆ ಬರೆಯುವುದು ಅಶಕ್ಯವಾಗುವಷ್ಟು ಆಕೆ ನಿತ್ರಾಣ ಹೊಂದಿದಳು. ಆ ಮೇಲೆ ಬಹಳ ದಿನ ಬದುಕಲಿಲ್ಲ- ದಿ. ೩೦-೮-೧೮೭೭ ರಂದು ತನ್ನ ೨೧॥ ವರ್ಷ ವಯಸ್ಸಿನಲ್ಲಿ ತೀರಿಕೊಂಡಳು. ಒಂದರ ಮೇಲೊಂದು ಮಕ್ಕಳನ್ನು ಕಳೆದುಕೊಂಡ ಆ ಮುಪ್ಪಿನ ತಂದೆ ತಾಯಿಗಳ ಗೋಳು ಹೇಳತೀರದು. 'ನನ್ನ ಮೂವರು ಮುದ್ದು ಮಕ್ಕಳ ನಡೆನುಡಿಗಳು ಮರುದನಿಯಿಸುತ್ತಿರುವ ಈ ವಿಶಾಲವಾದ, ಬರಿದಾದ ಮನೆಯಲ್ಲಿ ನಾನು ನನ್ನ




ಹೆಂಡತಿ ಇಂಥ ಇಳಿ ವಯಸ್ಸಿನಲ್ಲಿ ಒಂಟಿಯಾಗಿ ಉಳಿದೆವಲ್ಲಾ!' ಎಂದು ಗೋವಿಂದಚಂದ್ರರು ದುಃಖಿಸಿದರು.

ದುಃಖದ ಭರವು ಕಡಿಮೆಯಾದ ಮೇಲೆ ತಂದೆಯು ಮಗಳ ಕೋಣೆಯಲ್ಲಿನ ಕಾಗದದ ಕಟ್ಟುಗಳನ್ನು ತಿರುವಿ ಹಾಕಿದಾಗ, ಅನೇಕ ಬಿಡಿ ಕವನಗಳ ಹಸ್ತಪ್ರತಿಗಳು ಹೊರಟವು. ಬಾಲ್ಯದಲ್ಲಿ ತನ್ನ ತಾಯಿಯಿಂದ ಕೇಳಿದ ಪುರಾಣಕತೆಗಳು, ಮತ್ತು ತಮ್ಮಿಂದ ಕಲಿತ ಸಂಸ್ಕೃತ ಸಾಹಿತ್ಯ ವಾಚನದ ಫಲವಾಗಿ, ಆಕೆಯು ರಚಿಸಿದ ಭಾರತೀಯ ಪುರಾಣಗಳಿಂದ ಹೆಣೆದ ಇಂಗ್ಲಿಷ ಕಥನ ಕವನಗಳು ದೊರೆತುವು. ಅವುಗಳನ್ನು Ballads and legends of Hindoostan ಎಂಬ ಹೆಸರಿನಲ್ಲಿ ಪ್ರಕಟಿಸಲಾಯಿತು. ಅವಳ ಮೊದಲ ಪದ್ಯ ಗ್ರಂಥವೂ ಪುನರ್ಮುದ್ರಣ ಕಂಡಿತು.

ವೈಯಕ್ತಿಕ ಜೀವನದಲ್ಲಿ ತರು ದತ್ತಳು ಆತ್ಯಂತಿಕವಾಗಿ ನಿಸರ್ಗಪ್ರೇಮಿನಿಯಾಗಿದ್ದಳು. ಅವಳ ಮನಸ್ಸು ಜೀವನದಲ್ಲಿಯ ಯಾವುದೇ ಘಟನೆಗೆ ಬಲು ತೀವ್ರವಾಗಿ ಪ್ರತಿಕ್ರಿಯೆಯನ್ನು ತೋರಿಸುತ್ತಿದ್ದಿತು. ಅಷ್ಟು ಚಿಕ್ಕ ವಯಸ್ಸಿನಲ್ಲಿಯೆ, ದೇಶ ವಿದೇಶಗಳಲ್ಲಿ ಪರಿಚಯಸ್ಥರನ್ನು ಸಂಪಾದಿಸಿದ್ದುದು ಅವಳ ಪರತೆಯನ್ನು ತೋರಿಸುತ್ತಿದ್ದಿತು. ಅವಳ ವಿವಿಧ ಪತ್ರಗಳ ಸಂಕಲನವೂ ಪ್ರಕಟವಾಗಿದೆ. ಸುಪ್ರಸಿದ್ಧ ಲೇಖಕ ರಮೇಶಚಂದ ದತ್ತ ಅವಳ ಸಮೀಪದ ಬಂಧುವಾಗಿದ್ದುದನ್ನೂ ಇಲ್ಲಿ ನೆನೆಯಬಹುದಾಗಿದೆ.

### ಧ್ರುವ ತಾರೆ

ತರು ದತ್ತಳ ಸಾಹಿತ್ಯರಚನೆ ಕೇವಲ ಮೂರುವರೆ ವರುಷಗಳಿಗೆ ಮಾತ್ರ ಸೀಮಿತವಾಗಿದೆ. ಅವಳ ಕವಿತ್ವವು ದೋಷರಹಿತವೂ ಪರಿಪೂರ್ಣವೂ ಇದ್ದಿತೆಂದು ಹೇಳಲಿಕ್ಕಿಲ್ಲನಾದರೂ ಅದರಲ್ಲಿಯ ಭಾವನಿರ್ಭರತೆಯೂ ಉಚ್ಚ ಮಟ್ಟದ ಪ್ರಕೃತಿ ದರ್ಶನವೂ ಶಬ್ದಗಳ (ಅದೂ ಪರಭಾಷೆಯ) ನಿರರ್ಗಳ ಓಟವೂ ಕಾವ್ಯಪ್ರೇಮದ ಮೆಚ್ಚಿಕೆಯನ್ನು ಸಂಪಾದಿಸುವದಕ್ಕೆ ಕಾರಣವಾದುದು ಆಕೆ ಪ್ರಥಮ ವರ್ಗದ ಕವಯಿತ್ರಿಯೆಂಬುದನ್ನು ಸಿದ್ಧ ಮಾಡಿಕೊಟ್ಟವು. ಅಪ್ರಬುದ್ಧತೆ, ಅನನುಭವಿಕತೆಗಳ ವಿರುದ್ಧ ಹೋರಾಡಿ ಅವಳ ಉಜ್ವಲ ಪ್ರತಿಭೆಯು ಪುಟದೇಳುತ್ತಿದ್ದ ಕಾಲದಲ್ಲಿಯೆ ಆಕೆ ಕೊನೆಗೊಳ್ಳಬೇಕಾಯಿತು. ಪರಭಾಷೆಯ ಮಾಧ್ಯಮ, ಚಿಕ್ಕ ವಯೋಮಾನ, ಅಶಕ್ತ ಪ್ರಕೃತಿ ಇವುಗಳನ್ನು ಎದುರಿಸಿಯೂ ಆಕೆ ಉಚ್ಚ ಮಟ್ಟದ ಕವಿತ್ವವನ್ನು ರಚಿಸಿದಳು. ಅಕಾಲ ಮರಣಕ್ಕೆ ತುತ್ತಾಗಿ ಆಕೆ ಬರೆದದ್ದು ಅಲ್ಪವಾದರೂ ಭಾರತೀಯ ನವೋದಯ ಸಾಹಿತ್ಯಕ್ಷಿತಿಜದಲ್ಲಿ ಧ್ರುವತಾರೆಯಾಗಿ ಬಹುಕಾಲ ಅದು ಉಳಿಯುವುದರಲ್ಲಿ ಆಶ್ಚರ್ಯವೇನಿಲ್ಲ.








ಮೀನಾ ಮತ್ತು ಡಾ. ಬಾಳಿಗರಲ್ಲಿ ತುಂಬ ಪರಿಚಯವಾಗಲು ಕಾರಣನಾದ ಸೋನ್ಯಾ ಮೊದಲು ಅವರನ್ನು ತುಂಬ ಹೆದರಿಸಿದ್ದನು. ಡಾ. ಬಾಳಿಗಾ ದಾರಿತಪ್ಪಿ ಮಾವನ ಮನೆ ಸೇರಲು ಸೋನ್ಯಾನೇ ಕಾರಣನಾದ. ಹೀಗೆ ಅನಿಮಿತ್ತ ಬಂಧುವಾಗಿ ಸೋನ್ಯಾ ಅವರನ್ನು ಬಾಳಸಂಗಾತಿಯನ್ನಾಗಿ ಮಾಡಿದ ಪ್ರಸಂಗ ತುಂಬಾ ಸ್ವಾರಸ್ಯಕರವಾದುದಲ್ಲವೇ ?

ಲೇಖಕರು : ಶ್ರೀ ಅರವಿಂದ ರಾಜಪುರೋಹಿತ, ಎಂ ಎ.

ಶ್ರೀ ಗೋವಿಂದ ಭಾಂಡಾರಕರರ ಮಗಳು ಮೀನಾ ತನ್ನ ಹಿರಿಯ ಅಕ್ಕನನ್ನು ಕಂಡುಬರಲೆಂದು ಮಲ್ಪೆಗೆ ಹೋಗಿದ್ದಳು. ಹೋಗುವಾಗ ಅವಳು ತನ್ನ ಪ್ರೀತಿಯ 'ಸೋನ್ಯಾ' ನನ್ನು ಜೊತೆಯಲ್ಲಿಯೇ ಒಯ್ದಿದ್ದಳು. ಸೋನ್ಯಾ ಯಾವ ಜಾತಿಯ ನಾಯಿಕುನ್ನಿ ಎಂಬುದು ಮೀನಾಳಿಗೇ ತಿಳಿಯದು. ಅದರ ಎತ್ತರ ಕಡಿಮೆ. ಅಂದರೆ ಆರೇಳು ಇಂಚು ಆಗಬಹುದು. ಉದ್ದ ಮಾತ್ರ ಒಂದೂವರೆ ಫೂಟಗೆ ಕಡಿಮೆಯಾಗಲಿಕ್ಕಿಲ್ಲ. ಮೈತುಂಬ ಉದ್ದುದ್ದ ಕೂದಲುಗಳು. ಮೀನಾ ಅದನ್ನು ಬಗಲಲ್ಲಿ ಎತ್ತಿಕೊಂಡೇ ಹೊರಡುವಳು. ಆಗ ಅವಳಿಗೂ ಒಂದು ಶೋಭೆ. ಸೋನ್ಯಾನಿಗೂ ಒಂದು ಶೋಭೆ.

ಮಲ್ಪೆಯಲ್ಲಿ ಅವಳು ಒಂದು ದಿನ ಇದ್ದಳು. ಮರುದಿನ ಅವಳು ಕಂಬಳತೋಟದ ವರೆಗೆ ಬಂದು ಅಲ್ಲಿ ತನ್ನ ಗೆಳತಿಯನ್ನು ಕಂಡಳು. ಗೆಳತಿ ಅವಳಿಗೂ ಅವಳ ನಾಯಿಮರಿಗೂ ತನ್ನಿಂದ ಸಾಧ್ಯವಾದಷ್ಟು ಆದರೋಪಚಾರ ಮಾಡಿದಳು. "ಏನೆಲ್ಲ ಬಂದದ್ದು ?" ಎಂದು ವಿಚಾರಿಸಿದಳು. ಮೀನಾ ತಾನು ಅಕ್ಕನ ಊರಿಗೆ ಹೋದ ಸುದ್ದಿಯನ್ನೂ ಅಕ್ಕ ಅವಳ ಮದುವೆಯ ವಿಷಯವನ್ನು ಎತ್ತಿ ಮಾತಾಡಿದುದರಿಂದ ಏನು ತಂಟೆ ತೆಗೆದು ಒಂದೇ ದಿನದಲ್ಲಿ ಅಲ್ಲಿಂದ ಕಿತ್ತಿ ಬಂದ ವಿಷಯವನ್ನೂ ಹೇಳಿದಳು. ಗೆಳತಿ ನಕ್ಕಳು. "ಮದುವೆಯ ವಿಷಯ ಮಾತಾಡಿದರೆ ತಂಟೆ ತಳೆ ಏಳಬೇಕು ?" ಎಂದಳು. ಮೀನಾ ಹುಬ್ಬು ಏರಿಸಿ "ಮತ್ತೆ, ಮದುವೆಯೆಂದರೆ ಸಾಮಾನ್ಯ ವಿಷಯವೇ ?" ಎಂದಳು. ಗೆಳತಿ ಮುಕ್ತ ನಕ್ಕು "ಅದೇಂಥ ದೊಡ್ಡ ವಿಷಯವೋ ಮದುವೆಯಾದಮೇಲೂ ನನಗೆ ತಿಳಿಯಲಿಲ್ಲಮ್ಮ !" ಎಂದಳು. ಮೀನಾ ಮುಖ ಗಂಟುಮಾಡಿ "ನನ್ನ ಮಾತು ಎಂದರೆ ನಿನಗೂ ಒಂದು ತಮಾಷೆ." ಎಂದಳು. ಗೆಳತಿ ಮಾತು ಬೆಳಸದೆ ಮನಸ್ಸಿನಲ್ಲಿಯೇ ನಕ್ಕಳು.

ಹೊತ್ತು ಮಧ್ಯಾಹ್ನದ ಮೂರು ಗಂಟೆಯಾಗಿತ್ತು. ಮೀನಾ ತನ್ನ ಗೆಳತಿಯಿಂದ ಬೀಳ್ಕೊಟ್ಟು ಹೊತ್ತು ಇರುವಾಗಲೇ ಗೊತ್ತು ಸೇರಿಕೊಳ್ಳುವದು ಒಳ್ಳೆಯದೆಂದು ಹೊರಟಳು. ಅವಳು ಕೆಮ್ಮಣ್ಣು ಪೇಟೆಯ ವರೆಗೆ ನಡೆದು ಬಂದು, ಅಲ್ಲಿ ಏನಾದರೂ ಖರೀದಿಸಬೇಕು, ಎಂದು ವಿಚಾರಿಸಿದಳು. ಏನು ಕೊಳ್ಳಬೇಕೆಂಬುದೇ ಅವಳಿಗೆ ತೋಚಲಿಲ್ಲ. ಹಾಗೆಯೇ ಮತ್ತೆ ಪಡುಕುದಿರಿನ ಸೇತುವೆಯ ವರೆಗೆ ಬಂದಳು. ಸ್ವರ್ಣನದಿಯ ಆ ಚಿಕ್ಕ ಶಾಖೆಯಲ್ಲಿ ಮೂಡಣಕ್ಕೆ ಮುಖಮಾಡಿ ಒಂದು ನಾವೆ ನಿಂತಿತ್ತು. ಮೀನಾ ಸ್ವಲ್ಪ ಅವಸರದ ಹೆಜ್ಜೆ ಇಟ್ಟು ಮುಂದೆ ಹೋಗಿ "ಎಯ್, ಪಾಡಾದಾರ, ಬ್ರಹ್ಮಾವರಕ್ಕೆ ನಾವೆ ಒಯ್ಯುತ್ತೀ ಏನು ?" ಎಂದು ಕೇಳಿದಳು. ನಾವಿಕನಿನ್ನೂ ಉತ್ತರ ಕೊಟ್ಟಿರಲಿಲ್ಲ. ಆ ನದೀತೀರದಲ್ಲಿ ಅವಳ ಮಾತು ವಿಚಿತ್ರವಾಗಿ ಪ್ರತಿಧ್ವನಿಯಾಯಿತು. ಅವಳು ಆಶ್ಚರ್ಯದಿಂದ ಹಿಂತಿರುಗಿ ನೋಡಿದಳು. ಅಲ್ಲಿ ಡಾ. ಅನಂತ ಬಾಳಿಗರು ಕೈಯಲ್ಲಿ ಒಂದು ಸೂಟಕೇಸ ಹಿಡಿದುಕೊಂಡು ಅವಸರವಸರವಾಗಿ ಬರುತ್ತಿದ್ದರು. ಅವರಿಗೂ ಬ್ರಹ್ಮಾವರಕ್ಕೆ ಹೋಗಬೇಕಾಗಿತ್ತು. ಅವರೂ ಹೊತ್ತು ಇರುವಾಗಲೇ ಗೊತ್ತು ಸೇರಬೇಕು, ಎಂದು ಹೊರಟಿದ್ದರು. ಸ್ವರ್ಣ ನದಿಯಲ್ಲಿ ಮೂಡಣಕ್ಕೆ ಮುಖಮಾಡಿ ನಿಂತ ಬರಿದಾದ ನಾವೆಯನ್ನು ನೋಡಿದರು. ಮೀನಾ ನಾವಿಕನನ್ನು ಕೂಗಿದ್ದಂತೆಯೇ ಅವರೂ ಕೂಗಿದ್ದರು.

ನಾವಿಕನಿಗೆ ಸರಿಯಾಗಿ ಕನ್ನಡ ಬರುತ್ತಿರಲಿಲ್ಲ. ಮಧ್ಯಾಹ್ನದ ನಂತರ ಭೂದಪೂಜಾರಿಯ ದರುಶನ ಅವನಿಗಾಗಿತ್ತು. ಆದ್ದರಿಂದ ಸ್ವಲ್ಪ ಜೋಲಿಯಲ್ಲಿಯೂ ಇದ್ದ. ಅವನು ಒಂದು ಸಲ ಹಾಗೇ ಮುಖ ಎತ್ತಿ ಮೀನಾಳನ್ನೂ ಅವಳ ಹಿಂದೆಯೇ ಇದ್ದ ತರುಣ ಡಾಕ್ಟರ ಅನಂತ ಬಾಳಿಗರನ್ನೂ ನೋಡಿದ. ಮನಸ್ಸಿನಲ್ಲಿಯೇ ಒಳ್ಳೇ ಗಿರಾಕಿಗಳ ಜೋಡಿ, ಎಂದುಕೊಂಡ. ನಿಶ್ಚಿತ ಸ್ವರದಲ್ಲಿಯೇ ಹೇಳಿಬಿಟ್ಟ. "ಒಬ್ಬರಾದರೂ ಅಷ್ಟೇ, ಇಬ್ಬರಾದರೂ ಅಷ್ಟೇ, ನಾಲ್ಕು ರೂಪಾಯಿಯ ಕೆಳಗೆ ನಾವೆಯನ್ನು ಹರಿಹಾಯಿಸುವದಿಲ್ಲ."

ಮೀನಾ ಕತ್ತು ತಿರುಗಿಸಿ ಡಾ|| ಅನಂತ ಬಾಳಿಗರ ಮುಖ ನೋಡಿದಳು. ಡಾ|| ಅನಂತ ಬಾಳಿಗರು ಮೀನಾಳ ಮುಖ ನೋಡಿದರು. ನಾಲ್ಕೂ ಕಣ್ಣುಗಳು ಯಾವುದೋ ಒಂದು ಒಪ್ಪಂದಕ್ಕೆ ಬಂದವು. ಈಗ ಅನಂತ ಬಾಳಿಗರೇ ಮುಂದಾಗಿ "ಹುಂ, ನಾಲ್ಕು ರೂಪಾಯಿ ಆದೀತು. ಹೊತ್ತು ಇಳಿಯತೊಡಗಿದೆ. ಬೇಗ ನಾವೆಯನ್ನು ಬಿಚ್ಚು" ಎಂದರು. ನಾವಿಕನು ಅವರಿಬ್ಬರೂ ನಾವೆಯಲ್ಲಿ ಕುಳಿತುಕೊಳ್ಳಲು ಅನುಕೂಲತೆ ಮಾಡಿಕೊಟ್ಟ. ಮೀನಾ ತನ್ನ ಪ್ರೀತಿಯ ಸೋನ್ಯಾನೊಡನೆ, ಡಾ|| ಅನಂತ ಬಾಳಿಗರು ತಮ್ಮ ಸೂಟಕೇಸಿನೊಡನೆ ಬದಿ ಬದಿಯಾಗಿಯೇ ಆಸೀನರಾದರು. ಸ್ವಲ್ಪ

ತಿಳಿವಳಿಕೆ ಹೆಚ್ಚಿಗೆ ಇದ್ದ ವಾಡಾದಾರನು ಅವರಿಗೆ ಹಾಗೆಯೇ ಆಸನದ ವ್ಯವಸ್ಥೆ ಮಾಡಿದ್ದ.

"ಐದು ಮಿನೀಟು ಕುಳಿತುಕೊಳ್ಳಿರಿ. ನಾನು ಈಗಲೇ ಬಂದುಬಿಟ್ಟೆ" ಎಂದವನೇ ವಾಡಾದಾರನು ನಾವೆಯಿಂದ ಜಿಗಿದು ದಡಕ್ಕೆ ಹೋದನು. "ನೀನು ಹೆಚ್ಚು ತಡಮಾಡಿದರೆ ನಾವು ಬೇರೆ ನಾವೆ ನೋಡುತ್ತೇವೆ ಕಾಣು" ಎಂದು ಮೀನಾ ಆದಷ್ಟು ಕೂಗಿ ಹೆದರಿಸಿದಳು. ವಾಡಾದಾರನು ಹಿಂದೆ ಮುಂದೆ ನೋಡದೆ ಇನ್ನೊಮ್ಮೆ ಬೂದ ಪೂಜಾರಿಯ ದರುಶನಕ್ಕೆ ಹೋಗಿಯೇ ಬಿಟ್ಟನು.

ಮೀನಾಳ ಮಡಿಲಲ್ಲಿ ಸ್ವಸ್ಥವಾಗಿ ಕುಳಿತ ಸೋನ್ಯಾ ಡಾ|| ಬಾಳಿಗರನ್ನೇ ಹುಳುಹುಳು ನೋಡ ತೊಡಗಿತ್ತು. ಅವರ ಮೇಲೆ ನೆಗೆದು ಹಾರಬೇಕು, ಎಂದು ಅದಕ್ಕೆ ಇಲ್ಲದ ಚಪಲ. ಅದು ಗಂಟಲಲ್ಲಿಯೇ ಸಣ್ಣಾಗಿ ಗುರ್ ಎನ್ನುತ್ತ ಮಲಗಿತ್ತು. ಮೀನಾ ಅದರ ಸ್ವಭಾವವನ್ನು ತಕ್ಕ ಮಟ್ಟಿಗೆ ಅರಿತಿದ್ದಳಾದ್ದರಿಂದ ಅದಕ್ಕೆ ಅವಿವೇಕ ಎಸಗಲಿಕ್ಕೆ ಅವಕಾಶ ಕೊಡದೆ ಗಟ್ಟಿಯಾಗಿ ಹಿಡಿದುಕೊಂಡಿದ್ದಳು.

ಡಾ|| ಬಾಳಿಗರು ಮೀನಾಳಿಗೆ ತೀರ ಅಪರಿಚಿತರೇನೂ ಅಲ್ಲ. ಈ ಒಂದು ವರ್ಷದಲ್ಲಿ ಅವರು ಬ್ರಹ್ಮಾವರದಲ್ಲಿ ಒಳ್ಳೇ ಚಿಕಿತ್ಸಕರೆಂದು ಖ್ಯಾತಿಗೊಂಡಿದ್ದರು. ದುರ್ದೈವವಶಾತ್ ಮೀನಾಳಿಗೆ ಈ ಒಂದು ವರ್ಷದಲ್ಲಿ ಯಾವುದೇ ಬೇನೆ ಬರದೆ ಇದ್ದುದರಿಂದ ಈ ಮೊದಲು ಅವರೊಡನೆ ನಿಕಟ ಪರಿಚಯ ಬೆಳೆಯಲಿಲ್ಲ. ಅವಳು ಬ್ರಹ್ಮಾವರ ಪೇಟೆಯಲ್ಲಿ ಅವರನ್ನು ಎಷ್ಟೋ ಸಲ ನೋಡಿದ್ದಾಳೆ. ಅವರು ಒಳ್ಳೇ ಸದ್ಗುಣಗಳಾದ ತರುಣರೆಂದು ಜನ ಮಾತಾಡುತ್ತಿದ್ದುದನ್ನು ಕೇಳಿದ್ದಾಳೆ. ಇಷ್ಟೇ, ಡಾ|| ಬಾಳಿಗರಿಗೆ ಮಾತ್ರ ಮೀನಾ ಯಾರು, ಎಂಬುದು ಗೊತ್ತಿರಲಿಕ್ಕಿಲ್ಲ. ಏನೋ ಆಕಸ್ಮಿಕವಾಗಿ ಅವರಿಬ್ಬರೂ ಈಗ ಸಮೀಪ ಬಂದದ್ದುಂಟು. ಮೀನಾಳಿಗೆ ಈಗ ಅವರು ಎಂದರೆ ಏನೋ ಸ್ವಲ್ಪ ಮೈ ಜುಮ್ಮು. ಮುದುಡಿಕೊಂಡು ಸೋನ್ಯಾನನ್ನು ಗಟ್ಟಿಯಾಗಿ ಹಿಡಿದುಕೊಂಡು ಕುಳಿತಳು.

ಇತ್ತ ಡಾಕ್ಟರ ಅನಂತ ಬಾಳಿಗರ ಮೈಯೂ ಕ್ಷಣಕ್ಷಣಕ್ಕೆ ಜುಮ್ಮೆನ್ನತೊಡಗಿತ್ತು. ನಾಯಿ ಎಂಬ ಪ್ರಾಣಿ ಅವರ ಹಿಂದಿನ ಜನ್ಮದ ಶತ್ರು. ಅದಕ್ಕೆಂತಲೇ ಸೋನ್ಯಾ ಈಗ ಅವರ ಮುಖವನ್ನು ಕಂಡ ಕೂಡಲೇ ಗುರ್ ಎನ್ನತೊಡಗಿತ್ತು. ಆ ದನಿ ಕೇಳಿ ಡಾ|| ಅನಂತ ಬಾಳಿಗರ ಜೀವ ಅವರ ಮೊಳಕಾಲುಗಳಲ್ಲಿ ಥರಥರ ನಡುಗತೊಡಗಿತು. ಅವರ ಮುಖದಲ್ಲಿ ಸೋನ್ಯಾನಿಗೆ ಉತ್ತೇಜನ ಕೊಡಬಹುದಾದ ಕಳೆ ತೀವ್ರವಾಗಿ ಏರತೊಡಗಿತು.

ಮೀನಾ ಸ್ವರ್ಣನದಿಯ ದಡದಲ್ಲಿ ಎತ್ತರವಾಗಿ ಸುಂದರವಾಗಿ ಬೆಳೆದ ತೆಂಗಿನ ಮರಗಳನ್ನು ನೋಡುತ್ತ ಕುಳಿತಿದ್ದಳು. ಇಳಿಹೊತ್ತಿನ ನಾಲ್ಕು ಗಂಟೆಯ ಬಿಸಿಲಲ್ಲಿ ನದೀತಟದ ಆ ಬನ ಸುಂದರವಾಗಿ ಕಾಣುತ್ತಿತ್ತು. ಆ ಸೌಂದರ್ಯವನ್ನು ಅತೃಪ್ತನೇತ್ರಗಳಿಂದ ಕುಡಿಯುವ ಅಧಿಕಾರವೇನೋ ಹಡುವಲ ಕರಾವಳಿಯ ನಿವಾಸಸ್ಥರಿಗೆಲ್ಲರಿಗೂ ಉಂಟು. ಆದರೆ ಅವಳತ್ತ ಚಲುವಿಕೆಯು ಜಿಂಕೆಯನ್ನು ಬೆನ್ನುಹತ್ತಿ ಹೋದಾಗ ಇಲ್ಲಿ ಸೋನ್ಯಾ ಅವಳ ಮಡಿಲಿಂದ ತಪ್ಪಿಸಿಕೊಂಡು ಡಾ. ಬಾಳಿಗರ ಮೇಲೆ ಚಂಗನೆ ಹಾರಿತ್ತು. ಡಾ. ಬಾಳಿಗರು ಆದಿಮಾನವನಿಗೆ ಸುಸಾಧ್ಯವಾದ ವಿಚಿತ್ರ ಕೂಗುಗಳನ್ನೆಲ್ಲ ಏಕಕಾಲಕ್ಕೆ ಎಬ್ಬಿಸಿ ನಾವೆಯಲ್ಲಿಯೇ ಟಣಪುಣ ಜಿಗಿದಾಡತೊಡಗಿದ್ದರು. ಮೀನಾ ರಭಸದಿಂದ ಎದ್ದು "ಸೋನ್ಯಾ, ಸೋನ್ಯಾ.... ಎಯ್ ಅವಿವೇಕಿ...." ಎಂದು ಸೋನ್ಯಾನ ಕಿವಿಯನ್ನು ಹಿಡಿದು ಈ ಕಡೆಗೆ ಎಳೆದುಕೊಂಡಳು. ಡಾ. ಬಾಳಿಗರು ಮೈಯೆಲ್ಲ ಥರಥರ ನಡುಗುತ್ತ ನಿಂತಿದ್ದರು. ಅವರು ಜಿಗಿದಾಡಿದ ರಭಸಕ್ಕೆ ನಾವೆಯೂ ನೀರಲ್ಲಿ ಮೇಲೆ ಕೆಳಗೆ ಆಗತೊಡಗಿತ್ತು.

ಮೀನಾ ಹುಸಿಮುನಿಸು ತೋರಿಸಿ ಸೋನ್ಯಾನನ್ನು ಒಂದು ಸಲ ಗುದ್ದಿದಳು. ಅದು ಕುಂಯ್ ಕುಂಯ್ ಮಾಡಿತು. ಮೀನಾ ತನ್ನಷ್ಟಕ್ಕೇ ಎಂಬಂತೆ "ಇದರ ಸಲುವಾಗಿ ನನಗೆ ಸಾಕಾಗಿ ಹೋಗಿದೆ. ಇದನ್ನು ಮಲ್ಪೆಯ ಕಡಲಲ್ಲಿ ಚಲ್ಲಿ ಬಂದಿದ್ದರೆ ಒಳ್ಳೆಯದಿತ್ತು" ಎಂದು ಒಟಗುಟ್ಟಿದಳು. ಡಾ. ಬಾಳಿಗರು ಸ್ವಲ್ಪ ದೂರದಲ್ಲಿ ಕುಳಿತು ದಮ್ಮು ಆರಿಸಿಕೊಳ್ಳತೊಡಗಿದ್ದರು. ಅವರ ಹಣೆಯಲ್ಲಿ ಬೆವರಿನ ಒರತೆಯೇ ಮೂಡಿತ್ತು.

"ಎಲ್ಲಿಯಾದರೂ ಕಚ್ಚಲಿಲ್ಲವಷ್ಟೇ?" ಮೀನಾ ಸ್ವಲ್ಪ ಸಂಕೋಚಗೊಂಡು ಕೇಳಿದಳು.

ಡಾ. ಬಾಳಿಗರು ವಿಕೃತಗೊಂಡ ದನಿಯಲ್ಲಿ "ಇಲ್ಲ; ನನ್ನ ಪ್ಯಾಂಟು ಮಾತ್ರ ಸ್ವಲ್ಪ ಹರಿಯಿತು" ಎಂದರು.

"ಪಾಪ, ನಿಮಗೆ ಸುಮ್ಮನೆ ಕಷ್ಟಕೊಟ್ಟಂತಾಯಿತು ನೋಡಿರಿ. ಈ ಸೋನ್ಯಾನಿಗೆ ತಿಳಿವಳಿಕೆಯೇ ಇಲ್ಲ. ಒಳ್ಳೆಯ ಜನರು ಯಾರು, ಕೆಟ್ಟ ಜನರು ಯಾರು, ಎಂಬ ತಿಳಿವಳಿಕೆಯೇನೋ ಇದಕ್ಕೆ ಇದೆ. ಆದರೆ ಕೆಟ್ಟ ಜನರ ಮೇಲೆ ಹೋದರೆ ಅವರು ಕಲ್ಲಿನಿಂದ ಕುಟ್ಟುತ್ತಾರೆಂದು, ಇದು ಒಳ್ಳೆಯ ಜನರ ಮೇಲೆಯೇ ಹೋಗುತ್ತದೆ."

ಡಾ. ಅನಂತ ಬಾಳಿಗರು ಮಾತಾಡಲಿಲ್ಲ. ಈಗ ಅವರ ದಮ್ಮು ಸ್ವಲ್ಪ ಆರಿತ್ತು. ಅವರು ಕರವಸ್ತ್ರದಿಂದ ಹಣೆಯ ಬೆವರು ಒರೆಸಿಕೊಳ್ಳತೊಡಗಿದ್ದರು.

ಮೀನಾ ಈಗ ಸೋನ್ಯಾನ ಜೊತೆ ಮಾತಾಡತೊಡಗಿದಳು: "ಸೋನ್ಯಾ, ಅವರು ಯಾರು ಗೊತ್ತೇ? ನಮ್ಮೂರಿನ ಡಾಕ್ಟರರು ಅವರು. ಅವರ ಪೆಟ್ಟಿಗೆಯಲ್ಲಿ ಗಾಯಕತ್ತರಿಸುವ ದೊಡ್ಡ ಚಾಕು ಇದೆ. ಇಂಜೆಕ್ಶನ್ ಸೂಜಿಗಳಿವೆ. ಈ ಸಲ ದಾಕ್ಷಿಣ್ಯಕ್ಕೆ ಸುಮ್ಮನೆ ಬಿಟ್ಟಿದ್ದಾರೆ. ಇನ್ನೊಂದು ಸಲ ಅವರ ಮೇಲೆ ಹೋಗು, ನಿನ್ನ ಮೋತಿಗೆ ಒಂದು ಚುಚ್ಚಿಯೇ ಬಿಡುತ್ತಾರೆ."

ಈ ಮಾತುಗಳು ಸೋನ್ಯಾನಿಗೆ ತಿಳಿಯುತ್ತಿರಲಿಲ್ಲ. ಆದರೆ ಡಾ|| ಅನಂತ ಬಾಳಿಗರಿಗೆ ಸಂಪೂರ್ಣ ಅರ್ಥವಾಗುತ್ತಿದ್ದವು. ಈ ಹುಡಿಗಿಗೆ ತಮ್ಮ ಪರಿಚಯವಿದೆ ಎಂಬ ವಿಷಯ ಅವರನ್ನು ಚಕಿತಗೊಳಿಸಿತು. ಅವಳನ್ನು ಮಾತ್ರ ಇದುವರೆಗೆ ತಾವು ನೋಡಲಿಲ್ಲ. ಬ್ರಹ್ಮಾವರದಲ್ಲಿ ಯಾರ ಮಗಳೋ? ಕೇಳಬೇಕೆಂದು ಮನಸ್ಸು ತವಕಪಟ್ಟರೂ ಈ ಪ್ರಕ್ಷುಬ್ಧ ವಾತಾವರಣದಲ್ಲಿ ನಾಲಿಗೆ ಏಳಲಿಲ್ಲ. ಡಾ|| ಬಾಳಿಗರು ಈಗ ಐದು ಮಿನಿಟುಗಳ ಹಿಂದೆ ಆದ ಸೋನ್ಯಾನ ಅನಾಹುತವನ್ನು ಮರೆತೇಬಿಟ್ಟರೇನೊ! ಅವರು ಸ್ವಲ್ಪ ಕುತೂಹಲದಿಂದ ಮೀನಾಳ ಸುಂದರ ಮುಖವನ್ನು ಕಣ್ಣೆವೆ ಪಿಳುಕಿಸದೆ ನೋಡುತ್ತ ಕುಳಿತರು.

ಸ್ವಲ್ಪ ಸಂಕೋಚ, ಸ್ವಲ್ಪ ವಿನಯ, ಅದನ್ನು ಹೊರಗೆ ತೋರಿಸುವಂಥ ಒಂದು ಆಕರ್ಷಕ ಭಂಗಿಯಲ್ಲಿ ಕುಳಿತು ಮೀನಾ ಹೇಳಿದಳು: "ತಮ್ಮ ಪರಿಚಯ ನನಗೆ ಸಂಪೂರ್ಣ ಉಂಟು. ನನ್ನ ಬಗೆಗೆ ನಿಮಗೆ ತಿಳಿದಿರಲಿಕ್ಕಿಲ್ಲ. ನಾನು ಗೋವಿಂದ ಭಾಂಡಾರಕರರ ಮಗಳು ಮೀನಾ..."

"ಗೋವಿಂದ ಭಾಂಡಾರಕರರು?" ಡಾಕ್ಟರರು ಏನೋ ಸ್ಮರಿಸಿಕೊಂಡು ಕೇಳಿದರು. "ಮಂಗಳೂರಲ್ಲಿ ಅಡ್ವೊಕೇಟರರು ತಾನೇ?"

"ಹೌದು, ಅವರೇ....; ನಮ್ಮದು ಮೊದಲು ಬ್ರಹ್ಮಾವರವಾಯಿತು. ನಾನು ನನ್ನ ಚಿಕ್ಕ ತಮ್ಮನ ಜೊತೆ ಇಲ್ಲಿಯೇ ಇದ್ದದ್ದಾಯಿತು. ನಮ್ಮ ಅಜ್ಜಿಗೂ ಮಂಗಳೂರು ಹಿಡಿಯದು. ಅವರೂ ಇಲ್ಲಿಯೇ. ಬಾಗಾಯ್ತ ನೋಡಿಕೊಂಡು ಇದ್ದೇವೆ.......... ಇದೇನು? ಈ ವಾಡಾದಾರ



ಕಡಲು ಮುಳುಗಿದನೋ? ಇವನ ಸುಳಿವೇ ಇಲ್ಲ.''

ಇವರು ಹೀಗೆಯೆ, ನಿಂತ ನಾವೆಯಲ್ಲಿ ಕುಳಿತು ಕಾಲುಗಂಟೆಯಾದರೂ ಕಳೆದಿರಬಹುದು. ನಾಡಾದಾರ ಮಟಾಮಾಯವಾಗಿಬಿಟ್ಟಿದ್ದ. ಹಡುಕುದುರಿನಿಂದ ಜನ ಸೇತುವೆ ದಾಟಿ ಕೆಮ್ಮಣ್ಣುಪೇಟೆಗೆ ಬಂದು ಹೋಗುತ್ತಾ ಇದ್ದರು. ಅವರೆಲ್ಲ ಇವರಿಬ್ಬರನ್ನೂ ಒಂದು ಸಲ ಮಿಕಿ ಮಿಕಿ ನೋಡಿ ಹೋಗುತ್ತಿದ್ದರು, ಈಚೆಯ ಬದಿಯಿಂದ ಒಬ್ಬ ಮೊಗವೀರರ ಹೆಂಗಸು ಬುಟ್ಟಿಯಲ್ಲಿ ಮೀನು ತುಂಬಿಕೊಂಡು ಇವರ ಬಳಿಯೇ ಬಂದಳು. ಅವಳು ದಡದಲ್ಲಿ ನಿಂತು ಬುಟ್ಟಿಯನ್ನು ಇಳಿಸಿ ಇವರಿಬ್ಬರಿಗೂ ಅದರಲ್ಲಿಯ ಎರಡು ಮೀನುಗಳನ್ನು ಕಡೆಗೆ ತೆಗೆದು ತೋರಿಸಿ "ಕಂಡಿಕೆ[1] ಯಾದೀತೆ? ಒಳ್ಳೇ ತಾಜಾ ಇದೆ.'' ಎಂದು ಹೇಳಿದಳು.

ಮೀನಾ ಕುತೂಹಲದಿಂದ "ಹೇಗೆ ಮಾರಿದೆಯಮ್ಮ? ಇದು ಕಂಡಿಕೆ ಏಕಾದೀತು? ಬೆಂಗಡೆ[2] ಕಾಣುತ್ತಿದೆ'' ಎಂದು ಸಂಶಯವ್ಯಕ್ತ ಮಾಡಿದಳು.

ಮೊಗವೀರರ ಹೆಂಗಸು "ಬೆಂಗಡೆ ಕೆಟ್ಟದೆನ್ನುವಿರೇನಮ್ಮಾ? ಅದರ ಸಾರು ಮಾಡಿ ಮನೆಯವರಿಗೆ ಹಾಕಿದರೆ ಎರಡುಪಟ್ಟು ಅನ್ನ ಉಂಡಾರು.'' ಎಂದು ಡಾ|| ಬಾಳಿಗರ ಕಡೆಗೆ ಅರ್ಥಪೂರ್ಣವಾಗಿ ನೋಡಿ ನಕ್ಕಳು.

"ಅಂತೂ ಇದು ಬೆಂಗಡೆಯಾಯಿತು. ಹೇಗೆ ಮಾರಿಯಾಯಿತು? ಈಗಲಾದರೂ ಸತ್ಯ ಹೇಳು.'' ಮೀನಾ ಕೇಳಿದಳು.

"ನಾನು ಹೇಳುವದು ಯಾವಾಗಲೂ ಒಂದೇ ಧಾರಣೆಯಮ್ಮ, ಎರಡಕ್ಕೆ ಒಂದು ರೂಪಾಯಿಯಾಯಿತು.''

ಮೀನಾ ಅವಳ ಜೊತೆ ವಾದಮಾಡಿ ಎಂಟಾಣೆಗೆ ಎರಡರಂತೆ ಧಾರಣೆ ಹೊಂದಿಸಿದಳು. ಮೀನಾ ಎರಡು ಮೀನುಗಳನ್ನು ಕೊಂಡರೆ, ಡಾ|| ಬಾಳಿಗರು ತಾವೂ ಎರಡು ಮೀನು ಕೊಂಡದ್ದು ನೋಡಿ ಆ ಮೀನುಗಾರರ ಹೆಂಗಸು ಇದೇಕೆ ಹೀಗೆ, ಎಂದು ಆಶ್ಚರ್ಯಪಟ್ಟಳು. ತರುವಾಯ ಮೀನಾ ಬೇಡ ಬೇಡ ಎಂದು ಹೇಳಿದರೂ ಕೇಳದೆ ಡಾ|| ಬಾಳಿಗರೇ ನಾಲ್ಕು ಮೀನುಗಳ ಕ್ರಯ ಒಂದು ರೂಪಾಯಿ ಕೊಟ್ಟಾಗ ಆ ಮೀನುಗಾರರ ಹೆಂಗಸು ಇಲ್ಲಿಯೇನೋ ಗಮ್ಮತ್ತಿದೆ, ಎಂದುಕೊಂಡು ತನ್ನಷ್ಟಕ್ಕೇ ಹೋದಳು.

ಡಾ|| ಬಾಳಿಗರ ಬಳಿ ಇದ್ದ ಅಂದಿನ ಇಂಗ್ಲಿಷ ದಿನಪತ್ರಿಕೆಯ ಬೇಡಾದ ಪುಟವನ್ನು ಹರಿದು ತಮ್ಮ ಎರಡು ಮೀನುಗಳನ್ನೂ ಮೀನಾಳ ಎರಡು ಮೀನುಗಳನ್ನೂ ಪ್ಯಾಕಮಾಡಿದರು. ಅವರು ಹಾಗೆ ಮಾಡುತ್ತಿದ್ದಂತೆಯೇ ಅವರ ಜನ್ಮಶತ್ರು, ಮೀನಾಳ ಮಡಿಲಲ್ಲಿ ಕುಳಿತ ಕುನ್ನಿ, ಡಾ|| ಬಾಳಿಗರನ್ನು ಆಶೆಯ ಕಣ್ಣುಗಳಿಂದ ನೋಡಿತು.

ಸುಮಾರು ನಾಲ್ಕೂ ಮುಕ್ಕಾಲಿಗೆ ನಾಡಾದಾರ ಪ್ರಜ್ಞಾವಸ್ಥೆಯಲ್ಲಿಯೇ ಬಂದು ಹರಿಹಾಯಿಸಿದನು. ನಾವೆ ಹೊರಟಿತು. ಸ್ವಲ್ಪ ಹೊತ್ತು ಸುಖವಾಗಿಯೇ ಪ್ರಯಾಣವಾಯಿತು. ಸುಖವಾಗಿ ತೆಂಗಿನ ಮರಗಳು ಗಾಳಿ ಹಾಕುತ್ತಿದ್ದವು. ಬಿಸಿಲೂ ಸುಖವಾಗಿತ್ತು. ಡಾ|| ಬಾಳಿಗರು ಒಮ್ಮೆ ದಡದ ತೆಂಗಿನ ಮರಗಳನ್ನು ನೋಡಿ ಮತ್ತೊಮ್ಮೆ ನಾವೆಯಲ್ಲಿಯೇ ಹಾಗೆ ಹೀಗೆ ದೃಷ್ಟಿ ಹಾಯಿಸಿ ಮನಸ್ಸಿನಲ್ಲಿ ಸುಖಪಡುತ್ತಾ ಇದ್ದರು. ಮೀನಾಳಿಗೆ ಏನು ಮಾಡುತ್ತ ಇರಬೇಕೆಂಬುದು ತೋರದೆ ಸಂಕೋಚಗೊಂಡು ಹಾಗೆಯೇ ಸ್ವರ್ಣನದಿಯ ನೀರಹಾಸಿಗೆಯನ್ನು ನೋಡುತ್ತಿದ್ದಳು.

ಯಾವುದೋ ಹುದುಗಿದ ಬಯಕೆ; ಅಲ್ಲಿಯೇ ಸ್ವರ್ಗದ ಸೃಷ್ಟಿ. ಒಂದೇ ನಾವೆಯಲ್ಲಿ ಅವರಿಬ್ಬರೂ ಹೊರಟಿದ್ದರು. ಆದರೆ ಆ ಸ್ವರ್ಗವು ಪ್ರಯಾಣದ ಅಂತ್ಯದ ವರೆಗೆ ಉಳಿಯಲಿಲ್ಲ. ಸೈತಾನನು ಅವರಿಬ್ಬರಿಗೂ ಗೊತ್ತಾಗದಂತೆಯೇ ಸ್ವರ್ಗದಲ್ಲಿ ಪ್ರವೇಶ ಮಾಡಿದನು. ಇಂದು ಎರಡನೆಯ ಸಲ ಡಾ|| ಅನಂತ ಬಾಳಿಗರು "ಹೆಯ್ ಹಚಹಚಹಚ.... ಹೆಯ್ ಯ್..... ಅಯ್ ... ಹಾಯ್....ಔ..ಅಂ...'' ಎನ್ನತೊಡಗಿದ್ದರು. ಮೀನಾನ ಪ್ರಯತ್ನ ಸಫಲವಾಗಲಿಲ್ಲ. ಸೈತಾನನು ಗೆದ್ದುಬಿಟ್ಟನು. ಡಾ|| ಅನಂತ ಬಾಳಿಗಾರ ಎರಡೂ ಮೀನುಗಳನ್ನೂ ಸೋನ್ಯಾ ಹೆಕ್ಕಿಹೆಕ್ಕಿ ತಿನ್ನತೊಡಗಿತ್ತು. ಡಾ|| ಬಾಳಿಗರು ಹುಚ್ಚು ಹುಚ್ಚು ಮುಖ ಮಾಡಿ ಕುಳಿತರು. ಇದೇ ಹೊತ್ತಿಗೆ ನಾವಿಕನು "ಈ ರೀತಿ ನಾವೆಯಲ್ಲಿ ಜಗಿದಾಡಿದರೆ ಅದು ಬುಡಮೇಲಾಗುವದೇ ನಿಶ್ಚಿತ'' ಎಂದು ಹೆದರಿಸಿ ಅಪಮಾನ ಮಾಡಿದನು. ಮೀನಾ ಸೋನ್ಯಾನಿಗೆ ಎರಡು ಸಲ ಬಲವಾಗಿ ಗುದ್ದಿದರೂ ಅದಕ್ಕೆ ಪೆಟ್ಟು ಹತ್ತಲಿಲ್ಲ.

ಬ್ರಹ್ಮಾವರದಲ್ಲಿ ನಾವೆ ನಿಂತಾಗ ಸಂಜೆಗತ್ತಲಾಗಿತ್ತು. ಮೀನಾ ಪ್ರಯಾಣದುದ್ದಕ್ಕೂ ಸೋನ್ಯಾನನ್ನು ಬಯ್ಯುತ್ತಲೇ ಇದ್ದಳು. ಈಗ ಅವಳು ಡಾಕ್ಟರ ಬಾಳಿಗರಿಗೆ ಸೋನ್ಯಾನ ಪರವಾಗಿ ಪಶ್ಚಾತ್ತಾಪ ವ್ಯಕ್ತಪಡಿಸಿ ತನ್ನ ಬಳಿ ಇದ್ದ ಎರಡೂ ಮೀನುಗಳನ್ನು ಅವರೇ ಒಯ್ಯಬೇಕಾಗಿ ಕೇಳಿಕೊಂಡಳು. ಅವರು ಒಳ್ಳೇ ಶ್ರೀಮದ್ಗಾಂಭೀರ್ಯವನ್ನು ತಂದುಕೊಂಡು ಅವಳ ಕೊಡುಗೆಯನ್ನು ನಿರಾಕರಿಸಿದರಲ್ಲದೆ, ನಾವಿಕನಿಗೆ ಕೊಡಬೇಕಾದ ನಾಲ್ಕು ರೂಪಾಯಿಗಳನ್ನು ತಾವೇ ಕೊಟ್ಟು ಮತ್ತಷ್ಟು ಗಾಂಭೀರ್ಯ ಪ್ರದರ್ಶನ ಮಾಡಿ ಹೊರಟು ಹೋದರು. ಆದರೆ ಮೀನಾಳ ಕಂಕುಳಲ್ಲಿದ್ದ ಸೋನ್ಯಾ ಮಾತ್ರ ಅವರನ್ನು ಕ್ಷುಲ್ಲಕವಾಗಿ ನೋಡಿ ಏನೋ ಗುರುತು ಇಟ್ಟುಕೊಂಡಿತು.

† † †

ಇಬ್ಬರೂ ಒಂದೇ ಊರಲ್ಲಿದ್ದರು. ಆದರೂ ಒಬ್ಬರನ್ನೊಬ್ಬರು ಎಷ್ಟೋ ದಿನಗಳ ವರೆಗೆ ಕಾಣಲಿಕ್ಕಾಗಲಿಲ್ಲ. ಆ 'ಎಷ್ಟೋ' ದಿನಗಳನ್ನು ಕಳೆಯಬೇಕಾದರೆ ಅವರಿಗೆ ಎಷ್ಟೋ ಕಷ್ಟವಾಯಿತು. ಆ 'ಎಷ್ಟೋ' ದಿನಗಳಲ್ಲಿಯ ಕೊನೆಯ ದಿನ ಡಾ. ಅನಂತ ಬಾಳಿಗರು ಯಾರದೋ ಮನೆಗೆ ವ್ಹಿಜಿಟ್ ಕೊಟ್ಟು ಪೇಟೆಯಲ್ಲಿ ಸುತ್ತಿಕೊಂಡು ಬರುತ್ತಿದ್ದರು. ಅಲ್ಲಿ ಮೊಗವೀರರ ಹೆಂಗಸೊಬ್ಬಳು ಒಳ್ಳೇ ಕಂಡಿಕೆ ಮೀನು ಮಾರುತ್ತಿದ್ದಳು. ಡಾ. ಅನಂತ ಬಾಳಿಗರಿಗೆ ಗತಕಾಲದ ಸ್ಮರಣೆಯಾಯಿತು. ಸವಿಗನಸು ಮುರಿದು ಎಚ್ಚರ ಬಂದವರಂತೆ ಅವರು ಹಳಹಳಿಸಿದರು. ಮೀನುಗಳ ಬುಟ್ಟಿಯನ್ನೇ ನೋಡುತ್ತ ರಸ್ತೆಯ ಪಕ್ಕದಲ್ಲಿ ಸ್ವಲ್ಪ ನಿಂತರು. ಹೆಂಗಸು ಅವರನ್ನು ಕರೆದು "ಒಳ್ಳೇ ಕಂಡಿಕೆ ಮೀನು ಇದೆ, ಒಯ್ಯಿರಿ. ಮನೆಯಲ್ಲಿ ಹೆಂಗಸರು ಇಷ್ಟಗಲ ಮುಖಮಾಡಿಯಾರು. ಹೊಟ್ಟೆತುಂಬ ಊಟವೂ ಆದೀತು.'' ಎಂದಳು. ಇವರು ಧಾರಣೆಗೆ ಸಹ ಅನುಮಾನ ಮಾಡುತ್ತ ನಿಲ್ಲದೆ ನಾಲ್ಕು ಒಳ್ಳೆಯ ಮೀನು ಕೊಂಡುಕೊಂಡರು. ತರುವಾಯ ಅವರು ಇದನ್ನೊಯ್ದು ಏನು ಮಾಡಲಿ, ಎಂದುಕೊಂಡರು. ಮನೆಯಲ್ಲಿ ಹೆಂಗಸರಾರೂ ಇಲ್ಲದಿದ್ದುದರಿಂದ (ಪಾಪ!), ಬ್ರಹ್ಮಾವರಕ್ಕೆ ಅವರು ಹೊಸತಾಗಿ ಬಂದುದರಿಂದ, ದಿನಂಪ್ರತಿ ಹೋಟೆಲ್ಲಿನಲ್ಲಿ ಊಟ ಸಾಗಿತ್ತು. ಇದನ್ನೊಯ್ದು ಹೋಟೆಲ್ಲಿನವನಿಗೆ ಕೊಡುವದೋ? ಅವರು ಶುದ್ಧ ಭಟ್ಟರು, ಇನ್ನೊಮ್ಮೆ ಇವರನ್ನು ಹೋಟೆಲ್ಲಿಗೆ ಬರಿಸಿಗೊಡಲಿಕ್ಕಿಲ್ಲ. ಹಾಗಾದರೆ ಅಂದು ನಾವೆಯಲ್ಲಿ ಬರು-



1 ಕಂಡಿಕೆ = ನದಿಯಲ್ಲಿ ಸಿಗುವ ಮೀನು; ರುಚಿಕರವಾದುದು.

2 ಬೆಂಗಡೆ = ಸಮುದ್ರದಲ್ಲಿ ಸಿಗುವ ಮೀನು.

ಹಾಗೆ ಎರಡು ಬೆಂಗಡೆ ಮೀನುಗಳನ್ನು ಕೊಂಡದ್ದೇಕೆ? ಶ್ರೀ ಗೋವಿಂದ ಭಾಂಡಾರಕರರ ಮಗಳು ಮೀನಾಳ ದಾಕ್ಷಿಣ್ಯಕ್ಕಾಗಿಯೋ? ಅಂದು ಸೋನ್ಯಾ ಆ ಮೀನು ಕಚ್ಚಿ ಕೊಳ್ಳದಿದ್ದರೆ, ಅವನ್ನು ಒಯ್ದು ತಾವು ಮನೆಯಲ್ಲಿ ಉಪ್ಪಿನಕಾಯಿ ಹಾಕುತ್ತಿದ್ದರೇ? ಇಂದು ಈ ಮೀನು ಕೊಂಡು ಮನೆಗೆ ಒಯ್ದು ಮಾಡುವದೇನು? ಇವನ್ನು ಯಾರಿಗೆ ಕೊಡಬೇಕು? ಇದೆಲ್ಲ ತಾವು ಮಾಡುವದು ಎಂಥ ಹುಚ್ಚುತನ?

ಅವರು ಹೀಗೆಯೇ ವಿಚಾರಮಾಡುತ್ತ ಪೇಟೆಯ ಬೀದಿಯಲ್ಲಿ ಒಂದೊಂದೇ ಹೆಜ್ಜೆಗಳನ್ನು ಇಡತೊಡಗಿದ್ದರು. ಅವರಿಗೆ ಈಗ ಎಲ್ಲಿಗೆ ಹೋಗಬೇಕೆಂಬುದೇ ತಿಳಿಯದಂತಾಗಿತ್ತು. ಬಾಳುವೆಯ ದಾರಿಯಲ್ಲೆಲ್ಲ ಕಾರ್ಗತ್ತಲೆ; ಮುಳ್ಳುಕಲ್ಲುಗಳು ತುಂಬಿಬಿಟ್ಟವೆ! ಏನೂ ಕಾಣದು. ಆ ನಿಶ್ಶಬ್ದ ನೀರವ ಗಾಢಾಂಧಕಾರದಲ್ಲಿ ಡಾ|| ಬಾಳಿಗರಿಗೆ ಒಮ್ಮೆಲೇ ಸೈತಾನನ ಎದೆ ನಡುಗಿಸುವ ಕಿರುಚಲು ಕೇಳಿ ಬಂತು. 'ಬಕ್ ಬಕ್ ಬವ್ ಬಕ್. ಬಕ್' ಅದು ಸೋನ್ಯಾ. ಡಾ|| ಬಾಳಿಗರಿಗೆ ಎಂಟು ಅಡಿ ಅಂತರದಲ್ಲಿತ್ತು. ಸೋನ್ಯಾನ ಹಿಂದೆ ಎಂಟು ಹತ್ತು ವರ್ಷ ವಯಸ್ಸಿನ ಒಬ್ಬ ಹುಡುಗನು "ಸೋನ್ಯಾ, ಮುಟ್ಠಾಳಾ, ನಿಲ್ಲು ನಿಲ್ಲು..'' ಎನ್ನುತ್ತ ಹಿಂಬಾಲಿಸಿದ್ದನು. ಸೋನ್ಯಾ ಡಾ. ಅನಂತ ಬಾಳಿಗರನ್ನು ಹಿಂಬಾಲಿಸಿತು.

ಡಾ|| ಬಾಳಿಗರ ಮೈಯೆಲ್ಲ ಒಂದು ಸಲ ನಡುಗಿತು. ಮರುಕ್ಷಣವೇ ಅವರ ಕಾಲುಗಳಲ್ಲಿ ವಿಚಿತ್ರ ಶಕ್ತಿ ಬಂದಿತು. ಅವರು "ಹಯ್ಯಯ್ಯೋ, ಹಚಾ, ಹಚಾ, ಹ್ಹೋeeeಯ್... ಹ್ಹಹ್ಹಚ್ಚಾSS...'' ಎನ್ನುತ್ತ ಓಟಕಿತ್ತರು. ಗೊತ್ತುಗುರಿಗಳಿಲ್ಲದೆ ಓಡಿದರು. ಮುತ್ತಲೆಲೆಯಲ್ಲಿ ಕಟ್ಟಿ ಹಿಡಿದುಕೊಂಡ ಮೀನುಗಳನ್ನು ಆ ಭಯಂಕರ ಸ್ಥಿತಿಯಲ್ಲಿಯೂ ಬಚಾವು ಮಾಡಿಕೊಂಡು ಓಡಿದರು. ಒಂದು ಬೀದಿಯನ್ನು ಹೊರಳಿ ಅವರು ಹಿಂದೆ ನೋಡಿದರು. ಸೋನ್ಯಾ ನಾಲ್ಕೇ ಅಡಿ ಅಂತರದಲ್ಲಿತ್ತು.

ಜನರಾರೂ ಮುಂದೆ ಬಂದು ಡಾ|| ಬಾಳಿಗರನ್ನು ಬಿಡಿಸಿಕೊಳ್ಳಲಿಲ್ಲ. ಅವರು ಒಂದು ಭತ್ತದ ಗದ್ದೆಯಲ್ಲಿ ನುಗ್ಗಿ ಸಿಕ್ಕಾಪಟ್ಟೆಯಾಗಿ ಓಡಿದರು. ಅಲ್ಲಿಯೂ ಸೋನ್ಯಾ ಅವರ ಬೆನ್ನು ಬಿಡಲಿಲ್ಲ. ಅವರು ಜೋರಾಗಿ ಉಸಿರೆಳೆಯುತ್ತ, ವಿಚಿತ್ರವಾದ ಕೂಗುಗಳನ್ನು ಹೊರಗೆಡಹುತ್ತ ಒಂದು ತೆಂಗಿನ ತೋಟವನ್ನು ಹೊಕ್ಕರು. ಈಗ ಸೋನ್ಯಾ ಅವರಿಗೆ ಒಂದೇ ಅಡಿ ಅಂತರದಲ್ಲಿತ್ತು. ಅವರು "ಹಚಾಹಚಾs ಹಚಾss ಹಯ್ಯಯ್ಯೋ....'' ಎಂದು ಬಲವಾಗಿ ಚೀರುತ್ತ ಆ ತೋಟದಲ್ಲಿಯ ಮನೆಯಲ್ಲಿಯೇ ಪ್ರವೇಶಿಸಿದರು.

ಆ ಸುಪರಿಚಿತ ದನಿ ಕೇಳಿ ಒಳಗಿದ್ದ ಯುವತಿಯೊಬ್ಬಳು ಹೊರಗೆ ಬಂದಳು. ಅವಳೇ ಶ್ರೀ ಗೋವಿಂದ ಭಾಂಡಾರಕರರ ಮಗಳು ಮೀನಾ. ಮೀನಾ ಹೊರಗೆ ನಗದಿದ್ದರೂ ಮನಸ್ಸಿನಲ್ಲಿಯೇ ನಕ್ಕಳು. ಡಾ|| ಬಾಳಿಗರು ತಮ್ಮ ಕೈಯಲ್ಲಿಯ ಮೀನುಗಳನ್ನು ತಮಗೆ ಗೊತ್ತಾಗದಂತೆಯೇ

ಮೀನಾಳ ಕೈಯುಲ್ಲಿಟ್ಟು ಸೋನ್ಯಾನಿಂದ ತಪ್ಪಿಸಿಕೊಂಡರು. ಮೀನಾ ಸೋನ್ಯಾನನ್ನು ಗಟ್ಟಿಯಾಗಿ ಹಿಡಿದು ಅದಕ್ಕೆ ಎರಡು ಗುದ್ದಿದಳು. ಅಷ್ಟೊತ್ತಿಗೇ ಮೀನಾಳ ತಮ್ಮ ಮೋಹನನು ಹಿಂದಿನಿಂದ ಓಡುತ್ತ ಬಂದು ಸೋನ್ಯಾ ಮಾಡಿದ ಅನಾಹುತವನ್ನೆಲ್ಲ ಡಾ|| ಬಾಳಿಗರ ವ್ಯಕ್ತಿತ್ವಕ್ಕೆ ಅಪಮಾನವಾಗುವ ರೀತಿಯಲ್ಲಿ ವರ್ಣಿಸತೊಡಗಿದ. ಮೀನಾ ಅವನಿಗೆ "ನೀನು ಸೋನ್ಯಾನನ್ನು ಕಟ್ಟಿಕೊಂಡು ಎಲ್ಲಿಯಾದರೂ ಹಾಳಾಗಿ ಹೋಗು; ಅದಕ್ಕೂ ಮಂಡೆಯಿಲ್ಲ, ನಿನಗೂ ಇಲ್ಲ" ಎಂದು ಗದರಿಸಿದಳು. ಅವನು ಸೋನ್ಯಾನೊಡನೆ ತೋಟಕ್ಕೆ ಜಿಗಿದನು.

ಮೀನಾಳು ದಮ್ಮು ಅರಿಸುತ್ತ ನಿಂತ ಡಾ|| ಬಾಳಿಗರನ್ನು ಆದರದಿಂದ ತನ್ನ ಕೋಣೆಗೆ ಒಯ್ದು ಕೂಡಿಸಿದಳು. ಅವರೆದುರು ಸಾಕಷ್ಟು ಸಲ ಸೋನ್ಯಾನನ್ನು ಬಯ್ದಳು. ಡಾಕ್ಟರರು ಇನ್ನೂ ದಮ್ಮು ಆರಿಸುತ್ತಲೇ ಇದ್ದುದರಿಂದ ಏನೂ ಮಾತಾಡಲಿಲ್ಲ.

ಮೀನಾ ಮಾತು ಬದಲಾಯಿಸಲೆಂದು ತನ್ನ ಕೈಯ್ಯಲ್ಲಿಯ ಮೀನು ನೋಡಿ ಕೇಳಿದಳು. "ಒಳ್ಳೇ ತಂಡಿಕೆ ಮೀನು ಸಿಕ್ಕಿದೆಯುಲ್ಲಾ ? ಎಲ್ಲಿ ದೊರೆಯಿತು ? ಇಂದು ಬೆಳಗ್ಗೇನೇ ಹಿಡಿದದ್ದು ಇರಬೇಕು. ಸ್ವಲ್ಪ ತಾಳಿ. ಅಜ್ಜಿಗೆ ಒಯ್ದು ಕೊಡುತ್ತೇನೆ. ಒಳ್ಳೆ ಸಾರು ಆದೀತು ಮಧ್ಯಾಹ್ನಕ್ಕೆ" ಅವಳು ಉತ್ಸಾಹದಿಂದ ಒಳಗೆ ಹೋದಳು. ಮುಂದೆ ಐದು ಮಿನೀಟುಗಳಲ್ಲಿಯೇ ಹೊರಗೆ ಬಂದು "ಅಜ್ಜಿ ಹೇಳುತ್ತಾಳೆ, ಮತ್ತೆ ಇಂದು ಮಧ್ಯಾಹ್ನ ನಿಮ್ಮ ಊಟವೂ ಇಲ್ಲಿಯೇ ಆಗತಕ್ಕದ್ದು" ಎಂದು ಡಾಕ್ಟರರಿಗೆ ವಿನಂತಿಸಿಕೊಂಡಳು.

ಡಾ|| ಅನಂತ ಬಾಳಿಗರು ಎರಡೂ ಕೈಗಳಿಂದ ತಮ್ಮ ಹೃದಯವನ್ನು ಮುಟ್ಟಿಕೊಂಡು "ಹಾಯ್ ದೈವವೇ!" ಎಂದುಕೊಂಡರು.

ಆ ದೈವ ಬಹಳ ಒಳ್ಳೆಯದಾಗಿತ್ತು. ಕೆಲವು ತಿಂಗಳುಗಳಲ್ಲಿಯೇ ಡಾ|| ಅನಂತ ಬಾಳಿಗರು ಮತ್ತು ಶ್ರೀ ಗೋವಿಂದ ಭಾಂಡಾರಕರರ ಮಗಳು ಮೀನಾ ಉಡಿಪಿಗೆ ಹೋಗಿ ಸಪ್ಪಳಿಲ್ಲದೆಯೇ ಮದುವೆಯಾದರು, ಎಂದು ಸುದ್ದಿ ಬಂತು. ಮಂಗಳೂರಿನಲ್ಲಿದ್ದ ಶ್ರೀ ಗೋವಿಂದ ಭಾಂಡಾರಕರರು ಸ್ವಂತ ಮಗಳ ಈ ಪ್ರಗತಿಶೀಲ ಸಾಹಸಕ್ಕೆ ಮೊದಲು ಸ್ವಲ್ಪ ವ್ಯಸನಪಟ್ಟರು. ಕೊನೆಗೆ ವರದಕ್ಷಿಣೆಯಿಲ್ಲದೆ ಸ್ವಂತ ಜಾತಿಯಲ್ಲಿಯೇ ಇಷ್ಟು ಒಳ್ಳೆಯ ವರ ಸಿಕ್ಕಿತಲ್ಲ, ಎಂದು ಸಂತೋಷಿಸಿದರು. ಮಲ್ಪೆಯಲ್ಲಿಯ ಮೀನಾಳ ಅಕ್ಕ ಈ ನವದಂಪತಿಗಳಿಗೆ ತಮ್ಮಲ್ಲಿ ಬಂದುಹೋಗಲು ಆಮಂತ್ರಣ ಕಳಿಸಿದ್ದಾಳೆ. ಕಂಬಳತೋಟದ ಮೀನಾಳ ಗೆಳತಿ ಈ ಸುದ್ದಿ ಕೇಳಿ "ಇಂಥ ಮದುವೆ ಸಾಮಾನ್ಯ ವಿಷಯವಲ್ಲವೇ ಅಲ್ಲ. ಅಬ್ಬಾ ಅದಕ್ಕೆಂಥ ಎದೆಗಾರಿಕೆ ಬೇಕು!" ಎಂದುಕೊಂಡಳು.

ಮದುವೆಯ ತರುವಾಯ ಆಗುವ ಆಶ್ಚರ್ಯಕರವಾದ ಮಾರ್ಪಾಟುಗಳಲ್ಲಿ ಒಂದನ್ನು ಮಾತ್ರ ನಾನಿಲ್ಲಿ ಹೇಳಲೇ ಬೇಕು. ಸೋನ್ಯಾ ಈಗ ಡಾ|| ಅನಂತ ಬಾಳಿಗರ ಜೊತೆ ಚಿನ್ನಾಟವಾಡುತ್ತಿದೆಯೇ ಹೊರತು ಅವರನ್ನು ಹೆದರಿಸಲು ಹೋಗುವದಿಲ್ಲ.



# ಸಜೀವ ವಸ್ತುಗಳ ನಿರಂತರ ರೂಪಾಂತರದ ರಹಸ್ಯ

ಲೇಖಕರು : **ಪ್ರೊ. ಎಂ. ಎಸ್ ಎಸ್. ರಾವ** ಬಾಗಲಕೋಟಿ.

ಪಶುಪಕ್ಷಿ ಪ್ರಾಣಿಗಳಲ್ಲಿ ಕೆಲವೊಂದು ಬಗೆಯಲ್ಲಿ ರೂಪಾಂತರ ಸಂಭವಿಸುತ್ತಲೇ ಇರುತ್ತದೆ. ಮೂಲ ಪೀಳಿಗೆಯಿಂದ ಇಂದಿನ ಪೀಳಿಗೆ ವಿಶೇಷವಾಗಿ ಭಿನ್ನವಾಗಿರುವದನ್ನು ಕಾಣುತ್ತೇವೆ. ಇದಕ್ಕೆ ಕಾರಣವೇನು? ನಿಸರ್ಗದ ಅವಶ್ಯಕತೆಯೇ? ಪರಿಸರದ ಪರಿಣಾಮವೆ? ಈ ಅಂಶಗಳನ್ನು ಲೇಖಕರು ಇಲ್ಲಿ ಸೋದಾಹರಣವಾಗಿ ಚರ್ಚಿಸಿರುವರು.

ಸಜೀವ ವಸ್ತುಗಳು ರೂಪಾಂತರಹೊಂದಬಲ್ಲವು, ಹೊಂದುತ್ತವೆ; ಮತ್ತು ನಿರಂತರ ಬದಲಾಗುತ್ತಿವೆ. ಅಂತಹ ರೂಪಾಂತರ (ಬದಲಾವಣೆ) ಪೃಥ್ವಿಯ ಮೇಲೆ ಜೀವ ಸಾಗುವವರೆಗೆ ನಡೆಯುತ್ತಲೇ ಇರುತ್ತದೆ-ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಅಂತಹ ರೂಪಾಂತರವನ್ನು ಸುಲಭವಾಗಿಯೂ ನೋಡಬಹುದು. ಆದರೆ ಆ ನಿರಂತರಗಳ ರೂಪಾಂತರಗಳ ಪ್ರೋತ್ಸಾಹನೆಗೆ ಕಾರಣಗಳೇನು? ಎಂಬುದರ ಬಗ್ಗೆ ನಿರ್ವಿವಾದದ ಪ್ರತ್ಯುತ್ತರ ಇನ್ನೂ ದೊರೆತಿಲ್ಲ. ಅವುಗಳ ಬಗ್ಗೆ ಕೆಲವು ತತ್ತ್ವಗಳು ಈ ರೀತಿ ಪ್ರಚಲಿತವಿರುತ್ತವೆ:

(i) ಲವಾರ್ಕನ ಬಳಕೆಯ ಮತ್ತು ಬಳಕೆಯ ಅಭಾವದ ತತ್ತ್ವ.
(ii) ಡಾರ್ವಿನ್ನನ 'ಪ್ರಕೃತಿಯ ಆಯ್ಕೆ' ತತ್ತ್ವ.
(iii) ಡಿವ್ರಿಸ್‌ನ ರೂಪಾಂತರ (ಮ್ಯಾರ್‍ಪಾಟನ) ತತ್ತ್ವ.

## ಲವಾರ್ಕನ ಬಳಕೆ ಮತ್ತು ಬಳಕೆಯ ಅಭಾವದ ತತ್ತ್ವ

ಇದು ಸಜೀವ ವಸ್ತುವಿನ ಬದಲಾವಣೆಯ ನಿರೂಪದ ಮೊದಲನೆಯ ತತ್ತ್ವ. ಇದನ್ನು ಮೊದಲ ಬಾರಿಗೆ ವಿವರಿಸಿದ ಫ್ರೆಂಚ್ ವಿಜ್ಞಾನಿ— 'ಜಾನ್ ಬ್ಯಾಪ್ಟಿಸ್ಟೆ ಲವಾರ್ಕ್', ೧೮೦೯ ರಲ್ಲಿ ಪ್ರಸಿದ್ಧಿಸಿದನು. ಒಬ್ಬ ಕಮ್ಮಾರನ ಬಲತೊಳಿನ ಮಾಂಸಖಂಡವು ಹೆಚ್ಚು ಬಳಕೆಯ ಪರಿಣಾಮವಾಗಿ, ಎಡತೋಳಿಗಿಂತ ಹೆಚ್ಚು ದೊಡ್ಡದಾಗಿಯೂ ಬಲಯುತವಾಗಿಯೂ ಇರುತ್ತದೆಂತಲೂ ಒಂದು ತೋಳಿಗೆ ಬಹಳ ದಿನ ಪಟ್ಟಿಯನ್ನು ಬಿಗಿದಿದ್ದಾದರೆ ಅದು ಹೆಚ್ಚು ಬಳಸಲ್ಪಡದೆ ಹೋಗುವದರಿಂದ, ಕ್ರಮೇಣ ಅದು ಆಕುಂಚನ ಗೊಳ್ಳುವುದೆಂತಲೂ 'ಲವಾರ್ಕ' ತನ್ನ ಅನುಭವದ ದೃಷ್ಟಾಂತಗಳಿಂದ ಕಂಡುಕೊಂಡಿದ್ದನು. ಹೀಗೆ ಅವನು "ಯಾವುದೇ ಒಂದು ಅಂಗವು ವಿಪರೀತ ಬಳಕೆಯ ಪರಿಣಾಮದಿಂದ, ಕೆಲವು ತಲೆಮಾರಿನ ನಂತರ ವೃದ್ಧಿಗೊಂಡು, ಕಡೆಗೆ ಮೂಲ ರೂಪದಿಂದ ಭಿನ್ನವಾದುದಾಗುತ್ತದೆ." ಎಂದು ನಿರ್ಧಾರಕ್ಕೆಬಂದಿದ್ದನು. ಉದಾಹರಣೆಗೆ ಇಂದಿನ ಪಕ್ಷಿಗಳ ಮೂಲವಂಶೀಯದವು ಹಾರಾಡುವುದಕ್ಕೆ ತಮ್ಮ ಮುಂದಿನ ಕಾಲುಗಳನ್ನು ಬಳಸಿ, ಬಳಸಿ, ವೃದ್ಧಿಯಾಗಲು ಅವಕಾಶಮಾಡಿಕೊಟ್ಟವು. ಕಡೆಗೆ ಅನೇಕ ತಲೆಮಾರುಗಳ ನಂತರ ಆ ಮುಂದಿನ ಕಾಲುಗಳೇ ರೆಕ್ಕೆಗಳಾಗಿ ಪರಿಣಮಿಸಿದವು ಎಂಬುದು ಅವನ ಮತ. ಹೀಗೆಯೇ ಇಂದಿನ ಜಿರಾಫೆ ಪ್ರಾಣಿಯ ಮೂಲ ವಂಶದ ಪ್ರಾಣಿಗಳು ಎತ್ತರದ ಮರಗಳ ಎಲೆಯನ್ನು ತಿನ್ನುವ ಸಲುವಾಗಿ ತಮ್ಮಕತ್ತನ್ನು ಚಾಚಬೇಕಾಗಿ ಬಂದದ್ದರಿಂದ ಅಂತಹ ಪ್ರಾಣಿಗಳು ಅನೇಕ ತಲೆಮಾರುಗಳ ನಂತರ ಉದ್ದನೆಯ ಕತ್ತುಳ್ಳ, ಈಗಿನ ಜಿರಾಫೆಗಳಾಗಿ ಪರಿಣಮಿಸಿದವು, ಎಂಬುದೂ ಒಂದು ಲವಾರ್ಕನ ತರ್ಕ. ಇನ್ನೂ ಒಂದು ವಿಚಾರ. ಇಂದಿನ ಉರಗಗಳ (ಹಾವುಗಳ) ವಂಶಜಪ್ರಾಣಿಗಳು ತಮ್ಮ ಕಾಲುಗಳನ್ನು ಬರಬರುತ್ತ ಅತ್ಯಲ್ಪವಾಗಿ ಉಪಯೋಗಿಸುತ್ತಿದ್ದುವಾದ್ದರಿಂದ ಆ ಕಾಲುಗಳು ಬಳಕೆಯ ಅಭಾವದಿಂದ ಕುಗ್ಗಿ ಕುಗ್ಗಿ ಕೊನೆಗೆ ಮಾಯವಾದವು. ಮೀನುಗಳು ದೊಡ್ಡ ದೊಡ್ಡ ಕತ್ತಲುಗವಿಗಳನ್ನು ಸೇರಿದುದರಿಂದ ಅವುಗಳ ಕಣ್ಣುಗಳಿಗೆ ಉಪಯೋಗವೇ ಇಲ್ಲದಂತಾಗಿ ಅವು ತಲೆ ತಲಾಂತರಗಳಾದ ಮೇಲೆ ಸಣ್ಣವಾದುವು ಎಂಬುದೂ ಒಂದು ಲವಾರ್ಕನ ಊಹೆ.

ಇಂತಹ ಊಹಾಪೋಹಗಳು ನಿಜವಾದದ್ದೆ! ಆದರೆ ಲವಾರ್ಕನ 'ಈ ಬಳಕೆ ಮತ್ತು ಬಳಕೆಯ ಅಭಾವದ ತತ್ತ್ವ' ಬಹು ಸಮಂಜಸವಾಗಿ ಕಂಡುಬಂದರೂ, ಅದರಲ್ಲಿ ಕೆಲವು ಕುಂದುಕೊರತೆ (ನ್ಯೂನತೆ) ಗಳಿಲ್ಲದೇ ಇಲ್ಲ. ಆ ನ್ಯೂನತೆ — ಅಳವಡಿಸಿಕೊಂಡ ವಿಶಿಷ್ಟ ಗುಣಗಳು ವಂಶಪಾರಂಪರ್ಯವಾಗಿರುತ್ತವೆ—ಎಂಬುದು. ಇದು ಒಂದು ವಿಸಂಗತ ವಿಚಾರ.

ಒಬ್ಬ ಕಮ್ಮಾರನ ಮಗ ತನ್ನ ತಂದೆಯ ಉಬ್ಬಿದ ಬಲ ತೋಳನ್ನು ಆನುವಂಶಿಕ ರೀತಿಯಲ್ಲಿ ಪಡೆದುಕೊಂಡೇ ಹುಟ್ಟುವದಿಲ್ಲ. ಹಾಗೆಯೇ ನಾಯಿಯ ಬಾಲವನ್ನು ಅಥವಾ ಕಿವಿಯನ್ನು ಮೊಟಕು ಮಾಡಿದರೆ ಅದರಿಂದ ಮುಂದೆ ಜನಿಸುವ ಮರಿಗಳೂ ಮೊಟುಕಾದ ಬಾಲ ಅಥವಾ ಕಿವಿಗಳನ್ನು ಪಡೆದಿರುವದಿಲ್ಲ. ಅದೇ ರೀತಿ ಜಿರಾಫೆ ಪ್ರಾಣಿಯ ಮೂಲ ವಂಶದ ಪ್ರಾಣಿಗಳು ಮರಿಗಳನ್ನೀಯುವಾಗ ಆನುವಂಶಿಕ ರೀತ್ಯಾ ಉದ್ದನೆಯ ಕತ್ತುಳ್ಳ ಪ್ರಾಣಿಗಳಿಗೆ ಎಡೆಕೊಟ್ಟಿರಲಾರವು. 'ಬಳಕೆಯ' ಮತ್ತು 'ಬಳಕೆಯ ಅಭಾವದ' ತತ್ತ್ವವನ್ನು ಒಂದು ಸಜೀವಿಯ — ಸಸ್ಯ ಅಥವಾ ಪ್ರಾಣಿ ಅಥವಾ ವ್ಯಕ್ತಿಯ ಅಂಗಾಂಗದ ರೂಪಾಂತರಕ್ಕೆ ಮಾತ್ರ ಮರ್ಯಾದಿತಗೊಳಿಸಬಹುದು. ಆದರೆ ಅಂತಹ 'ಮಾರ್ಪಾಟುಗಳು' ಆನುವಂಶಿಕವಲ್ಲ. "ಅಳವಡಿಸಿಕೊಂಡ ಗುಣಗಳು, ಆನುವಂಶಿಕವಾಗಿ ಒಂದು ವ್ಯಕ್ತಿಯಿಂದ ಇನ್ನೊಂದು ವ್ಯಕ್ತಿಗೆ ಹೋಗುವವು" ಎಂಬ ನಿರ್ಧಾರದ ತರ್ಕದ ಮೇಲೆ ಈ ಬಳಕೆಯ ಮತ್ತು ಬಳಕೆಯ ಅಭಾವದ ತತ್ತ್ವ ನಿಂತಿರುವದರಿಂದ, ಈ ತತ್ತ್ವವು ವಿಕಾಸದ 'ನಿಜವಾದ ವಿವರಣೆ' ಎಂದು ಒಪ್ಪುವದಕ್ಕಾಗುವದಿಲ್ಲ. ಆದರೆ ಲವಾರ್ಕನ ಈ ತತ್ತ್ವವು ಜನರನ್ನು ವಿಕಾಸದ ಬಗ್ಗೆ ಇನ್ನಷ್ಟು ಗಂಭೀರವಾಗಿ ಆಲೋಚಿಸುವದಕ್ಕೆ ಮತ್ತು ಪರಿಶೋಧಿಸುವದಕ್ಕೆ ತೊಡಗಿಸಿತು. ಆ ದೃಷ್ಟಿಯಿಂದ ಲವಾರ್ಕನ ತತ್ತ್ವ ಮುಖ್ಯವಾದುದು ಎಂದು ಹೇಳಲಡ್ಡಿ ಇಲ್ಲ.

## 'ಪ್ರಕೃತಿಯ ಆಯ್ಕೆ' ಎಂಬ ಡಾರ್ವಿನ್ನನ ತತ್ತ್ವ

೧೮೫೯ ರಲ್ಲಿ ಅಂದರೆ ಲವಾರ್ಕನ ನಿಯಮಗಳು ಹೊರಬಿದ್ದ ೫೦ ವರ್ಷಗಳ ನಂತರ ವಿಕಾಸದ ವಿವರಣೆಗೆ ಮತ್ತೊಂದು ನಿಯಮ ಡಾರ್ವಿನ್ನನಿಂದ ಹೊರಬಂತು. ಅದೇ 'ಪ್ರಕೃತಿಯ ಆಯ್ಕೆ ನಿಯಮ' ಆಂಗ್ಲ ವಿಜ್ಞಾನಿ ಚಾರ್ಲಸ್ ಡಾರ್ವಿನ್ನನು ಮೊದಲಬಾರಿ 'ಪ್ರಕೃತಿಯ ನಿಯಮದಿಂದ ಹೊಸ ಜಾತಿಯ ಸಜೀವ ವಸ್ತುವಿನ ಉತ್ಪತ್ತಿ' ಎಂಬ ಹೆಸರಿನ ಪುಸ್ತಕವನ್ನು ಪ್ರಕಟಿಸಿದನು. ಈ ನಿಯಮ ಸಾಧನೆಗೆ ಬೇಕಾದ ಮಾಹಿತಿ ನಿದರ್ಶನಗಳನ್ನು ಕಲೆಹಾಕಿ ಜೋಡಿಸಲು ಡಾರ್ವಿನ್ನನಿಗೆ ೨೮ ವರುಷ ಬೇಕಾದುವೆಂದು ತಿಳಿದಿದೆ. ಅವನು ಪ್ರಪಂಚ ಪರ್ಯಟನಕ್ಕೆಂದು ೫ ವರ್ಷದ ದೀರ್ಘ ಪ್ರವಾಸವನ್ನು ಕೈಕೊಂಡಾಗ ಈ ನಿಯಮದ ಬಗ್ಗೆ ಆಲೋಚಿಸ ತೊಡಗಿದನಂತೆ. ಡಾರ್ವಿನ್ನನು ಇನ್ನೂ ಕಾಲೇಜನಲ್ಲಿ ಅಭ್ಯಾಸ ಮಾಡುತ್ತಿದ್ದಾಗ ಅಲ್ಲಿಯ ಪ್ರಾಧ್ಯಾಪಕ 'ಹೆನ್‌ಸ್ಲೊ' ಎಂಬಾತನು ಡಾರ್ವಿನ್ನನನ್ನು 'ಬಿಯಾಗಲ್' ಹಡಗಿನಲ್ಲಿ 'ಪ್ರಕೃತಿ ಶಾಸ್ತ್ರಜ್ಞ'ನಾಗಿ ಕೆಲಸಮಾಡಲು ತಕ್ಕವನು ಎಂದು ಆರಿಸಿ




ಪ್ರೋತ್ಸಾಹಿಸಿದನು. ಆ ಹಡಗು ಪ್ರಪಂಚಪರ್ಯಟನಕ್ಕೆ ಮೀಸಲಾಗಿತ್ತು. ೧೮೩೧ ರಲ್ಲಿ ಅದು ದೀರ್ಘ ಪ್ರವಾಸವನ್ನು ಕೈಕೊಂಡಿತು. ಹಡಗು ನಿಂತಲ್ಲೆಲ್ಲಾ ಡಾರ್ವಿನ್ನನು ಸಸ್ಯ ಹಾಗೂ ಪ್ರಾಣಿಗಳ ವಿವಿಧ ನಮೂನೆಗಳನ್ನು ಕಲೆಹಾಕತೊಡಗಿದನು. ಹೀಗಾಗಿ ಈ ಹಡಗಿನ ದೀರ್ಘ ಪ್ರವಾಸ ಜೀವವಿಜ್ಞಾನ ಶಾಸ್ತ್ರಕ್ಕೆ ಬಹಳ ಮಹತ್ವದ್ದಾಯಿತು. ಆಗಲೇ ಡಾರ್ವಿನ್ನನ ಪರಿಶೀಲನೆಗಳು ವಿಕಾಸದ ತತ್ತ್ವಗಳ ಬಗ್ಗೆ ಆಲೋಚನೆ ಮಾಡಲು ಜನರನ್ನು ಪ್ರಚೋದಿಸಿದವು. ಐದು ವರ್ಷಗಳನಂತರ ಪ್ರಪಂಚ ಪರ್ಯಟನದ ನಂತರ ಇಂಗ್ಲಂಡಿಗೆ ಹಿಂತಿರುಗಿದ ಮೇಲೆ ವಿಕಾಸದ ಕಾರಣಗಳ ಬಗ್ಗೆ ಡಾರ್ವಿನ್ನ ಒಂದು ನಿರ್ಧಾರಕ್ಕೆ ಬಂದಿದ್ದನು. ಆದರೂ ಅವನು ಅಷ್ಟರಿಂದಲೇ ತೃಪ್ತಿಗೊಳ್ಳದೆ ತನ್ನ ನಿಯಮಗಳ ಪುಷ್ಟೀಕರಣಕ್ಕಾಗಿ ಇನ್ನೂ ವಿಷಯ ಸಂಗ್ರಹ ಮಾಡಬೇಕೆಂದು ಇಚ್ಛಿಸಿದನು. ಈ ಒಂದು ಉದ್ದೇಶಕ್ಕಾಗಿಯೇ ಡಾರ್ವಿನ್ನನು ಉಳಿದ ತನ್ನ ಇಡೀ ಜೀವಮಾನದ ವರೆಗೆ ಬೇಕಾದ ಮಾಹಿತಿಗಳನ್ನು ಕಲೆ ಹಾಕುವುದು, ಪರಿಶೀಲಿಸುವುದು ಮತ್ತು ಪುಷ್ಟೀಕರಿಸಲು ಒಕ್ಕಣೆಯಿಂದ ಜೋಡಿಸುವುದು ಮುಂತಾದ ಕೆಲಸಗಳಲ್ಲಿ ನಿರತನಾದನು. ಅವನ ನಿಯಮಗಳು ಈ ಕೆಳಗಿನ ೫ ಮುಖ್ಯ ನಿಯಮಗಳನ್ನೊಳಗೊಂಡಿವೆ.

## ಡಾರ್ವಿನ್ನನ ಮೊದಲನೆಯ ನಿಯಮ

ಎಲ್ಲ ಸಜೀವ ವಸ್ತುಗಳೂ ಅಳಿದು ಉಳಿಯುವುದಕ್ಕಿಂತ ಬಹು ಹೆಚ್ಚಿನ ಪ್ರಮಾಣದಲ್ಲಿ ಸಂತತಿಗಳನ್ನು ನಿರ್ಮಿಸಬಲ್ಲವು. ಉದಾಹರಣೆಗೆ— ಒಂದು ಹೆಣ್ಣು ಕಪ್ಪೆಯ ತತ್ತಿಗಳೆಲ್ಲಾ ಬೆಳೆದು ಮರಿಗಳಾಗಿ (Tadpole) ಬಂದು ೫ ತಲೆಮಾರುಗಳು ಕಳೆದರೆ ಒಂದು ಮೂಲ ಗಂಡು ಮತ್ತು ಹೆಣ್ಣು ಕಪ್ಪೆಯು ಸುಮಾರು ೫೨ ದಶಲಕ್ಷ ಕಪ್ಪೆಗಳ ಉತ್ಪತ್ತಿಗೆ ಕಾರಣವಾಗುವುದೆಂದು ಲೆಖ್ಖ ಹಾಕಲಾಗಿದೆ. ಒಂದು ಮೀನಿನ ಸಂತತಿ ಲಕ್ಷಾಂತರ ತತ್ತಿಗಳನ್ನು ಇಡುವುದರಿಂದ ಆ ತತ್ತಿಗಳು ಬೆಳೆದು, ಮರಿಗಳಾಗಿ ಕ್ರಮೇಣ ಇಡೀ ಸಮುದ್ರವನ್ನೇ ಪೂರ್ತಿ ತುಂಬುವಷ್ಟಾಗುವುವು. ಇದಕ್ಕೆ ಡಾರ್ವಿನ್ನನು 'ಅತಿ ಸಂತಾನ' (Over production) ಎಂದು ಹೆಸರಿಟ್ಟನು. ಅತಿ ನಿಧಾನವಾಗಿ ವಂಶಾಭಿವೃದ್ಧಿಯನ್ನುಂಟುಮಾಡುವ ಆನೆಯಂತಹ ಪ್ರಾಣಿಯೂ ಸುಮಾರು ೭೫೦ ವರ್ಷಗಳಲ್ಲಿ ಒಂದು ಗಂಡು ಮತ್ತು ಹೆಣ್ಣು ಪ್ರಾಣಿಯು ೧೯ ಲಕ್ಷ ಪ್ರಾಣಿಗಳ ಉತ್ಪತ್ತಿಗೆ ಕಾರಣವಾಗಬಹುದು ಎಂದು ಅವನು ತರ್ಕ ಮಾಡಿದನು. ಆದರೂ ಆನೆಗಳು ಅಲ್ಪ ಸಂಖ್ಯೆಯಲ್ಲಿ ಇರುವುದಕ್ಕೆ ಕಾರಣಗಳೇನು? ಎಂದು ಡಾರ್ವಿನ್ನನು ಆಲೋಚಿಸತೊಡಗಿದನು.

## ಡಾರ್ವಿನ್ನನ ಎರಡನೆಯ ನಿಯಮ

ಡಾರ್ವಿನ್ನನ ಮೇಲಿನ ಪ್ರಶ್ನೆಗೆ ಉತ್ತರವೆನೋ ಬಹು ಸುಲಭವೇ! ಎಲ್ಲ ಸಸ್ಯ ಮತ್ತು ಪ್ರಾಣಿಗಳು ಆಹಾರದ ಅಭಾವ, ಶತ್ರುಗಳು, ಕ್ಷಾಮ, ನೆರೆಹಾವಳಿ (ಪ್ರಭಾವ) ಬೆಳಕಿನ ಪೂರೈಕೆ, ಉಷ್ಣತೆ ಇತ್ಯಾದಿ ಅನೇಕ ತೊಂದರೆಗಳನ್ನು ಎದುರಿಸಬೇಕಾಗುವುವು. ಇಂತಹ ಮತ್ತು ವಾತಾವರಣದ ಅಥವಾ ಸನ್ನಿವೇಶದ ಇತರ ತೊಂದರೆಗಳಿಂದ ಎಲ್ಲ ಸಜೀವ ವಸ್ತುಗಳು ಜೀವನಾವಶ್ಯಕ ಪರಿಸ್ಥಿತಿಯ ಪೂರೈಕೆಗಾಗಿ ಒಂದು ದೀರ್ಘ ಹೋರಾಟದಲ್ಲಿ ತೊಳಲುತ್ತವೆ. ಉದಾಹರಣೆಗೆ ಒಂದು ಕಪ್ಪೆಯ ಜೀವನದಲ್ಲಿ ಬದುಕಬಹುದಾದ ಕೋಟ್ಯಂತರ ಮರಿಗಳಿಗೆಲ್ಲ ಸಾಕಷ್ಟು ಆಹಾರವಿಲ್ಲದಿದ್ದರೆ, ಆಗ ಅವುಗಳಲ್ಲಿ ಆಹಾರಕ್ಕಾಗಿಯೇ ಒಂದು ದೀರ್ಘ ಹೋರಾಟ ನಡೆಯುತ್ತದೆ. ಕೆಲವು ಮರಿಗಳು ತಮ್ಮ ಸತತ ಪ್ರಯತ್ನದಿಂದ ಆಹಾರವನ್ನು ಹೇಗಾದರೂ ದೊರಕಿಸಿಕೊಂಡು ಜೀವಂತವಾಗಿ ಉಳಿಯುತ್ತವೆ. ಇನ್ನು ಕೆಲವು ಹಲವಾರು ಕಾರಣಗಳಿಂದ ಸರಿದೂಡಲ್ಪಟ್ಟು, ಆಹಾರ ದೊರೆಯದೆ, ಕೊನೆಗೆ ಅವು ನಿರ್ನಾಮಗೊಳ್ಳುವುವು. ಇದಕ್ಕೇ ಡಾರ್ವಿನ್ನನು "ಜೀವನದ ಉಳಿವು ಅಥವಾ ಅಳಿವಿನ ಹೋರಾಟ" (Struggle for existence) ಎಂದು ಕರೆದನು.

## ಡಾರ್ವಿನ್ನನ ಮೂರನೆಯ ನಿಯಮ

ಒಂದು ತಲೆಮಾರಿನಲ್ಲಿ ಎಂತಹ ಸಜೀವ ವಸ್ತು ಉಳಿಯಬಲ್ಲದು. ಮತ್ತು 'ಎಂತಹದು ನಿರ್ನಾಮವಾಗುವುದು; ಮತ್ತು ಅದಕ್ಕೆ ಕಾರಣೀಭೂತವಾದ ಅಂಶಗಳಾವವು? ಎಂಬುದಾಗಿ ಡಾರ್ವಿನ್ನನು ತನ್ನಲ್ಲಿ ತಾನೇ ಪ್ರಶ್ನೆಹಾಕಿಕೊಂಡನು. ಅವನು 'ಬಿಯಾಗಲ್' ಇಂಬ ಹಡಗಿನಲ್ಲಿ ಪ್ರಪಂಚ ಪರ್ಯಟನಕ್ಕೆಂದು ಹೋಗಿ ೫ ವರ್ಷ ದೀರ್ಘ ಪ್ರವಾಸಮಾಡಿದಾಗ ಪ್ರಪಂಚದ ವಿವಿಧ ಭಾಗಗಳಲ್ಲಿ ಪರಿಶೀಲಿಸಿದ ಸಸ್ಯ ಮತ್ತು ಪ್ರಾಣಿಗಳ ದೇಹದ ಪ್ರತಿಯೊಂದು ಭಾಗದಲ್ಲಿಯೂ ಒಂದಲ್ಲ ಒಂದು ವ್ಯತ್ಯಾಸವಿದ್ದುದನ್ನು ಲಕ್ಷ್ಯಪೂರ್ವಕವಾಗಿ ಕಂಡಿದ್ದನು. ಉದಾಹರಣೆಗೆ ಎರಡು ನಾಯಿಗಳು ಒಂದೇ ತಾಯಿಯ ಗರ್ಭದಿಂದ ಬಂದಿದರೂ, ಎಲ್ಲ ವಿಧದಲ್ಲಿ ಒಂದೇ ರೀತಿಯಾಗಿರುವದನ್ನು ನೋಡುವದು ಅಸಾಧ್ಯವೆಂಬುದನ್ನೆಲ್ಲರೂ ಬಲ್ಲರು. ಒಂದು ಮರದ ಎಲೆಗಳಾಗಲಿ ಒಂದು ಬಟಗಡಲೆ ಗಿಡದ ಕಾಳುಗಳಾಗಲಿ ಎಲ್ಲವೂ ಒಂದೇ ರೀತಿ ಮತ್ತು ಒಂದೇ ಗಾತ್ರವುಳ್ಳದ್ದಾಗಿರುವದನ್ನು ನೋಡುವದು ಸಾಧ್ಯವಿಲ್ಲ. ಅವುಗಳಲ್ಲೂ ಒಂದಲ್ಲ ಒಂದು ಸೂಕ್ಷ್ಮತರದ ವ್ಯತ್ಯಾಸಗಳಿದ್ದೇ ಇರುತ್ತವೆ. ಆದ್ದರಿಂದ ಎಲ್ಲ ಸಸ್ಯ ಮತ್ತು ಪ್ರಾಣಿಗಳು ಅನೇಕ ವಿಶಿಷ್ಟ ಗುಣಗಳಲ್ಲಿ ಬೇರೆಬೇರೆಯವಾಗಿರುತ್ತವೆ. ಡಾರ್ವಿನ್ನನು ಅವುಗಳಿಗೆ 'ವ್ಯತ್ಯಾಸ ಗುಣ' ಎಂದು ಕರೆದನು.

ವ್ಯತ್ಯಾಸ ಗುಣದ ನಿಯಮ :— ಯಾವ ಎರಡು ಸಜೀವ ವಸ್ತುಗಳು ಎಲ್ಲ ರೀತಿಯಲ್ಲಿ ಒಂದೇ ವಿಧವಾಗಿರುವದಿಲ್ಲ. ಒಂದೇ ಕಾಯಿಯ ಎರಡು ಬೀಜಗಳೂ ಬೇರೆಬೇರೆಯಾಗಿರುತ್ತವೆ. ಒಂದನ್ನೊಂದು ಹೋಲುವಂತಹ ಎರಡು ಅವಳಿ ಮಕ್ಕಳು ಸ್ವಲ್ಪ ಸ್ವಲ್ಪ ಬೇರೆಯಾಗಿ ಕಾಣುತ್ತವೆ. ಉದಾಹರಣೆಗೆ ಒಂದು ಮರದ ಎಲೆಗಳ ಉದ್ದವನ್ನೇ ತೆಗೆದುಕೊಳ್ಳುವದಾದರೆ, ಒಂದು ಸಾವಿರ ಎಲೆಗಳ ಉದ್ದ ಅಗಲಗಳನ್ನು ಅಳೆದರೆ ಅವುಗಳಲ್ಲಿ ಸ್ವಲ್ಪ ಸ್ವಲ್ಪ ವ್ಯತ್ಯಾಸಗಳು ಕಂಡೇಕಾಣುತ್ತವೆ. ಕೆಲವು (೨೦೦) ಕನಿಷ್ಠ ಅಳತೆಯವೂ ಕೆಲವು (೨೦೦) ಪರಮಾವಧಿ ಅಳತೆಯವೂ ಉಳಿದವು ಇವುಗಳ ಮಧ್ಯಮವಾಗಿಯೂ ಇರುವದು ಕಂಡುಬರುವದು. ಡ್ರಿಲ್ಲಿನಲ್ಲಿ ಎತ್ತರಾನುಕ್ರಮವಾಗಿ ನಿಲ್ಲುವ ಇನ್ನೊಂದು ಉದಾಹರಣೆಯನ್ನು ಇಲ್ಲಿ ತೆಗೆದುಕೊಳ್ಳಬಹುದು. ಹೀಗೆ ಅಧಿಕ ಸಂಖ್ಯೆಯಲ್ಲಿರುವ ಗುಂಪಿನಲ್ಲಿ ಉದ್ದ ಅಥವಾ ಎತ್ತರದಂತಹ ಒಂದು ಗುಣವನ್ನು ಆರಿಸಿಕೊಂಡು ಪರಿಶೀಲಿಸಿದರೆ ಆಗ 'ಕನಿಷ್ಠ' ಮತ್ತು 'ಪರಮಾವಧಿ' ಎಂಬ ವ್ಯತ್ಯಾಸಗಳು ತೋರಿ ಬರದೆ ಇರಲಾರವು.

## ಡಾರ್ವಿನ್ನನ ನಾಲ್ಕನೇ ನಿಯಮ

ಡಾರ್ವಿನ್ನನು ತನ್ನ ಪ್ರವಾಸದಲ್ಲಿ ಮತ್ತೊಂದು ವಿಷಯವನ್ನು ಗಮನಿಸಿದ್ದನು. ಅವನು ಹೋದಲ್ಲೆಲ್ಲ ಪ್ರಾಣಿ-ಸಸ್ಯಗಳು ತಾವಿದ್ದ ಸನ್ನಿವೇಶಗಳಿಗೆ ತಕ್ಕಂತೆ ಹೊಂದಿಕೊಳ್ಳುವದನ್ನು ಪರಿಶೀಲಿಸಿದ್ದನು. ಮರುಭೂಮಿಯಲ್ಲಿದ್ದ ಸಸ್ಯ ಮತ್ತು ಪ್ರಾಣಿಗಳು ಮರುಭೂಮಿಯ ಪರಿಸ್ಥಿತಿಗನುಗುಣವಾಗಿಯೂ ಸಮುದ್ರದಲ್ಲಿದ್ದ ಸಸ್ಯ-ಪ್ರಾಣಿಗಳು ಸಮುದ್ರದ ಉಪ್ಪು ನೀರಿನ ಸನ್ನಿವೇಶಕ್ಕೆ ತಕ್ಕಂತೆಯೂ ಉಷ್ಣವಲಯ ಹಾಗೂ ಸಮಶೀತೋಷ್ಣ ವಲಯದ ಸಸ್ಯ-ಪ್ರಾಣಿಗಳಲ್ಲಿ ಸ್ವಲ್ಪ ಸ್ವಲ್ಪ ವ್ಯತ್ಯಾಸಗಳಿದ್ದರೂ ಆಯಾ ಪ್ರದೇಶಗಳಿಗೆ ತಕ್ಕಂತೆ ಹೊಂದಿಕೊಳ್ಳುವದನ್ನು ಗಮನಿಸಿದ್ದನು. ಇದಕ್ಕೆ ಡಾರ್ವಿನ್ನನು 'ಹೊಂದಾಣಿಕೆ' ಅಥವಾ 'ಸಂವಿಧಾನ' (Adaptation) ಎಂದು ಹೆಸರಿಟ್ಟನು. ಒಂದರಿಂದ ಒಂದು ರೂಪರಚನೆಗಳಲ್ಲಿ ಭಿನ್ನವಾಗಿರುವ ವಿವಿಧ ಸಸ್ಯ-ಪ್ರಾಣಿಗಳು ಒಂದೇ ಸನ್ನಿವೇಶದಲ್ಲಿ ಹೇಗೆ ಹೊಂದಿಕೊಂಡು ನಿಲ್ಲುವಂತಾದುವ ಎಂಬುದು ಒಂದು ದೊಡ್ಡ ಪ್ರಶ್ನೆ.

### ಡಾರ್ವಿನ್ನನ ಐದನೆಯ ನಿಯಮ

ಮೇಲಿನ ಪ್ರಶ್ನೆಗೆ ಡಾರ್ವಿನ್ನನದು ಒಂದೇ ಉತ್ತರ. ಜೀವನಕ್ಕೆ ಆವಶ್ಯಕವಾದ ಆಹಾರ, ಮತ್ತಿತರ ಸೌಕರ್ಯಗಳ ಪೂರೈಕೆಯ ನಿರಂತರ ಹೋರಾಟದ ಪರಿಣಾಮವೇ ಈ 'ಹೊಂದಾಣಿಕೆ' ಅಥವಾ 'ಸಂವಿಧಾನ' ರೂಪುಗೊಂಡಿದೆಯೆಂದು ನಂಬಲಡ್ಡಿಯಿಲ್ಲ. ಇಂತಹ ಜೀವನದ ಹೋರಾಟದಲ್ಲಿ ಇದ್ದ ಸನ್ನಿವೇಶದಲ್ಲಿಯೇ ದೊರೆಯಬಹುದಾದ ಆಹಾರ ಮತ್ತಿತರ ಜೀವನಾವಶ್ಯಕವಾದ ಸೌಲಭ್ಯಗಳನ್ನು ಪಡೆಯಲು ರೂಪಿಸಿಕೊಂಡ "ಮಾರ್ಪಾಟು" ಅಥವಾ ಬದಲಾವಣೆಗಳನ್ನು ಹೊಂದಿದ ಸಸ್ಯ ಅಥವಾ ಪ್ರಾಣಿ ಮಾತ್ರ ಬದುಕುವಂತಾಗುವುವು. ಉಳಿದೆಲ್ಲವೂ ನಿರ್ನಾಮವಾಗುವುವು; ಏಕೆಂದರೆ ಅವುಗಳಿಗೆ ಸಾಕಷ್ಟು ಆಹಾರ ಅಥವಾ ಸ್ಥಳಾವಕಾಶ ಲಭ್ಯವಿರುವುದಿಲ್ಲ. ಇದನ್ನೇ ಡಾರ್ವಿನ್ನನು **"ಬಲವುಳ್ಳವನೇ ಬಾಳುವನು"** (Survival of the fittest) ಎಂದು ಕರೆದನು. ಆದರೆ ಇದನ್ನೇ ಇತ್ತೀಚಿನ ಜೀವವಿಜ್ಞಾನಿಗಳು **"ಅನರ್ಹವಾದುದರ ನಿರ್ಮೂಲನೆ"** ಅಥವಾ **"ಅಪೂರ್ಣ ಸಂವಿಧಾನವುಳ್ಳದರ ಉಚ್ಚಾಟನೆ"** (destruction of the unfit or destruction of the poorly adapted) ಎಂದು ಕರೆಯುತ್ತಾರೆ.

ಒಂದು ಸಸ್ಯ ಅಥವಾ ಪ್ರಾಣಿಯ ತಲೆಮಾರಿನಲ್ಲಿ ಕೆಲವು ಇಚ್ಛಿತ ಬದಲಾವಣೆಗಳು ಸ್ವಲ್ಪಮಟ್ಟಿಗೆ ಆನುವಂಶಿಕವಾಗಿಯೇ ಆದರೂ ರೂಪುಗೊಂಡ ಮೇಲೆ, ಅವುಗಳ ಮುಂದಿನ ಪೀಳಿಗೆಯೂ ಅದೇ ತರಹದ ಇಚ್ಛಿತ ಬದಲಾವಣೆಗಳನ್ನು ಆನುವಂಶಿಕವಾಗಿ ಪಡೆಯುವುದು. ಮತ್ತೊಮ್ಮೆ ಮುಂದಿನ ತಲೆಮಾರಿನಲ್ಲಿ ಅದೇ ಅತಿ ಸಂತಾನ, ಜೀವನದ ಹೋರಾಟ, ಮತ್ತು ಮಾರ್ಪಾಟು ಮುಂತಾದ ಕಾರಣಗಳಿಂದ ಅರ್ಹವಾದುದರ ಉಳಿಯುವಿಕೆಯುಂಟಾಗುತ್ತದೆ. ಇಂತಹ ವಿಧಾನವೊಂದು ಬಹಳ ಕಾಲದ ವರೆಗೆ ಮುಂದುವರೆದದ್ದೇ ಆದರೆ, ಆಗ ಈ ತರಹದ ಮಾರ್ಪಾಟುಗಳು ಕ್ರಮೇಣ ಅನೇಕ ತಲೆಮಾರುಗಳಲ್ಲಿ ಕೂಡಿಕೊಂಡು ಹೊಸ ಹೊಸ ವಿಧದ ಸಜೀವ ವಸ್ತುಗಳ ಉತ್ಪನ್ನಕ್ಕೆ ಎಡೆಕೊಡುವುವು.

### ಕೃತಕ ಆಯ್ಕೆ
### ( Artificial Selection )

ಮಾನವನು ತನ್ನ ಸಾಕುಪ್ರಾಣಿ ಮತ್ತು ಸಸ್ಯಗಳನ್ನು ಈ ರೀತಿ ಬದಲಾಯಿಸಬಹುದೆಂದು ಡಾರ್ವಿನ್ನನು ನಿರ್ಧಾರಕ್ಕೆ ಬಂದನು. ಪ್ರತಿವರ್ಷವೂ ಅತಿ ದೊಡ್ಡ ಕುಂಬಳಕಾಯಿಯೊಂದನ್ನು ಆರಿಸಿಕೊಂಡು ಅದರ ಬೀಜಗಳನ್ನು ಮುಂದಿನ ವರ್ಷ ಬಿತ್ತಿದರೆ ಕೃಷಿಗಾರನು ಆ ವರ್ಷ ದೊಡ್ಡ ಕುಂಬಳಕಾಯಿಗಳನ್ನು ಪಡೆಯಬಲ್ಲನು. ಬೀಟ್ ಮತ್ತು ಬಾದಾಮಿಯಂತಹ ಮೂಲ ಕಾಡುಗಿಡಗಳನ್ನು ಆಯ್ದು ಅವುಗಳನ್ನು ಮಾನವನು ಅನೇಕ ತಲೆಮಾರುಗಳವರೆಗೆ ಬೆಳೆಸಿದ ನಂತರ ಇಂದಿನ ಬೀಟ್ ಮತ್ತು ಬಾದಾಮಿಯ ಗಿಡಗಳು ಉಂಟಾಗಿವೆ. ಹೀಗೆ ಮನುಷ್ಯನ ಪ್ರಯತ್ನದಿಂದ ಕೆಲವೇ ವರ್ಷಗಳಲ್ಲಿ ಹೊಸ ಹೊಸ ತಳಿಯ ಸಜೀವ ವಸ್ತುವನ್ನು ಉಂಟುಮಾಡುವದು ಸಾಧ್ಯವಿದೆ. ಇದು ನಿಜವಾಗಿದ್ದರೆ—ಇದು ನಿಜವೆಂಬುದು ನಮಗೆ ಈಗ ಗೊತ್ತಿದೆ—ಡಾರ್ವಿನ್ನನು ಹಾಗೆಂದು ಆಗಲೇ ನಂಬಿದ್ದನು. ಆಗ ಪ್ರಕೃತಿಯ ಆಯ್ಕೆಯೂ ಅದೇ ರೀತಿ ಸಾಕಷ್ಟು ಕಾಲಾವಕಾಶ ದೊರೆತರೆ ಹೊಸ ಹೊಸ ಸಂತತಿಗಳನ್ನು ನಿರ್ಮಿಸಬಲ್ಲದು. ಪ್ರಕೃತಿಯಲ್ಲಿ ಅಂತಹ ದೀರ್ಘ ಕಾಲಾವಕಾಶ ಇರುವುದೆಂದು ಡಾರ್ವಿನ್ನನ ಮತ. ಕಾಲಾವಕಾಶ ಸಾವಿರಾರು ವರ್ಷಗಳ ವರೆಗೆ ಹೋಗಬಹುದು. ಕೃತಕ ಆಯ್ಕೆಯಲ್ಲಿ ಮಾನವನು ಪ್ರತಿಯೊಂದು ಹೊಸ ತಲೆಮಾರಿನ ತಂದೆ ತಾಯಿಯಂತಹ ಮೂಲವನ್ನು ಆರಿಸಿಕೊಳ್ಳುತ್ತಾನೆ. ಆದರೆ ಪ್ರಕೃತಿಯ ಆಯ್ಕೆಯಲ್ಲಿ ಆಹಾರ ಮತ್ತಿತರ ಅಭಾವವನ್ನು ಎದುರಿಸುವಂತಹ ಸಜೀವವಸ್ತು ಎಷ್ಟರ ಮಟ್ಟಿಗೆ ವಿಜಯಿಯಾಗಿದೆ. ಮತ್ತು ಯಾವದು ಮುಂದಿನ ಪೀಳಿಗೆಗೆ ಮೂಲವಸ್ತುವಾಗಿರಬೇಕೆಂಬುದನ್ನು ಅದು ಅವಲಂಬಿಸಿರುತ್ತದೆ. ಅಂತಹ ಅನುಕೂಲ ಮಾರ್ಪಾಡುಗಳನ್ನೊಳಗೊಂಡ ಮತ್ತು ಸನ್ನಿವೇಶಕ್ಕೆ ತಕ್ಕಂತೆ ಹೊಂದಿಕೊಳ್ಳುವಂತಹವೇ ಉಳಿದು ವಂಶಾಭಿವೃದ್ಧಿಗೊಂಡು ಊರ್ಜಿತವಾಗುತ್ತದೆ.

### ಪ್ರಕೃತಿಯ ಆಯ್ಕೆಯ ನಿದರ್ಶನ

ಪ್ರಕೃತಿಯ ಆಯ್ಕೆಯ ನಿಯಮದಂತೆ ಜಿರಾಫೆ ಪ್ರಾಣಿಗೆ ಉದ್ದನೆಯ ಕತ್ತು ಹೀಗೆ ಪ್ರಾರಂಭವಾಯಿತು. ಯಾವುದೋ ಒಂದು ಪೀಳಿಗೆಯಲ್ಲಿ ಸಣ್ಣ ಕತ್ತುಳ್ಳ ಜಿರಾಫೆಯಂತಹ ಮೂಲಪ್ರಾಣಿಗಳು ಅನೇಕ ಮರಿಗಳನ್ನು ಹಾಕಿದವು ಎಂದು ಇಟ್ಟುಕೊಳ್ಳೋಣ. ಆ ಮರಿಗಳ ಕತ್ತು ಸ್ವಲ್ಪ ಹೆಚ್ಚು ಕಡಿಮೆ ಉದ್ದವಾಗಿದ್ದಿರಬೇಕು. ಆ ಮರಿ ಪ್ರಾಣಿಗಳಲ್ಲಿ ಅತಿ ಉದ್ದ ಕತ್ತುಳ್ಳ ಪ್ರಾಣಿಗೆ ಮಿಕ್ಕೆಲ್ಲವುಗಳಿಗಿಂತ ಹೆಚ್ಚು ಎತ್ತರದ ಮರಗಳ ಎಲೆಗಳನ್ನು ತಿನ್ನಲು ಸಾಧ್ಯವಾಗಿ ಯಶಸ್ವಿಯಾಯಿತು. ಆದ್ದರಿಂದ ಅಂತಹ ಪ್ರಾಣಿಗಳು ಉಳಿದು ಊರ್ಜಿತವಾದವು ಸಣ್ಣಕತ್ತುಳ್ಳವು ಕಾಲಕ್ರಮೇಣ ನಿರ್ಮೂಲಗೊಂಡವು. ಈ ಉದ್ದಕತ್ತುಳ್ಳ ಪ್ರಾಣಿಗಳೇ ಮುಂದಿನ ಪೀಳಿಗೆಗೆ ಕಾರಣೀಭೂತವಾದ ಮೂಲಪ್ರಾಣಿಗಳಾದವು. ಆ ಉದ್ದನೆಯ ಕತ್ತು ಕೋಶಬೀಜದಲ್ಲಿರುವ ಎಳೆಗಳಂತಹ ಕ್ರೊಮೊಸೋಮುಗಳ, ಜೀವಗಳ ಬದಲಾವಣೆಗೆ ಸಂಬಂಧಪಟ್ಟಿದ್ದರಿಂದ ಮುಂದಿನ ಪೀಳಿಗೆಗೆಗಳಲ್ಲಿ ಅಂದರೆ ಸಾವಿರಾರು ವರುಷಗಳ ನಂತರ ಆ ಗುಣವೃದ್ಧಿಹೊಂದುತ್ತ ಬಂದು ಇಂದಿನ ಜಿರಾಫೆಗಳು ರೂಪಗೊಂಡವು. ಡಾರ್ವಿನ್ನನು ಹೊಸ ಸಂತತಿಗಳ ಮೂಲವನ್ನು ಹೀಗೆ ವಿವರಿಸಿರುವನು.

### ರೂಪಾಂತರ ಅಥವಾ ವಿಕೃತಿಯ ತತ್ತ್ವ

'ಜೀವ'ಗಳಿಂದಲೇ ಬದಲಾವಣೆಗಳು: ಒಂದು ಸಜೀವ ವಸ್ತುವಿನಲ್ಲಿ ಸಣ್ಣ ಪ್ರಮಾಣದಲ್ಲಿ ಕೆಲವು ಬದಲಾವಣೆಗಳು, ಒಂದು ದೆಸೆಯಲ್ಲಿಯೇ ಆಗಿ ಆಗಿ ಕಡೆಗೆ ಒಂದು ಹೊಸ ಜಾತಿಯುಂತಾಗುತ್ತದೆಂದು ಡಾರ್ವಿನ್ನನು ನಂಬಿದ್ದನು. ಆದರೆ ಅಂತಹ ಬದಲಾವಣೆಗಳು ಎಲ್ಲಿ ಹೇಗೆ ಆಗುವವೆಂಬುದನ್ನು ಆತನು ಅರಿತಿರಲಿಲ್ಲ. ಸಣ್ಣದಿರಲಿ ದೊಡ್ಡದಿರಲಿ ಆನುವಂಶೀಯ ಬದಲಾವಣೆಗಳು ಕ್ರೊಮೊಸೋಮು ಮತ್ತು ಜೀವಗಳಲ್ಲಿ ಉಂಟಾಗುತ್ತವೆಂಬುದನ್ನು ನಾವೀಗ ಅರಿತಿದ್ದೇವೆ. ಅಂತಹ ಬದಲಾವಣೆಗಳು ಸಸ್ಯ ಮತ್ತು ಪ್ರಾಣಿಗಳಲ್ಲಿ ಉಂಟಾಗುವದಕ್ಕೆ 'ರೂಪಾಂತರ' ಅಥವಾ "ವಿಕೃತಿ" ಎಂದು ಹೆಸರು.

ಇದು ಹಾಲೆಂಡಾಲ್ ಎಂಬಾತನಿಂದ ಮೊದಲ ಬಾರಿ ಬೆಳಕಿಗೆ ಬಂದಿತು.

### ವಿಕೃತಿ ತತ್ತ್ವದ ಮೂಲ

ಅಮೇರಿಕೆಯ 'ಈವನಿಂಗ ಪ್ರಿಮ್‌ರೋಜ' ಎಂಬ ಗಿಡವನ್ನು ಯುರೋಪಿಗೆ ತಂದು ಬೆಳಿಸಲಾಯಿತು. ಹಾಲಂಡದಲ್ಲಿ ಒಂದೇ ಬಯಲಿನಲ್ಲಿ ಡಚ್ ಸಸ್ಯ ವಿಜ್ಞಾನಿ ಹ್ಯೂಗೊಡಿವ್ರಿಸ್‌ನು ವಿಶೇಷವಾಗಿ ಬೆಳಿಸಿದನು. ಅವುಗಳಮಧ್ಯೆ' ಒಂದು ವಿಶಿಷ್ಟ ಬೇರೆ ಜಾತಿಯ ಗಿಡವು ಎದ್ದು ಕಾಣಿಸಿತು. ಆ ಹೊಸ ಜಾತಿಯ ಗಿಡವು ಅಲ್ಲಿದ್ದ 'ಪ್ರಿಮ್‌ರೋಸ್' ಗಿಡಗಳಿಂದಲೇ ಬಂದಿರಬೇಕೆಂದು ಅವನಿಗೆ ಖಚಿತವಾಯಿತು. ಇದನ್ನು ಸಿದ್ಧಮಾಡಿ ನೋಡಬೇಕೆಂದು ಅಲ್ಲಿಯ ಪ್ರಿಮ್‌ರೋಸ್ ಎಂಬ ಸಾಧಾರಣ ಗಿಡಗಳಿಂದ ಬೀಜಗಳನ್ನು ಆಯ್ದು 'ಆಮ್‌ಸ್ಟರ್‌ಡಾಂ' ವಿಶ್ವವಿದ್ಯಾಲಯದ ತೋಟದಲ್ಲಿ ಬಿತ್ತಿ ಗಿಡಗಳನ್ನು ಬೆಳಿಸಿದನು. ಈ ಗಿಡಗಳಲ್ಲಿ ಒಂದು ವಿಶಿಷ್ಟ ಜಾತಿಯ ಮತ್ತು ಇತರ ಪ್ರಿಮ್‌ರೋಸ್ ಗಿಡಗಳಿಂದ ಬೇರೆಯಾದ ಮತ್ತೊಂದು ಗಿಡವು ಎದ್ದು ಕಾಣಿಸಿತು. ಅವುಗಳನ್ನು ಮತ್ತೆ ಬಿತ್ತಿದನು. ಆಗ ಆ ಗಿಡವು ಹಿಂದಿನಂತೆಯೇ ವಿಶಿಷ್ಟವಾಗಿದ್ದು ಇತರ ಪ್ರಿಮ್‌ರೋಸ್ ಗಿಡಗಳಿಂದ ಭಿನ್ನವಾಗಿದ್ದುದನ್ನು ಮತ್ತೊಮ್ಮೆ ನೋಡಿದನು. ಅದರಿಂದ, ಇದ್ದಕ್ಕಿದ್ದ ಹಾಗೆಯೇ ಹೊಸ ಗಿಡದ ಉತ್ಪತ್ತಿಯೊಂದು ಆಗಿದೆಯೆಂದು ನಿರ್ಧಾರಕ್ಕೆ ಬರಲು ಸಾಧ್ಯವಾಯಿತು. ಹೀಗೆ ಪ್ರಯೋಗವನ್ನು ಮುಂದುವರಿಸಿದಾಗ, ಒಂದೇ ತಲೆಮಾರಿನಲ್ಲಿ ಕೆಲವು ಗಿಡಗಳಿಂದ ಕೆಲವು ಸಾರಿ ಇದ್ದಕ್ಕಿದ್ದ ಹಾಗೆಯೇ ಹೊಸ ಗಿಡದ ಉತ್ಪತ್ತಿಯಾಗುವುದು ಸಾಧ್ಯವಿದೆಯೆಂದು ಮನಗಂಡನು. ಇದರಿಂದ ಸಸ್ಯ ಮತ್ತು ಪ್ರಾಣಿಗಳಲ್ಲಿ, ಪ್ರಕೃತಿಯಲ್ಲಿ ಸಾವಿರಾರು ವರ್ಷಗಳಿಂದ ಇಂತಹ ಹೊಸ ಸಸ್ಯ ಮತ್ತು ಪ್ರಾಣಿಗಳ ಉತ್ಪತ್ತಿ (ಜನನ) ಆಗುತ್ತಿರಬೇಕೆಂದು ನಿರ್ಧಾರಕ್ಕೆ ಬರಲು ಸಾಧ್ಯವಾಯಿತು. ಡಿವ್ರಿಸ್‌ನು ೧೯೦೧ ರಲ್ಲಿ ಹೀಗೆ ಹೊಸ ಹೊಸ ಸಸ್ಯ ಮತ್ತು ಪ್ರಾಣಿಗಳ ಉತ್ಪತ್ತಿಗೆ 'ವಿಕೃತಿ' ಎಂದು ಕರೆದು ತನ್ನ ಸಂಶೋಧನೆಯ ವಿವರಗಳನ್ನೆಲ್ಲಾ ಪ್ರಕಟಿಸಿದನು.

### ಇಂದಿನ ವಿಕಾಸ :

ವಿಜ್ಞಾನಿಗಳು ೧೯೦೦ ರಿಂದ ಈಚೆಗೆ ವಿಕಾಸ ತತ್ತ್ವದ ಪೂರ್ಣ ವಿವರಗಳಿಗಾಗಿ ಪ್ರಯತ್ನ ಮಾಡುತ್ತಿದ್ದಾರೆ. ಆದರೂ ಒಂದು ಅಂತಿಮ ನಿರ್ಧಾರಕ್ಕೆ ಇನ್ನೂ ಬರುವುದಾಗಿಲ್ಲ. ಒಟ್ಟಿನಲ್ಲಿ 'ವಿಕೃತಿ' ಎಂಬ ನಿಯಮ ಸಜೀವ ವಸ್ತುಗಳ ರೂಪಾಂತರದ ಬಗ್ಗೆ ಸ್ವಲ್ಪಮಟ್ಟಿಗಾದರೂ ಬೆಳಕು ಚೆಲ್ಲಿದೆ, ಎಂದು ನಂಬಲಾಗಿದೆ. ಇತ್ತೀಚೆಗೆ 'ಕ್ಷ' ಕಿರಣಗಳೂ ಕಾಲ್ಚಿಸಿನ್ (Colchine) ನಂತಹ ರಾಸಾಯನಿಕ ದ್ರವ್ಯಗಳು ಮತ್ತು ಕ್ರೋಮೋಸೋಮುಗಳು ಹೆಣೆದುಕೊಂಡಾಗ, ಅತಿತ್ತ ಸರಿದಾಡುವ "ಜೀನ್" ಗಳು, ಇವೇ ಮೊದಲಾದವುಗಳ ಸಹಾಯದಿಂದ 'ವಿಕೃತಿ' ಎಂಬ ನಿಯಮವನ್ನು ಪ್ರಾಯೋಗಿಕವಾಗಿ ಕೃತಕ ರೀತಿಯಲ್ಲಿ ಮಾಡಿ ತೋರಿಸಬಹುದೆಂದು ತಿಳಿದು ಬಂದಾಗ ವಿಕಾಸನಿಯಮದಲ್ಲಿ 'ವಿಕೃತಿ'ಯ ಪಾತ್ರವು ಬಹು ಮುಖ್ಯವಾದುದೆಂತಲೂ ವಿಕಾಸದ ವಿವರಣೆಗೆ 'ವಿಕೃತಿ' ತತ್ತ್ವವು ಬಹುಪುಷ್ಟಿ ಕೊಡುವ ಒಂದು ಪುರಾವೆಯೆಂತಲೂ ನಂಬಲಾಗಿದೆ. ಇಂತಹ 'ವಿಕೃತಿ' ನಿಯಮವು ಕೆಲವು ಸಸ್ಯ ಅಥವಾ ಪ್ರಾಣಿಗಳಿಗೆ ಅನುಕೂಲವಾಗಿ ಪರಿಣಮಿಸಬಹುದು. ಕೆಲವು ಜೀವಿಗಳಿಗೆ ವಿರುದ್ಧವಾಗಿ ಪರಿಣಮಿಸಬಹುದು. ಕೆಲವೊಂದು ವಿಶೇಷ ಸಂದರ್ಭಗಳಲ್ಲಿ 'ವಿಕೃತಿ' ಜೀವಿಗಳಿಗೆ ಪ್ರತಿಕೂಲವಾಗಿ ಪರಿಣಮಿಸುವುದರಿಂದ ಅಂತಹ ಸಜೀವಿಗಳು ಪೂರ್ಣ ನಿರ್ನಾಮವಾಗಿ ಹೋಗಬಹುದು. ಏನೇ ಆದರೂ ವಿಕೃತಿ ತತ್ತ್ವವು. ಅನೇಕ ಮಾರ್ಪಾಟು ಅಥವಾ ಬದಲಾವಣೆಗಳಿಗೆ ಎಡೆ ಕೊಟ್ಟಿದೆಯೆಂಬುದನ್ನು ಅಲ್ಲಗಳೆಯುವಹಾಗಿಲ್ಲ. ಪ್ರಕೃತಿಯ ಕೈವಾಡ. ಎಂತಹ ಬದಲಾವಣೆಗಳು ಅನುಕೂಲ, ಎಂತಹವು ಪ್ರತಿಕೂಲ ಎಂಬುದನ್ನು ನಿರ್ಧರಿಸಬಲ್ಲದು. ಅನುಕೂಲ ಬದಲಾವಣೆಗಳನ್ನು ಪಡೆದಂತಹವು ಸಹಜವಾಗಿಯೇ ಉಳಿದು ಅನೇಕ ಪೀಳಿಗೆಗಳ ವರೆಗೆ ಆನುವಂಶಿಕವಾಗಿ ಮುಂದುವರೆಯುವುವು. ಪ್ರತಿಕೂಲ ಮಾರ್ಪಾಟುಗಳನ್ನು ಪಡೆದಂತಹ ಜೀವಿಗಳು ಅಳಿಯುವುದು ಖಂಡಿತ.

ಇತ್ತೀಚಿನ ಜೀವವಿಜ್ಞಾನಿಗಳು, 'ವಿಕೃತಿ' ಮತ್ತು 'ಪ್ರಕೃತಿಯ ಕೈವಾಡ' ಇವೆರಡೂ ವಿಕಾಸವಾದವನ್ನು ಸಿದ್ಧಮಾಡಿ ತೋರಿಸಿವೆ ಎಂದು ನಂಬುತ್ತಾರೆ. ಅದನ್ನು ಪೂರ್ಣ ನಂಬಲು ಇನ್ನೂ ಹೆಚ್ಚು ಹೆಚ್ಚು ಪ್ರಯೋಗ ಅಥವಾ ಪರಿಶೀಲನೆಗಳು ಅಗತ್ಯವೆಂದು ಹೇಳಿದರೆ ತಪ್ಪಾಗಲಾರದು.

### ಬದಲಾವಣೆ (ರೂಪಾಂತರ) ಸ್ಥಿರ :

ಒಂದು ಕಾಲಕ್ಕೆ ಸಸ್ಯ ಮತ್ತು ಪ್ರಾಣಿಗಳು ಸ್ಥಿರ ಮತ್ತು ಬದಲಾಗುವುದಿಲ್ಲ, ಎಂದು ಮಾನವನು ತಿಳಿದಿದ್ದನು. ಈ ನಿರಾಧಾರ ನಂಬಿಕೆಯನ್ನು ವಿಜ್ಞಾನ ದೂರಮಾಡಿದೆ. ಪೃಥ್ವಿ ಮತ್ತು ಅದರ ಮೇಲಿರುವ ಎಲ್ಲ ಸಜೀವ ವಸ್ತುಗಳು ನಿರಂತರ ಬದಲಾಗುವ ಪರಿಸ್ಥಿತಿಯಲ್ಲಿವೆ. ಎಂದು ಈಗ ಸಿದ್ಧಮಾಡಲ್ಪಟ್ಟಿದೆ. ಪರ್ವತಗಳು ಮತ್ತು ಸಾಗರಗಳು ಕೂಡ ಸ್ಥಿರವಲ್ಲ. ಅವೂ ತಮ್ಮ ತಮ್ಮ ಸ್ಥಳವನ್ನೂ ಸ್ಥಿತಿಯನ್ನೂ ಬದಲಾಯಿಸಿಕೊಳ್ಳುತ್ತವೆ.

ಸಸ್ಯ ಮತ್ತು ಪ್ರಾಣಿಗಳ ಜಾತಿಗಳು ಹುಟ್ಟುತ್ತವೆ. ಬೆಳೆಯುತ್ತವೆ ಮತ್ತು ಕಾಲ ಉರುಳಿದಂತೆ ನಿರ್ನಾಮವಾಗುತ್ತವೆ ಎಂದು ಈಗ ನಂಬಲಾಗಿದೆ. ಚಿಕಾಗೋ ವಿಶ್ವವಿದ್ಯಾಲಯದ ಸಸ್ಯ ಶಾಸ್ತ್ರಶಾಖೆಯ ಮುಖ್ಯಸ್ಥ 'ಡಾ. ಹೆಚ್. ಸಿ. ಕಾಲ್ಸ್' ಎಂಬಾತ ವಿಜ್ಞಾನಿಯ ದೃಷ್ಟಿಯಲ್ಲಿ ಜಗತ್ತಿನ ಸ್ವರೂಪ ಇಂತಿರುತ್ತದೆ ಎಂದು ತಿಳಿಸುತ್ತಾನೆ— "ಈ ಜಗತ್ತಿನಲ್ಲಿ ಎಲ್ಲ ಅಸ್ಥಿರ ಮತ್ತು ಮಿಥ್ಯ ಆದರೆ ಒಂದು ಮಾತ್ರ ಸ್ಥಿರ ಮತ್ತು ಸತ್ಯ. ಅದೇ ನಿರಂತರ ರೂಪಾಂತರ."!

# ಫಲಜ್ಯೋತಿಷ್ಯ ಮತ್ತು ಆಕ್ಷೇಪಣೆಗಳು

ಲೇಖಕರು: ಎನ್. ಕೆ. ಜೋಗಳೇಕರ, ಧಾರವಾಡ

ಫಲಜ್ಯೋತಿಷ್ಯವು ಶಾಸ್ತ್ರವೆ? ಕೆಲವೊಂದು ಫಲಗಳು ಏಕೆ ಸರಿಬರುವದಿಲ್ಲ? ದೈವಜ್ಞರಲ್ಲಿ ಭಿನ್ನಾಭಿಪ್ರಾಯವಿರಲು ಕಾರಣವೇನು? ಅಥವಾ ಇದೇ-ನಾದರೂ ಗಾರುಡಿವಿದ್ಯೆಯೇ? ಎಂದು ಈ ಶಾಸ್ತ್ರದ ಬಗೆಗೆ ಕೇಳಲಾಗುತ್ತಿದೆ. ಇವೆಲ್ಲ ಆಕ್ಷೇಪಣೆಗಳಿಗೆ ಲೇಖಕರು ಇಲ್ಲಿ ಪರಿಹಾರವೊದಗಿಸಲು ಯತ್ನಿಸಿರುವರು.

ಫಲಜ್ಯೋತಿಷ್ಯವು ಶಾಸ್ತ್ರವೇ? ಎಂದು ಕೇಳುತ್ತಾರೆ. ಫಲಜ್ಯೋತಿಷ್ಯವು ಶಾಸ್ತ್ರವಲ್ಲವೆಂಬುದೊಂದು ಮುಖ್ಯವಾದ ಆಕ್ಷೇಪಣೆ. ಈ ಕಾರಣದಿಂದ ಶಾಸ್ತ್ರವೆಂದರೇನು ಎಂಬುದನ್ನು ಮೊದಲಿಗೆ ವಿವೇಚಿಸಬೇಕಾಗುವದು. ಫಲಜ್ಯೋತಿಷ್ಯದಲ್ಲಿ ರಾಶಿಗಳ, ಗ್ರಹಗಳ, ಸ್ಥಾನಗಳ, ದೃಷ್ಟಿಗಳ ಮತ್ತು ಯೋಗಗಳ ಪರಿಣಾಮವು ನಿರ್ದಿಷ್ಟವಾಗಿರುತ್ತದೆ ಎಂದು ಹೇಳಿದೆ. ಆದುದರಿಂದ ಇದೊಂದು ಜ್ಞಾನವನ್ನು ಗ್ರಹಿಸುವ ರೀತಿಯಾಗಿದೆ. ನಿಯಮುಬದ್ಧ ಸುಸಂಘಟಿತವಾದ ಜ್ಞಾನವೇ ಶಾಸ್ತ್ರವಾಗುತ್ತದೆ. ಈ ಕಾರಣದಿಂದ ಇದೂ ಒಂದು ಶಾಸ್ತ್ರ. ಯಾವುದೇ ಶಾಸ್ತ್ರವಾಗಲಿ ಅನುಭವ ಹಾಗೂ ಪ್ರಯೋಗದಿಂದ ಒಂದು ರೂಪವನ್ನು ಪಡೆಯುತ್ತ ಹೋಗುತ್ತದೆ. ರಸಾಯನ ಶಾಸ್ತ್ರ ಪದಾರ್ಥವಿಜ್ಞಾನಶಾಸ್ತ್ರಗಳಂತೆ ಫಲಜ್ಯೋತಿಷ್ಯವೂ ಅನುಭವ ಹಾಗೂ ಪ್ರಯೋಗಗಳಿಂದ ನಿರ್ಮಿತವಾಗಿರುತ್ತದೆ. ಉದಾಹರಣೆಗೆ-ಪಂಚಮ ಸ್ಥಾನದಲ್ಲಿ ಶನಿ ಇದ್ದರೆ, ಧನುರಾಶಿಯಲ್ಲಿ ಗುರು ಇದ್ದರೆ, ಬುಧ ಮಂಗಳರ ಕೇಂದ್ರಯೋಗವಿದ್ದರೆ ಏನು ಪರಿಣಾಮವೆಂಬುದನ್ನು ನಿರ್ಧರಿಸಿದ್ದಾರೆ. ಭಿನ್ನ ಭಿನ್ನ ರಾಶಿಗಳ ಹಾಗೂ ಗ್ರಹಗಳ ಗುಣಧರ್ಮವಾವುದು ಎಂಬುದನ್ನು ಅನೇಕ ವರುಷಗಳಿಂದ ಅವಲೋಕಿಸಿ ಅನುಭವದಿಂದ ಫಲಜ್ಯೋತಿಷ್ಯದ ರೂಪವನ್ನು ಕೊಟ್ಟಿದ್ದಾರೆ. ರಸಾಯನ ಇಲ್ಲವೆ ಪದಾರ್ಥವಿಜ್ಞಾನಶಾಸ್ತ್ರದ ಪ್ರಕಾರ ಯಾವುದೇ ಎರಡು ಪದಾರ್ಥಗಳನ್ನು ಕೂಡಿಸಿದರೆ ಅವುಗಳ ಸಂಯೋಗದಿಂದ ಹೊಸ ಪದಾರ್ಥವು ಹುಟ್ಟುತ್ತದೆ ಅಥವಾ ಆ ಪದಾರ್ಥಗಳು ತಮ್ಮ ತಮ್ಮ ಗುಣಧರ್ಮವನ್ನು ಕಳೆದುಕೊಳ್ಳುತ್ತವೆ. ಇದರಂತೆ ಯಾವುದೇ ಎರಡು ಗ್ರಹಗಳ ಅಥವಾ ಅನೇಕ ಗ್ರಹಗಳ ಯೋಗದಿಂದ ಭಿನ್ನ ಭಿನ್ನ ಪರಿಣಾಮವಾಗುತ್ತದೆ. ಉದಾ— ರವಿಯ ಸಂಗಡ ಯಾವುದೇ ಗ್ರಹಗಳ ಯುತಿ ಇದ್ದರೆ (ಅಂಶಾತ್ಮಕ) ಆ ಗ್ರಹವು ತನ್ನ ಸತ್ವವನ್ನು ಕಳೆದುಕೊಳ್ಳುತ್ತದೆ. ರವಿ ಚಂದ್ರರ ಯುತಿ ಇದ್ದರೆ ಅಮಾವಾಸ್ಯ ಆಗುತ್ತದೆ (ಅಸ್ತ). ಇದರಂತೆ ಯಾವುದೇ ನೀಚ ಗ್ರಹದ ಯೋಗವು ಉಚ್ಚ ಗ್ರಹದೊಂದಿಗಿದ್ದರೆ ಅದರ ನೀಚತ್ವವು ಭಂಗವಾಗುತ್ತದೆ. ಉದಾ— ಕರ್ಕದಲ್ಲಿ ಗುರುಮಂಗಳರ ಯೋಗವಿದ್ದರೆ ಕನ್ಯಾ ಮೀನದಲ್ಲಿ ಬುಧ ಶುಕ್ರರ ಯೋಗವಿದ್ದರೆ.

## ಪಂಚ ಭವತಿ ಪಂಚ ನ ಭವತಿ

ಈ ಶಾಸ್ತ್ರದಲ್ಲಿ 'ಪಂಚ ಭವತಿ ಪಂಚ ನ ಭವತಿ' ಎಂಬ ಆಕ್ಷೇಪವುಂಟು. ಹಾಗೆ ವಿಚಾರಿಸಿದರೆ ಯಾವ ಶಾಸ್ತ್ರಕ್ಕೆ ಇದು ಅನ್ವಯಿಸುವುದಿಲ್ಲ? ಹೊಲದಲ್ಲಿ ಕಾಳುಗಳನ್ನು ಬಿತ್ತುತ್ತೇವೆ— ಎಲ್ಲ ಕಾಳುಗಳು ಎಲ್ಲಿ ಮೊಳಕೆ ಒಡೆಯುತ್ತವೆ-ಮುಂದೆ ಹುಟ್ಟುತ್ತವೆ? ಡಾಕ್ಟರ ಹಾಗೂ ವೈದ್ಯರು ಎಲ್ಲ ರೋಗಿಗಳನ್ನೆಲ್ಲಿ ಗುಣಪಡಿಸುತ್ತಾರೆ? ವಕೀಲರು ಎಲ್ಲ ಕೇಸುಗಳನ್ನೆಲ್ಲಿ ಗೆದೆಯುತ್ತಾರೆ. ಇಂಜಿನಿಯರ ಹಾಗೂ ವಿಜ್ಞಾನಿಗಳ ತರ್ಕಗಳು ರಾಜಕಾರಣಿಗಳ ಪತ್ರಿಕಾಕರ್ತರ ಊಹೆಗಳು ಯಾವಾಗಲೂ ಸರಿಯಾಗಿರುವದಿಲ್ಲ. ಹೀಗೆಂದರೆ ಎಲ್ಲರೂ ಪಂಚ ಭವತಿ ಪಂಚ ನ ಭವತಿಯಲ್ಲಿ ಬರಲಿಲ್ಲವೇ? ಇದರಂತೆಯೇ ಜ್ಯೋತಿಷ್ಯದಲ್ಲಿ ಹನ್ನೊಂದನೆಯ ಶನಿ— ಇಲ್ಲವೆ ಹನ್ನೊಂದನೆಯ ಗುರು ಇವರು ಶುಭದಾಯಕರು. ಜ್ಯೋತಿಷಿಗಳ ಭವಿಷ್ಯವು ಮೃತ್ಯುವಿನ ವಿಷಯದಲ್ಲಿ ತಪ್ಪಿದೆ ಎಂದು ಆಕ್ಷೇಪವನ್ನು ಹೊರಿಸುವರು. ಆದರೆ ಇದು ಡಾಕ್ಟರರಿಗೆ ಏಕೆ ಅನ್ವಯಿಸುವದಿಲ್ಲ? ಆಲೋಪಥಿ, ಹೋಮಿಯೋಪಥಿ, ಹಾಗೂ ಆಯುರ್ವೇದಿಕ ಹೀಗೆ ಮೂರು ತರದ ನಿಷ್ಣಾತಂತ ಡಾಕ್ಟರರು ರೋಗಿಯನ್ನು ಪರೀಕ್ಷಿಸಿ ಇಂದು ಪ್ರಕೃತಿ ಚೆನ್ನಾಗಿದೆ ಎಂದು ಹೇಳಿದ ಕೆಲ ಗಂಟೆಗಳಲ್ಲಿಯೇ ರೋಗಿಯ ಪ್ರಾಣಪಕ್ಷಿ ಹಾರಿ ಹೋದ ಎಷ್ಟು ಉದಾಹರಣೆಗಳಿಲ್ಲ? ಈ ಎಲ್ಲ ಕಾರಣಗಳಿಂದ ಈ ಆಕ್ಷೇಪಣೆಯು ಜ್ಯೋತಿಷ್ಯಕ್ಕಷ್ಟೇ ಅನ್ವಯಿಸುವುದಿಲ್ಲ.

## ದೈವಜ್ಞರಲ್ಲಿ ಮತಭೇದ

ಜ್ಯೋತಿಷಿಗಳಲ್ಲಿ ಭಿನ್ನಾಭಿಪ್ರಾಯವಿರುವದೆಂದು ಒಂದು ಆಕ್ಷೇಪವಿದೆ. ಹಾಗೆ ವಿಚಾರಿಸಿದರೆ ನಮ್ಮ ನಿತ್ಯವ್ಯವಹಾರದ ಯಾವುದೇ ವಿಷಯದಲ್ಲಿ ಯಾವುದೇ ಉದ್ಯೋಗದಲ್ಲಿ ಭಿನ್ನಾಭಿಪ್ರಾಯವಿದ್ದೇ ಇರುತ್ತದೆ. ಎಲ್ಲ ಶಾಸ್ತ್ರಜ್ಞರಲ್ಲಿಯೂ ಪಂಡಿತರಲ್ಲಿಯೂ ಭಿನ್ನಾಭಿಪ್ರಾಯವು ಇದ್ದೇ ಇರುತ್ತದೆ. ಪರೀಕ್ಷಕರು ಒಬ್ಬ ವಿದ್ಯಾರ್ಥಿಗೇ ಬೇರೆ ಬೇರೆ ಗುಣಗಳನ್ನು ಹಾಕುತ್ತಾರೆ. ಇದರಂತೆ ಫಲಜ್ಯೋತಿಷ್ಯ ಶಾಸ್ತ್ರದಲ್ಲಿ ಅಲ್ಪಾಯುವನ್ನು ದೀರ್ಘಾಯುವನ್ನಾಗಲಿ ದೀರ್ಘ ಆಯುಷ್ಯ ಉಳ್ಳವನನ್ನು ಅಲ್ಪಾಯುವನ್ನಾಗಲಿ ಮಾಡಿ ಯಾವ ಜ್ಯೋತಿಷಿಯೂ ಹೇಳಲಾರ.

## ಗ್ರಹಗಳ ಪರಿಣಾಮ

ಗ್ರಹಗಳ ಪರಿಣಾಮವು ಮನುಷ್ಯನ ಮೇಲೆ ಆಗುವದಿಲ್ಲ ಎಂಬುದೂ ಒಂದು ಆಕ್ಷೇಪಣೆ ಆಗಿದೆ. ಈ ಪರಿಣಾಮವು ಮನುಷ್ಯನ ಮೇಲೆ ಏಕೆ ಆಗುತ್ತದೆ ಎಂದು ಹೇಳುವದು ಅಶಕ್ಯವು. ಇದು ಕೇವಲ ಫಲಜ್ಯೋತಿಷ್ಯ ಶಾಸ್ತ್ರಕ್ಕಷ್ಟೇ ಅನ್ವಯಿಸುವದಿಲ್ಲ. ಎಲ್ಲ ಭೌತಿಕ ಶಾಸ್ತ್ರಕ್ಕೂ ಅನ್ವಯಿಸುವದು. ಉದಾಹರಣೆ — ಲೋಹಚುಂಬಕವು ಕಬ್ಬಿಣವನ್ನು ಏಕೆ ಆಕರ್ಷಿಸುತ್ತದೆ? ಹೋಕಾಯಂತ್ರವು ಉತ್ತರದಿಕ್ಕನ್ನೇ ಏಕೆ ತೋರುತ್ತದೆ? ಆಕಳು ಎತ್ತುಗಳಂತೆ ಕುದುರೆ ಕತ್ತೆಗಳಿಗೆ ಕೋಡುಗಳೇಕೆ ಇರುವದಿಲ್ಲ? ಮೊದಲಾದ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡುವದು ಹೇಗೆ ಸಾಧ್ಯವಿಲ್ಲವೋ ಹಾಗೆ ಗ್ರಹಗಳ ಪರಿಣಾಮವು ಮನುಷ್ಯನ ಮೇಲೆ ಏಕೆ ಆಗುತ್ತದೆ ಎಂಬುದನ್ನೂ ಸುಲಭವಾಗಿ ಹೇಳಲು ಸಾಧ್ಯವಿಲ್ಲ. ಈ ಪರಿಣಾಮಗಳು ನಿಜವೆಂದು ಗ್ರಹಿಸಿ—ಮುಂದೆ ಸಾಗುವದೊಳಿತು. ಆದರೆ ಗ್ರಹಗಳ ಶಕ್ತಿಯು ಯಾವ ರೀತಿಯಿಂದ ಕಾರ್ಯ ಮಾಡುತ್ತದೆಂಬುದನ್ನು ಹೇಳಲು ಬರುತ್ತದೆ. ಪ್ರತಿಯೊಂದು ಗ್ರಹದಲ್ಲಿ ಒಂದೊಂದು ವಿಶಿಷ್ಟ ಗುಣಧರ್ಮವಿರುತ್ತದೆ. ಅದರಂತೆಯೇ ಆಯಾ ಗ್ರಹಗಳ ಗುಣಧರ್ಮಕ್ಕನುಸಾರವಾಗಿ ಮಾನವನ ಮೇಲೆ ಪರಿಣಾಮವಾಗುತ್ತದೆ. ಜನ್ಮಕಾಲದ ಲಗ್ನಕುಂಡಲಿಯ ಆಧಾರದ ಮೇಲಿಂದ ಗೋಚರೀಗ್ರಹಗಳ ಪರಿಭ್ರಮಣದ ಮೇಲಿಂದ ಮಾನವನಿಗೆ ಸುಖದುಃಖದ ಕಾಲವು ಯಾವುದೆಂಬುದನ್ನು ಹೇಳಲು ಬರುತ್ತದೆ. ವಸಂತ ಋತು ಬಂದಕೂಡಲೇ ಹೇಗೆ ಗಿಡಮರಗಳು ಚಿಗಿಯುತ್ತವೆಯೋ ಹಾಗೆ ಅನುಕೂಲಗ್ರಹಗಳು ಬಂದೊಡನೆಯೇ ಭಾಗ್ಯೋದಯವು ಉತ್ಪನ್ನವಾಗುತ್ತದೆ. ಬೇಸಿಗೆಯಲ್ಲಿ ಗಿಡಮರಗಳು ಒಣಗುವಂತೆ ಪ್ರತಿಕೂಲ ಗ್ರಹಗಳು ಬಂದಾಗ ಸಂಕಟಗಳು ಉದ್ಭವಿಸುತ್ತವೆ.

## ಸಿದ್ಧ ಮಾಡುವುದು—

ನಿಮ್ಮ ಶಾಸ್ತ್ರ ನಿಜವಿದ್ದರೆ ನಮ್ಮ ಸಂಶಯು ನಿವಾರಿಸಿರಿ- ಎಂಬ ಆಕ್ಷೇಪವೂ ಇದೆ. ನಿಮ್ಮ ಸಂಶಯು ನಿವಾರಿಸಲು ಮತ್ತೊಬ್ಬರ ಸಹಾಯವೇಕೆ? ಫಲಜೋತಿಷ್ಯದ ಗ್ರಂಥಗಳೇನೂ ಗುಪ್ತವಾಗಿಲ್ಲ. ಅನೇಕ ಬಗೆಯ ಗ್ರಂಥಗಳಿವೆ. ಅವನ್ನು ಅಭ್ಯಸಿಸಿರಿ. ನಿಮಗೆ ಕಾಣುವ ಅನೇಕ ಜಾತಕಗಳನ್ನು ಪರೀಕ್ಷಿಸಿರಿ. ಅನುಭವ ಪಡೆಯಿರಿ. ಯಾವದಾದ

ಕೊಂದು ಸಂಶಯುವಿದ್ದರೆ ಜಿಜ್ಞಾಸು ಬುದ್ಧಿಯಿಂದ ವಿಚಾರಿಸಿದರೆ ಅದಕ್ಕೆ ತಕ್ಕ ಪರಿಹಾರ ಸಿಗುತ್ತದೆ. ಕೇವಲ ನಿಮ್ಮ ಪರೀಕ್ಷೆಯುನ್ನು ತೆಗೆದುಕೊಳ್ಳುತ್ತೇನೆಂದು ಯಾರಾದರೂ ಕೇಳಿದರೆ- ಇದಕ್ಕೆ ಉತ್ತರ ವಿಷ್ಟೇ-ಹತ್ತು ರೋಗಿಗಳನ್ನು ಒಬ್ಬ ವೈದ್ಯನಿಗೆ ಕೊಟ್ಟರೆ ಬಹುಶಃ ಅವನಿಗೆ ಅವರೆಲ್ಲರ ರೋಗವನ್ನು ಗುಣಪಡಿಸಲು ಸಾಧ್ಯವಾಗುವದಿಲ್ಲ. ಅದರಂತೆ ಜ್ಯೋತಿಷಿಯು ಪ್ರತಿಯೊಬ್ಬರನ್ನು ತೃಪ್ತಿಪಡಿಸಲಾರ. ಜ್ಯೋತಿಷಿಗಳು ಫಲಜ್ಯೋತಿಷ್ಯವನ್ನು ಹೇಳುವಾಗ ಉತ್ತಮ ಮಧ್ಯಮ ಮತ್ತು ಕನಿಷ್ಠ ಹೀಗೆ ಸಂಕ್ಷೇಪವಾಗಿ ಹೇಳುವರೆಂದು ಆಕ್ಷೇಪಣೆ ಇದೆ. ಆದರೆ ಪ್ರತಿಯೊಬ್ಬರ ಜನನದ ಸರಿಯಾದ ವೇಳೆಯು ದೊರೆಯದಿರುವದೇ ಇದಕ್ಕೆ ಮುಖ್ಯ ಕಾರಣವಾಗಿದೆ. ೫ ನಿಮಿಷಗಳ ಅಂತರದಲ್ಲಿ ಲಗ್ನ, ರಾಶಿ, ಚರಣ, ದಶಾ, ಯೋಗ, ಸ್ಥಾನ, ಭಾವ ಮುಂತಾದವುಗಳೆಲ್ಲ ಬದಲಾಗುತ್ತವೆ. ಇದರಿಂದ ಭಿನ್ನವಾದ, ಸಂದಿಗ್ಧವಾದ ಪರಿಣಾಮಗಳು ಬರುತ್ತವೆ. ಆದುದರಿಂದ ಯಾವುದಾದರೂ ಒಂದು ಜಾತಕವನ್ನು ಪರಿಶೀಲಿಸುವಾಗ ಅದರಲ್ಲಿ ಆರೋಗ್ಯ, ಆಯುಷ್ಯ, ಸಂಪತ್ತು ಮುಂತಾದ ವಿಷಯುಗಳನ್ನು ಸಂಕ್ಷೇಪವಾಗಿ ಹೇಳಲಾಗುವದು.

### ಇದೂ ಒಂದು ಗಾರುಡಿವಿದ್ಯೆಯೇ?—

ಫಲಜೋತಿಷ್ಯವನ್ನೂ ಒಂದು ರೀತಿಯ ಗಾರುಡಿ ವಿದ್ಯೆಯೆಂಬುದು ಜನರ ಆಕ್ಷೇಪವಾಗಿದೆ.

ಕುಹಕಾವೇಶಪಿಹಿತ್ಯೆ: ಕರ್ಣೋಪಶ್ರುತಿ
ಹೇತುಭಿ:,
ಕುತಾದೇಶೋ ನ ಸರ್ವತ್ರ ಪೃಷ್ಟವ್ಯೋ ನ
ಸ ದೈವವಿತ್"
ಬೃಹತ್ ಸಂಹಿತಾ

ಜಾದೂ ಗಾರುಡಿವಿದ್ಯೆ, ಪಿಶಾಚ ಪ್ರವೇಶ, ಅಥವಾ ಕರ್ಣಶ್ರುತಿ ಮುಂತಾದ ಸಾಧನಗಳಿಂದ ಭವಿತವ್ಯವನ್ನು ಹೇಳುವದು ಫಲಜ್ಯೋತಿಷ್ಯವೂ ಅಲ್ಲ. ಹಾಗೂ ಅವರು ದೈವಜ್ಞರೂ ಅಲ್ಲವೆಂದು ಹೇಳಲಾಗಿದೆ. ಈ ಕಾರಣದಿಂದ ಜ್ಯೋತಿಷಿಯು ಗ್ರಹಗಳ ಗತಿಯಿಂದ ದೈವವನ್ನು ಅಳೆಯುವ ಶಾಸ್ತ್ರಜ್ಞನಾಗಿದ್ದಾನೆ. ಅದರಲ್ಲಿ ಸೋಜಿಗದ ಸಂಗತಿಯೇನೂ ಇಲ್ಲ.

ಆಗುವದನ್ನೆಲ್ಲ ತಪ್ಪಿಸಲು ಬಾರದು ಎಂಬುದಾಗಿ ಹೇಳಿ ಮೊದಲು ನಮ್ಮ ದೈವವನ್ನು ತಿಳಿದು ಮಾಡುವದೇನೆಂದು ಕೆಲವರು ಕೇಳುತ್ತಾರೆ. ಈಗ ಮಳೆ ಬರುವದಿದೆ ಎಂದು ತಿಳಿಯಿರಿ. ನಾವು ಅದನ್ನು ತಿಳಿದು ಛತ್ತರಿಗೆ, ರೇನ್ ಕೋಟ್, ಕಂಬಳಿ ಮುಂತಾದವುಗಳನ್ನು ನಮ್ಮ ಸಂಗಡ ಒಯ್ದು ಕಾಪಾಡಿಕೊಳ್ಳಬಹುದು. ಇದರಿಂದ ಮಳೆಯನ್ನೇನು ನಿಲ್ಲಿಸಲಾರೆವು. ಇದರಂತೆ ನಮ್ಮ ದೈವವನ್ನು ತಪ್ಪಿಸಲು ಸಾಧ್ಯವಿಲ್ಲದಿದ್ದರೂ ಅದನ್ನು ಜಪ, ತಪ, ದಾನ, ಮುಂತಾದ ಧಾರ್ಮಿಕ ವಿಧಿಗಳಿಂದ ಅಶುಭ ಗ್ರಹಗಳ ಪರಿಣಾಮವನ್ನು ಕಡಿಮೆ ಮಾಡಬಹುದು. ಇದೂ ಒಂದು ಪ್ರಾರಬ್ಧವಾದವಲ್ಲ. ನಾವು ಮುಂದಿನದನ್ನು ತಿಳಿದುಕೊಂಡು ಮುಂಜಾಗ್ರತೆಯುನ್ನು ತೆಗೆದುಕೊಳ್ಳುವ ಸಹಾಯಕಶಾಸ್ತ್ರ. ಯೋಗ್ಯ ಜನ್ಮಪತ್ರಿಕೆ ಇಲ್ಲದವನ ಭವಿಷ್ಯ ಹೇಳುವದೆಂದರೆ ದೀಪವಿಲ್ಲದ ಮನೆಯುಲ್ಲಿ ಕೋಣೆಗಳನ್ನು ಹುಡುಕಿದಂತೆ. ಯೋಗಿಗಳು ತಮ್ಮ ಆಧ್ಯಾತ್ಮಿಕ ಸಾಮರ್ಥ್ಯದಿಂದ ತಮ್ಮ ಜಾತಕವನ್ನೇ ಬದಲು ಮಾಡಿಕೊಂಡಿದ್ದಾರೆ. ಆದ್ದರಿಂದ ಇದು ಪ್ರಾರಬ್ಧವಾದವಲ್ಲ.

### ಶಾಸ್ತ್ರದ ಉತ್ಪತ್ತಿ—

ಈ ಶಾಸ್ತ್ರದಲ್ಲಿ ಸಿದ್ಧಾಂತ, ಸಂಹಿತಾ, ಹೋರಾ ಎಂಬ ಮೂರು ಪ್ರಕಾರಗಳನ್ನು ಮಾಡಿದ್ದಾರೆ. ಗ್ರಹಗಳ ಸ್ಥಿತಿಗತಿ, ಅಯನ, ಯೋಗ, ಗ್ರಹಣ ಮುಂತಾದ ಗಣಿತದಿಂದ ಸಮಾವೇಶಹೊಂದಿದ ಭಾಗಕ್ಕೆ ಸಿದ್ಧಾಂತವೆಂದೆನ್ನುತ್ತಾರೆ. ಗ್ರಹಲಾಘವ,ಕೇಸವಿ,ಕೇತಕಿ,ಮುಂತಾದವುಗಳು ಗಣಿತದ ಪ್ರಕಾರಗಳು. ಪರ್ಜನ್ಯ, ಅತಿವೃಷ್ಟಿ ಅನಾವೃಷ್ಟಿ, ಭೂಕಂಪ, ಬರಗಾಲ, ರಾಜ್ಯಕ್ರಾಂತಿ, ಮಹಾಯುದ್ಧ ಮುಂತಾದ ವಿಷಯುವನ್ನು ಕಾಲಕ್ಕನುಸಾರವಾಗಿ ಆಯಾ ದೇಶಗಳಲ್ಲಿ ಯಾವ ಪರಿಣಾಮವನ್ನು ಮಾಡುತ್ತದೆಂಬುದನ್ನು ಸಂಹಿತಾದಲ್ಲಿ ಹೇಳಿದೆ. ಇದಲ್ಲದೆ ಆಯಾ ಪಟ್ಟಣಗಳ ರಾಶಿಯುನ್ನು ನಿಶ್ಚಯಿಸಿ ಅಥವಾ ಯಾವುದೇ ದೇಶದ ರಾಜ, ರಾಜ್ಯಪ್ರಮುಖ, ರಾಷ್ಟ್ರಪತಿಯ ಜಾತಕದಿಂದ ದೇಶದ ಮೇಲಾಗುವ ಪರಿಣಾಮವನ್ನು ಸಹಿತ ಸಂಹಿತಾದಲ್ಲಿ ಹೇಳಿದೆ. ಹೋರಾ ಅಥವಾ ಜಾತಕದ ಮೇಲಿಂದ ಮನುಷ್ಯನ ಜನ್ಮಕಾಲದ ಗ್ರಹಗಳ ಸ್ಥಿತಿಗತಿಗಳಿಂದ ಅವನ ಆಯುಷ್ಯದಲ್ಲಿ ಸುಖದುಃಖದ ಕಾಲವಾವುದು? ಎಂಬುದನ್ನು ಈ ಹೋರಾದಲ್ಲಿ ಹೇಳಿದೆ. ದ್ವಾದಶ ಭಾವ ವರ್ಣನೆ ಹಾಗೂ ಕಾಲ ನಿರ್ಣಯು ಎಂಬ ಮತ್ತೆರಡು ಉಪಭೇದಗಳಿವೆ. ಕಾಲನಿರ್ಣಯುದಲ್ಲಿ ಅನೇಕ ಪ್ರಕಾರಗಳಿವೆ. ದಶಾಪದ್ಧತಿ, ತಾಜಿಕ ಪದ್ಧತಿ, ಗೋಚರೀಗ್ರಹಗಳ ಪರಿಭ್ರಮಣ, ದಿನವರ್ಷ ಪದ್ಧತಿ, ಪ್ರಾಥಮಿಕ ಯೋಗಪದ್ಧತಿ ಮುಂತಾದ ಭಾಗಗಳಿಂದ ಮನುಷ್ಯನ ಆಯುಷ್ಯದಲ್ಲಿರುವ ಸುಖದುಃಖದ ಕಾಲವನ್ನು ಹೇಳಲಾಗುವದು. ಮೊದಲು ಚಂದ್ರನಂಥ ಶೀಘ್ರಗ್ರಹಗಳಿಂದ ಭಿನ್ನ ಭಿನ್ನ ನಕ್ಷತ್ರ ಹಾಗೂ ರಾಶಿಗಳ ಮೇಲಾಗುವ ಪರಿಭ್ರಮಣದ ಪರಿಣಾಮವನ್ನು ಅನೇಕ ವರುಷಗಳಿಂದ ಅವಲೋಕಿಸಿ ಕ್ರಮಶಃ ರವಿ, ಶುಕ್ರ, ಬುಧ, ಮಂಗಳ, ಗುರು, ಶನಿ, ರಾಹು, ಮುಂತಾದ ಗ್ರಹಗಳ ಪರಿಣಾಮವನ್ನು ಕಂಡುಹಿಡಿದಿದ್ದಾರೆ.

### ಉಪಸಂಹಾರ :

ಜ್ಯೋತಿಷಿ, ವೈದ್ಯ ಹಾಗೂ ಧರ್ಮಾಧಿಕಾರಿಗಳು ಎಷ್ಟು ನಿಃಸ್ಪೃಹರಾಗಿರುತ್ತಾರೋ ಅಷ್ಟೇ ದೇಶದ ಕಲ್ಯಾಣವಾಗುತ್ತದೆ. ವೈದ್ಯನು ದೈಹಿಕ ರೋಗವನ್ನು ಹೋಗಲಾಡಿಸಿದರೆ ಜ್ಯೋತಿಷಿಯು ಮಾನಸಿಕ ರೋಗವನ್ನು ಹೊಡೆದೋಡಿಸುತ್ತಾನೆ. ಜೀವನದಲ್ಲಿ ಸುಖದುಃಖಗಳ ಸರಿಬೆರಕೆ ಇರುತ್ತದೆ. ದುಃಖದ ದಿನಗಳು ದೊಡ್ಡವೆಂದೂ ಸುಖದ ದಿನಗಳು ಚಿಕ್ಕವೆಂದೂ ನಮ್ಮ ಭಾವನೆ ಇರುತ್ತದೆ. ತಾಳ್ಮೆ ಹಾಗೂ ಶ್ರದ್ಧೆ ಇರುವವನಿಗೆ ಎಂಥ ಕಷ್ಟಗಳು ಬಂದರೂ ಪರಿಣಾಮವನ್ನುಂಟು ಮಾಡುವದಿಲ್ಲ. ಜ್ಯೋತಿಷಿಯು ಮುಖ್ಯವಾಗಿ ಹಣವನ್ನು ಅಪೇಕ್ಷಿಸಬಾರದು. ತಾನಾಗಿಯೇ ಬಂದ ಹಣ ಇವನು ಹೀರಿ ತೆಗೆಯುವ ಹಣಕ್ಕಿಂತ ಹೆಚ್ಚಾಗಿರುವದಲ್ಲದೆ ಜೊತೆಗೆ ಗೌರವ ಭಕ್ತಿಗಳನ್ನೂ ತರುವದು. ದುಡ್ಡಿಗೆ ಎರಡು ಪ್ರಶ್ನೆಗಳನ್ನು ಹೇಳುವ ಜ್ಯೋತಿಷಿಗಳ ಸಂಖ್ಯೆ ಬೆಳೆದು

ಕೆಲಮಟ್ಟಿಗೆ ಫಲಜ್ಯೋತಿಷ್ಯದ ಬಗ್ಗೆ ಆಕ್ಷೇಪಗಳನ್ನೂ ತಿರಸ್ಕಾರವನ್ನು ವ್ಯಕ್ತಪಡಿಸುವಂತಾಗಿದೆ. ಹಣಕ್ಕೆ ಅನುಗುಣವಾಗಿ ಜ್ಯೋತಿಷಿ ತನ್ನ ಅಭಿಪ್ರಾಯ ಬದಲು ಮಾಡುವದು ಒಂದು ರೀತಿಯಲ್ಲಿ ಆಯೋಗ್ಯವಲ್ಲದೆ ಸಮಾಜಕ್ಕೆ ಮಾರಕವಾಗುತ್ತದೆ. ಬಡವ, ಸಿರಿವಂತ, ಪಂಡಿತ, ಪಾಮರ ಎಲ್ಲರನ್ನೂ ಸರಿಯಾಗಿಯೇ ತಿಳಿದು ಅವರವರ ಪ್ರಶ್ನೆಗಳನ್ನು ತನ್ನ ಶಾಸ್ತ್ರದ ಆಧಾರದಿಂದ ಬಿಡಿಸಿ ಹೇಳುವದು ಅವನ ಕರ್ತವ್ಯ. ಅಪ್ರಿಯವಾದ ಸತ್ಯವನ್ನು ಅವನು ಆಡಬಾರದು. ಅದನ್ನು ಸೂಚಿಸಲು ಅಡ್ಡಿ ಇಲ್ಲ. ಈಗ ಉದಾಹರಣೆಗೆ ಹೆಂಡತಿಯ ಶೀಲದ ಬಗ್ಗೆ ಗಂಡನಿಗೆ ಸಂಶಯ ಬಂದಿದೆಯೆಂದು ತಿಳಿಯೋಣ. ಅವನು ಜ್ಯೋತಿಷಿಯನ್ನು ಕೇಳಿದರೆ ಅವನು ಏನೆಂದು ಉತ್ತರಿಸಬೇಕು. ಅವಳ ಶೀಲ ನಿಜವಾಗಿಯೂ ನಷ್ಟವಾಗಿದ್ದರೆ— ಅದನ್ನೇ ಸತ್ಯವೆಂದು ನುಡಿದ ಪಕ್ಷದಲ್ಲಿ ಕೆಲಸಲ ಪತಿಯು,ಭಾವನೆಯ ಉದ್ರೇಕದಲ್ಲಿ ಎಂಥ ಹೀನ ಕೃತ್ಯವನ್ನು ಕೂಡ ಮಾಡಿಬಿಡಬಹುದು. ಇಂಥ ಸಂದರ್ಭದಲ್ಲಿ ಜ್ಯೋತಿಷಿ ಇಬ್ಬರಿಗೂ ಕೆಡಕಾಗದಂತೆ ಸತ್ಯಕ್ಕೆ ಭಂಗಬರದಂತೆ ಕಲ್ಯಾಣದೃಷ್ಟಿಯನ್ನಿಟ್ಟೇ ತನ್ನ ಅಭಿಪ್ರಾಯವನ್ನು ಹೇಳಬೇಕಾಗುವದು. ಈ ಮೊದಲಾದ ಕಾರಣದಿಂದ ಜ್ಯೋತಿಷಿಯಲ್ಲಿ ನೈತಿಕ ಹಾಗೂ ಧಾರ್ಮಿಕ ಬಲವಿರುವದು ಅವಶ್ಯಕವಾಗಿದೆ. ಅವನೊಬ್ಬ ನಿರ್ಲಿಪ್ತ ಯೋಗಿಯಂತೆ ಜೀವನವನ್ನು ಸಾಗಿಸಿದ್ದಾದರೆ ಅವನಿಂದ ಲೋಕದ ಕಲ್ಯಾಣವಾಗುತ್ತದೆ. ಹೀಗಾಗದೆ ಇನ್ನೊಂದು ಉದ್ಯೋಗ, ವ್ಯವಹಾರದಂತೆ ಉಪಯೋಗ ಮಾಡತೊಡಗಿದರೆ ಒಳಿತಾಗಲಾರದು.

ಪ್ರಾಚೀನಕಾಲದಿಂದ ಈ ಶಾಸ್ತ್ರವನ್ನು ನಮ್ಮಲ್ಲಿ ಋಷಿ ಮುನಿಗಳು ಅಭ್ಯಸಿಸಿದ್ದಾರೆ. ಹಿಂದಿನ ಕವಿಗಳೆಲ್ಲ ಜೋತಿಷ್ಯದಲ್ಲಿ ಪಾರಂಗತರಾಗಿರುತ್ತಿದ್ದರು ಇದಕ್ಕೆ ದೊಡ್ಡ ಸ್ಥಾನವನ್ನು ಅವರು ಕಲ್ಪಿಸಿಕೊಟ್ಟಿದ್ದಾರೆ. ಇದಕ್ಕೆ 'It is the mother of all sciences' ಎಂದೂ ಕೆಲವರೆಂದಿದ್ದಾರೆ.

"ಅಪ್ರತ್ಯಕ್ಷಂತು ಶಾಸ್ತ್ರಾಣಿ ವಿವಾದಸ್ತೇಷು ಕೇವಲಂ
ಪ್ರತ್ಯಕ್ಷಂ ಜ್ಯೋತಿಷಂ ಶಾಸ್ತ್ರಂ ಚಂದ್ರಾರ್ಕೌ
ಯತ್ರ ಸಾಕ್ಷಿಣೌ—"

ಎಂಬ ಮಾತಿನಲ್ಲಿ ಈ ಶಾಸ್ತ್ರದ ಮಹತ್ವವನ್ನು ಕಾಣಬಹುದಾಗಿದೆ. ನಾರದಮುನಿಗಳು—

"ವೇದಸ್ಯ ನಿರ್ಮಲಂ ಚಕ್ಷುರ್ಜ್ಯೋತಿಃ ಶಾಸ್ತ್ರಮ-
ಕಲ್ಮಷಂ
ತಸ್ಮಾಜ್ಜದ್ವಿತಾಯೇದಂ ಬ್ರಹ್ಮಣಾ ನಿರ್ಮಿತಂ
ಪುರಾ।
ಅತ ಏವ ದ್ವಿಜೈರೇತದಧ್ಯೇತವ್ಯಂ ಪ್ರಯತ್ನತಃ ॥"

ಎಂದು ಹೇಳಿದ್ದಾರೆ. ಗರ್ಗ ಎಂಬ ಮುನಿಗಳು ಜ್ಯೋತಿಷ್ಯಜ್ಞಾನದಿಂದ ಪರಮಗತಿಯು ಪ್ರಾಪ್ತವಾಗುತ್ತದೆಂದೂ ಹೇಳಿದ್ದಾರೆ.

"ಜ್ಯೋತಿಶ್ಚಕ್ರೇತು ಲೋಕಸ್ಯ ಸರ್ವಸ್ಯೋಕ್ತಂ
ಶುಭಾಶುಭಂ
ಜ್ಯೋತಿರ್ಜ್ಞಾನಂ ಚ ಯೋ ವೇದ ಸ ಯಾತಿ
ಪರಮಾಂ ಗತಿಂ"

ಇನ್ನೊಂದು ಮಾತನ್ನು ಇಲ್ಲಿ ಬರೆಯದೆಯೇ ಗತ್ಯಂತರವಿಲ್ಲ. ಈ ಪುರಾತನವಾದ ಶಾಸ್ತ್ರದ ಬಗ್ಗೆ ಹಿಂದಿನ ಕಾಲದಲ್ಲಿ ಗ್ರಂಥಗಳು ಎಷ್ಟು ಇದ್ದವೋ ಅದರ ಅಂಗುಲದಷ್ಟು ಭಾಗವೂ ಇಂದು ಹೊಸತಾಗಿ ಬರೆಯಲ್ಪಟ್ಟಿಲ್ಲ. ಹಿಂದಿನ ಶುಭ ಹಾಗೂ ಅಶುಭ ಯೋಗಗಳಿಗೆ ಇಂದಿನ ಹೊಸ ಅರ್ಥಗಳನ್ನು ಕಲ್ಪಿಸಿ ಗ್ರಂಥಗಳನ್ನು ಬರೆಯಬೇಕಾಗಿದೆ. ಹಿಂದಿನ ಕಾಲದಲ್ಲಿ ಸಾಹಿತಿಗಳ ಕುಂಡಲಿಯಲ್ಲಿ ರಾಜ ಮರ್ಯಾದೆಯ ಯೋಗಗಳಿರುತ್ತಿದ್ದವು. ಇಂದು ರಾಜರೂ ಇಲ್ಲ; ಮರ್ಯಾದೆಯೂ ಇಲ್ಲ. ಆದರೆ ಅವರ ಕೃತಿಗಳಿಗೆ ಸರಕಾರದಿಂದ ಪಾರಿತೋಷಕ ದೊರೆಯುತ್ತಿರುವುದನ್ನೂ ಆರ್ಥಿಕ ಸಹಾಯದೊರೆಯುತ್ತಿರುವದನ್ನೂ ನೋಡುತ್ತೇವೆ. ಇದೂ ಒಂದು ಬಗೆಯ ರಾಜಮರ್ಯಾದೆಯೇ ಆಗಿರುತ್ತದೆ. ಈ ಕಾರಣದಿಂದ ಇಂದಿನ ನವ ನಾಗರಿಕತೆಗೆ ಅನುಗುಣವಾಗಿ ಹಳೆಯ ಶಾಸ್ತ್ರವನ್ನು ಮತ್ತೆ ಬರೆಯಬೇಕಾಗಿದೆ. ಶಾಸ್ತ್ರದ ಮೈ ಮೊದಲಿನದಾದರೂ ಅದಕ್ಕೆ ಇಂದಿನ ವೇಷವನ್ನು ಹಾಕಬೇಕಾಗಿದೆ. ಈ ರೀತಿ ನಮ್ಮ ಭಾಷೆಯಲ್ಲೂ ಸಾಗಬೇಕು. ಬುದ್ಧಿವಂತರಾದ ವಿದ್ಯಾರ್ಥಿಗಳು ಈ ಶಾಸ್ತ್ರದ ಅಧ್ಯಯನವನ್ನು ಮಾಡಿ ಹೊಸ ಹೊಸ ಪ್ರಯೋಗಗಳನ್ನೂ ಪದ್ಧತಿಗಳನ್ನೂ ಕಂಡುಹಿಡಿಯಬೇಕು. ಇದರಿಂದ ಶಾಸ್ತ್ರಕ್ಕೂ ದೇಶಕ್ಕೂ ಕಲ್ಯಾಣಮಾಡಿದಂತಾದೀತು.

ದೀಪಾವಳಿಯ ಹೃತ್ಪೂರ್ವಕ ಅಭಿವಂದನೆಗಳು

ಗ್ಯಾಸದಿಂದ ಹೊಟ್ಟೆ ಕೆಟ್ಟರೆ ?

# ಅಮೃತವಲ್ಲಿ

ಉಪಯೋಗಿಸಿರಿ. ಅಪಚನ, ಆಮ್ಲಪಿತ್ತ, ಹೊಟ್ಟೆನೋವು, ತಲೆನೋವು, ಹೊಟ್ಟೆಯಲ್ಲಿ ಗ್ಯಾಸ ಕೂಡುವಿಕೆ, ಢೇಕರಿಕೆ, ಎದೆಗೆ ಉಬ್ಬುಸ ಬರುವಿಕೆ, ಎದೆಯಲ್ಲಿ ಉರಿಯುವದು, ಇವುಗಳ ಮೇಲೆ ಪ್ರಸಿದ್ಧ.

## ಅಮೃತವಲ್ಲಿಯ ವೈಶಿಷ್ಟ್ಯ

ಅಮೃತವಲ್ಲಿಯಿಂದ ಕೂಡಲೇ ಪಚನಕ್ರಿಯೆ ಪ್ರಾರಂಭವಾಗುವದು. ಹಸಿವೆ ಹೆಚ್ಚುತ್ತದೆ. ಕರುಳಿನ ಶೂಲಿ ಹಾಗೂ ಪಿತ್ತ ಕಡಿಮೆಯಾಗಿ ಮಲಾವರೋಧವು ಸಮೂಲ ಹೋಗುತ್ತದೆ.

೧೫ ದಿವಸ ಸಾಲುವ ಬಾಟಲಿ ಕಿ. ರೂ. ೪ ( ಟ. ಖ. ಬೇರೆ)

ನಿಮ್ಮ ಕೆಮಿಸ್ಟರಲ್ಲಿ ಅಮೃತವಲ್ಲಿಯನ್ನೇ ಬೇಡಿರಿ.

ಕಾರಖಾನದಾರ:

ವಾಗ್ಭಟ ಔಷಧಾಲಯ, ಸಾಂಗಲಿ

ಸ್ಟಾಕಿಸ್ಟರು :

ಹುಬ್ಬಳ್ಳಿ : ಅಲಾಯ್ಡ ಏಜನ್ಸೀಜ, ಕೊಪ್ಪಿಕರ ರೋಡ,

ಬೆಳಗಾವಿ : ಸ್ಟಾರ ಕಂಪನಿ, ಗಣಪತಗಲ್ಲಿ,



ಈ ದೀಪಾವಳಿಯ ಶುಭದಿನದಲ್ಲಿ ಮೈಸೂರು ಟೀ ಗ್ರಾಹಕರೆಲ್ಲರಿಗೂ ನಮ್ಮ ಹೃತ್ಪೂರ್ವಕ ಶುಭಾಶಯಗಳು

●

ಸೊಬಗಿನ ಬೀಡಾದ

ಮೈಸೂರಿನ ಉನ್ನತವಾದ ಬೆಟ್ಟಗಳಲ್ಲಿ ಬೆಳೆದ ಮತ್ತು ಫ್ಯಾಕ್ಟರಿಯಲ್ಲಿಯೇ ಪ್ಯಾಕ್ ಮಾಡಲ್ಪಟ್ಟ

# ಮೈಸೂರು ಟೀ **M. T. S.**

ಗುರುತಿನಿಂದ

ಉತ್ತಮ ಪಾನೀಯಗಳಲ್ಲಿ ಪ್ರಖ್ಯಾತ ಹೊಂದಿರುತ್ತೆ!

Tele: "MYSORETEAS" Phone: 33

THY MYSORE TEA SUPPLIES CO., (Regd.)

*Agents and Exporters*

CHIKMAGALUR .. (Mysore State)



ಹೊಸ ದೀಪಾವಳಿಯು ಸಕಲರಿಗೂ ಆಯುರಾರೋಗ್ಯ ಭಾಗ್ಯಗಳನ್ನೀಯಲೆಂದು ಹಾರೈಸುತ್ತೇವೆ.



೧೯೫೪ ರಲ್ಲಿ ಸ್ವಲ್ಪೇ ಕದರುಗಳಿಂದ ಸ್ಥಾಪಿಸಿದ, ಉತ್ತರ ಕರ್ನಾಟಕದಲ್ಲಿ ಕನ್ನಡಿಗರದೇ ಆದ, ಏಕಮೇವ ಈ ಗಿರಣಿಯು, ಈ ಮೂರು ವರುಷಗಳಲ್ಲಿ ಪೂರ್ತಿ ೧೨೦೦೦ ಕದರುಗಳುಳ್ಳದ್ದಾಗಿ ಕನ್ನಡ ನಾಡಿಗೆ, ಸೇವೆಸಲ್ಲಿಸುತ್ತಿದೆ. ಇದಕ್ಕೆಲ್ಲ, ನಿಮ್ಮೆಲ್ಲರ ಸಹಕಾರ, ಸೌಹಾರ್ದಭಾವನೆ ಮುಖ್ಯವಾದುದು. ಇದೇ ತರದ ಸಹಕಾರ ಹೆಚ್ಚಿಸಿ, ಈ ಗಿರಣಿಯನ್ನು ಇಮ್ಮಡಿಯಾಗಿ ಬೆಳಸುವಿರೆಂದು ಆಸಿಸದೇ ಇರಲಾರೆವು.

## ಪ್ರಗತಿ

೧೯೫೫–೨೫೦೦ ಕದರುಗಳು

೧೯೫೬–೬೦೦೦ ಕದರುಗಳು

೧೯೫೭–೧೦೦೦೦ ಕದರುಗಳು

೧೯೫೮–೧೨೦೦೦ ಕದರುಗಳು

ಎಲ್ಲರಿಗೂ ಮೆಚ್ಚಿಕೆಯಾಗಿರುವ

*20's 26's 32's 40's*

'ನಂದಿ' ಮಾರ್ಕಿನ ನೂಲನ್ನು ತಯಾರಿಸುತ್ತೇವೆ

# ನಂದಿ, ಹಸಬಿ ಮತ್ತು ಕಂಪನಿ

## ಕಾಟನ್ ಸ್ಪಿನಿಂಗ ಮಿಲ್, ನರಗುಂದ (ಜಿ. ಧಾರವಾಡ)

# ಸಂಸ್ಕೃತದಲ್ಲಿ ನಾಟ್ಯಶಾಸ್ತ್ರ

ಲೇಖಕರು : **ಪಂಡಿತ ಕೇಶವಶರ್ಮಾ ಗಲಗಲಿ**

ಭರತಮುನಿಯು ಸಂಸ್ಕೃತದಲ್ಲಿ ನಾಟ್ಯಶಾಸ್ತ್ರದ ಮೂಲಪುರುಷನಾದರೂ ಅವನಿಗಿಂತ ಮೊದಲೇ ಸಂಸ್ಕೃತದಲ್ಲಿ ನಾಟಕಗಳುಂಟಾಗಿದ್ದುವು. ಅನಂತರ ಅವನ ಆಸರೆಯಿಂದ ಅನೇಕರು ನಾಟಕಲಕ್ಷಣಗಳನ್ನು ಬರೆದರು. ಕ್ರಿಸ್ತಶಕಾದಿಯಿಂದ ೧೪ನೆಯ ಶತಮಾನದ ವರೆಗೆ ನಾಟಕಶಾಸ್ತ್ರ ಸಂಸ್ಕೃತದಲ್ಲಿ ಹೇಗೆ ಬೆಳೆ-ಯುತ್ತಬಂದಿದೆಯೆಂಬುದನ್ನು ಈ ಲೇಖನದಲ್ಲಿ ನಿರೂಪಿಸಲಾಗಿದೆ.



ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ" ಎಂದು ಕಾಲಿದಾಸನು ಹೇಳಿರುವನು. "ಕಾವ್ಯಾನಿ ನಾಟಕಾನಿ ಸ್ಮಶಾನಕುಸುಮಾನೀವ ವರ್ಜನೀಯಾನಿ" ಎಂದು ಹೀಯಾಳಿಸುವ ಒಂದು ಪಂಗಡವೂ ಇತ್ತು. ಜನರ ನೀತಿಯನ್ನು ಕೆಡಿಸುವ ನಾಟಕಗಳೇ ಹೆಚ್ಚಾದಾಗ ಈ ಪಂಗಡ ತಲೆಯೆತ್ತಿರಬಹುದು. ಆದರೆ ಮನೋರಂಜನೆಯನ್ನುಂಟು ಮಾಡಿ ಜನರನ್ನು ಉದ್ಧರಿಸುವ ನಾಟಕದ ಶಾಸ್ತ್ರವು ನಾಟ್ಯವೇದವೆಂದು ಭಾರತೀಯರಿಂದ ಪೂಜ್ಯತೆಯನ್ನು ಪಡೆದಿದೆ. ನಾಟಕಗಳನ್ನು ಹೇಗೆ ಬರೆಯಬೇಕು ? ಹೇಗೆ ಪ್ರದರ್ಶಿಸಬೇಕು ? ಎಂದು ಹೇಳುವುದೇ ಈ ಶಾಸ್ತ್ರದ ಉದ್ದೇಶ. ಭರತಮುನಿಯ ನಾಟ್ಯಶಾಸ್ತ್ರ ಸಂಸ್ಕೃತ ನಾಟ್ಯಶಾಸ್ತ್ರಗ್ರಂಥಗಳಿಗೆಲ್ಲ ಮೂಲ.

ಭರತಮುನಿ ಕ್ರಿಸ್ತಶಕ ಆರಂಭದಲ್ಲಿದ್ದನೆನ್ನುವರು. ಭರತನಿಗೂ ಮೊದಲು ನಾಟಕವಿತ್ತು. ವೇದಕಾಲವೇ ನಾಟಕದ ಸೃಷ್ಟಿಯ ಕಾಲ. ಸಂವಾದ, ಅಭಿನಯಗಳೆಂಬ ಎರಡು ಮುಖ್ಯ ತತ್ತ್ವಗಳ ಮೇಲೆ ನಾಟಕದ ಉಗಮವಿದ್ದು ಈ ತತ್ತ್ವಗಳು ವೇದದಲ್ಲಿ ಸಿಕ್ಕುವವು. ಋಗ್ವೇದದಲ್ಲಿ ಇಂದ್ರ-ಮರುತ ಸಂವಾದ, ವಿಶ್ವಾಮಿತ್ರ-ನದೀ ಸಂವಾದ, ಪುರೂರವಸ್-ಊರ್ವಶೀ ಸಂವಾದ, ಇರುವುದರಿಂದ ಯಜ್ಞಾದಿ ಸಮಯದಲ್ಲಿ ನಾಟ್ಯಾಭಿನಯವಿದ್ದಿರಬೇಕೆಂದು ಊಹಿಸುವರು.

ರಾಮಾಯಣದಲ್ಲಿ "ವಧೂ ನಾಟಕಸಂಘೈಶ್ಚ ಸಂಯುಕ್ತಾಂ" ಎಂದು ವಾಲ್ಮೀಕಿ ಮಹರ್ಷಿ ವರ್ಣಿಸಿರುವುದರಿಂದ ನಟೀ ನಾಟಕಗಳ ಅಸ್ತಿತ್ವವೂ "ನಟನರ್ತಕಸಂಘಾನಾಂ ಗಾಯಕಾನಾಂ ಚ ಗಾಯತಾಂ। ಯತಃ ಕರ್ಣಸುಖಾ ವಾಚಃ ಶುಶ್ರಾವ ಜನತಾ ತತಃ॥" ಎಂದಿರುವುದರಿಂದ ನಟ, ನರ್ತಕಸಂಘವೂ ಅಂದಿನ ಸಮಾಜದಲ್ಲಿ ಸ್ಥಾನಗಳಿಸಿತ್ತೆಂದು ವ್ಯಕ್ತವಾಗುವುದು.

ಮಹಾಭಾರತದಲ್ಲಿ ಶೈಲೂಷಾದಿ ಉಲ್ಲೇಖವಿದ್ದರೆ ಹರಿವಂಶ ಪರ್ವದಲ್ಲಿ ನಾಟಕ ಅಭಿನಯವಾದ ಬಗ್ಗೆ ದಾಖಲೆಗಳು ದೊರೆಯುವುವು. 'ರಾಮಾಯಣ' 'ಕೌಬೇರ ರಂಭಾಭಿಸಾರ' ಇವು ಹರಿವಂಶದಲ್ಲಿ ಹೇಳಲಾದ ಎರಡು ನಾಟಕಗಳು. ಹರಿವಂಶವು ಕ್ರಿ. ಶ. ಮೂರನೆಯ ಶತಮಾನದ್ದೆಂದು ಹೇಳುವದುಂಟು. ಬೌದ್ಧ ಜೈನ ಗ್ರಂಥಗಳು, ಕಾಮಸೂತ್ರ, ಪಾಣಿನೀಯ ಸೂತ್ರಗಳಲ್ಲಿಯೂ ನಟ-ನಾಟಕೋಲ್ಲೇಖವುಂಟು. ಸುಂಗವಂಶದ ಅಗ್ನಿಮಿತ್ರ ರಾಜನ ಪುರೋಹಿತನಾಗಿದ್ದ ಪತಂಜಲಿ ತನ್ನ ಮಹಾಭಾಷ್ಯದಲ್ಲಿ ಕಂಸವಧ, ಬಲಿಬಂಧ ನಾಟಕಗಳನ್ನು ಹೆಸರಿಸಿರುವನು.

ಸಂಸ್ಕೃತ ನಾಟಕಗಳ ಬೆಳೆ ಶತಮಾನಗಳಾಚೆಯಿಂದಲೂ ಸಮೃದ್ಧವಾಗಿತ್ತು. ಭಾಸನಿಂದ ತೊಡಗಿ ಅಶ್ವಘೋಷ, ಮುರಾರಿ, ಭಟ್ಟನಾರಾಯಣ, ರಾಜಶೇಖರ, ಜಯದೇವರನ್ನು ಪ್ರಮುಖ ನಾಟಕಕಾರರ ಸಾಲಿನಲ್ಲಿ ಗಣಿಸಬಹುದು. ಜಯದೇವೋತ್ತರ ಕಾಲದಲ್ಲಿ– ಹದಿಮೂರನೆಯ ಶತಕದ ಮೇಲೆಯೂ ನಾಟಕಸೃಷ್ಟಿಯಾಗದೆ ಇಲ್ಲ. ಆದರೆ ನಾಟಕೀಯ ಸಿದ್ಧಾಂತ ಪ್ರಕ್ರಿಯೆಗಳಿಗೆ ಒಪ್ಪುವ ಅಂತಿಮ ನಾಟಕವೆಂದರೆ ಜಯದೇವನ ಪ್ರಸನ್ನರಾಘವ. ಈ ಕಾಲದಲ್ಲಿ ನಾಟಕೇತರಗಳಾದ ಭಾಣಾದಿರೂಪಕಗಳು ಜನಪ್ರಿಯವೂ ವೈವಿಧ್ಯಪೂರ್ಣವೂ ಆಗಲಾರಂಭಿಸಿದವು.

ಸಂಸ್ಕೃತ ನಾಟಕಕಾರರಲ್ಲಿ ಕಾಲಿದಾಸ ಭವಭೂತಿಗಳಿಬ್ಬರು ವಿಶ್ವವಿಜೇತರು. ಕಾಲಿದಾಸನ ಶಾಕುಂತಲ, ಭವಭೂತಿಯ ಉತ್ತರರಾಮಚರಿತ ನಾಟಕಗಳು ವಿಮರ್ಶಕರಲ್ಲಿಯೂ ಮೆಚ್ಚುಗೆಯನ್ನು ಪಡೆದಿವೆ; ಪಾಶ್ಚಾತ್ಯ ದೇಶಗಳಲ್ಲಿಯೂ ಮೆರೆದಿವೆ.

ಈ ಅಪಾರ ನಾಟಕಸೃಷ್ಟಿ ಪ್ರಾಮಾಣಿಕವಾಗಿರುವಂತೆ ಇವುಗಳನ್ನು ನಿಯಂತ್ರಿಸಲು ಲಕ್ಷಣ ಗ್ರಂಥಗಳುಂಟಾಗಿವೆ. ಭರತಮುನಿಯ ನಾಟ್ಯಶಾಸ್ತ್ರ, ಸಂಸ್ಕೃತಸಾಹಿತ್ಯದ ಲಕ್ಷಣಗ್ರಂಥಗಳಲ್ಲಿ ಮೊದಲದೆನ್ನಬೇಕು. ಸಾಹಿತ್ಯದಲ್ಲಿ ಸ್ವಚ್ಛಂದವೃತ್ತಿ ತಲೆ ಹಾಕದಂತೆ ಪ್ರತಿಷೇಧಿಸುವ ಪ್ರಯತ್ನ ಇಲ್ಲಿಂದ ಆರಂಭವಾಯಿತು. ಹಿಂದಿನ ಲಕ್ಷ್ಯ ಗ್ರಂಥಗಳನ್ನು ನಿಕಷೋಪಲಕ್ಕೆ (ಒರೆಗಲ್ಲಿಗೆ) ತಿಕ್ಕಿ ಅವುಗಳ ವೈಶಿಷ್ಟ್ಯವನ್ನು ಸಾರಿರುವರು. ಆದ್ದರಿಂದಲೇ ಭರತ-ಪೂರ್ವದಲ್ಲಿ ಸಂಸ್ಕೃತದಲ್ಲಿ ಪ್ರೌಢ ನಾಟಕಗಳಿದ್ದವು,



ಅವು ಕಾಲಗರ್ಭದಲ್ಲಿ ಲೀನವಾಗಿರಲು ಸಾಕು.

ಭರತನ ನಾಟ್ಯಶಾಸ್ತ್ರವು ಬರಿಯ ನಾಟ್ಯ ಶಾಸ್ತ್ರವಲ್ಲ. ಅಲಂಕಾರ, ಸಂಗೀತ, ಛಂದಸ್ಸು, ನೃತ್ಯ, ನಾಟಕಗಳೆಲ್ಲವಕ್ಕೂ ಇದುವೆ ಮಾರ್ಗದರ್ಶಕಗ್ರಂಥ. ನಾಟ್ಯಶಾಸ್ತ್ರದ ಎರಡು ಗ್ರಂಥಗಳು ಸಿಕ್ಕುವವು. ಮೊದಲನೆಯದು ನಾಟ್ಯವೇದಾಗಮ. ನಾಟ್ಯಶಾಸ್ತ್ರವು ದ್ವಾದಶಸಾಹಸ್ರಿಯಾಗಿದ್ದರೆ ಎರಡನೆಯದು ಷಟ್ ಸಾಹಸ್ರಿಯನ್ನಿಸಿದೆ. ಆದರೆ ಶಾರದಾತನಯನು ಎರಡನೆಯದನ್ನೇ ಮೊದಲನೆಯದೆನ್ನುತ್ತಾನೆ." ಏವಂ ದ್ವಾದಶಸಾಹಸ್ರೈಃ ಶ್ಲೋಕೈರೇಕಂ ತದರ್ಧತಃ ಷಡ್ಭಿಃ ಶ್ಲೋಕಸಾಹಸ್ರೈರ್ಯೋ ನಾಟ್ಯವೇದಸ್ಯ ಸಂಗ್ರಹಃ " ಎಂದಿರುವನು. ಇವನು ಕ್ರಿ.ಶ. ಎರಡನೆಯ ಶತಕದಲ್ಲಿದ್ದನು. ನಾಟ್ಯಶಾಸ್ತ್ರದ ಸಂಗೀತಾಧ್ಯಾಯವು ಪ್ರಕ್ಷಿಪ್ತವಿದ್ದು ಅದನ್ನು ನಾಲ್ಕನೆಯ ಶತಕದಲ್ಲಿ ಸೇರಿಸಲಾಯಿತು ಎನ್ನುವವರುಂಟು. ಕಾಲಿದಾಸನ ವಿಕ್ರಮೋರ್ವಶೀಯ ನಾಟಕವು ಭರತ ಜೀವನವನ್ನೇ ಅವಲಂಬಿಸಿದೆ. " ಮುನಿನಾ ಭರತೇನ ಯಃ ಪ್ರಯೋಗೋ ಭವತೀಷ್ವಷ್ಟರಸಾಶ್ರಯೋ ನಿಬದ್ಧಃ! ಲಲಿತಾಭಿನಯಂ ತದದ್ಯ ಭರ್ತಾ ಮರುತಾಂ ದ್ರಷ್ಟುಮನಾಃ ಸಲೋಕಪಾಲಃ" ಎಂದು ಅವನು ವಿಕ್ರಮೋರ್ವಶೀಯದಲ್ಲಿ ಬರೆದಿರುವನು. ಭರತಮುನಿಯ ಆಜ್ಞೆಯಂತೆ ಅಭಿನಯಿಸಲು ಊರ್ವಶಿ ತಪ್ಪಿದುದೇ ವಿಕ್ರಮೋರ್ವಶೀಯ ನಾಟಕಕಥೆಯ ಹಿನ್ನೆಲೆಯೆಂಬುದನ್ನಂತೂ ಮರೆಯುವಂತಿಲ್ಲ.

ನಾಟ್ಯಶಾಸ್ತ್ರವು ಪಾಣಿನಿಗಿಂತ ಮೊದಲೆ ಬರೆದ ಗ್ರಂಥವಿರಬೇಕು. ಯಾಕೆಂದರೆ ಅದರಲ್ಲಿ ಐಂದ್ರ ವ್ಯಾಕರಣ, ಯಾಸ್ಕನ ನಿರುಕ್ತದ ಉದಾಹರಣೆಗಳು ಇರುವಂತೆ ಪಾಣಿನಿಯ ದೃಷ್ಟಾಂತಗಳಿಲ್ಲ. ಭಾಷೆಯ ದೃಷ್ಟಿಯಿಂದಲೂ ನಾಟ್ಯಶಾಸ್ತ್ರದ ಪ್ರಾಚೀನತೆಯು ಸಿದ್ಧವಾಗುವದು. ನಾಟ್ಯಶಾಸ್ತ್ರದ ಟೀಕಾಕಾರರು ಭರತನನ್ನು ಸೂತ್ರಕಾರನೆಂದಿರುವರು. ನಾಟ್ಯದೇವನ ದೃಷ್ಟಿಯಲ್ಲಿಯೂ ಭರತಮುನಿ "ಸೂತ್ರಕೃತ್". ಅಭಿನವಗುಪ್ತನೂ ನಾಟ್ಯಶಾಸ್ತ್ರವನ್ನು "ಭರತಸೂತ್ರ" ವೆಂದವನೇ. "ಷಟ್ ತ್ರಿಂಶಕಂ ಭರತಸೂತ್ರಮಿದಂ ವಿವೃಣ್ವನ್ '' ಎಂದು ಅವನು ಬರೆದಿರುವನು.

ಭರತಮುನಿಯ ನಾಟ್ಯಶಾಸ್ತ್ರದಲ್ಲಿ ೩೭ ಅಧ್ಯಾಯಗಳಿರುವವು. ಪ್ರಾಚೀನ ಟೀಕಾಕಾರರ ಅಭಿಪ್ರಾಯದಲ್ಲಿ ಗ್ರಂಥವು ೩೬ ಅಧ್ಯಾಯಗಳದ್ದು. ಅಭಿನವ ಭಾರತಿ ಮಾತ್ರ ೩೭ ಅಧ್ಯಾಯಗಳಿಗೆ ಸಾಧಕ.

ನಾಟ್ಯಶಾಸ್ತ್ರದ ಪ್ರಥಮಾಧ್ಯಾಯದಲ್ಲಿ ನಾಟ್ಯವೇದದ ಉತ್ಪತ್ತಿ, ಅದರ ವರ್ಣನಸಂಕೇತಗಳು, ರಂಗಮಂಚದ ಪ್ರಕಾರಗಳು, ರಂಗದ ಅಂಗಗಳು, ರಂಗಶೀರ್ಷ, ರಂಗಮಧ್ಯ, ರಂಗಪೃಷ್ಠ ಮತ್ತು ವಾರಣೀದರ್ಶಕ ಆಸನದ ವಿವರಣೆಯುಂಟು. ಚತುರ್ವಿಧ ಅಭಿನಯ ಮುಂದೆ ಬರುವುದು. ಅನಂತರ ರಸ, ಭಾವ, ವಿಭಾವ, ಅನುಭಾವ, ಸಂಚಾರಿ ಭಾವಗಳ ವಿವೇಚನೆ ಮಾಡಿರುವರು. ಹದಿನಾಲ್ಕರಿಂದ ಇಪ್ಪತ್ತು ಅಧ್ಯಾಯಗಳ ತನಕ ವಾಚಿಕ, ಆಹಾರ್ಯ ಅಭಿನಯಗಳ ವಿಶ್ಲೇಷಣೆಯನ್ನು ಕೊಟ್ಟಿದೆ. ನಾಟ್ಯಶಾಸ್ತ್ರವು ಛಂದಸ್ಸಿನ ವಿವೇಚನೆಯನ್ನೂ ಒಳಗೊಂಡಿದೆ.

ನಾಟ್ಯಶಾಸ್ತ್ರದ ಮೇಲೆ ಅನೇಕ ವಿವರಣ ಗ್ರಂಥಗಳಿವೆ. ಭರತಟೀಕೆ, ಹರ್ಷಕೃತ ವಾರ್ತಿಕ, ಶಾಕ್ಯಾಚಾರ್ಯ ಶಾಹುಲಕೃತ ಕಾರಿಕೆ, ಮಾತಗುಪ್ತರಚಿತಟೀಕೆ, ಕೀರ್ತಿಧರ ಟೀಕೆ, ಇವು ಅನುಪಲಬ್ಧವಾಗಿವೆ. ಅಭಿನವಗುಪ್ತನು ತನ್ನ ಅಭಿನವ ಭಾರತಿಯಲ್ಲಿ ಈ ಟೀಕಾಕಾರರನ್ನು ಉದ್ಧರಿಸಿರುವನು.

ಭರತಮುನಿಯ ಪ್ರಸಿದ್ಧವಾದ "ವಿಭಾವಾನುಭಾವ ವ್ಯಭಿಚಾರಿ ಸಂಯೋಗಾದ್ರಸನಿಷ್ಪತ್ತಿಃ." ಎಂಬ ಸೂತ್ರವನ್ನು ಭಟ್ಟಲೊಲ್ಲಟ, ಶಂಕುಕ, ಭಟ್ಟನಾಯಕ, ಅಭಿನವಗುಪ್ತರು ವಿವರಿಸಿರುವರು. ಇವರೆಲ್ಲರೂ ನಾಟ್ಯಶಾಸ್ತ್ರಕ್ಕೆ ವಿವರಣಗ್ರಂಥಗಳನ್ನು ಬರೆದಿರುವರು. ಅಭಿನವಗುಪ್ತನ ಅಭಿನವಭಾರತಿಯು ವಿವರಣಾತ್ಮಕವಾಗಿದ್ದರೂ ಸ್ವತಂತ್ರತೆಯನ್ನು ತೋರುವುದು.

ಭರತನ 'ರಸಸೂತ್ರ'ದಲ್ಲಿ ವಿಭಾವಾನುಭಾವ ಸಂಚಾರಿಭಾವಗಳಿಗೂ ರಸಕ್ಕೂ ಕಾರ್ಯ ಕಾರಣ ಸಂಬಂಧವೆಂದು ಲೊಲ್ಲಟನೆನ್ನುವನು. ವಿಭಾವಾದಿಗಳು ಸಾಧನ ರಸವು ಸಾಧ್ಯವೆನ್ನುವವನು ಶಂಕುಕ. ಇವನ ಅನುಮಾಪ್ಯ ಅನುಮಾಪಕ ಭಾವ ಸಂಬಂಧವು ಅಭಿನವಭಾರತೀ ಟೀಕೆಯಲ್ಲಿ ಉಲ್ಲಿಖಿತವಾಗಿದೆ. ಇದಕ್ಕೆ ಅನುಮಿತಿವಾದವೆನ್ನಲಾಗಿದೆ. ರಸಸೂತ್ರದ ಬಗೆಗೆ ಭಟ್ಟನಾಯಕನ ಅಭಿಪ್ರಾಯವನ್ನು ಅಭಿನವಗುಪ್ತ, ಜಯರಥ ಮಹಿಮಭಟ್ಟರಯ್ಯಕರು ಉಲ್ಲೇಖಿಸಿರುವರು. ರಸಸಂಬಂಧದಲ್ಲಿ ಇವನು ಭುಕ್ತಿವಾದಿ ಕಾವ್ಯದಲ್ಲಿ ಭಾವಕತ್ವ ಭೋಜಕತ್ವಭಾವನೆ ಮೂಡಿಸಿದನು. ರಸಸೂತ್ರದ "ಸಂಯೋಗಾತ್" ಎಂಬ ಪದದ ಅರ್ಥವನ್ನು ಭಾವ್ಯಭಾವಕ ಸಂಬಂಧವೆಂದು ಹೇಳಿದನು.

ಅಭಿನವಗುಪ್ತನು ಧ್ವನಿವಾದಿಯಾಗಿರುವಂತೆ ನಾಟ್ಯಶಾಸ್ತ್ರಾಚಾರ್ಯನೂ ಆಗಿರುವನು. ಇವನ ಅಭಿನವಭಾರತೀ ನಾಟ್ಯಶಾಸ್ತ್ರದ ಮೇಲೆ ಬರೆಯಲಾದ ಅತ್ಯುತ್ತಮ ವಿವರಣಾತ್ಮಕಗ್ರಂಥ. ರಸಪರ ಸಿದ್ಧಾಂತವನ್ನು ಶೈವದರ್ಶನ ಮತ್ತು ವ್ಯಂಜನಾವಾದದ ಮೇಲೆ ನೆಲೆಗೊಳಿಸಿದವನು ಇವನು "ಸಂಯೋಗಾತ್-ನಿಷ್ಪತ್ತಿಃ" ಎಂಬಲ್ಲಿ ವ್ಯಂಗ್ಯವ್ಯಂಜಕ ಭಾವದಿಂದ ಅಭಿವ್ಯಕ್ತಿಯೆಂದು ರಸಸೂತ್ರಕ್ಕೆ ವಿವರಣೆ ಇತ್ತನು. ರಸವು ವ್ಯಂಗ್ಯ, ಸಹೃದಯಸಂವೇದ್ಯವೆನ್ನುವನು.

ನಾಟ್ಯಶಾಸ್ತ್ರದ ಆಧಾರದಿಂದ ಮುಂದೆ ಅನೇಕ ಲಕ್ಷಣಗ್ರಂಥಗಳಾಗಿವೆ. ಅವುಗಳಲ್ಲಿ ಧನಂಜಯನು ಬರೆದ ದಶರೂಪಕವು ನಾಟಕಲಕ್ಷಣಕ್ಕೆ ಮೀಸಲಾದ ಪ್ರಮುಖ ಗ್ರಂಥ. ಕ್ರಿ. ಶ. ೯೭೪ ರಿಂದ ೯೯೫ ರಲ್ಲಿ ಬಾಳಿದವನಿರಬೇಕು. ಇವನ ದಶರೂಪಕವು ನಾಟ್ಯಶಾಸ್ತ್ರದ ಸಂಕ್ಷಿಪ್ತ ರೂಪವೆನ್ನಬಹುದು. ಭರತನಂತೆ ಆಂಗಿಕ, ವಾಚಿಕ, ಆಹಾರ್ಯ, ಅಭಿನಯಗಳ ವಿಸ್ತೃತ ವರ್ಣನೆಯನ್ನು ಧನಂಜಯ ಮಾಡಿಲ್ಲ. ಶೃಂಗಾರದ ರಸದಲ್ಲಿ ನಾಯಕಭೇದಗಳನ್ನು ಭರತನಿಗಿಂತ ಹೆಚ್ಚಾಗಿ ವಿವರಿಸಿರುವನು. ವಿದ್ಯಾನಾಥನು ಪ್ರತಾಪರುದ್ರೀಯವೆಂಬ ಗ್ರಂಥದಲ್ಲಿ ನಾಟಕಲಕ್ಷಣವನ್ನು ಹೇಳಿರುವನಲ್ಲದೆ ಆದರ್ಶ ನಾಟಕವೊಂದನ್ನು ಉದಾಹರಣೆಯಾಗಿ ತಾನೇ ಬರೆದು ತೋರಿಸಿರುವನು. ಇವನು ಭರತನ ಬಳಿ ನೇರವಾಗಿ ಸಾರದೆ ಧನಂಜಯನ ಅಭಿಪ್ರಾಯಗಳನ್ನು ಬೇಕಾದ ಹಾಗೆ ಎರವಲು ಪಡೆದಿರುವನು. ಸಾಹಿತ್ಯದರ್ಪಣ ಬರೆದ ವಿಶ್ವನಾಥ, ಭಾನುದತ್ತ, ಭಾವಮಿಶ್ರ ಎಲ್ಲರೂ ಹೆಚ್ಚು ಕಡಿಮೆ ದಶರೂಪದ ಪ್ರಭಾವಕ್ಕೆ ಒಳಗಾದವರೇ. ಗುಣಚಂದ್ರ, ರಾಮಚಂದ್ರರೆಂಬವರು ನಾಟ್ಯದರ್ಪಣ ಬರೆದಿರುವರು. ಇದರಲ್ಲಿ ಅನೇಕ ಪ್ರಾಚೀನ ನಾಟಕಗಳಿಂದ ಪದಗಳನ್ನು ಉದಾಹರಿಸಲಾಗಿದೆ.

ಒಟ್ಟಿನಲ್ಲಿ ಭರತಮುನಿಯಿಂದ ತೊಡಗಿ ಸುಮಾರು ೧೪ನೆಯ ಶತಮಾನದವರೆಗೆ ಒಂದು ಸಾವಿರಕ್ಕಿಂತಲೂ ಹೆಚ್ಚು ವರ್ಷಗಳ ಕಾಲ ನಿರಂತರವಾಗಿ ನಾಟ್ಯಶಾಸ್ತ್ರದ ಗ್ರಂಥಗಳು ಸಂಸ್ಕೃತದಲ್ಲಿ ನಿರ್ಮಿತವಾಗಿವೆ. ಅನಂತರ ನಾಟ್ಯಶಾಸ್ತ್ರದ ಮೇಲೆ ಗ್ರಂಥಗಳು ಬರೆಯಲ್ಪಟ್ಟಿಲ್ಲ. ಆದರೆ ಮರಾಠೀ ಮುಂತಾದ ದೇಶೀಭಾಷೆಗಳಲ್ಲಿ ನಾಟ್ಯಶಾಸ್ತ್ರದ ಕುರಿತು ಗ್ರಂಥಗಳು ಪ್ರಕಟವಾಗುತ್ತಿವೆ. ಸಂಸ್ಕೃತದ ದೃಶ್ಯ ಕಾವ್ಯಗಳು ಕವಿಯ ಪಾಂಡಿತ್ಯಪ್ರದರ್ಶನಲಾಲಸೆಯಿಂದಾಗಿ ರಂಗಮಂಚದಿಂದ ದೂರವಾದವು. ಮುರಾರಿಯ ಅನರ್ಘರಾಘವದಿಂದಲೇ ಈ ಪಾಂಡಿತ್ಯಪ್ರದರ್ಶನಕ್ಕೆ ಬೀಜಾವಾಪವಾಯಿತು.

ನಾಟ್ಯಶಾಸ್ತ್ರದಲ್ಲಿ ಹೇಳಿದಂತೆ ಸಂಧಿ ಸಂಧ್ಯಂಗಗಳ ಅನುಲ್ಲಂಘನೀಯತೆ ಸ್ವತಂತ್ರ ಕಲಾವಿಕಾಸಕ್ಕೆ ಬಾಧಕವೆನಿಸಿತು. ವೇಣೀಸಂಹಾರ, ರತ್ನಾವಳೀ ನಾಟಕಗಳಂಥ ಉತ್ತಮ ನಾಟಕಗಳು ಈ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ಮುಂದಾದವು. ಪರಂಪರಾವಾದಿಗಳು ಈ ರೂಪಕಗಳನ್ನು ಇಂದೂ ಗೌರವಿಸುವರು. ಆಧುನಿಕನಾಟಕಗಳು ಹೊಸ ಕ್ಷೇತ್ರದಲ್ಲಿ ವಿಸ್ತಾರವಾಗಿ ಬೆಳೆಯುತ್ತಿವೆ. ಇವುಗಳ ಬಗ್ಗೆ ಸಂಸ್ಕೃತದಲ್ಲಿ ಹೊಸ ನಾಟ್ಯಶಾಸ್ತ್ರಗ್ರಂಥದ ನಿರ್ಮಾಣವಾಗಬೇಕಾಗಿದೆ.

# ಸಂಸಾರನೌಕೆಯ ಸುರಕ್ಷಿತ ಯಾನದ ಸೂತ್ರಗಳು

ಲೇಖಕರು : ಶ್ರೀ ಎಂ. ಎಚ್. ಕೌಜಲಗಿ

ಓಹೋ! ಈಗೀಗ ಸಂಸಾರ ನಡೆಸುವದೇ ಕಠಿಣವೆನಿಸಹತ್ತಿದೆಯೆಂದಿರಲ್ಲವೇ! ನಿಜ. ಏರಿದ ಧಾರಣೆಗಳಲ್ಲಿ ಬರುವ ಸಂಬಳದಲ್ಲಿ ತೂಗಿಸಿಕೊಂಡು ಹೋಗುವದು ತುಂಬಾ ಕಠಿಣವೆನಿಸುವದು. ಅಂತೆಯೇ ನಮ್ಮ ಲೇಖಕರು ಈ ಸಂಸಾರನೌಕೆಯ ಸುರಕ್ಷಿತ ಯಾನದ ರಾಮಬಾಣಸೂತ್ರಗಳನ್ನು ನಮ್ಮ ಓದುಗರಿಗಾಗಿ ಕಂಡುಹಿಡಿದಿದ್ದಾರೆ.

ಇತ್ತೀಚೆಗೆ ಮಧ್ಯಮವರ್ಗದ ಕುಟುಂಬದ ವೆಚ್ಚವನ್ನು ನಿಯಂತ್ರಿಸುವದೊಂದು ಮಹಾಸಮಸ್ಯೆಯಾಗಿಬಿಟ್ಟಿದೆ. ಅರ್ಥಮಂತ್ರಿಗಳಾದರೂ ತಮ್ಮ ಕುಟುಂಬದ ವೆಚ್ಚವನ್ನು ಸಮಾಧಾನಕರವಾಗಿ ಬಿಡಿಸಿರುವರೊ ಇಲ್ಲೊ? ಯಾಕಂದರೆ ದೇಶದ ಆರ್ಥಿಕ ಅಡಚಣೆಗಳ ಸ್ವರೂಪವೇ ಬೇರೆ; ಮಧ್ಯಮ ವರ್ಗದ ಕುಟುಂಬದ ಆರ್ಥಿಕ ಅಡಚಣಿಗಳ ಸ್ವರೂಪವೇ ಬೇರೆ. ದೇಶಕ್ಕೆ ಹಣದ ಕೊರತೆ ಬಿದ್ದರೆ, ಹೆಚ್ಚಿಗೆ ಕರ ಕೂಡಿಸಬಹುದು, ಸಾಲ ತೆಗೆಯಬಹುದು ಅಥವಾ ಕೆಲವು ಖರ್ಚಿನ ಯೋಜನೆಗಳನ್ನು ಕೈಕೊಳ್ಳದೆ ಮುಂದೂಡಬಹುದು. ಅಥವಾ ಇವೆಲ್ಲವನ್ನೂ ಏಕಕಾಲದಲ್ಲಿ ಮಾಡಬಹುದು. ಆದರೆ ಕುಟುಂಬದ ವೆಚ್ಚದಲ್ಲಿ ಇದಾವುದಕ್ಕೂ ಆಸ್ಪದವಿಲ್ಲ. ಅಲ್ಲಿ ಹಣ ಉಪಯೋಗಿಸುವದಕ್ಕೆ ಪ್ರಜೆಗಳು ಇದ್ದರೂ, ಕರ ಕೊಡುವ ಪ್ರಜೆಗಳಿರುವದಿಲ್ಲ. ಸಾಲವನ್ನು ತೆಗೆಯಬೇಕಾದರೆ ಹಾಳು ಬಿದ್ದ ಹೊಲಗಳೇ ಜಾಮೀನಿಗೆ ಉಪಯೋಗಬೀಳಬಹುದೇ ಹೊರತು ಹೆಂಡತಿಯ ಮೈಮೇಲಿನ ಆಭರಣಗಳಿಗೆ ಕೈ ಹಚ್ಚಲಿಕ್ಕೆ ಬರುವಂತಿಲ್ಲ. ಸಾವನ್ನು ಮುಂದೂಡಬಹುದೇ ವಿನಾ ಬಾಣಂತಿತನ, ನವರಾತ್ರಿ, ಶ್ರಾದ್ಧ, ಪಕ್ಷ, ದೀಪಾವಳಿ ಮುಂತಾದ ದುರ್ಧರ ಪ್ರಸಂಗಗಳನ್ನು ಮುಂದೂಡುವದು ಶಕ್ಯವಿಲ್ಲ. ದೇಶಕ್ಕೂ ಕುಟುಂಬಕ್ಕೂ ಇರುವ ವ್ಯತ್ಯಾಸವೇ ಇದು. ಅದಕ್ಕಾಗಿಯೆ ಮಧ್ಯಮವರ್ಗದ ಕುಟುಂಬದ ಆರ್ಥಿಕ ಮಂತ್ರಿಯಾಗಲು ಸ್ವಸಂತೋಷದಿಂದ ಮುಂದೆ ಬರುವ ಅಭಿಮನ್ಯುವು ಮಾನವ ಲೋಕದಲ್ಲಿಯೇಕೆ ದೇವಲೋಕದಲ್ಲಿಯೂ ಇರಲಿಕ್ಕಿಲ್ಲ!

ಜೀವನಾವಶ್ಯಕ ಪದಾರ್ಥಗಳ ವೆಚ್ಚವಂತೂ ದಿನ ದಿನಕ್ಕೆ ಏರತೊಡಗಿದೆ. ಅವುಗಳನ್ನು ದೊರಕಿಸುವ ಹವ್ಯಾಸದಲ್ಲಿ ಕುಟುಂಬದ ಮುಖ್ಯಸ್ಥನು ನುಚ್ಚು ನೂರಾಗಿ ಕಡೆಗೆ ಹತಾಶನಾಗಿ ತನ್ನ ಕುಟುಂಬಕ್ಕೆ ನಾದಾರಿ ಅರ್ಜಿಯನ್ನು ಅನೇಕ ಸಾರೆ ಮಾಡಿಕೊಳ್ಳುತ್ತಾನೆ. ಆದರೆ ನಿನ್ನ ಜೀವ ಇರುವ ವರೆಗೂ ನಿನಗೆ 'ನಾದಾರಿ' ಯಾಗಲಿಕ್ಕೆ ಅಪ್ಪಣೆ ಕೊಡುವದಿಲ್ಲವೆಂದು ಕುಟುಂಬದ ನ್ಯಾಯಾಧೀಶಳು (?) ನಿರ್ದಾಕ್ಷಿಣ್ಯವಾಗಿ ಹೇಳಿಬಿಡುತ್ತಾಳೆ. ಆಕೆಯ ನಿರ್ಣಯದ ಮೇಲೆ ಯಮರಾಜನ ನಿರ್ಣಯದ ಹೊರತು ಯಾರ ಅಧಿಕಾರವೂ ನಡೆಯುವಂತಿಲ್ಲ. ಅಲ್ಲಿ ಯಾವ ಕಾನೂನೂ ನಡೆಯುವಂತಿಲ್ಲ. ಇದು ಕುಟುಂಬದ ಆಡಳಿತೆಯ ವೈಶಿಷ್ಟ್ಯ!

ಇನ್ನು ಕುಟುಂಬದ ಆಯವ್ಯಯದ ಪರಿಸ್ಥಿತಿಯನ್ನು ನೋಡಿದರೆ ಅದು ಯಾವಾಗಲೂ ಹನುಮಂತನ ಬಾಲದ ಉದ್ದಳತೆಯನ್ನೆ ಹೋಲುತ್ತದೆ. ಗಳಿಕೆ ನೂರು ಇದ್ದರೆ ಬಳಿಕೆ ನೂರೈವತ್ತು, ಗಳಿಕೆ ನೂರೈವತ್ತಿದ್ದರೆ ಬಳಿಕೆ ಇನ್ನೂರು. ಯಾವ ಮಧ್ಯಮ ವರ್ಗದ ಗೃಹಸ್ಥನೂ ಬಳಿಕೆಯಷ್ಟು ಗಳಿಕೆಯನ್ನು ಮಾಡುವದಿಲ್ಲ. ಈ ಸಂದರ್ಭದಲ್ಲಿ ಒಬ್ಬ ಗಾಣಿಗನ ಕಥೆಯು ನೆನಪಾಗುತ್ತದೆ. ಅವನ ಎತ್ತು ಸರಿಯಾಗಿ ತಿರುಗುವದಕ್ಕಾಗಿ ಆತನು ಒಂದು ಉಪಾಯ ಹುಡುಕಿ, ಅದರ ಹಣೆಗೆ ಒಂದು ಫೂಟಿನ ಉದ್ದ ಪಟ್ಟಿಯನ್ನು ಕಟ್ಟಿ ಅದಕ್ಕೆ ಎಳೆ ಹುಲ್ಲಿನ ಸಿವುಡನ್ನು ತೂಗುಬಿಟ್ಟಿದ್ದನಂತೆ. ಅದನ್ನು ತಿನ್ನುವದಕ್ಕಾಗಿ ಅದು ಎಷ್ಟು ಸಾಹಸಪಟ್ಟರೂ ಆ ಹುಲ್ಲಿನ ಸಿವುಡು ಒಂದು ಫೂಟಿನ ಅಂತರದ ಮೇಲೇ ಇರುತ್ತಿತ್ತು! ಅದರಂತೆ ಮಧ್ಯಮ ವರ್ಗದ ಕುಟುಂಬದ ಮುಖ್ಯಸ್ಥನು ಎಷ್ಟು ಸಾಹಸ ಬಟ್ಟರೂ ಆತನ ಗಳಿಕೆಗೂ ಬಳಿಕೆಗೂ ಒಂದು ಫೂಟಿನ ಅಂತರವಿದ್ದೇ ಇರುತ್ತದೆ.

ಈ ರೀತಿ ಗಳಿಕೆಗೂ ಬಳಿಕೆಗೂ ತಾಳವಿಲ್ಲದ್ದರಿಂದ ಒಂದು ತರದ ಅಸಂತುಷ್ಟಿ ಪ್ರತಿಯೊಂದು ಕುಟುಂಬವನ್ನು ಆವರಿಸಿರುತ್ತದೆ. ಮನೆಯಲ್ಲಿ ನಿಮ್ಮೊಬ್ಬರನ್ನೇ ಬಿಟ್ಟು ಚಿಕ್ಕ 'ಯುನಿಯನ್‌ಗಳು' ಆಗುತ್ತವೆ. ನಿಮ್ಮ ಹೆಂಡತಿ ಮತ್ತು ಮಕ್ಕಳು ಒಂದು ಯುನಿಯನ್ ಸ್ಥಾಪಿಸುತ್ತಾರೆ. ನಿಮ್ಮ ಮೇಲೆ ಅವಲಂಬಿಸಿರುವ ಹಿರಿಯರಾರಾದರೂ ಇದ್ದರೆ ಅವರು ತಮ್ಮದೊಂದು ಯುನಿಯನ್ ಮಾಡಿಕೊಳ್ಳುತ್ತಾರೆ. ದಿನಾಲು ಹತ್ತಾರು ಸಂಪಿನ ನೋಟೀಸುಗಳು ನಿಮಗೆ ಬರುತ್ತವೆ. ಅವು 'ಕಾಯದೇಶೀರ' ಇರುವವೊ ಇಲ್ಲವೊ ಎಂಬುದನ್ನು ನೋಡುವ ಅಧಿಕಾರ ನಿಮಗೆ ಇರುವದಿಲ್ಲ. ಅವರ ಬೇಡಿಕೆಗಳನ್ನು ಮಾತ್ರ ನೀವು ಮಾನ್ಯ ಮಾಡುತ್ತಾ ಹೋಗಬೇಕು.

(ಇಷ್ಟೊಂದು ಭದ್ರವಾದ ಅಧಿಕಾರದಲ್ಲಿರುವ ನಮ್ಮ ಸ್ತ್ರೀಯರು ಹಿಂದುಕೋಡದ ತಿದ್ದುಪಡಿಯನ್ನು ಏಕೆ ಅಪೇಕ್ಷಿಸುವರೊ ತಿಳಿಯುವದಿಲ್ಲ. ಹಾಗೆ ನೋಡಿದರೆ ಅದು ಹೆಂಗಸರಿಗಿಂತ ಗಂಡಸರಿಗೇ ಹೆಚ್ಚು ಅನುಕೂಲವಾಗಿ ಪರಿಣಮಿಸಬಹುದು.)

ಇವೆಲ್ಲ ದೃಷ್ಟಿಗಳಿಂದ ವಿಚಾರಮಾಡಿ ನೋಡಲಾಗಿ ಮಧ್ಯಮವರ್ಗದ ಕುಟುಂಬಸ್ಥನ ಸ್ಥಿತಿ ಕರುಣಾಜನಕವಿರುವದೆಂದು ಗೊತ್ತಾಗಬಹುದು. ನಿರಾಶ್ರಿತರ ಸಮಸ್ಯೆಗಿಂತಲೂ ಅವರ ಸಮಸ್ಯೆ ಗಂಭೀರವಾಗಿರುವದು. ಅವರ ಪರಿಹಾರಕ್ಕಾಗಿ, ಅವರ ಹಿತರಕ್ಷಣೆಗಾಗಿ, ಅವರ ಮಾರ್ಗದರ್ಶನಕ್ಕಾಗಿ ಸರಕಾರದವರು ಅಥವಾ ಅನೇಕ ಜನಹಿತ ಸಂಸ್ಥೆಯವರು ಈ ವರೆಗೂ ಏನೂ ಮಾಡದೆ ಇರುವದು ಅನ್ಯಾಯವೆಂದು ಹೇಳಬಹುದು.

ದೀಪಾವಳಿಯಿಂದ ನಮ್ಮ ಹಿಂದೂ ಸಮಾಜದ ವ್ಯಾಪಾರ ವ್ಯವಹಾರದಲ್ಲಿ ಅನೇಕ ಹೊಸ ಯೋಜನೆಗಳು ಕೈಕೊಳ್ಳಲ್ಪಡುತ್ತವೆ. ಮಧ್ಯಮವರ್ಗದ ಕುಟುಂಬದ ವೆಚ್ಚವನ್ನು ನಿಯಂತ್ರಿಸುವದಕ್ಕಾಗಿ ಕೆಲವು ಸೂಚನೆಗಳನ್ನು ಇಲ್ಲಿ ಮಾಡುತ್ತೇನೆ. ಅವುಗಳಲ್ಲಿ ಅನುಕೂಲ ಕಂಡವುಗಳನ್ನು ಅಥವಾ ನಿಮ್ಮ ನಿಮ್ಮ ಪರಿಸ್ಥಿತಿಗೆ ಯೋಗ್ಯವಾದವುಗಳನ್ನು ಮಾತ್ರ ಈ ದೀಪಾವಳಿ ಮುಹೂರ್ತದಿಂದ ಜಾರಿಯಲ್ಲಿ ತರಬಹುದು.

ಮಧ್ಯಮ ವರ್ಗದಲ್ಲಿ ಹೆಚ್ಚಾಗಿ ನೌಕರಶಾಹಿ ಜನರೇ ಬರುವರು. ಅವರ ಉತ್ಪನ್ನವು ನಿರ್ದಿಷ್ಟವಾಗಿರುತ್ತದೆ. ಡಾಕ್ಟರ, ವಕೀಲ, ವ್ಯಾಪಾರಸ್ಥರ ಉತ್ಪನ್ನದಂತೆ ಪ್ರತಿತಿಂಗಳು ಹೆಚ್ಚುಕಡಿಮೆಯಾಗುವದಿಲ್ಲ. (ಕೆಲ ನೌಕರಶಾಹಿ ಜನರ 'ಅಜ್ಞಾತ' ಉತ್ಪನ್ನವು ನಮಗೆ ಗೊತ್ತಿರುವದಿಲ್ಲವಾದ್ದರಿಂದ, ಅದನ್ನು ನಾವು ಲೆಕ್ಕದಲ್ಲಿ ಹಿಡಿಯುವದಿಲ್ಲ) ಹೀಗೆ ಉತ್ಪನ್ನವು ನಿರ್ದಿಷ್ಟವಾಗಿದ್ದರೂ ಇವರ ವೆಚ್ಚವು ನಿರ್ದಿಷ್ಟವಾಗಿರುವದಿಲ್ಲ. ಅವರು ತಮ್ಮ ಉತ್ಪನ್ನವಿದ್ದಂತೆ ವೆಚ್ಚವನ್ನು ನಿಯಂತ್ರಿಸಬೇಕಾದರೆ ಕೆಳಗಿನ ಮಾರ್ಗದರ್ಶಕ ತತ್ತ್ವಗಳನ್ನು ಸ್ವೀಕರಿಸಬಹುದು. (ಆದರೆ ದಯಮಾಡಿ ಈ ಸೂಚನೆಗಳನ್ನು ನಿಮ್ಮ ಮನೆಯವರಿಗೆ ತೋರಿಸಬೇಡಿರಿ)

೧. ಸ್ತ್ರೀಯರೆದುರು ಸತ್ಯ ಮಾತಾಡಬಾರದು. ಸತ್ಯಸಂಧರಂತೆ ನಿಮ್ಮ ಪಗಾರದ ಸಂಖ್ಯೆಯನ್ನು ನಿಮ್ಮ ಹೆಂಡತಿಗಾಗಲಿ ತಾಯಿಗಾಗಲಿ ಹೇಳಿದರೆ

ಪರಿಪರಿಯ ಪೀಡೆಗೊಳಗಾಗುವಿರಿ. ಹೇಳುವದೇ ಆದಲ್ಲಿ ಕನಿಷ್ಠ ನೂರಕ್ಕೆ ೨೫ ರಷ್ಟು ಕಡಿಮೆ ಹೇಳಿದರೆ ಪಾರಾಗಬಹುದು. ಯಾಕೆಂದರೆ ಸಾಮಾನ್ಯವಾಗಿ ಅವರ ಬೇಡಿಕೆಯು ನಿಮ್ಮ ಪಗಾರಕ್ಕಿಂತ ೨೫% ಹೆಚ್ಚಾಗಿರುವದೆಂದು ಸಂಖ್ಯಾತಜ್ಞರು ಹೇಳುತ್ತಾರೆ.

೨. ನಿಮ್ಮ ಹೆಂಡತಿಗೆ ಪ್ರತಿ ತಿಂಗಳ ಒಂದು ಖಣವನ್ನಾಗಲಿ ಶೀರೆಯನ್ನಾಗಲಿ ಅಥವಾ ಅವರಿಗೆ ಬೇರೆ ಇನ್ನಾವ ವಸ್ತುವನ್ನಾಗಲಿ ಅವರ ವೈಯಕ್ತಿಕ ಉಪಯೋಗಕ್ಕಾಗಿ (ಹಾಗೂ ನಿಮ್ಮ ಶಕ್ತಿಗನುಸಾರ) ತಂದುಕೊಟ್ಟರೆ ಅವರು ಕುಟುಂಬದ ವೆಚ್ಚದಲ್ಲಿ ಕನಿಷ್ಠ ಅದರ ಮೂರು ಅಥವಾ ನಾಲ್ಕು ಪಟ್ಟು ವೆಚ್ಚವನ್ನು ಉಳಿಸಿಕೊಡುವರು. ಇನ್ನು ಮನೆಯಲ್ಲಿ ನಿಮ್ಮ ತಾಯಿ ಅಥವಾ ಅವಲಂಬಿತ ಸ್ತ್ರೀಯರಾರಾದರೂ ಇದ್ದರೆ, ನೀವು ಹೀಗೆ ಹೆಂಡತಿಗೆ ಖಣ ಅಥವಾ ಶೀರೆ ಕೊಟ್ಟರೆ ನಿಮ್ಮ ಮೇಲೆ ಸಿಟ್ಟಾಗಿ ಅಸಹಕಾರ ಇಲ್ಲವೆ ಸತ್ಯಾಗ್ರಹ ಹೂಡಬಹುದು. ಅಂಥವರಿಗೆ ನೀವು 'ದೇವಕಾರ್ಯಕ್ಕಾಗಿ ಅಥವಾ ಇತರ ವೆಚ್ಚಕ್ಕೆಂದು' ರೋಖ ೨ ರಿಂದ ೫ ರೂಪಾಯಿಯ ವರೆಗೆ ಖಾಸಗಿ 'ಭತ್ತೆ' ಕೊಡಬೇಕು. ಅದರಿಂದ ನಿಮಗೆ ಉತ್ತಮ ಸಹಕಾರ ದೊರೆಯುವದಲ್ಲದೆ ಕುಟುಂಬದ ವೆಚ್ಚದಲ್ಲಿ ನಿಮ್ಮ ಉಳಿತಾಯದ ಯೋಜನೆಗಳಿಗೂ ಅವರ 'ವ್ಹೋಟು' ದೊರೆಯುವದು.

೩. ಮನೆಯಲ್ಲಿ ಮಕ್ಕಳು ಬಹಳವಿದ್ದರೆ ಅವರ ಶಿಕ್ಷಣದ ವೆಚ್ಚವು ನಿಮಗೆ ಭಾರವೆನಿಸುವದು. ಅವರಿಗೆ ದಿನಾಲು ಫೀ, ಪುಸ್ತಕ, ನೋಟಬುಕ್ಕು, ಇತ್ಯಾದಿ ಶಾಲೋಪಯೋಗಿ ವೆಚ್ಚಕ್ಕಾಗಿ ಹಣಬೇಕಾಗುತ್ತದೆ. ಅದೇ ಕಾರಣದ ಮೇಲೆ ನಿಮ್ಮ ಹೆಂಡತಿಯಿಂದಲೂ ಅವರ ಖಾಸಗಿ ಹಣದೊಳಗಿಂದ ಅವರಿಗೆ ಹಣ ದೊರೆಯುತ್ತದೆ. ನೀವು ಒಮ್ಮೊಮ್ಮೆ ಸಾಮಾನು ತರಲು ನಿಮ್ಮ ಮಕ್ಕಳ ಕೈಯಲ್ಲಿ ೧೦ ರೂಪಾಯಿ ನೋಟು ಕೊಟ್ಟರೆ ನಿಮಗೆ ಅದರ ಲೆಕ್ಕ ಸಿಕ್ಕೀತೇ ಹೊರತು ಉಳಿದ ಹಣ ನಿಮ್ಮ ಕೈಗೆ ಹತ್ತುವದಿಲ್ಲ. ಶಾಲೆಕಲಿಯುವ ನಿಮ್ಮ ಮಕ್ಕಳಿಗಾಗಲಿ ತಮ್ಮಂದಿರಗಾಗಲಿ ನೀವು 'ಸಾದಾ ಜೀವನ'ದ ಬಗ್ಗೆ ಎಷ್ಟೇ ಭಾಷಣ ಕುಟ್ಟಿದರೂ ಅದು ಉಪಯೋಗ ಬೀಳುವದಿಲ್ಲ. ಅದರಿಂದ ನೀವೇ ಹಾಸ್ಯಕ್ಕೆ ಗುರಿಯಾಗುವಿರಿ. ಕಮ್ಯುನಿಷ್ಟರಿಗೂ ಕ್ಯಾಪಿಟಾಲಿಸ್ಟರಿಗೂ ಪರಸ್ಪರ ಮಿತ್ರತ್ವವಾಗಲಿ ಪ್ರೀತಿ ವಿಶ್ವಾಸವಾಗಲಿ ಇರಬಹುದು. ಆದರೆ ಇಂದಿನ ಜಗತ್ತಿನಲ್ಲಿ ತಂದೆ ಮಕ್ಕಳ ನಡುವೆ ಪ್ರೀತಿ ಇದ್ದರೂ ವಿಶ್ವಾಸವಿರುವದಿಲ್ಲ. ತಂದೆ ಮಕ್ಕಳ ವ್ಯಾಜ್ಯದಲ್ಲಿ ತಾಯಿಯು ಕೂಲಿಕಾರರ ಮುಖಂಡರಿಗಿಂತಲೂ ಹೆಚ್ಚು ಆಸ್ಥೆವಹಿಸಿ ಮಕ್ಕಳ ಪರವಾಗಿ ಬಡಿದಾಡುತ್ತಾಳೆ. ಅದಕ್ಕಾಗಿ ಪರಿಸ್ಥಿತಿಯ ಸೂಕ್ಷ್ಮತೆಯನ್ನು ಅರಿತುಕೊಂಡು ನಿಮ್ಮ ಕುಟುಂಬದ ವೆಚ್ಚದ ಪ್ರಮಾಣದಲ್ಲಿ ನಿಮ್ಮ ಮಕ್ಕಳಿಗೂ ತಮ್ಮಂದಿರಿಗೂ 'ಭತ್ತೆ' ಗೊತ್ತುಮಾಡಿ ಬಿಡಬೇಕು.

೪. ಇಷ್ಟಾದರೂ ನಿಮ್ಮ ವೆಚ್ಚವು ನಿಮ್ಮ ಅಳತೆಯಲ್ಲಿ ಬಂದೀತೊ ಇಲ್ಲೋ ಸಂಶಯ. ನಿಮ್ಮ ಮನೆಗೆ ತಗಲುವ ಕಿರಾಣಿ ಕಾಯಿಪಲ್ಲೆ ಮುಂತಾದ ಸಾಮಾನುಗಳನ್ನು ತರುವ ಹೊಣೆಯನ್ನು ಆದಷ್ಟು ಮಟ್ಟಿಗೆ ಸ್ವತಃ ಹೊರುವದೇ ಲೇಸು. ಹೀಗೆ ಸಾಮಾನುಗಳನ್ನು ತರುವಲ್ಲಿ ನಿಮ್ಮ ಸ್ಮರಣಶಕ್ತಿಯನ್ನಾಗಲಿ ಜಾಣ್ಮೆಯನ್ನಾಗಲಿ ಆದಷ್ಟು ಕಡಿಮೆ ಉಪಯೋಗಿಸಬೇಕು. ಯಾವ ಸಾಮಾನದಿಂದಲೂ ನಿಮ್ಮ ಸಂಸಾರವು ನಿಲ್ಲುವದಿಲ್ಲ ಎಂಬ ದೃಢವಾದ ವಿಶ್ವಾಸವು ನಿಮ್ಮಲ್ಲಿರಬೇಕು. ನನ್ನ ಮಿತ್ರರೊಬ್ಬರು ಹಳ್ಳಿಯಲ್ಲಿ ಬೆಣ್ಣೆ ಸೋಯಿ ಸಿಗುವದೆಂದು ಒಮ್ಮೆಲೆ ೧ ಥಡ ಬೆಣ್ಣೆ ತರಿಸಿ ತಾವು ಕುಟುಂಬದ ವೆಚ್ಚದಲ್ಲಿ ಎರಡು ರೂಪಾಯಿ ಉಳಿಸಿದ ಜಾಣ್ಮೆ ತೋರಿಸಲು ಬಂದಿದ್ದರು. ಆದರೆ ಅವರ ಮನೆಗೆ ಪ್ರತಿ ವಾರ ೩ ಸೇರು ಬೆಣ್ಣೆ ಬೇಕಾಗುವ ಬದಲು ೬ ಸೇರಿನಂತೆ ಖರ್ಚಾಗಿ ಎರಡೇ ವಾರಗಳಲ್ಲಿ ಅವರ ಥಡ ಬೆಣ್ಣೆ ಮಾಯವಾಯಿತು. ಅದಕ್ಕಾಗಿ ನೀವು ಕುಟುಂಬವೆಚ್ಚ ನಿಯಂತ್ರಣಕ್ಕೆ ಠೋಕ ವ್ಯವಹಾರದ ಲಾಭವನ್ನು ದೊರಕಿಸುವ ಹವ್ಯಾಸಕ್ಕೆ ಆದಷ್ಟು ಬೀಳಬಾರದು. ಮತ್ತು ಆಫೀಸ ಕೆಲಸದಂತೆ ಮುಂಚೆ ಯಾದಿ ಮಾಡಿಕೊಂಡು ಅದರ ಪ್ರಕಾರ ಸಾಮಾನುಗಳನ್ನು ತರುವ ನಿಮ್ಮ ಓರಣವನ್ನು ನಿಮ್ಮ ಮನೆಯವರ ಮುಂದೆ ತೋರಿಸುವ ಸಾಹಸವನ್ನು ಮಾಡಬಾರದು. ವಾಲ್ಮೀಕಿಯು ರಾಮಾಯಣವನ್ನು ಬರೆಯಬಲ್ಲ. ಆದರೆ ಬಾಜಾರದಿಂದ ಸಂಸಾರಕ್ಕಾಗಿ ತರಬೇಕಾಗುವ ಸಾಮಾನುಗಳ ಯಾದಿಯನ್ನು ಪೂರ್ಣವಾಗಿ ಯಾರೂ ಬರೆಯಲಾರರು. ನೀವು ಯಾದಿ ಮಾಡಿಕೊಂಡು ೫೦ ಸಾಮಾನುಗಳನ್ನು ತಂದೊಗೆದರೂ ನಿಮ್ಮ ಮನೆಯವರು ಮತ್ತೊಂದು ಸಾಮಾನವನ್ನು ನೆನಿಸಿಕೊಂಡು ಹಳಹಳಿಸುವದನ್ನು ಬಿಡುವದಿಲ್ಲ. ಅದಕ್ಕಾಗಿ ಯಾದಿಯಿಲ್ಲದೆ ಸಾಮಾನುಗಳನ್ನು ತರವದು ರಾಜಮಾರ್ಗ ಹಾಗೂ ನಿಮಗೇ ಲಾಭದಾಯಕ. ನಾಲ್ಕು ಸಾಮಾನುಗಳನ್ನು ಮರೆತು ಮನೆಯವರಿಗೆ ಒಂದಾಣೆಯ ಮಾಲೆಯನ್ನು ತಂದು ಕೊಟ್ಟರೆ ಸಾಕು. ಮತ್ತೆರಡು ದಿನಗಳನ್ನು ಮುಂದಕ್ಕೆ ಸುಖವಾಗಿ ನೂಕಬಹುದು. ಸಾಮಾನುಗಳನ್ನು ತರುವದಕ್ಕಿಂತ ಮರೆಯುವದೇ ಲೇಸು. ಇದರಲ್ಲಿ ನಿಮ್ಮ ಗ್ರಹಬಲ ಹಾಗೂ ಗೃಹಲಕ್ಷ್ಮೀಬಲ ನಿಮಗೆ ಎಷ್ಟರ ಮಟ್ಟಿಗೆ ಇರುವದೋ ಅಷ್ಟರ ಮಟ್ಟಿಗೆ ನಿಮಗೆ ಉಳಿತಾಯವಾಗುವದು.

ಮಧ್ಯಮ ವರ್ಗದ ಕುಟುಂಬಸ್ಥನ ಅಸಹಾಯತೆಯನ್ನು ನಾನು ಶಕ್ಯವಿದ್ದಮಟ್ಟಿಗೆ ವಿಚಾರ ಮಾಡಿ ಅವನ ಸಂಸಾರನೌಕೆಯು ಸುರಕ್ಷಿತವಾಗಿ ದಡವನ್ನು ಮುಟ್ಟುವದಕ್ಕೆ ನನಗೆ ತಿಳಿದ ಮಟ್ಟಿಗೆ ಕೆಲವು ಉಪಾಯಗಳನ್ನು ಇಲ್ಲಿ ಸೂಚಿಸಿದ್ದೇನೆ. ಮಧ್ಯಮವರ್ಗದ ಕುಟುಂಬಸ್ಥನ ಬಜೆಟ್ಟು ಬ್ಯಾಂಕು ಕಂಪನಿ ಅಥವಾ ಸರಕಾರದ ಬಜೆಟ್ಟಿನಂತೆ ಇರುವದಿಲ್ಲ. ಅದರ ಉಪಾಯಗಳನ್ನು ಕುಟುಂಬಕ್ಕೆ ಅನ್ವಯಿಸಲು ಬರುವದಿಲ್ಲ. ಇದು ಪ್ರತಿಯೊಬ್ಬನಿಗೂ ಸಂಬಂಧಿಸಿದ ವಿಷಯವಾದದ್ದರಿಂದ ಇದರಲ್ಲಿ ಹೆಚ್ಚು ಸಂಶೋಧನೆಯಾಗಿ ಆದಷ್ಟು 'ರಾಮಬಾಣ' ಉಪಾಯಗಳನ್ನು ಕಂಡುಹಿಡಿದು ಅದರಂತೆ ನಡೆಯುವದು ಅವರವರ ಯೋಗ್ಯತೆ, ಗೃಹಾಡಳಿತ ಪದ್ಧತಿಗಳನ್ನು ಅವಲಂಬಿಸಿದೆಯೆಂದು ಹೇಳಬೇಕಾಗಿಲ್ಲವಷ್ಟೆ!

# ಲಕ್ಷ್ಮೀಪೂಜೆಯಲ್ಲಿ ಭಾಷಣಕಾರನ ಫಜೀತಿ

ಲೇಖಕರು : ರಾವಬಹಾದ್ದೂರ

ಲಕ್ಷ್ಮೀಪೂಜೆ ಹೆಸರಿಗೆ ತಕ್ಕ ಹಾಗೆ ವೈಭವಪೂರ್ಣವಾಗಿ ನಡೆಯಬೇಕು. ನರ್ತನಾದಿಗಳು ಈ ಕಾಲಕ್ಕೆ ಯೋಗ್ಯ ಸಮಾರಂಭಗಳೇ ಹೊರತು ಸಾಮಾನ್ಯ ಭಾಷಣಗಳಲ್ಲ. ಇಂತಹ ಒಂದು ಪ್ರಸಂಗವನ್ನು ರಾವಬಹಾದ್ದೂರರು ಇಲ್ಲಿ ಹೃದಯಂಗಮವಾಗಿ ಚಿತ್ರಿಸಿರುವರು.

ಸುದೈವದಿಂದ ನಾನು ೨ ನೇ ವರ್ಗದ ತಿಕೀಟು ತೆಗೆದು ಗಾಡಿಬಿಡುವ ವೇಳೆಗಿಂತ ಮೊದಲೇ ಬಂದು ಒಂದು ಆಸನ ಹಿಡಿದಿದ್ದೆ. ಗಾಡಿ ಬಿಡುವ ಸಮಯ ಸಮೀಪಿಸಿದಂತೆ ಜನದಟ್ಟಣೆ ಮಿತಿಮೀರಿ ಹೆಚ್ಚಿತು. ಇಂದೇಕೆ ಇಷ್ಟೊಂದು ಗದ್ದಲ ಎಂದು ನನ್ನ ಬದಿಯಲ್ಲಿ ಕುಳಿತು ಚಂಚೀಬಿಚ್ಚಿ ಅಡಕೆ ಕತ್ತರಿಸುತ್ತ ಕುಳಿತುಕೊಂಡಿದ್ದ ಸಹಪ್ರವಾಸಿಯನ್ನು ಕೇಳಿದೆ. "ದೀಪಾವಳಿ ಬಂದಿದೆಯಲ್ಲ. ಅಳಿಯತನಕ್ಕಾಗಿ ಅಳಿಯಂದಿರು, ಅವರ ಜೊತೆಯಲ್ಲಿ ನನ್ನಂಥ ತೋಳಗಳು, ಸಾರ್ವಜನಿಕ ಸಭೆಯಲ್ಲಿ ಭಾಷಣಕ್ಕಾಗಿ ನಿಮ್ಮಂಥ ಸಮಾಜಸೇವಕರು, ಲಕ್ಷ್ಮೀಪೂಜೆಗೆಂದು ಹಣ್ಣು ಹೂ ಕಾಯಿ ಮುದ್ದುಕೊಂಡು ಲಕ್ಷ್ಮೀಕೃಪಾಪೋಷಿತರ ಗುಮಾಸ್ತರು, ವಿಧಾನಸಭೆಗೆ ಬಂದ ಸದಸ್ಯರು, ಲಕ್ಷ್ಮೀಪೂಜೆಗಾಗಿ ತಂತಮ್ಮ ಊರಿಗೆ, ಖಾನಾವಳಿ ಊಟಕ್ಕೆ ಬೇಸತ್ತು ಹಬ್ಬದಲ್ಲಿ ನಾಲ್ಕು ದಿನ ಸುಗ್ರಾಸ ಭೋಜನಮಾಡಿ ಬರಲು ಸರಕಾರೀ ನೌಕರರು ತಮ್ಮೂರಿಗೆ ಇಂದೇ ಹೊರಟದ್ದರಿಂದ ಇಷ್ಟು ಗದ್ದಲವಾಗದೆ ಏನು ಮಾಡೀತು?" ಎಂದು ಆ ಗೃಹಸ್ಥ ಹೇಳಿದ. ಅವನು ಹೇಳಿದ್ದು ಕೇಳಿ ವರ್ಷದಲ್ಲಿ ನಾಲ್ಕು ಸಲ ದೀಪಾವಳಿ ಹಬ್ಬವನ್ನಾಚರಿಸುವದಾದರೆ ರೇಲ್ವೆಶಾಖೆಗೆ ದ್ವಿತೀಯ ಪಂಚವಾರ್ಷಿಕ ಯೋಜನೆಗೆ ಬೀಳುವ ಹಣದ ಕೊರತೆಯು ಅನಾಯಾಸ ತುಂಬಿಹೋಗಬಹುದೇನೋ ಎಂಬ ವಿಚಾರ ತಲೆಯಲ್ಲಿ ಸುಳಿಯಿತು. ಈ ವಿಚಾರದ ಭರದಲ್ಲಿಯೇ ನಾಲ್ಕು "ದೀಪಾವಳಿ ಹಬ್ಬದ ಕಾಲದಲ್ಲಿ ರೇಲ್ವೆಶಾಖೆಯ ಆದಾಯ ಬಹುಮಟ್ಟಿಗೆ ಹೆಚ್ಚಬಹುದು" ಎಂದು ಉದ್ಗಾರ ತೆಗೆದೆ.

ಆ ಗೃಹಸ್ಥ ಕತ್ತರಿಸಿದ ಅಡಕೆಯ ಪುಡಿಯನ್ನು ಥಕ್ಕನೆ ಬಾಯಿಗೆ ಹಾಕಿಕೊಂಡು ಎಲೆಗೆ ಸುಣ್ಣ ಹಚ್ಚುತ್ತ "ಜನರ ಗದ್ದಲ ಹೆಚ್ಚಿದಷ್ಟು ರೇಲ್ವೆ ಶಾಖೆಯ ಆದಾಯ ತಗ್ಗುವದು. ಇಲ್ಲಿ ಜನರು ಜೇನಹುಟ್ಟಿಗೆ ಮುತ್ತಿದ ಜೇನುನೊಣದಂತೆ ಮುಗಿಬಿದ್ದಿರುವದನ್ನು ನೋಡಿರುವಿರಲ್ಲ. ಇವರಲ್ಲಿ ಅರ್ಧದಷ್ಟು ಜನರು ರೇಲ್ವೆ ಸರ್ವಂಟ್ಸರು. ಪಾಸಿನ ಬಲದಿಂದ ಪ್ರವಾಸಕ್ಕೆ ಹೊರಟವರು. ಉಳಿದವರಲ್ಲಿ ಕೆಲವರು ೩ ನೇ ವರ್ಗದಲ್ಲಿ ಕಾಲಿಡಲು ಸ್ಥಳವಿಲ್ಲದ್ದರಿಂದ ಇಲ್ಲಿ ನುಗ್ಗಿದವರು. ಮತ್ತೆ ಕೆಲವರು ತಿಕೀಟು ಸಿಗದ್ದರಿಂದ ಪ್ರವಾಸ ರದ್ದುಪಡಿಸಲು ಇಷ್ಟಪಡದೆ ಬಿನ್‌ತೀಕಿಟು ಬಹಾದ್ದೂರರಾಗಿ ಗಾಡಿಹತ್ತಿದವರು. ತಿಕೀಟಚಕ್ಕರನಿಗೆ ದೀಪಾವಳಿ ಹಬ್ಬಕ್ಕೆ ಆರ್ಥಿಕ ಸಹಾಯಮಾಡುವ ಸದುದ್ದೇಶಪ್ರೇರಿತರಾದ ನನ್ನಂಥ ಕೆಲವರು ತಿಕೀಟು ಪಡೆಯದೆ ಟ. ಸಿ. ಗೆ ಹೇಳಿ ಗಾಡಿ ಹತ್ತಿದವರು. ಹೀಗಿರುವಾಗ ರೇಲ್ವೆಗೆ ಆದಾಯ ಹೆಚ್ಚುವದೆಂದು ನೀವು ಹೇಳಿದ ಮಾತು ಕೇಳಿ ನಿಮ್ಮ ಅಜ್ಞಾನದ ಬಗ್ಗೆ ನಗೆ ಬರುವದು" ಎಂದು ಆ ಗೃಹಸ್ಥ ನುಡಿದವನೇ ಎಲೆಹಾಕಿ ಬಾಯಿ ಆಡಿಸಹತ್ತಿದ.

"ತಿಕೀಟ ಇಲ್ಲದೆ ಪ್ರವಾಸ ಮಾಡುವದು ರಾಷ್ಟ್ರೀಯ ಮೋಸತನವಲ್ಲವೆ?" ಎಂದು ನಾನು ತಡೆಯಲಾರದೆ ಕೇಳಿದ್ದೇ ತಪ್ಪಾಯಿತು. ಆ ಗೃಹಸ್ಥ ಬಾಯಿಗೆ ಹಾಕಲು ಸಿದ್ಧಪಡಿಸಿದ ತಂಬಾಕು ಕೈ-ಯಲ್ಲಿರಿಸಿಕೊಂಡೇ ನನ್ನ ಅಭಿಪ್ರಾಯವನ್ನು ಖಂಡಿಸಲು ವಾದವನ್ನೇ ಹೂಡಿದ.

"ಅಲ್ರೀ ರಾಯರ, ರಾಷ್ಟ್ರೀಯ ಮೋಸ ಯಾರ ಮಾಡತಾರ? ರೈತ ಭೂಮಿಯಲ್ಲಿ ಕಾಳು ಬೆಳೀತಾನ. ಲಾವಣಿ ಹಣ ಮೊದಲಿನ ಕಾಲುಪಾಲು ಕೊಡುವಂತೆ ಸರಕಾರ ಕಾಯದೆ ಮಾಡೇದ. ಕಾಳ ಏನಾದರೂ ಅಗ್ಗ ಬೆಲೆಗೆ ಮಾರತಾನs ಅವನು. ರೈತನು ಕಾಳ ಬಚ್ಚಿಟ್ಟು ತುಟ್ಟೀ ಬೆಲೆಗೆ ಮಾರಿ ದುಡ್ಡು ಮಾಡತಾನ. ಬೆಣ್ಣೆಯೊಳಗ ಡಾಲ್ಡಾ ಮಿಶ್ರಮಾಡಿ ಮಾರುವ ಬೆಣ್ಣೆಗೂ ಶುದ್ಧ ಬೆಣ್ಣೆಯಷ್ಟೇ ದುಡ್ಡು ತಗೊಂಡು ರೈತನ ಹೆಂಡತಿ ದುಡ್ಡು ಮಾಡತಾಳ. ವ್ಯಾಪಾರಸ್ಥ ಇದ್ದ ಸಾಮಾನು ಬಚ್ಚಿಟ್ಟು ಬೆಲೆ ಏರಿಸಿ ಒಂದಕ್ಕೆರಡು ಲಾಭ ಮಾಡಿಕೊಂಡು ದುಡ್ಡು ಮಾಡತಾನ. ನಮ್ಮಂಥ ನೌಕರದಾರರ ಜೀವನ ಸಾಗೋದೆ ದುಸ್ತರ. ಅವಶ್ಯಕ ಎಲ್ಲಾ ಸಾಮಾನಿನ ಬೆಲೆ ಆಕಾಶಕ್ಕೆ ಏರಿದರೂ ಸಂಬಳ ಆ ಮಾನದಿಂದೇನೂ ಏರುವದಿಲ್ಲ. ಈಗ ಬರುವ ಸಂಬಳದಿಂದ ಮೊದಲಿನ ಕಾಲು ಭಾಗದಷ್ಟೂ ಸರಕುಗಳು ಬರುವದಿಲ್ಲ. ಇದರಿಂದ ಸಂಸಾರ ಸಾಗಿಸಿಕೊಂಡು ಹೋಗುವದೇ ದುಸ್ತರ ಆಗಿ ಕೂತಾಗ ಮೊದಲಿನ ಎರಡು ಪಟ್ಟು ಏರಿದ ದರಕ್ಕೆ ತಿಕೀಟು ಕೊಂಡು ಪ್ರವಾಸ ಮಾಡುವದು ಸಾಧ್ಯ ಆಗುವದಿಲ್ಲ. ಬೆಲೆ ಏರಿದ ಮಾನದಿಂದ ಸಂಬಳ ಏರಿಸದೆ ಸರಕಾರ ನಮಗೆ ಸಲ್ಲತಕ್ಕ ಹಣ ಕೊಡದೆ ಉಳಿಸಿಕೊಂಡಿದೆ. ನಾವು ರೇಲ್ವೆ ತಿಕೀಟು ಕೊಳ್ಳದೆ ಪ್ರವಾಸಮಾಡಿ ಸರಕಾ-ರಕ್ಕೆ ಸಲ್ಲಬೇಕಾದ ಹಣ ಸಲ್ಲಿಸಲು ತಪ್ಪುವೆವು. ಇದರಲ್ಲಿ ರಾಷ್ಟ್ರೀಯ ಮೋಸವೆಲ್ಲಿಂದ ಬಂತು?" ಎಂದು ನುಡಿದು ನಕ್ಕು ಬಾಯಿಗೆ ತಂಬಾಕಿನ ಪುಡಿ ಹಾಕಿದ. ಅವನ ಬಾಯಿಗೆ ಬೀಗ ಬಿದ್ದದ್ದು ನೋಡಿ ನನಗೆ ಅವನ ಭಾಷಣ ಕೇಳುವದು ಕೆಲ ಮಿನಿಟುಗಳ ವರೆಗೆ ತಪ್ಪಿತೆಂದು ಸಮಾಧಾನವೆನಿಸಿತು. ಅಷ್ಟರಲ್ಲಿ ಗಾಡಿಬಿಟ್ಟಿತು. ನಾಲ್ಕೆಂಟು ಜನ ಗಾಡಿಯಲ್ಲಿ ನುಗ್ಗಿ ಬಂದದ್ದರಿಂದ ಒಳಗೆ ಉಸುರಾಡಿಸಲು ಸಹ ಸ್ಥಳಾವಕಾಶವಿಲ್ಲದೆ ನಿಂತ ಜನರಿಗೂ ಅವರಿಗೂ ಬಾಯಿಗೆ ಬಾಯಿ, ಹತ್ತಿ, ಕೈಗೆ ಕೈಹತ್ತಿದಾಗ ಯಾರೋ ಸರಪಳಿ ಜಗ್ಗಿ ಗಾಡಿ ನಿಲ್ಲಿಸಿದರು. ಟ. ಸಿ. ಬಂದು ಸಮಾಚಾರ ಕೇಳಿದ. ತಿಕೀಟು ಚಕ್ಕಮಾಡಿ ಕೆಲವರನ್ನು ಕೆಳಗಿಳಿಸತೊಡಗಿದ. ನಮ್ಮ ಸಹಪ್ರವಾಸಿ ತಂಬಾಕು ಉಗುಳಿ "ಈ ಭಾರೀ ಗದ್ದಲದಲ್ಲಿ ಸಾಕಾಗಿಹೋಗಿದೆ. ೧ ನೇ ವರ್ಗದ ಡಬ್ಬಿಗೆ ಹೋಗಿ ಬಿಡುವೆ" ಎಂದು ಹೇಳಿ ಗಾಡಿಯಿಂದ ಇಳಿದುಹೋದನು. ಅಂತೂ ಗಾಡಿಯಲ್ಲಿ ಗದ್ದಲ ಸ್ವಲ್ಪ ಕಡಿಮೆಯಾಗಿ ಉಸಿ-ರಾಡಿಸಲು ಸಾಕಷ್ಟು ಗಾಳಿ ಸಿಗುವಂತಾಯಿತು. ಆದರೆ ಗಾಡಿ ಸೀಟಿ ಹೊಡೆದ ನಂತರ ಕೆಳಗಿಳಿದವರಲ್ಲಿ ಕೆಲವರು ಪುನಃ ಗಾಡಿಯಲ್ಲಿ ಹತ್ತಿದರು. ತಿಕೀಟ ಇಲ್ಲದ ಈ ಜನರು ೨ ನೇ ವರ್ಗದ ಡಬ್ಬಿಯಲ್ಲಿ ಪುನಃ ಪ್ರವೇಶಿಸಿದ್ದನ್ನು ಕಂಡು ಓರ್ವನು ಪುನಃ ಸರಪಳಿ ಜಗ್ಗಿದ. ಗಾಡಿ ನಿಂತಿತು. ಪುನಃ ಟ. ಸಿ. ಉದಯನಾದ. ಸರಪಳಿ ಜಗ್ಗಿದ ಕಾರಣ ಕೇಳಿದ. ತಿಕೀಟ ಇಲ್ಲದ ಪ್ರವಾಸಿಕರನ್ನು ಗಾಡಿಯಿಂದ ಇಳಿಸಿರಿ ಎಂದು ಪ್ರವಾಸಿಕರು ಕೂಗಿದರು. ಟ. ಸಿ. ಮುಗುಳುನಗೆ ನಕ್ಕು "ಸ್ವಾಮಿ, ಹಬ್ಬಕ್ಕೆ ಹೊರಟಜನ, ಪಾಪ. ಅವರಿಗೆ ಈ ಗಾಡಿ ತಪ್ಪಿದರೆ ಆರತಿ ವೇಳೆಗೆ ಊರು ಮುಟ್ಟುವದಾಗದು. ಅಲ್ಲಿ ಅವರ ಮನೆಯವರು ಇವರಿಗಾಗಿ ದಾರಿ ಕಾಯ್ದು ನಿರಾಶರಾಗುವರು. ಸ್ವಲ್ಪ ಸರಿಪಡಿಸಿಕೊಂಡು ಅವರಿಗೂ ಪ್ರವಾಸ ಮಾಡಲು ಅನುವು ಮಾಡಿ ಕೊಡಿ." ಎಂದು ಹೇಳಿದ. ಅವನು ಯಾರನ್ನೂ ಇಳಿಸುವ ಲಕ್ಷಣ ಕಾಣಲಿಲ್ಲ. ನಾನು ಅವನ ಈ ವರ್ತನವನ್ನು ಪ್ರತಿಭಟಿಸಿ ಆಸನದಿಂದ ಎದ್ದು ಗಾಡಿಯಿಂದ ಇಳಿದುಬಿಟ್ಟೆ. ಟ. ಸಿ. ನನ್ನ ನೆಹರೂ ಶರ್ಟ, ಜಾಕೆಟ್, ಗಾಂಧೀ ಟೋಪಿ, ಕೈಯಲ್ಲಿ ದೇ. ಭ. ರಿಗೊಪ್ಪುವ ಕೈಚೀಲ ನೋಡಿ ಎಂ. ಪಿ. ಎಂ. ಎಲ್. ಎ. ಜಾತಿಗೆ ಸೇರಿದ ಅಸಾಮಿ ಇರಬಹುದು ಎಂದು ಭಾವಿಸಿದನೋ ಏನೋ. "ಸರ್ ನೀವು ೧ ನೇ ವರ್ಗದಲ್ಲಿ ಕೂಡ್ರಬಹುದು. ಅಲ್ಲಿ ಗದ್ದಲವಿಲ್ಲ" ಎಂದು ಹೇಳಿದ. ೧ನೇ ವರ್ಗದ

ಡಬ್ಬಿಯ ಕಿಡಿಕಿಯಿಂದ ನಮ್ಮ ಪೂರ್ವಪರಿಚಿತ ಸಹಪ್ರವಾಸಿ ತಂಬಾಕು ಉಗುಳಿ "ಇಲ್ಲೇ ಬರ್ರಿ ರಾಯರೇ," ಎಂದು ಕೈಮಾಡಿ ಕರೆದ.

"ಆಗಲಿ. ಸುಖಪ್ರವಾಸವೆಂದು ವಾರ ಪತ್ರಿಕೆಯಲ್ಲಿ ಪ್ರಕಟವಾದ ಭವಿಷ್ಯ ಸರಿ ಹೋಯಿತೆಂ''ದು-೧ನೇ ವರ್ಗದ ಡಬ್ಬಿಯಲ್ಲಿ ಪ್ರವೇಶ ಮಾಡಿ ಸುಖಾಸೀನನಾದೆ.

"ಮಿಸ್ಟರ ತೋಳ. ನಾಲ್ಕು ಜನ ಕೂಡಿತಲ್ಲ. ಇನ್ನು ನಮ್ಮ ಇಸ್ಪೇಟನಾಟ ಪ್ರಾರಂಭಿಸಲು ತೊಂದರೆ ಇಲ್ಲ" ಎಂದು ಹಾಸಿಗೆಯ ಮೇಲೆ ಒರಗಿಕೊಂಡೇ ಓರ್ವ ಪ್ರವಾಸಿ ನನ್ನ ಸಹಪ್ರವಾಸಿಯನ್ನುದ್ದೇಶಿಸಿ ಮಾತನಾಡಿದ. ಅದಕ್ಕೆ ಉತ್ತರರೂಪವಾಗಿ ಶ್ರೀ ತೋಳರು ನನ್ನನ್ನುದ್ದೇಶಿಸಿ ರಮಿ ಆಟದಲ್ಲಿ ನಿಮಗೆ ಗತಿ ಇರಬಹುದು. ನೀವು ಇಲ್ಲಿಗೆ ಬಂದದ್ದು ಒಂದು ರೀತಿ ನೆಟ್ಟಗೇ ಆಯಿತು" ಎಂದು ಹಲ್ಲು ಕಿರಿದ.

"ಇಸ್ಪೇಟ ಆಟವೆಂದರೆ ನನಗೆ ತಲೆಶೂಲಿ" ಎಂದು ನಾನು ಉತ್ತರ ಕೊಟ್ಟೆ.

ಶ್ರೀ ತೋಳರು ಆಶ್ಚರ್ಯದಿಂದ ನನ್ನ ಮುಖ ನೋಡಿದರು.

"ನಿಮ್ಮ ಈ ಗಾಂಧೀಟೊಪ್ಪಿಗೆ ನೋಡಿ ಪಕ್ಕಾ ರಮೀ ಆಟದ ಆಸಾಮಿ ಎಂದು ಕರೆದೆ. ಫುಕ್ಕಟ ಆಟ ಆದರೆ ನಿಮ್ಮಂತೆ ನನಗೂ ತಲೆಬೇಸರ. ಇಲ್ಲಿ ಫುಕ್ಕಟ ಆಟದ ಮಾತೇ ಇಲ್ಲ. ಆಣೆಗೆ ಫಾಯಿಂಟ ಸ್ಟೇಕ. [ಒಪ್ಪಿಗೆ ಹೌದಲ್ಲೋ" ಎಂದು ಕಿಸೆಯಲ್ಲಿಯ ಇಸ್ಪೇಟ ಪ್ಯಾಕ ಹೊರಗೆ ತೆಗೆದರು.

"ಜೂಜಾಟ ನನಗೆ ಸೇರುವದಿಲ್ಲ. ವ್ಯರ್ಥ ಕಾಲ ಕಳೆಯುವ ಈ ಇಸ್ಪೇಟನಾಟ ಬಂದಾಗದೆ ನಮ್ಮ ಸಮಾಜದ ಸ್ಥಿತಿ ಸುಧಾರಿಸುವದಿಲ್ಲವೆಂದು ಪ್ರಚಾರ ಮಾಡುವವರಲ್ಲಿ ನಾನೊಬ್ಬ. ನಾನು ಆಡಲಾರೆ. ಕ್ಷಮಿಸಿ'' ಎಂದು ಹೇಳಿದೆ.

"ಕೇಳಿದಿರೇನ್ರೀ ಲಕ್ಷ್ಮೀಕಾಂತ. ಈ ದೇ. ಭ. ರ ಮುಕ್ತಾಫಲ. ಜೂಜಾಟ ಇವರಿಗೆ ಸೇರುವದಿಲ್ಲವಂತೆ! ಅಲ್ರೀ ರಾಯರೆ, ಜಗತ್ತಿನಲ್ಲಿ ನಾವು ಹುಟ್ಟಿದ್ದೇ ಒಂದು ಜೂಜಾಟವಾಗಿರುವಾಗ ಜೂಜಾಟ ಸೇರುವದಿಲ್ಲ ಅಂದರೆ ಜೀವನ ಸಾಗಿಸುವದಾದರೂ ಹ್ಯಾಂಗ ಅಂತೀನು. ದೊಡ್ಡ ನೌಕರಿ ಸಿಗುವದೆಂಬ ಆಸೆಯಿಂದ ಶಿಕ್ಷಣ ಪಡೆದಿರಿ. ಶಿಕ್ಷಣ ಈ ದೃಷ್ಟಿಯಿಂದ ಒಂದು ಜೂಜಾಟವೇ ಅಲ್ಲ? ಸಂಸಾರಸುಖ ಸಿಗುವದೆಂದು ಲಗ್ನ ಆಗುವಿರಿ. ಅದೂ ಒಂದು ಜೂಜಾಟವೇ ಸರಿ. ಎಂ. ಎಲ್. ಎ., ಉಪಮಂತ್ರಿ, ಮಂತ್ರಿ, ಕನಿಷ್ಠ. ಕಾಂಗ್ರೆಸ ಅಧ್ಯಕ್ಷ ಅದೂ ಇಲ್ಲದಿದ್ದರೆ ಒಂದೆರಡು ಸರಕಾರೀ ಸಮಿತಿಸದಸ್ಯತ್ವ ಸಿಗಬಹುದೆಂದು ದೇ. ಭ. ನ ಸೋಗು ಹಾಕಿರುವಿರಿ. ಅದೂ ಒಂದು ಜೂಜಾಟ. ಈಗ ಭಾಷಣಕಾರರಾಗಿ ಹೊರಟಿರುವಿರಿ. ಜನ ಭಾಷಣ ಕೇಳಿ ಕೇಕೆ ಹೊಡೆದು ಚಪ್ಪಾಳಿ ಇಕ್ಕಬಹುದೆಂಬ ನಿರೀಕ್ಷೆಯನ್ನಿಟ್ಟುಕೊಂಡಿರಲು ಸಾಕು. ಭಾಷಣಕ್ಕೆ ಹೊರಟದ್ದು ಒಂದು ಜೂಜಾಟ. ಈ ಜಗತ್ತಿನಲ್ಲಿ ನಾವು ಮಾಡುತ್ತಿರುವದೆಲ್ಲ ಏನಾದರೊಂದನ್ನು ಸಾಧಿಸುವ ಆಸೆಯಿಂದ. ಈ ಕಾರಣದಿಂದ ನಮ್ಮ ವ್ಯವಹಾರವೆಲ್ಲ ಜೂಜಾಟದ ಸ್ವರೂಪದ್ದೆ ಅಲ್ಲವೇ? ಹೀಗಿರುವಾಗ ಸ್ಟೇಕ ಹಚ್ಚಿ ರಮಿ ಆಡುವದೊಂದೇ ಕೇಡು ಎಂದು ಭಾವಿಸುವದು ವಿಚಿತ್ರವಾಗಿ ತೋರುವದು" ಎಂದು ಶ್ರೀ ತೋಳರು ಚಿಕ್ಕ ಭಾಷಣ ಬಿಗಿದು ಎಲೆ ಟಿಪಾಯಿಸತೊಡಗಿದರು.

ಗಾಡಿ ವೇಗದಿಂದ ಸಾಗಿತ್ತು. ಧಡಧಡಲ್, ಖಟಖಟಲ್ ಎಂದು ಶಬ್ದ ಒಂದೇ ಸವನೆ ನನ್ನ ಕಿವಿಯಲ್ಲಿ ಜೀವನ ಜೂಜಾಟ, ಜೀವನ ಜೂಜಾಟ ಅದರಲ್ಲಿ ಯಶ ದೇವರಾಟ ದೇವರ ಆಟ ಎಂದು ಹೇಳಿದಂತೆನಿಸುತ್ತಿತ್ತು.

ಶ್ರೀ ತೋಳರು ಎಲೆ ಹಂಚಿ ನನ್ನ ಮುಂದೆ ಬಂದು ಶಾಂತಿ ಹೇಳಿ "ರಾಯರೇ, ತಗೋರಿ. ಲಕ್ಷ್ಮೀ ನಿಮ್ಮ ಮುಂದೆ ಬಂದು ಕೈಕೊಟ್ಟು ಸ್ವೀಕರಿಸು ಎಂದು ಹೇಳುವಾಗ ಕೈಚಲ್ಲಿ ಕೂಡ್ರಬಾರದು" ಎಂದು ಹೇಳಿದರು.

"ಈ ಇಸ್ಪೇಟನ ಎಲೆ ಲಕ್ಷ್ಮಿ ಎಂದು ನೀವು ಭಾವಿಸಬಹುದು. ನಾನು ಹಾಗೆ ಭಾವಿಸುವದಿಲ್ಲ. ಕ್ಷಮಿಸಿ ನಾನು ಆಡಲಾರೆ" ಎಂದು ಹೇಳಿದೆ.

"ಅಲ್ರೀ ರಾಯರೇ, ಜೂಜಾಟ, ಓಸಿ. ರೇಸ, ಸಟ್ಟಾ, ಇವು ಲಕ್ಷ್ಮೀಕೃಪೆಯ ನಾಲ್ಕು ರಾಜಮಾರ್ಗಗಳೆಂಬುದನ್ನೇ ಅರಿಯದ ನೀವು ದೇ. ಭ. ಜಾತಿಗೆ ಕಲಂಕ ತರುವವರು. ನಾನು ಜೀವನ ಸಾಗಿಸಲು ಮುನಸಿಪಾಲ್ಟಿ ಕಾರಕೂನಕಿಯನ್ನೇ ಅವಲಂಬಿಸಿದ್ದರೆ ನನ್ನ ಕೈಯಲ್ಲಿ ಯಾರೂ ಬಿಡಿ ಕಾಸು ಕೊಡುತ್ತಿರಲಿಲ್ಲ. ಲಕ್ಷ್ಮೀಪ್ರಸಾದವೆಂದು ಈ ಇಸ್ಪೇಟ ಪಾನು ಹಿಡಿದಂದಿನಿಂದ ನನ್ನ ಬಡತನ ಹಿಂಗಿದೆ. ಆಟಕ್ಕೆ ಕೂತರೆ ನೂರಾರು ರೂಪಾಯಿ ಕಿಸೆಗೆ ಬೀಳುವವು. ತಿಂಗಳ ವರೆಗೆ ಶ್ರಮಪಟ್ಟು ದುಡಿದರೂ ಸಿಗದಷ್ಟು ಹಣ ತಾಸೆರಡು ತಾಸಿನಲ್ಲಿ ಸಿಗುವಂತೆ ಮಾಡುವ ಈ ಎಲಿ ಲಕ್ಷ್ಮೀದೇವಿ ಎಂದೇ ನಾನು ನಂಬಿರುವೆ." ಎಂದು ಶ್ರೀ ತೋಳರು ಹೇಳಿ ಆಟದಲ್ಲಿ ಭಾಗವಹಿಸಲು ಪುನಃ ಬಿನ್ನವಿಸಿದರು. ಅವನ ಜೊತೆಗಿದ್ದ ಲಕ್ಷ್ಮೀಕಾಂತ ಹಾಗೂ ಇನ್ನೊಬ್ಬ ಪಾರ್ಸೀ ಗೃಹಸ್ಥರೂ ಶ್ರೀ ತೋಳರ ಬಿನ್ನಹಕ್ಕೆ ಬೆಂಬಲ ನೀಡಿದರು.

ನನಗೆ ಇಂದು ಈ ಜೂಜಾಟ ಮನೋವೃತ್ತಿಯನ್ನು ಖಂಡಿಸಿ ಅವರನ್ನು ಸರಿಯಾದ ದಾರಿಗೆ ಹಚ್ಚಬೇಕೆಂಬ ಹುಮ್ಮಸ ಹುಟ್ಟಿತು. ನನ್ನ ಮುಂದೆ ಹಾಕಿದ್ದ ಎಲೆಗಳನ್ನು ಎತ್ತಿ ಅವರ ಕಡೆಗೆ ಬೀಸಾಡಿ "ನೋಡ್ರಿ. ಈ ಜೂಜಾಟಪ್ರವೃತ್ತಿ ತರವಲ್ಲ. ಇದು ಸಮಾಜಕಂಟಕ, ಕುಟುಂಬ ಘಾತಕಪ್ರವೃತ್ತಿ" ಎಂದು ಗಡಸು ಧ್ವನಿಯಲ್ಲಿ ಹೇಳಿದೆ.

ಶ್ರೀ ತೋಳರು ಗಹಗಹಿಸಿ ನಕ್ಕು "ಕಿಸೆಯಲ್ಲಿ ರೊಕ್ಕ ಇಲ್ಲ ಎಂದು ಸರಳ ಹೇಳಿಬಿಡಬಾರದೆ? ತನಗೆ ಸಾಧಿಸಲಾರದ್ದು ಕೆಡಕು ಎಂದು ಹೇಳುವ ಬೂಟಾಟಿಕೆ ಮಾತು ಬಿಡಿರಿ. ಜೂಜಾಟಪ್ರವೃತ್ತಿ ಸಮಾಜ ಘಾತಕ ಅಂತೆ ಹೇಳುವ ಬುದ್ಧಿವಂತಿಕೆ ಸಾಕುಮಾಡಿರಿ. ನಮ್ಮ ಲಕ್ಷ್ಮೀಕಾಂತರು ನೀವು ನನ್ನ ಪರಿಚಿತರೆಂದು ಈ ನಿಮ್ಮ ಮಾತು ಸಹಿಸಿಕೊಂಡರು" ಎಂದು ಹೇಳಿದರು.

"ಅವರಿಗೆ ಸಹಿಸಲಸಾಧ್ಯವಾದ ಯಾವ ಮಾತನ್ನಾಡಿದೆ ನಾನು? ಪ್ರಾಮಾಣಿಕ ರೀತಿಯಲ್ಲಿ ಪರಿಶ್ರಮದಿಂದ ದುಡ್ಡು ಗಳಿಸುವದನ್ನು ಬಿಟ್ಟು ಜೂಜಾಟ, ವಂಚನೆ, ಮೋಸ ಈ ವಾಮಮಾರ್ಗದಿಂದ ದುಡ್ಡು ಗಳಿಸುವದು ಸಮಾಜಕಂಟಕತನ ಎಂದರೆ ಅವರೇಕೆ ಸಿಟ್ಟಿಗೆ ಬರಬೇಕು?" ಎಂದು ಕೇಳಿದೆ.

ಶ್ರೀ ತೋಳರಿಗೆ ಸಿಟ್ಟು ಬಂದಿತ್ತು. "ಜಗತ್ತಿನ ವ್ಯವಹಾರಜ್ಞಾನವಿಲ್ಲದೆ ಮಾತಾಡುವ ನಿಮಗೆ ಏನು ಹೇಳಬೇಕು! ಪ್ರಾಮಾಣಿಕ ದುಡಿಮೆಯಿಂದ ಜೀವನ ಸಾಗಿಸುವಷ್ಟು ಗಳಿಸುವದೂ ಕಷ್ಟ. ಲಕ್ಷಾಧೀಶ ಕೋಟ್ಯಧೀಶನಾಗುವದು ದುಡಿಮೆಯಿಂದ ಅಸಾಧ್ಯ. ಸಟ್ಟಾ, ಲಾಟರಿ, ರೇಸ, ಜೂಜಾಟ, ಕಳ್ಳಪೇಟೆ, ಇವುಗಳಿಂದ ಮಾತ್ರ ಸಾಧ್ಯ. ಮೊನ್ನೆ ಒಂದೇ ರಾತ್ರಿ ಗೋವೆಗೆ ಅಕ್ಕಿ ಸಾಗಿಸಿ ಲಕ್ಷ್ಮೀಕಾಂತರು ಮೂರು ಸಾವಿರ ರೂ. ಗಳಿಸಿದರು. ಒಂದೇ ದಿನ ರೇಸಿನಲ್ಲಿ ೩೦ ಸಾವಿರ ದೊರಕಿಸಿದರು. ಓ. ಸಿ. ಆಟದಲ್ಲಿ ಅವರಿಗೆ ನಿತ್ಯ ಸಾವಿರ ರೂ. ಕಮೀಶನ್ ಬರುವದು. ಹೀಗೆ ಬಹುಮುಖದಿಂದ ಅನಾಯಾಸವಾಗಿ ಹಣ ಬರುವದರಿಂದಲೇ ನಾವು ಅವರಿಗೆ ಲಕ್ಷ್ಮೀಕಾಂತ ಎಂದು ಕರೆಯುವೆವು. ಇವರ ಮಾವ ಕನಕಪ್ಪಸೆಟ್ಟಿಯ ಕತೆ ಕೇಳಿದರೆ ನಿಮಗೆ ದಂಗುಬಡಿಯಬಹುದು. ಯುದ್ಧಕಾಲದಲ್ಲಿ ಕಳ್ಳಪೇಟೆಯಿಂದ ಮೂರೇ ವರ್ಷದಲ್ಲಿ ೩೦ ಲಕ್ಷ ರೂ. ಗಳಿಸಿದರವರು. ನಾಳೆ ನೀವೇ ಕಣ್ಣಾರೆ ಅವರು ನಡೆಸುವ ಲಕ್ಷ್ಮೀ ಪೂಜೆಯ ವೈಭವವನ್ನು ನೋಡಿ ದಂಗುಬಡಬಹುದು. ದುಡ್ಡು ಗಳಿಸಿ ಸಮಾಜಕ್ಕೆ ಅಪಾರವಾದ ಸೇವೆ ಸಲ್ಲಿಸಿ ಸರಕಾರದಿಂದ ಧರ್ಮರತ್ನಾಕರ, ಸಮಾಜದ ರಕ್ಷಾಮಣಿ ಮೊದಲಾದ ಬಿರುದು ಪಡೆದ ಇವರಿಗೆಲ್ಲ ಸಮಾಜ ಕಂಟಕರೆಂದು ಸಹಜವಾಗಿಯೇ ನೀವು ಹೇಳಿಬಿಟ್ಟಿರಿ. ನಿಮಗೇನು ಹೇಳಬೇಕು ಎನ್ನುತ್ತ ಅಡಿಕೆ ಕತ್ತರಿಸತೊಡಗಿದ.

"ಲಕ್ಷ್ಮೀಕಾಂತರಾಗಲಿ ಅವರ ಮಾವ ಕನಕಪ್ಪ ಸೆಟ್ಟರಾಗಲಿ ಬಡವರ ಶೋಷಣೆಯಿಂದ ದುಡ್ಡು ಗಳಿಸಿದ್ದು ದೊಡ್ಡ ಅನ್ಯಾಯ. ಇಂಥ ಪಾಪದ ಮೂಲವಿದ್ದ ದುಡ್ಡಿನಿಂದ ಅವರಿಗಾಗಲಿ ಸಮಾಜಕ್ಕಾಗಲಿ ಸುಖ ನೆಮ್ಮದಿ ಶಾಂತಿ ಲಭಿಸವು. ಈ ಧನಸಂಗ್ರಹವು ಸಾಮಾಜಿಕ ಅಸ್ವಾಸ್ಥ್ಯಕ್ಕೆ ಪುಟ ಕೊಟ್ಟು ಕ್ರಾಂತಿಗೆ ದಾರಿಮಾಡಿಕೊಡುವದು" ಎಂದು ಹೇಳಿದಾಗ ಶ್ರೀ ತೋಳರು "ಖಾದೀವೇಷಧರಿಸಿದ ಕಮ್ಯುನಿಸ್ಟರಿವರು" ಎಂದು ಉದ್ಗಾರ ತೆಗೆದು ಮೌನ ಧರಿಸಿದರು.

ನಿಲ್ದಾಣದಲ್ಲಿ ಗಾಡಿ ಬಂದು ನಿಂತಕೂಡಲೇ ಇರಿವೆ ಹುತ್ತಿನಿಂದ ಹೊರಬೀಳುವ ಇರಿವೆಗಳಂತೆ ಜನರು ೩ ನೇ ವರ್ಗದ ಡಬ್ಬಿಗಳ ಬಾಗಿಲಿನಿಂದ ಇಳಿಯತೊಡಗಿದರು. ಶ್ರೀ ತೋಳರು ಗಾಡಿ ನಿಂತ ಕೂಡಲೆ ಕೆಳಗಿಳಿದರು. ಖಾದೀವೇಷಧಾರಿ ದೊಡ್ಡಹೊಟ್ಟೆಯ ಗೃಹಸ್ಥರೊಬ್ಬರು ಅವರನ್ನು ಸ್ವಾಗತಿಸಿ ಲಕ್ಷ್ಮೀಕಾಂತನ ವಂದನೆ ಸ್ವೀಕರಿಸಿ ಮುಂದೆ ಸಾಗಿದರು. ಅವರ ಗುಮಾಸ್ತನೊಬ್ಬ ಡಬ್ಬಿಯಲ್ಲಿ ಹತ್ತಿ ಲಕ್ಷ್ಮೀಕಾಂತನ ಸಾಮಾನು ಸಾಗಿಸತೊಡಗಿದನು. ನಾನು ಡಬ್ಬಿಯಿಂದ ಇಳಿಯುತ್ತಲೇ ಟಿ.ಸಿ. ಬಂದು ಟಿಕೆಟ ತೋರಿಸಿ ಅಂದ. ೨ ನೇ ವರ್ಗದ ಟಿಕೆಟು ತೋರಿಸಿದೆ. ೧ನೇ ವರ್ಗದಲ್ಲಿ ಪ್ರವಾಸಮಾಡಿದ್ದೀರಿ. ಹೆಚ್ಚಿನ ಹಣ ಪಾವತಿ ಮಾಡಿರಿ ಎಂದು ಟಿ. ಸಿ. ಒರಟಾಗಿಯೇ ಹೇಳಿದ. "ನೀವೇ ೧ನೇ ವರ್ಗದಲ್ಲಿ ಕೂಡ್ರಲು ನಾನು ಹೊರಟ ನಿಲ್ದಾಣದಲ್ಲಿ ಹೇಳಿದ್ದರಿಂದ ನಾನು ೧ನೇ ವರ್ಗದ ಡಬ್ಬಿಯಲ್ಲಿ ಪ್ರವಾಸಮಾಡಿದೆ" ಎಂದು ಹೇಳಿದಾಗ ನಿಮಗೆ ಸುಖಪ್ರವಾಸದ ಅಗತ್ಯವೆಂದು ಹೇಳಿದಿರಿ. ಅದಕ್ಕಾಗಿ ಅವಶ್ಯಕವಿದ್ದ ಬೆಲೆಯನ್ನು ತೆತ್ತುವದು ನಿಮ್ಮ ಹೊಣೆ ಎಂದು ಅವನು ನುಡಿದು ಪಾವತಿ ಬರೆದ. ೫ ರೂ. ಚಿಲ್ಲರೆ ಅವನ ಕೈಗಿಟ್ಟು ನಿಲ್ದಾಣದ ಹೊರಗೆ ಬಂದಾಗ ವಾಚನಾಲಯದ ಕಾರ್ಯದರ್ಶಿ ನನ್ನನ್ನು ಸ್ವಾಗತಿಸಿದ.

ವಾಚನಾಲಯದ ಅಧ್ಯಕ್ಷರು ತಮ್ಮ ಅಳಿಯಂದಿರು ಬಂದದ್ದರಿಂದ ಕಾರಿನಲ್ಲಿ ಮನೆಗೆ ಹೋದರು. ನಿಮ್ಮನ್ನು ಅವರ ಮನೆಗೇ ಕರೆದುಕೊಂಡು ಬರಲು ಹೇಳಿದ್ದಾರೆ. ಜಟಕಾ ಗೊತ್ತುಮಾಡುವೆ. ಅಲ್ಲಿಗೆ ಹೊರಡೋಣ ಎಂದು ಹೇಳಿದ.

ಜಟಕಾ ಇಳಿದು ವಿಶಾಲವಾದ ಭವನದ ಅಟ್ಟವನ್ನು ಹತ್ತಿ ನನಗಾಗಿ ಗೊತ್ತುಪಡಿಸಿದ ಕೋಣೆಯಲ್ಲಿ ಹೋಗಿ ವಿಶ್ರಮಿಸುವಾಗ ಶ್ರೀ ತೋಳರು ನನ್ನನ್ನು ನೋಡಿ "ನೀವು ಈಗ ಕನಕಪ್ಪಸೆಟ್ಟರ ಅತಿಥಿಗಳು!" ಎಂದು ಹಲ್ಲು ಕಿರಿದನು.

ಕನಕಪ್ಪಸೆಟ್ಟಿಯ ಮನೆಗಿಂತ ಧರ್ಮಶಾಲೆ ನನಗೆ ಹೆಚ್ಚು ಸುಖಪ್ರದವೆನಿಸಿತು ಆದರೆ ಇಲ್ಲಿ ಬಂದು ಸಿಕ್ಕು ಬಿದ್ದ ನಾನು ನಿರುಪಾಯನಾಗಿದ್ದೆ. ಊರಲ್ಲಿ ಅಡ್ಡಾಡಿಕೊಂಡು ಬರಲು ಹೊರಟಾಗ ಕನಕಪ್ಪ ಸೆಟ್ಟರ ಗುಮಾಸ್ತ ನನ್ನ ಜೊತೆಗೆ ಬಂದ. ಊರಲ್ಲಿ





ಎಲ್ಲಿ ನೋಡಿದಲ್ಲಿ ಲಕ್ಷ್ಮೀಪೂಜೆಯು ಸಿದ್ಧತೆ ಸಡಗರದಿಂದ ನಡೆದದ್ದು ಕಣ್ಣಿಗೆ ಬಿತ್ತು.

"ಇಲ್ಲಿ ಲಕ್ಷ್ಮೀಪೂಜೆ ಭಾರೀ ದೊಡ್ಡ ಪ್ರಮಾಣದಲ್ಲಿ ನಡೆಯುವದು ರಾಯರೇ, ನಾಳಿನ ದಿನ ಈ ಪೇಟೆಯಲ್ಲಿ ವಿದ್ಯುದ್ದೀಪಗಳ ಬೆಳಕು ಕಣ್ಣು ಕುಕ್ಕಿಸುವದು. ಲಕ್ಷ್ಮೀಪೂಜೆಯು ವಾದ್ಯವೈಭವ, ಮದ್ದು ಸುಡುವ ಸ್ಪರ್ಧೆ, ದಕ್ಷಿಣೆಗಾಗಿ ಅಲೆಯುವ ಜನರ ಗದ್ದಲ, ಭಿಕ್ಷುಕರ ಆರ್ತನಾದ ಎಲ್ಲವೂ ಏಕಕಾಲಕ್ಕೆ ನೋಡಲು ಸಿಗುವವು" ಎಂದು ಗುಮಾಸ್ತ ಹೇಳಿದ. ಅವನ ಬಾಡಿದ ಮುಖ, ಸೇದಿದ ಕಣ್ಣು, ಅವನ ದೀನ ಸ್ಥಿತಿಯನ್ನು ಎತ್ತಿ ತೋರಿಸುತ್ತಿದ್ದವು. ಕನಕಪ್ಪಸೆಟ್ಟರು ಲಕ್ಷ್ಮೀಪೂಜೆಗಾಗಿ ಹಾಕಿದ ಮಂಟಪ ಇಷ್ಟು ಆಕರ್ಷಕವಾಗಿರುವಾಗ ಅವರ ಲಕ್ಷ್ಮೀಪೂಜೆಯ ಆಧಾರ ಸ್ತಂಭರಾದ ಗುಮಾಸ್ತರ ಸ್ಥಿತಿ ಇಷ್ಟು ಕಂಗಾಲವಾಗಿರುವದೆಂತು? ಎಂಬ ವಿಚಾರ ಸುಳಿಯಿತು. ಗುಮಾಸ್ತನಿಗೆ ನೇರವಾಗಿ ಕೇಳಿದೆ. ಅವನು ಕನಕಪ್ಪಸೆಟ್ಟಿಯು ಧನದ ಪೂಜಾರಿ. ಧನದರಾಶಿಯನ್ನು ಪೂಜಿಸುವವ. ಮಾನವೀಯ ದಯಾದಾಕ್ಷಿಣ್ಯ ಸಹಾನುಭೂತಿ ಗುಣಗಳ ಪರಿಚಯವಿಲ್ಲದವ. ಕಳ್ಳಪೇಟೆಯ ಕದೀಮ. ಬಡವರ ಶೋಷಣೆಯನ್ನು ದುಡ್ಡಿನ ಬಲದಿಂದ ನಿರಾತಂಕವಾಗಿ ನಡೆಸಿದ ಕದೀಮ ಎಂದು ಏನೇನೋ ಹೇಳಿದ.

ಅವನು ಕಳೆದೆರಡು ದಿನಗಳಿಂದ ಊಟವಿಲ್ಲದೆ ದುಡಿದು ನಿತ್ರಾಣನಾದದ್ದು ಕೇಳಿ ಅವನನ್ನು ಚಹದ ಅಂಗಡಿಗೆ ಕರೆದುಕೊಂಡು ಹೋಗಿ ನಿನಗಿಷ್ಟವಿದ್ದ ತಿನಿಸನ್ನು ನನ್ನ ವೆಚ್ಚದಿಂದ ತಿಂದು ದೀಪಾವಳಿ ಹಬ್ಬ ಮಾಡು ಎಂದು ಹೇಳಿದೆ. ಅವನು ಉಪಾಹಾರ ನಡೆಸಿದ್ದ. ಕನಕಪ್ಪಸೆಟ್ಟಿಯಂಥ ಧನಿಕರಿಗೆ ಬುದ್ಧಿ ಬರಬೇಕಾದರೆ ಕಾರ್ಮಿಕರೆಲ್ಲ ಸಂಘಟಿತರಾಗಬೇಕು ಎಂದು ಹೇಳುತ್ತಿದ್ದ. ಹಾಟೆಲ್ ಮಾಣಿ ಬಂದು ದೀಪಾವಳಿಯಲ್ಲಿ ನಿದ್ರೆ ನೀರಡಿಕೆ ಇಲ್ಲದೆ ದುಡಿವ ನಮಗೆ ಸಂಘಟನೆಯ ದಾರಿ ತೋರುವಿರಾ? ಎಂದು ಕೇಳಿದ. ಇಂದು ರಾತ್ರಿ ನನ್ನ ಭಾಷಣ ಕೇಳಲು ಬನ್ನಿರಿ. ಆಗ ದುಡ್ಡಿನ ಪೂಜೆಯ ಬದಲು ಧನೋತ್ಪಾದಕ ಶ್ರಮಿಕರ ಪೂಜೆಯೇ ನಿಜವಾದ ಲಕ್ಷ್ಮೀಪೂಜೆ ಎಂದು ಪ್ರತಿಪಾದಿಸುವೆ. ನಿಮ್ಮ ಹಕ್ಕುಗಳ ರಕ್ಷಣೆಗಾಗಿ ಸರಕಾರ ಮಾಡಿದ ಕಾಯದೆಗಳ ಪ್ರಯೋಜನ ಪಡೆಯುವ ಮಾರ್ಗದರ್ಶನ ಮಾಡುವೆ. ದೇಶದಲ್ಲಿಯ ಹಸಿವು, ಕೊರತೆ, ದೂರಾಗಿ ಶಾಂತಿ ಸುಖಸಮೃದ್ಧಿ ಬೆಳೆದು ಅಜ್ಞಾನದ ಕಗ್ಗತ್ತಲೆ ಹರಿದು ಜನರು ಮಾನವೀಯ ದೃಷ್ಟಿ ತಳೆಯುವದರಿಂದ ನಿಜವಾದ ದೀಪಾವಳಿಯನ್ನಾಚರಿಸಿದಂತಾಗುವದೆಂಬ ಅಂಶವನ್ನು ತಿಳಿಸಲಿರುವೆ ಎಂದು ಉತ್ಸಾಹದಿಂದ ಹೇಳಿದೆ. ಹಾಟೆಲ ಮಾಲಕನು ಜಿರುಗಣ್ಣಿನಿಂದ ನೋಡುತ್ತಿದ್ದ.

ಲಕ್ಷ್ಮೀಪೂಜೆಯ ನಂತರ ರಾತ್ರಿ ೧೦ ಗಂಟೆಗೆ ಸ್ಥಳೀಯ ಕಲಾವೃಂದದ ಪರವಾಗಿ ಅದರ ಅಧ್ಯಕ್ಷರಾದ ಕನಕಪ್ಪಸೆಟ್ಟರ ಮನೆಯಲ್ಲಿ ರಂಗಾಸಾನಿಯ ಗಾಯನದ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀ ತೋಳರು ಅದರಲ್ಲಿ ಪ್ರಮುಖ ವ್ಯಕ್ತಿಯಾಗಿ ವಿರಾಜಮಾನರಾಗಿದ್ದರು. ಭಾಷಣದ ಕಾರ್ಯಕ್ರಮದ ನಂತರ ಸಂಗೀತ ಜಲಸಾ ಕಾರ್ಯಕ್ರಮ ಇಡಲಾಗಿತ್ತು. ನನ್ನ ಭಾಷಣದ ಮೊದಲೇ ಸಂಗೀತ ಕಾರ್ಯಕ್ರಮವನ್ನಿಟ್ಟದ್ದು ನನ್ನ ಭಾಷಣ ಕೇಳಲು ಆತುರರಾಗಿ ಬಂದ ಕೆಲ ಕಾರ್ಮಿಕರನ್ನು ಬಿಟ್ಟರೆ ಯಾರಿಗೂ ಆಶ್ಚರ್ಯವೆನಿಸಲಿಲ್ಲ. ಕಾರ್ಯಕ್ರಮದಲ್ಲಿ ಬದಲಾವಣೆಯ ಕಾರಣ ನನಗೂ ತಿಳಿದಿರಲಿಲ್ಲ.

ಸಂಗೀತ ಜಲಸಾ ಕಾರ್ಯಕ್ರಮ ಒಂದು ಘಟ್ಟಕ್ಕೆ ಬಂದಿತು. ಆಗ ನನಗೆ ಒಂದು ಚೀಟಿಯನ್ನು ಗುಮಾಸ್ತ ತಂದುಕೊಟ್ಟ. ಜನರ ಆಗ್ರಹದಿಂದ ರಂಗಾಸಾನಿಯ ಜಲಸಾ ಕಾರ್ಯಕ್ರಮವನ್ನೇ ಬೆಳಗಿನ ೪ ಗಂಟೆಯ ವರೆಗೆ ಸಾಗಿಸುವದು ಅನಿವಾರ್ಯವಾಗಿದೆ. ಕಾರಣ ನಿಮ್ಮ ಭಾಷಣ ಕಾರ್ಯಕ್ರಮ ರದ್ದುಪಡಿಸಲಾಗಿದೆ. ನಿಮ್ಮ ಮುಂದಿನ ಕಾರ್ಯಕ್ರಮಗಳಿಗೆ ತೊಂದರೆಯಾಗಬಾರದೆಂದು ಅನಿಸುತ್ತಿದ್ದರೆ ಬೆಳಗಿನ ಗಾಡಿಗೆ ಪ್ರಯಾಣ ಬೆಳೆಸಲು ನಿರ್ಧರಿಸಿ ತಿಳಿಸಿದರೆ ಪ್ರಯಾಣದ ಏರ್ಪಾಟು ಮಾಡಲಾಗುವದು ಎಂದು ಅದರಲ್ಲಿ ಬರೆಯಲಾಗಿತ್ತು.

ನನ್ನ ಭಾಷಣ ಕೇಳಲು ಬಂದ ಜನರಿಗೆ ಈ ಸುದ್ದಿ ತಿಳಿಯಲು ಅವರು ಹತಾಶರಾದರು. ಈಗಿಂದೀಗ ಕಾರ್ಮಿಕರ ವಸಾಹತಿನಲ್ಲಿ ನಿಮ್ಮ ಭಾಷಣ ಏರ್ಪಡಿಸುವದಾಗಿ ಅವರಲ್ಲಿ ಕೆಲವರು ಹೇಳಿ ತಮ್ಮೊಡನೆ ಕೂಡಲೇ ಹೊರಡಲು ಆಗ್ರಹಪಡಿಸಿದರು.

ಕನಕಪ್ಪಸೆಟ್ಟರಿಗೆ ತಿಳಿಸುವುದೂ ಅನಗತ್ಯವೆಂದು ನಾನು ಆ ಜನರೊಂದಿಗೆ ಹೊರಟೆ. ಟಾಂಗಾ ತರಿಸುವ ವೇಳೆ ಇಲ್ಲವೆಂದು ನಡೆಯುತ್ತಲೆ ನಾವು ಸಾಗಿದೆವು.

ಕೂಲಿಕಾರರ ವಸಾಹತದ ದಾರಿ ಹಿಡಿದು ನಾನು ನನ್ನ ಭಾಷಣ ಏರ್ಪಡಿಸುವ ಧುರೀಣತ್ವ ವಹಿಸಿದ ಕೆಲವರು ಸಾಗಿದ್ದೆವು. ಅಲ್ಲಿ ಕಳ್ಳ ಭಟ್ಟಿ ಸರಾಯಿ ಹೊತ್ತು ನಮ್ಮ ಎದುರಿಗೆ ನಾಲ್ವರು ಬಂದರು. ಅವರಿಗೆ ನಮ್ಮನ್ನು ನೋಡಿ ಗುಪ್ತ ಪೋಲೀಸರು ತಮ್ಮನ್ನು ಹಿಡಿಯಲು ಬಂದವರೆಂದು ಅನಿಸಿತೋ ಏನೋ! ಮುಂದೆ ಬಂದರೆ ಜೋಕೆ ಎಂದು ಕೂಗಿದರು. ನಾವು ಅದನ್ನು ದುರ್ಲಕ್ಷಿಸಿ ಮುಂದೆ ನಡೆದವು. ಸುತ್ತಲಿಂದ ಕಲ್ಲುಗಳ ತೂರಾಟ ಪ್ರಾರಂಭವಾಯಿತು. ನಿಂತಲ್ಲಿ ದಿಕ್ಕು ಕಾಣದೆ ನಾನು ನಿಂತುಬಿಟ್ಟಿದ್ದೆ. ನನ್ನ ಜತೆಯಲ್ಲಿ ಬಂದವರು ಕಾಲಿಗೆ ಬುದ್ಧಿ ಹೇಳಿದ್ದರು. ನಾಲ್ವರು ಟೊಣಪರು ಬಂದು ನನ್ನನ್ನು ಮುತ್ತಿ ಮೈಮುರಿ ಥಳಿಸಿ ಬಂದ ದಾರಿಗೆ ಸುಂಕವಿಲ್ಲವೆಂದು ಹೋಗು ಎಂದು ಗದ್ದರಿಸಿದರು. ಅವರು ಹೇಳಿದ್ದೇ ತಡ. ಜೀವ ಉಳಿಸಿಬಿಟ್ಟರಲ್ಲ! ಇಷ್ಟೇ ಸಾಕು ಎಂದು ನಿಲ್ದಾಣದ ವರೆಗೆ ಕುಂಟುತ್ತ ಸಾಗಿದೆ.

ಗಾಡಿ ಬರಲು ಇನ್ನೂ ವೇಳೆ ಇತ್ತು. ಅಲ್ಲಿ ಕುಳಿತು ಪರಿಸ್ಥಿತಿ ಹೀಗೇಕಾಯಿತು? ಎಂದು ವಿಚಾರಮಾಡಿದೆ. ಗಾಡಿಯು ನಿಲ್ದಾಣದಲ್ಲಿ ಬರುತ್ತಲೆ ನಾನು ನೋಡಿದ ಹೊಟೇಲ್ ಮಾಲಕ ನನ್ನ ಹತ್ತರ ಬಂದು ನಮಸ್ಕರಿಸಿ "ಈ ತಿಕೀಟು ತಕ್ಕೊಳ್ಳಿರಿ. ಊರ ಮುಟ್ಟಿದ ಮೇಲೆ ಪತ್ರ ಹಾಕಿರಿ" ಎಂದು ಹೇಳಿ ಗಾಡಿಯಲ್ಲಿ ಕೂಡ್ರಿಸಲು ಮಾಣಿಗೆ ಹೇಳಿದ.

ಗಾಡಿ ಬಿಡುವಾಗ ಮಾಣಿ "ನಿಮ್ಮ ಭಾಷಣ ಚನ್ನಾಗಿ ನಡೆಯಿತಷ್ಟೆ! ಎಂದ.

"ಕಾರ್ಮಿಕರ ಸಂಘಟನೆ ಚನ್ನಾಗಿ ನಡೆದದ್ದು ಅನುಭವಕ್ಕೆ ಬಂತು" ಎಂದು ಹೇಳಿದೆ.

ಗಾಡಿ ಓಡುತ್ತಿತ್ತು. ಲಕ್ಷ್ಮೀಪೂಜೆಯ ವೈಭವದಲ್ಲಿ ಜನರ ಕಣ್ಣು ಕುರುಡಾಗಿರುವಾಗ ಅವರಿಗೆ ಮಾರ್ಗದರ್ಶನದಿಂದ ಪ್ರಯೋಜನವಿಲ್ಲ. ಕಾಲವು ಪಕ್ವವಾಗುವ ವರೆಗೆ ದಾರಿ ಕಾಯುವದೇ ಬುದ್ಧಿವಂತಿಕೆಯ ಲಕ್ಷಣ. ಶ್ರೀ ತೋಳರಂಥವರು ಇರುವ ವರೆಗೆ ಸಮಾಜದಲ್ಲಿ ಹೊಸ ವಿಚಾರಗಳ ಪ್ರಸಾರವೂ ಸಮಾಜಕಂಟಕ ಕೃತಿಎನಿಸುವಾಗ ತಾಳ್ಮೆ ವಹಿಸುವದೊಂದೇ ದಾರಿ ಎಂದು ವಿಚಾರಿಸುತ್ತಿರುವಾಗ ನಿದ್ರೆ ಹತ್ತಿತು.

---

# ಕನ್ನಡ ಚಿತ್ರನಿರ್ಮಾಪಕನ ಸಮಸ್ಯೆಗಳು

ಲೇಖಕರು: ಶ್ರೀ ಆರ್. ನಾಗೇಂದ್ರರಾವ

ಕನ್ನಡ ಚಲಚ್ಚಿತ್ರ ಉದ್ಯಮವು ಬೆಳೆಯುತ್ತಿರಬೇಕಾದ ಈ ಕಾಲದಲ್ಲಿ ಅದು ಅನೇಕ ತೊಂದರೆಗಳನ್ನೆದುರಿಸುತ್ತಿರುವದು ವಿಷಾದಕರವಾಗಿರುವದು. ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಉತ್ತಮ ಚಿತ್ರಮಂದಿರಗಳು ಕೂಡ ದೊರೆಯುತ್ತಿಲ್ಲ. ಕನ್ನಡಿಗರ ಉತ್ತೇಜನವೂ ಅಷ್ಟೊಂದಿರುವದಿಲ್ಲ. ಹೀಗಾಗಿ ಚಿತ್ರನಿರ್ಮಾಪಕ ಯಾವ ಪರಿಸ್ಥಿತಿಯಲ್ಲಿ ಸಿಲುಕಿರುವನೆಂಬುದರ ಚಿತ್ರವನ್ನು ಖ್ಯಾತನಟ ದಿಗ್ದರ್ಶಕ ನಿರ್ಮಾಪಕ ನಾಗೇಂದ್ರರಾಯರು ಇಲ್ಲಿ ಸೋದಾಹರಣವಾಗಿ ನಿರೂಪಿಸಿರುವರು.

ಕನ್ನಡ ಚಲಚ್ಚಿತ್ರ ನಿರ್ಮಾಪಕರು ಇತ್ತೀಚೆಗೆ ಅನೇಕ ತೊಂದರೆಗಳನ್ನು ಸಮಸ್ಯೆಗಳನ್ನು ಎದುರಿಸಬೇಕಾಗಿ ಬರುತ್ತಿದೆ. ಮೊದಲೇ ಸಾಕಷ್ಟು ತೊಂದರೆಗೊಳಗಾದ ಕನ್ನಡ ಚಿತ್ರೋದ್ಯಮ ಇದರಿಂದ ದುಃಸ್ಥಿತಿಗೊಳಗಾಗತೊಡಗಿರುವದು. ಕನ್ನಡ ಚಿತ್ರನಿರ್ಮಾಪಕನ ತೊಂದರೆಗಳೇನೆಂಬುದನ್ನು ತಮಗಿಲ್ಲಿ ನಿವೇದಿಸಲು ಈ ಪ್ರಸಂಗದ ಉಪಯೋಗ ಮಾಡಿಕೊಳ್ಳುತ್ತಿರುವೆ.

ಕರ್ನಾಟಕದ ಜನತೆ ಕನ್ನಡ ಚಿತ್ರನಿರ್ಮಾಪಕನು ಇತರ ಭಾಷೆಗಳಲ್ಲಿಯ ಉತ್ತಮ ಚಿತ್ರಗಳಿಗೆ ಯಾವದೇ ರೀತಿಯಲ್ಲಿ ಕಡಿಮೆಯಾಗಿರದ ಕನ್ನಡ ಚಿತ್ರಗಳನ್ನು ಕೊಡಬೇಕೆಂದು ಅಪೇಕ್ಷಿಸುತ್ತಿರುವದು. ಇತರ ಭಾಷಾ ಚಿತ್ರಗಳೊಂದಿಗೆ ತಮ್ಮ ಭಾಷೆಯ ಚಿತ್ರಗಳನ್ನು ಅವರು ಹೋಲಿಸುವದು ಸರಿಯಾದುದೇ ಆಗಿದೆ. ಕನ್ನಡ ಚಿತ್ರಗಳು ಉಳಿದ ಭಾಷೆಗಳಲ್ಲಿಯ ಚಿತ್ರಗಳ ಮಟ್ಟಕ್ಕೆ ಬಾರದಿದ್ದಲ್ಲಿ ಅವರಿಗೆ ನಿರಾಶೆಯಾಗುವದು ಸ್ವಾಭಾವಿಕ. ಹೀಗಾಗಿ ಅವರು ಕನ್ನಡ ಚಿತ್ರಗಳ ಬಗೆಗೆ ತಾತ್ಸಾರಗೊಂಡು ಅವಕ್ಕಿಂತ ಉಳಿದ ಭಾಷಾಚಿತ್ರಗಳನ್ನು ಹೆಚ್ಚಾಗಿ ನೋಡತೊಡಗಬಹುದು. ಇದಕ್ಕಾಗಿ ನಾವು ಯಾರನ್ನು ದೂಷಿಸಬೇಕು? ಕನ್ನಡ ಜನತೆಯಲ್ಲಿ ಕನ್ನಡದ ಬಗ್ಗೆ ಮಮತೆಯಿಲ್ಲವೆಂದು ಹೇಳಬೇಕೆ? ಆಗದು. ಒಳ್ಳೆ ಮನೋರಂಜನೆ ದೊರೆಯಬೇಕೆಂದು ಜನರು ಚಿತ್ರಗಳಿಗೆ ಹೋಗುವರು. ಅದಕ್ಕಾಗಿ ಅವರು ಯಾವದೇ ಭಾಷೆಯ ಚಿತ್ರಗಳನ್ನು ನೋಡುವರು.

ಹಾಗಾದರೆ ಉಳಿದ ಭಾಷೆಗಳಲ್ಲಿಯಂತೆ ಉತ್ತಮ ಚಿತ್ರಗಳನ್ನು ಸಿದ್ಧಪಡಿಸುತ್ತಿಲ್ಲವೆಂದು ಕನ್ನಡ ಚಿತ್ರನಿರ್ಮಾಪಕರನ್ನು ದೂಷಿಸಬೇಕೆ? ಅದೂ ಸಾಧ್ಯವಿಲ್ಲ. ಕನ್ನಡ ಚಿತ್ರನಿರ್ಮಾಪಕ ಸಾಧನಸಂಪತ್ತು ಅತಿ ಮಿತವಾದದಾಗಿರುವದು. ಅವನು ಇತರ ಭಾಷಾ ಚಿತ್ರಗಳ ಮಟ್ಟದಲ್ಲಿ ಚಿತ್ರ ತೆಗೆಯಲು ಹೋದರೆ ಕೈಸುಟ್ಟುಕೊಂಡು ದಿವಾಳಿ ತೆಗೆಯಬೇಕಾಗುವದು. ಕನ್ನಡ ಚಿತ್ರಗಳ ಪೇಟೆ ಮರ್ಯಾದಿತವಾಗಿರುವದೇ



ಆರ್. ನಾಗೇಂದ್ರರಾವ

ಇದಕ್ಕೆ ಕಾರಣವಾಗಿರುವದು. ಕರ್ನಾಟಕವೂ ಆಂಧ್ರ ತಮಿಳುನಾಡುಗಳಷ್ಟೇ ದೊಡ್ಡ ಪ್ರದೇಶವಾಗಿದೆಂದು ಕೆಲ ಜನರ ವಾದವಿರುವದು. ಈ ಮೂರೂ ರಾಜ್ಯಗಳ ವ್ಯಾವಹಾರಿಕ ಪರಿಸ್ಥಿತಿಯರಿತುಕೊಳ್ಳಲು ಅಂಕಿಸಂಖ್ಯೆಗಳನ್ನು ಅರಿತುಕೊಳ್ಳಬೇಕಾದುದು ಅವಶ್ಯವಾಗಿದೆ.

ತಮಿಳು ಪ್ರದೇಶವನ್ನೇ ತೆಗೆದುಕೊಳ್ಳೋಣ. ಉತ್ತಮ ತಾರಾಮೌಲ್ಯದ ತಮಿಳು ಚಿತ್ರ ಬಾಕ್ಸ ಆಫೀಸಿನಲ್ಲಿ ಯಶಸ್ವಿಯೆಂದಾದರೆ ಅದು ಚಿತ್ರ ನಿರ್ಮಾಪಕನಿಗೆ ೨೦ ಲಕ್ಷ ರೂ.ಗಳನ್ನು ಗಳಿಸಿಕೊಡುವದು. ಇಂತಹ ಚಿತ್ರನಿರ್ಮಾಣಕಾಲದಲ್ಲಿ ನಿರ್ಮಾಪಕನಿಗೆ ಹಂಚಿಕೆದಾರರಿಂದ ೧೦ ಲಕ್ಷ ರೂ.ಗಳ ವರೆಗೆ ಮುಂಗಡ ದೊರೆತು ಎಷ್ಟೋ ಪರಿಹಾರವೆನಿಸುವದು. ನಿರ್ಮಾಪಕನು ಹೀಗಾಗಿ ಚಿತ್ರವನ್ನು ನಿರಾಯಾಸವಾಗಿ ಪೂರ್ಣಗೊಳಿಸಿ ಅದಕ್ಕೆ ಅವಶ್ಯಕ ಅಂಶಗಳನ್ನೊದಗಿಸುವದು ಸಾಧ್ಯವಿರುವದು.

ಆಂಧ್ರರ ಬಗೆಯೂ ಇದೇ ರೀತಿಯಾಗಿರುವದು. ಒಳ್ಳೇ ಬಾಕ್ಸಆಫೀಸ ಚಿತ್ರ ಸುಲಭವಾಗಿ ೧.೨ ಲಕ್ಷ ರೂ.ಗಳನ್ನು ಗಳಿಸುವದು. ಚಿತ್ರನಿರ್ಮಾಪಕನಿಗೆ ಹಂಚಿಕೆದಾರರಿಂದ ಸುಮಾರು ೩ ಲಕ್ಷ ರೂ. ದೊರೆಯಬಹುದು. ಈಗ ನಮ್ಮ ಪ್ರದೇಶದ ಬಗ್ಗೆ ವಿಚಾರಿಸೋಣ. ಅತ್ಯುತ್ತಮ ಬಾಕ್ಸ ಆಫೀಸ ಚಿತ್ರ—ಒಂದೆರಡನ್ನು ಬಿಟ್ಟರೆ—ಇಡೀ ಕರ್ನಾಟಕದಿಂದ ೪ ಲಕ್ಷ ರೂ. ಗಳಿಗಿಂತ ಹೆಚ್ಚನ್ನು ಗಳಿಸಲು ಸಾಧ್ಯವಿಲ್ಲ. ಹಂಚಿಕೆದಾರರಿಂದ ಚಿತ್ರನಿರ್ಮಾಪಕನಿಗೆ ದೊರೆತ ಪರಿಹಾರ ೧ ಲಕ್ಷ ರೂ. ಮೀರುವದಿಲ್ಲ. ಈ ಅತ್ಯಲ್ಪ ಸಹಾಯದಿಂದ ಕನ್ನಡ ನಿರ್ಮಾಪಕನು ೧೦ ಲಕ್ಷ ರೂ. ಸಹಾಯವಿರುವ ಚಿತ್ರದೊಂದಿಗೆ ಹೋಲುವಂತಹ ಚಿತ್ರವನ್ನು ನಿರ್ಮಿಸಬೇಕೆಂದು ಅಪೇಕ್ಷಿಸಲಾಗುತ್ತಿದೆ. ಎಷ್ಟೊಂದು ಅಂತರ! ಈ ಪ್ರಮಾಣವನ್ನಾದರೂ ನೋಡಿ ೧: ೧೦!

ಕನ್ನಡ ನಿರ್ಮಾಪಕನಿಗೆ ಇವಿಷ್ಟೇ ತೊಂದರೆಗಳಲ್ಲದೆ ಚಿತ್ರಮಂದಿರಗಳದ್ದೂ ಇದೆ. ಕರ್ನಾಟಕದಲ್ಲಿಯ

ಉತ್ತಮ ಚಿತ್ರಮಂದಿರಗಳು ತಮಿಳು, ತೆಲುಗು ಹಾಗೂ ಹಿಂದಿ ಚಿತ್ರಗಳಿಗೆ ಕಾಯ್ದಿರಿಸಲ್ಪಟ್ಟಿರುವವು. ಒಳ್ಳೇ ಚಿತ್ರಮಂದಿರದಲ್ಲಿ ಚಿತ್ರವನ್ನು ಬಿಡುಗಡೆ ಮಾಡುವ ಅವಕಾಶವೂ ಕನ್ನಡ ಚಿತ್ರನಿರ್ಮಾಪಕನಿಗೆ ದೊರೆಯುತ್ತಿರುವದಿಲ್ಲ.

ಕನ್ನಡವು ಮಾತೃಭಾಷೆಯಾಗುಳ್ಳ ಪ್ರದೇಶದಲ್ಲಿ ಕನ್ನಡ ಚಿತ್ರಕ್ಕೆ ಸಾರ್ವಜನಿಕರಿಂದ ಅದೇ ಮಟ್ಟದ ಇತರ ಚಿತ್ರಗಳಿಗೆ ದೊರೆವಷ್ಟು ಪ್ರೋತ್ಸಾಹವು ದೊರೆಯುತ್ತಿರುವದಿಲ್ಲ. ಉಳಿದ ಭಾಷೆಯ ಚಿತ್ರಗಳಿಗೆ ದೊರೆವ ಪ್ರೋತ್ಸಾಹದ ಕಾಲಭಾಗದಷ್ಟು ಕನ್ನಡ ಚಿತ್ರಗಳಿಗೆ ದೊರೆಯುವದೆಂದು ಹೇಳಲು ನಾಚಿಕೆಯೆನಿಸುತ್ತದೆ. ಹೀಗೆ ಕರ್ನಾಟಕದಲ್ಲಿ ಉಳಿದ ಯಾವದೇ ಭಾಷೆಯ ಚಿತ್ರವಿರಲಿ ಪ್ರೋತ್ಸಾಹ ದೊರೆಯುತ್ತದೆ. ತಮಿಳನಾಡು ಹಾಗೂಆಂಧ್ರಗಳಲ್ಲಿ ತಂತಮ್ಮ ಭಾಷೆಗಳ ಚಿತ್ರಗಳ ಹೊರತಾಗಿ ಯಾವ ಕನ್ನಡ ಚಿತ್ರಕ್ಕೂ ಉತ್ತೇಜನ ದೊರೆಯುತ್ತಿರುವದಿಲ್ಲ. ಅದೇ ಆಂಧ್ರರು ತಮಿಳರಿಗೆ ತಂತಮ್ಮ ಪೇಟೆಗಳಲ್ಲದೆ ಕರ್ನಾಟಕವೊಂದು ಹೆಚ್ಚಿನ ಪೇಟೆಯಾಗಿ ದೊರೆತು ಅವರ ಉತ್ಪನ್ನವು ಹೀಗೆ ಇಮ್ಮಡಿಯಾಗುವದು ಕಂಡು ಬರುವದು. ಆದರೆ ಕನ್ನಡ ಚಿತ್ರಕ್ಕೆ ಕರ್ನಾಟಕದಲ್ಲಿಯ ಪೇಟೆಯ ಕಾಲುಭಾಗದಷ್ಟು ಪ್ರಯೋಜನವು ದೊರೆಯುವದು ಕಷ್ಟಸಾಧ್ಯವಾಗಿರುವದು.

ಈ ಬಿಕ್ಕಟ್ಟನ್ನು ಹೇಗೆ ಪರಿಹರಿಸಬೇಕು? ಕನ್ನಡ ಚಿತ್ರನಿರ್ಮಾಪಕರು ಕನ್ನಡ ಚಿತ್ರಗಳ ನಿರ್ಮಾಣವನ್ನೇ ತೊರೆಯಬೇಕೆ? ಅಥವಾ ಪರಭಾಷೆಯ ಚಿತ್ರಗಳ ಪ್ರದರ್ಶನವನ್ನು ನಮ್ಮಲ್ಲೂ ನಿರ್ಬಂಧಿಸಬೇಕೆ? ಇವುಗಳಲ್ಲಿ ಯಾವೊಂದೂ ಅಷ್ಟು ಯೋಗ್ಯವಾಗಿ ತೋರುವದಿಲ್ಲ. ಕನ್ನಡ ಚಿತ್ರ ನಿರ್ಮಾಪಕರು ಭಾಷಾಪ್ರೇಮಕ್ಕಾಗಿ ಯಾದರೂ ಕನ್ನಡ ಚಿತ್ರಗಳನ್ನು ನಿರ್ಮಿಸಬೇಕಾಗಿರುವದು. ಕನ್ನಡ ಚಿತ್ರ ನಿರ್ಮಾಪಕರು ಕನ್ನಡ ಭಾಷೆಯಲ್ಲಿಯಲ್ಲದೆ—ದೊಡ್ಡ ಪೇಟೆಗಳು ಲಭ್ಯವಿರುವ ಇತರ ಭಾಷೆಗಳಲ್ಲಿಯೂ ಚಿತ್ರಗಳನ್ನು ನಿರ್ಮಿಸುವದೊಂದೇ ಈಗಿರುವ ಉಪಾಯವಾಗಿರುವದು. ಪರಭಾಷಾಹಂಚಿಕೆದಾರರಿಂದ ಸಹಾಯದ ರೂಪದಲ್ಲಿ ಇದರಿಂದಾಗಿ ಹಣ ಲಭ್ಯವಾಗಬಹುದಾಗಿದೆ.



ಕನ್ನಡ ಚಿತ್ರೋದ್ಯಮದ ಇಂದಿನ ದುಃಸ್ಥಿತಿಗೆ ಸಹಾಯ ಸಲ್ಲಿಸಲು ಮುಂದೆ ಬಾರದಿರುವ ಬಂಡವಲದಾರರೇ ಕಾರಣವೆಂದು ಹೇಳಬಹುದಾಗಿರುವದು. ಬಂಡವಲದಾರರು ಮುಂದೆಬಂದು ಕನ್ನಡ ಚಿತ್ರೋದ್ಯಮಕ್ಕೆ ಸಹಾಯ ನೀಡದಿದ್ದರೆ ಕರ್ನಾಟಕಕ್ಕಾಗಿ ಚಲಚ್ಚಿತ್ರ ಕೇಂದ್ರವೊಂದಿರಬೇಕೆಂದು ಅಪೇಕ್ಷಿಸುವದು ಸರಿಯಾಗಲಿಕ್ಕಿಲ್ಲ.

ಕರ್ನಾಟಕದಲ್ಲಿ ಕನ್ನಡ ಚಿತ್ರಗಳ ಪ್ರದರ್ಶನಕ್ಕೆ ಹೆಚ್ಚೆಚ್ಚು ಚಿತ್ರಮಂದಿರಗಳು ಬೇಕಾಗಿರುವವು; ಹಂಚಿಕೆದಾರರಿಂದ ಅಧಿಕ ಆರ್ಥಿಕ ಸಹಾಯ ಬೇಕಾಗಿದೆ. ಸಾರ್ವಜನಿಕರು ಹೆಚ್ಚೆಚ್ಚು ಉತ್ತೇಜನ ನೀಡಬೇಕಾಗಿದೆ. ಪ್ರದರ್ಶಕರು ಹೆಚ್ಚೆಚ್ಚು ಶ್ರದ್ಧೆಯ ಧೋರಣ ತಾಳಬೇಕು. ಆಗ ಕನ್ನಡ ಚಿತ್ರೋದ್ಯಮ ಬಾಳಿ ಬೆಳಗೀತು.



" ಸರ್ವೇ ಜನಾಃ ಸುಖಿನೋಭವಂತು "

ದೀಪಾವಳಿಯ ನಮ್ಮ ಶುಭಾಶಯಗಳು

## ಕೋಲ್ಕಾರ್ಸ್ ಮೆಟಲ್ ವೇರ್

ರಥಬೀದಿ, .... .... .... ಉಡುಪಿ

ಮನೆವಾರ್ತೆಗೂ ಮದುವೆ ಉಪನಯನ
ಮುಂತಾದ ಸಮಾರಂಭಕ್ಕೂ ಬೇಕಾಗುವ ತಾಮ್ರ
ಹಿತ್ತಾಳಿ, ಕಂಚು, ಸ್ಟೈಯಿನ್ ಲೆಸ್ ಸ್ಟೀಲ್ ಮುಂತಾದ
ಪಾತ್ರೆ ಪರಡಿಗಳ ತಯಾರಕರು ಮತ್ತು ಮಾರಾಟಗಾರರು.
ದೂರದ ಊರಿಗೆ ಕಳುಹಿಸಿ ಕೊಡುವ ವ್ಯವಸ್ಥೆ ಇರು
ತ್ತದೆ. ನಿಮ್ಮ ಅವಶ್ಯಕತೆಗಾಗಿ ಇಂದೇ ಬರೆಯಿರಿ.

## ಹುಪಸೇಕ

ಮಂಗನ ಕೆಮ್ಮು
ಹಾಗೂ
ಇನ್ನಿತರ ಕೆಮ್ಮುಗಳ
ಮೇಲೆ . . .




## ಜಿ. ಪಿ. ನಾಯಿಕ

ಸೋಲ ಡಿಸ್ಟ್ರಿಬ್ಯೂಟರರು:

ರಾಜವೈದ್ಯ ಗುಣೆ
ಅವರ
ಶಾಹೂ ಆರ್ಯೌಷಧಿ
ಕಾರಖಾನಾ ಲಿ., ಕೊಲ್ಹಾಪೂರ




## ದಿ
## ಮೈಸೂರ
## ಕಿರ್ಲೋಸ್ಕರ
## ಲಿಮಿಟೆಡ್

ಯಂತ್ರಪುರ ಪೋಸ್ಟ್,

## ಹರಿಹರ



ಭಾರತದ ರೈತರಿಗೆ ಅಭಿಮಾನದ
ವಿಷಯವೆಂದರೆ

## ಉಟಕೂರ
## ಡಿಜೆಲ್ ಎಂಜಿನ್ನುಗಳು

೬ ಎಚ್. ಪಿ. ೫೫೦ ಆರ್. ಪಿ. ಎಂ.
೮/೯ ಎಚ್. ಪಿ. ೪೫೦ ಆರ್. ಪಿ. ಎಂ.

* ಹಾರಿಝಾಂಟಲ್, ಕೋಲ್ಡ ಸ್ಟಾರ್ಟ
* ಸ್ಲೋಸ್ಪೀಡ, ಭದ್ರರಚನೆ,
* ತೊಂದರೆ ರಹಿತ ಸೇವೆ.

ತಯಾರಕರು:

**ಉಟಕೂರ ಮತ್ತು ಕಂಪನಿ**

ಶಿವಾಜಿ ಉದ್ಯಮನಗರ, ಕೊಲ್ಹಾಪೂರ

---

ದೀಪಾವಳಿಯು ಸರ್ವರಿಗೂ
ಸುಖ-ಸಂಪದವನ್ನೀಯಲಿ

ತಮಗೆ ಬೇಕಾಗುವ

ಎಲ್ಲ ನಮೂನೆಯ

## ಬಟ್ಟೆಗಳಿಗಾಗಿ

ಸಂದರ್ಶಿಸಿರಿ



**ಶಾ. ಪಿ. ಜೆ. ಆ್ಯಂಡ ಕಂಪನಿ**

ಫ್ಯಾನ್ಸಿ ಕ್ಲಾಥ್ ಸ್ಟೋರ್ಸ

ದುರ್ಗದ-ಬೈಲ, ಹುಬ್ಬಳ್ಳಿ

---



ಚಿಕಿತ್ಸೆಗೆ ಮೊದಲು — ನಂತರ

## ತೊನ್ನುರೋಗ

**ಚಿಕಿತ್ಸೆಗೆ ಯೋಗ್ಯ ಚಿಕಿತ್ಸೆ**

೨ ಆಣೆ ಸ್ಟಾಂಪಿಟ್ಟು ಬರೆಯಿರಿ:

**ಕೆ. ಎನ್. ಪಂಡಿತ**

ವೀರರತ್ನ ಫಾರ್ಮಸಿ
Z-118 ಗ್ರೈನ್ ಬಜಾರ್, ಸಿಟಿ ಮಾರ್ಕೆಟ
ಪೋ. ಬಾ. ನಂ. ೧೧, ಬೆಂಗಳೂರ ಸಿಟಿ

---

ಭಾರತದಲ್ಲಿ ಬಡತನದ ಕಾರ್ಗತ್ತಲು ಕಳೆದು,








**ಸಂಪತ್ಸಮೃದ್ಧಿಯ ದಿವ್ಯಜ್ಯೋತಿ ಸದಾಕಾಲ ಪ್ರಜ್ವಲಿಸಲಿ!**

**ಈ ಸಂತೋಷವಾದ ಸನ್ನಿವೇಶದಲ್ಲಿ ಎಲ್ಲರಿಗೂ ದೀಪಾವಳಿ ಶುಭಾಶಯಗಳನ್ನು ಅರ್ಪಿಸುತ್ತೇವೆ**



## ಬೃಂದಾವನ್
## ವನಸ್ಪತಿ




ನಿತ್ಯೋಪಯೋಗಕ್ಕೆ ಹಾಗೂ
— ಹಬ್ಬ ಹರಿದಿನಗಳಲ್ಲಿ —
ಉಪಯೋಗಿಸಲು ಶ್ರೇಷ್ಠವಾದ ಸಾಧನ

ರವಿ ವೆಜಿಟೇಬಲ್ ಆಯಿಲ ಇಂಡಸ್ಟ್ರೀಜ, ದಾವಣಗೆರೆ

ಸರ್ವರಿಗೂ ದೀಪಾವಳಿಯು ಸುಖ, ಶಾಂತಿ, ಸಮೃದ್ಧಿದಾಯಕವಾಗಲಿ !

ಫೋನ: ೫೩೫೦ ತಂತಿ: "Super Steel"

# ವಿಜಯ ಟ್ರೇಡಿಂಗ ಕಂಪನಿ

ಪೋಸ್ಟ ಬಾಕ್ಸ ನಂ. ೮೦೦, ಸುಬೇದಾರ್ ಛತ್ರಂ ರೋಡು,

ಬೆಂಗಳೂರು-೯.

ಮೈಸೂರು ರಾಜ್ಯಕ್ಕೆ ಏಕೈಕ ಹಂಚಿಕೆಗಾರರು

'ಸ್ವಸ್ತಿಕ' ರೋಲಿಂಗ ಶಟರುಗಳು

ಸ್ಮಿಥಸ್ಟೆನಿಸ್ಟ್ರೀಟ ಅ್ಯಂಡ ಕಂ. ಲಿ., ಕಲ್ಕತ್ತಾ.

ಶ್ರೇಷ್ಠ ಉಕ್ಕಿನ ಫರ್ನಿಚರಗಳು

'ಬ್ರಿಟಾನ್ಸ' ತಯಾರಿಕೆಗಳು



ನಮ್ಮ ಪ್ರತಿನಿಧಿಗಳು :

ಮಂಗಳೂರು: ಶಾಸ್ತ್ರೀ ಅ್ಯಂಡ ಕಂ. ಹಂಪನಕಟ್ಟಾ.

ಮೈಸೂರು: ಎಚ್. ಎನ್. ಗೋಪಾಲಕೃಷ್ಣ,
೧೬೭೭, ಓಲ್ಡ ಮೈಸೂರ ಬ್ಯಾಂಕ ರೋಡ.

ಹುಬ್ಬಳ್ಳಿ: ಎಂ. ಆರ್. ಮಠದ ದುರ್ಗದಬೈಲ,

ದಾವಣಗೆರೆ: ಎಸ್. ವ್ಹಿ. ರಾಮನಾಥನ್
ಸ್ಟೀಲಸ್ಟ್ರಕ್ಚರಲ್ ಕಂಟ್ರಾಕ್ಟರ

# ದಿ ಶಿವಮೊಗ್ಗ ಡಿಸ್ಟ್ರಿಕ್ಟ ಕೊ-ಆಪರೇಟಿವ ಸೆಂಟ್ರಲ್ ಬ್ಯಾಂಕ ಲಿಮಿಟೆಡ್

ಪ್ರಧಾನ ಕಚೇರಿ: **ಶಿವಮೊಗ್ಗ** — **ಫೋನ : 96**

ಶಾಖೆ: **ಶಿಕಾರಿಪುರ** — **ಫೋನ : 28**

ನಮ್ಮ ಎಲ್ಲಾ ವೃತ್ತಿಬಾಂಧವರಿಗೂ ಮತ್ತು ಹಿತೈಷಿಗಳಿಗೂ ದೀಪಾವಳಿಯ ಶುಭಸಂದೇಶಗಳು

| | | |
|---|---|---|
| ೧. | ಮೆಂಬರುತನ | |
| | (ಎ) ತರಗತಿ | ೩೫೯ |
| | (ಬಿ) ತರಗತಿ | ೧೧೪ |
| ೨. | ಅಧಿಕೃತ ಷೇರು ಬಂಡವಳು | ೧೦,೦೦,೦೦೦ |
| ೩. | ಪಾವತಿ ಆದ ಷೇರು ಬಂಡವಾಳ | ೯,೧೩,೦೦೦ |
| ೪. | ಡಿಪಾಜಿಟ್ಟುಗಳು | |
| | (ಎ) ಚಾಲ್ತಿ ಡಿಪಾಜಿಟ್ಟು | ೩,೮೧,೨೦೦ |
| | (ಬಿ) ಖಾಯಂ ಡಿಪಾಜಿಟ್ಟು | ೧,೫೩,೦೦೦ |
| ೫. | ರಿಜರ್ವ ಮತ್ತು ಇತರೆ ಫಂಡುಗಳು | ೧೬,೫೦೦ |

| | | |
|---|---|---|
| ೬. | ಅಪೆಕ್ಸ ಬ್ಯಾಂಕಿನಿಂದ ತಂದ ಸಾಲ | |
| | [ಎ) ಅಲ್ಪಾವಧಿ ಸಾಲ | ೩೭,೬೫,೩೪೫ |
| | (ಬಿ) ಮಧ್ಯಮಾವಧಿ ಸಾಲ | ೭,೨೯,೬೩೪ |
| ೭. | ಸಾಲದ ಹಂಚಿಕೆ | |
| | (ಎ) ಅಲ್ಪಾವಧಿ ಸಾಲ | ೪೭,೭೮,೬೦೦ |
| | (ಬಿ) ಮಧ್ಯಮಾವಧಿ ಸಾಲ | ೬,೪೫,೫೦೦ |
| | (ಸಿ) ಕ್ಯಾಷ-ಕ್ರೆಡಿಟ್ ಸಾಲ | ೧,೦೦,೦೦೦ |
| ೮. | ಠೇವಣಾತಿಗಳು | ೪,೨೫,೮೦೦ |
| ೯. | ನಿವ್ವಳ ಲಾಭ (೧೯೫೭-೫೮) | ೪೫,೦೮೧ |

**ಎಲ್ಲಾ ವಿಧವಾದ ಬ್ಯಾಂಕಿಂಗ್ ವ್ಯವಹಾರಗಳನ್ನು ನಡೆಯಿಸುತ್ತೇವೆ**

**ಕೆ. ಗಿರಿಯಪ್ಪ,** ಬಿ. ಎ.
ಸೆಕ್ರೆಟರಿ

**ಆರ್. ಭರಣಯ್ಯ,** ಐ. ಎ. ಎಸ್.
ಡೆಪ್ಯೂಟಿ ಕಮೀಷನರ್ ಆ್ಯಂಡ್ ಎಕ್ಸ-ಅಫಿಸಿಯೊ ಪ್ರೆಸಿಡೆಂಟ

---

ಜನತೆಯ ಕಷ್ಟ ಕಾರ್ಪಣ್ಯಗಳು ಕಳೆದು, ಆನಂದಜ್ಯೋತಿ ಸದಾ ಬೆಳಗಲೆಂದು ಹಾರೈಸಿ,
ನಾವು ದೀಪಾವಳಿ ಅಭಿವಂದನೆಗಳನ್ನು ಅರ್ಪಿಸುತ್ತೇವೆ.

## ಪ್ರಕಾಶ್
ವನಸ್ಪತಿ



## ದಿಲ್‌ಕುಷ್
ರಿಫೈನ್ಡ್ ಆಯಿಲ್

○ ಇವು ಭಕ್ಷ್ಯ, ಭೋಜ್ಯಗಳ ತಯಾರಿಕೆಗೆ ಉತ್ತಮವಾದವು ○ ಸ್ವಾದು ○ ಪುಷ್ಟಿಕರ ○ ನ್ಯಾಯವಾದ ಬೆಲೆ

ಟೆಲಿಫೋನ್: ಕಛೇರಿ: ೩೬೦೯ ವಾಸ: ೩೬೦೮ — ಟೆಲಿಗ್ರಾಂ: " DILKUSH "

# ರಾಜಾ ವೆಜಿಟೆಬಲ್ ಆಯಿಲ್ಸ್ ಕಂಪೆನಿ

" ದಿಲ್‌ಕುಷ್ ಭವನ " ಪೋ. ಬಾ. ನಂ. ೭೬೪, ಹಳೇತರಗುಪೇಟೆ, ಬೆಂಗಳೂರು-೨.

ಶಾಖೆಗಳು: ಹೊಸತರಗುಪೇಟೆ, ಬೆಂಗಳೂರು-೨ ಕಮರ್ಶಿಯಲ್ ಸ್ಟ್ರೀಟ್, ಬೆಂಗಳೂರು-೧ ಮತ್ತು ಸಂತೇಪೇಟೆ, ಮೈಸೂರು

ಸಕ್ಕರೆ, ಅಕ್ಕಿ, ಎಲ್ಲ ಬಗೆಯ ಧಾನ್ಯಗಳು ಮತ್ತು ಇತರ ಸರಕುಗಳ ಒಟ್ಟು ವ್ಯಾಪಾರಿಗಳು

ಮಾರ್ಗರೈನ್ ಅಂಡ್ ರಿಫೈನ್ ಆಯಿಲ್ಸ್ ಕಂ. ಲಿ., ಮತ್ತು ಎಲ್ಜಿನ್ ಎಲೆಕ್ಟ್ರಿಕ್ ಫ್ಲೋರ್‌ಮಿಲ್ಸ್
ಸೋಲ್ ಏಜೆಂಟರುಗಳು.



ಯಾವ
ಪ್ರಾಯದಲ್ಲಿಯೂ ಕೂಡಾ
ನೀವು ಲೋಮ ವನ್ನು
ಸಂಪೂರ್ಣ ಭರವಸೆಯಿಂದ
ಉಪಯೋಗಿಸಬಲ್ಲಿರಿ.







ಲೋಮವನ್ನು ಉಪಯೋಗಿಸುವುದಕ್ಕೆ ಪ್ರಾಯದ ನಿರ್ಬಂಧವಿರುವುದಿಲ್ಲ. ಇದನ್ನು ಸಂಪೂರ್ಣ ವಿಶ್ವಾಸದಿಂದ ಎಲ್ಲಾ ಪ್ರಾಯಗಳಲ್ಲಿಯೂ ಉಪಯೋಗಿಸಬಹುದು. ನೀವು ಬಯಸುವ ಪರಿಣಾಮವನ್ನು ಇದು ಖಂಡಿತವಾಗಿಯೂ ಒದಗಿಸಿ ಕೊಡುವುದು. ಕಾರಣ ಇದು ಕೂದಲನ್ನು ಚೆನ್ನಾಗಿ ಕಪ್ಪುಗೊಳಿಸುವ ಸಾಧನವಾಗಿರುವುದು ಮಾತ್ರವಲ್ಲದೆ, ಸಾಮಾನ್ಯವಾಗಿ ಕೂದಲಿನ ಶ್ರೇಷ್ಠ ಎಣ್ಣೆಗಳಲ್ಲಿರುವ ಎಲ್ಲಾ ವಿಶಿಷ್ಟ ಪದಾರ್ಥಗಳು ಇದರಲ್ಲಿ ಕೂಡಿವೆ.
ನೆನಪಿರಲಿ! ಲೋಮ ಕೂದಲನ್ನು ಕಪ್ಪುಗೊಳಿಸುವ ಬಣ್ಣವಲ್ಲ. ಅದು ಕೂದಲನ್ನು ಸ್ವಾಭಾವಿಕವಾಗಿ ಕಪ್ಪುಗೊಳಿಸುವ ಸಾಧನವಾಗಿದೆ. ಅಲ್ಲದೆ ಕೂದಲಿಗೆ ಹಿತವನ್ನುಂಟುಮಾಡುವ ಆದರ್ಶ ತೈಲವಾಗಿರುತ್ತದೆ.



ಕೂದಲನ್ನು ಸ್ವಾಭಾವಿಕವಾಗಿ
ಕಪ್ಪುಗೊಳಿಸುವ ಲೋಕ ಪ್ರಸಿದ್ಧ ಸಾಧನೆ.

ಸೋಲ್ ಏಜೆಂಟ್ಸ್: ಎಮ್. ಎಮ್. ಖಂಬಾಟ್‌ವಾಲಾ, ಅಹಮ್ಮದಾಬಾದ್-1.
ವಿತರಕರು: ಸಿ. ನರೋತ್ತಮ್ ಅಂಡ್ ಕಂಪೆನಿ, ಮುಂಬಾಯಿ-2.

MPS-KAN.

---

ನೂತನ ದೀಪಾವಳಿಯು ಸಕಲರಿಗೂ
ಸಮೃದ್ಧಿಯನ್ನೀಯಲೆಂದು ಹಾರೈಸುತ್ತೇವೆ.

ದಾವಣಗೇರಿ ನಗರದಲ್ಲಿ

ತಾಮ್ರ, ಹಿತ್ತಾಳೆಯ ವಿವಿಧ ಪಾತ್ರೆ ಸಾಮಾನುಗಳು, ಸ್ಟೇನ್‌ಲೆಸ್ ಲೋಹದ ಆಕರ್ಷಕ ಉಪಕರಣಗಳು

ಒಟ್ಟಾಗಿಯೂ ಮತ್ತು ಚಿಲ್ಲರೆಯಾಗಿಯೂ
ಸಿಗತಕ್ಕಂಥ ವಿಶ್ವಾಸಾರ್ಹ ಸ್ಥಳ

ಟೆಲಿಗ್ರಾಂ: 'ಬೇತೂರ್' ಫೋನ: ೫೬

## ಮೆಸರ್ಸ ಹೊಂಬಣ್ಣ ರಾಜಪ್ಪ ಬೇತೂರು

ಭಾಂಡೆ ಅಂಗಡಿ

ವಿಜಯಲಕ್ಷ್ಮಿ ರೋಡ,

ದಾವಣಗೇರೆ ಸಿಟಿ

(ಮೈಸೂರ ಸ್ಟೇಟ)

---

ನೂತನ ದೀಪಾವಳಿಯು ಸರ್ವರಿಗೂ
ಸುಖಪ್ರದವಾಗಲಿ

ಬೆಂಗಳೂರು, ಮಧುರೈ, ಕೋಯಿಂಬತ್ತೂರು,
ಸೇಲಂ ಮತ್ತು ಇಚಲಕರಂಜಿಯ

ಪತ್ತಲ ಮತ್ತು ಸೀರೆಗಳಿಗೆ
ಹಾಗೂ
ಬನಾರಸಿ ಸಿಲ್ಕ್ ಸೀರೆಗಳಿಗೆ



ವನಿತೆಯರ ವಿಶ್ವಾಸಿಕ ಅಂಗಡಿ

## ಬಿ. ಹನುಮಂತಪ್ಪ

ಜವಳಿ ವ್ಯಾಪಾರಿ

ಲಕ್ಷ್ಮೀನಾರಾಯಣ ಗುಡಿ ಬೀದಿ

ಬಳ್ಳಾರಿ—೨

ಖಾತ್ರಿಗಾಗಿ ಒಮ್ಮೆ ಸಂದರ್ಶಿಸಿರಿ

ಕರ್ನಾಟಕದ ಪ್ರಮುಖ ಕೇಂದ್ರಗಳಲ್ಲಿ

ಶೀಘ್ರದಲ್ಲೇ ಬಿಡುಗಡೆ!

ಭಾಸ್ಕರ್ ಪ್ರೊಡಕ್ಷನ್ಸ್ ರವರ

# ಗಿರಿಜಾ ಕಲ್ಯಾಣ (ಕನ್ನಡ)

ನಾಗಯ್ಯ. ಕೃಷ್ಣಕುಮಾರಿ.
ಗುಮ್ಮಡಿ. ಸಂಧ್ಯಾ.
ರಮಣಾರೆಡ್ಡಿ. ರಾಗಿಣಿ.
ಕೆ.ವಿ.ಎಸ್. ಶರ್ಮ. ಕುಚಲ ಕುಮಾರಿ.

ಮತ್ತು
ಬಾಲಯ್ಯ B.E.

ಸಂಗೀತ: ಘಂಟಸಾಲ.
ಕಮಲ್ ಘೋಷ್.
ಬಿ. ಸದಾಶಿವಯ್ಯ.

ನಿರ್ದೇಶಕ: ಭಾಸ್ಕರ್ ರಾವ್.

ವಿತರಕರು: ಮೈಸೂರು: ಚಮರಿಯಾ - ಉತ್ತರ ಕರ್ನಾಟಕ: ಶ್ರೀನಿವಾಸ ಪಿಕ್ಚರ್ಸ್ - ಗದಗ

SARMA

CHITRALEKHA



ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ!








ಸ್ನೊ
ಮತ್ತು ಫೇಸ್ ಪೌಡರ್

ನಿಮ್ಮ ಮೈಬಣ್ಣವನ್ನು
ಉಜ್ವಲಗೊಳಿಸಿ ನಿಮಗೆ
ಮನೋಹರತೆಯನ್ನು
ಕೊಡುವುದು




ಸೋಲ್ ಡಿಸ್ಟ್ರಿಬ್ಯೂಟರ್ :
ಎ. ವಿ. ಆರ್. ವಿ. ಅಂಡ್ ಕಂಪೆನಿ, ಬೊಂಬಾಯಿ-೨.

ಭಾರತದ ಎಲ್ಲಾ ಭಾಗಗಳಲ್ಲಿಯೂ
ದೊರಕುವುದು.

ಕೊಡೆಗಳು ಬನಿಯನ್‌ಗಳು

ನಿಮಗೆ ಬೇಕಾಗುವ
ಎಲ್ಲ ತರಹದ

- ಕೊಡೆಗಳು
- ಹೊಜ್ಯೆರಿ

ಚಿಕ್ಕಮಕ್ಕಳ

- ಫ್ಯಾನ್ಸಿ ಅರಿವೆಗಳು
- ಟೊಪ್ಪಿಗೆಗಳು
- ಹ್ಯಾಟುಗಳು

ಮತ್ತು

- ಕೈಚೀಲಗಳಿಗೆ

ಹೋಲ್‌ಸೇಲ್ | ರಿಟೇಲ್

ಸಂದರ್ಶಿಸಿರಿ

ಮೆಸ್ಸರ್ಸ
**ಸಿ. ಜಿ. ದಾಸ & ಕೋ**
ರಥ ಬೀದಿ ಬಳ್ಳಾರಿ-೨



ದೀಪಾವಳಿಯ ಅಭಿನಂದನೆಗಳು



## ದೀಪಾವಳಿಯ ಆನಂದ

ವರ್ಷಗಟ್ಟಲೆ ಉಪಯೋಗಿಸುವ, ಮತ್ತು ನಮ್ಮಲ್ಲಿಯ ಉಷ್ಣ ಹವೆಯಲ್ಲಿ ಯಾವಾಗಲೂ ಉದ್ಭವಿಸುವ ಉಷ್ಣ ಪ್ರಕೃತಿಯ ತೊಂದರೆಗಳಿಗೆ ಖಂಡಿತವಾಗಿ ಗುಣಕಾರಿಯಾದ ಶೀತಲ, ಶಕ್ತಿವರ್ಧಕ ಮತ್ತು ಆರೋಗ್ಯದಾಯಕ "ಪೆರ್ಲ ಕಾಢಾ" ನಿಮ್ಮ ಕುಟುಂಬದಲ್ಲಿ ಉಪಯೋಗಿಸಿರಿ. ಎಲ್ಲ ಔಷಧಿದ ಅಂಗಡಿಗಳಲ್ಲಿ ದೊರೆಯುವದು.

ದೀಪಾವಳಿ ಮತ್ತು ಹೊಸ ವರ್ಷ
ಎಲ್ಲರಿಗೂ ಸುಖದಾಯಕವಾಗಲಿ!!!




**ಪರ್ಲ ಕಾಢಾ**
ಪರ್ಲ ಕಂಪನಿ ಮುಂಬಯಿ-೨೨

ಬಿ. ಸಿ. ಸಿ. ಎಸ್. ಇವರ ದೀಪಾವಳಿ ಕಾಣಿಕೆ

# ಶ್ರೇಷ್ಠ ತರಗತಿಯ ಸಕ್ಕರೆ




## ದಿ ಬಳ್ಳಾರಿ ಸೆಂಟ್ರಲ್ ಕೋಆಪರೇಟಿವ್ ಸ್ಟೋರ್ಸ ಲಿಮಿಟೆಡ್

ಬಳ್ಳಾರಿ

**Y. No. 349**

ಆಫೀಸ; ಬಳ್ಳಾರಿ .... .... .... .... ಫ್ಯಾಕ್ಟರಿ : ಕಂಪಲಿ




Insist on

CROWN & SUN
BRANDS

# ALUMINIUM UTENSILS




**'Crown' & 'Sun'** Brands articles are made from specially processed pure virgin Aluminium. They are a guarantee for harmlessness of the use of Aluminium ware for human health.

**'Crown' & 'Sun'** Brands are Marks of Prestige and represent the experience and skill of India's foremost Manufacturers in the line.

**'Crown' & 'Sun'** Brands articles are in use, in millions, for years and are giving fullest satisfaction to the users. They are handsome, handy and strong.

Please do not accept substitutes made from inferior metal.



*Distributors of*

★ CROWN BRAND
**Aluminium Utensils & Suppliers of everything in Aluminium**

*and*

★ SUN BRAND
**Aluminium, Brass and Stainless Steel Utensils**



## KESHAVLAL & CO.,

**71, Sri Narasimharaja Road,**

**P. B. No. 556,**

**BANGALORE - 2.**

*Phone*: 3027 *Grams*: "ALUBRASCO"



*BEST WISHES FOR DEEPAVALI*



KARMAVEER 12-11-1958 Licence No. 3 Regd. No. B 3
Licenced to post without prepayment



ಈ ಪತ್ರಿಕೆಯನ್ನು ಹುಬ್ಬಳ್ಳಿ ಸಂಯುಕ್ತ ಕರ್ನಾಟಕ ಪ್ರೆಸ್ಸಿನಲ್ಲಿ ಲೋಕ ಶಿಕ್ಷಣ ಟ್ರಸ್ಟಿನ ಪರವಾಗಿ ಹ. ರಾ. ಪುರೋಹಿತರವರು ಮುದ್ರಿಸಿ ಪ್ರಕಟಿಸಿ